# ಉಡುಗೊರೆ

ಗುರುವರ್ಯ
ಶ್ರೀ ಕುವೆಂಪುರವರಿಗೆ
ಅವರ ಶಿಷ್ಯರೂ ಮಿತ್ರರೂ ಒಪ್ಪಿಸಿದ
ಬರಹಗಳ 'ಉಡುಗೊರೆ'




ಮಹಾರಾಜಾ ಕಾಲೇಜ್
ಮೈಸೂರು

# ಅರಿಕೆ

## ಜನವರಿ ಇಪ್ಪತ್ತಾರು !

ನಾಡಿನ ರಾಷ್ಟ್ರೀಯದಿನ; ಶುಭದಿನ

ನಮ್ಮ ಕನಸು ನನಸಾದ ಮಹಾದಿನ. ನಮ್ಮ ಬಯಕೆ ಫಲಿಸಿದ ಬಂಗಾರದ ದಿನ. ಅದರಿಂದಾಗಿ, ನಮ್ಮ ಸಂತಸ ಮೇರೆವರಿದು ಹರಿದಿದೆ–ಅದರಲ್ಲಿ ಪಾಲುಗೊಳ್ಳಲು ನಿಮ್ಮನ್ನೂ ಕರೆಯುತ್ತಿದೆ.

ಇಂತಹ ಶುಭದಿನದಂದು ನಮ್ಮ ಗುರುವರ್ಯ ಶ್ರೀ ಕುವೆಂಪುರವರಿಗೆ 'ಉಡುಗೊರೆ' ಯನ್ನು ಅರ್ಪಿಸುತ್ತಿದ್ದೇವೆ–ಪ್ರೀತಿಯಿಂದ, ವಿಶ್ವಾಸದಿಂದ, ಭಕ್ತಿಯಿಂದ. ಕನ್ನಡತಾಯಿ ನಾಡಿಗೆ ಕೊಟ್ಟಕಾಣಿಕೆ ಅವರು ಎಂದು ಅರ್ಥಮಾಡಿಕೊಳ್ಳುತ್ತಿದ್ದೇವೆ ; ಅವರಿಗೆ ಗೌರವ ವನ್ನು ಸಲ್ಲಿಸುವುದರಮೂಲಕ ನಮ್ಮನ್ನು ನಾವೇ ಗೌರವಿಸಿಕೊಳ್ಳುತ್ತಿದ್ದೇವೆ.

ಕನ್ನಡದ ನವೋದಯದ ಕಾಲದಲ್ಲಿ ಅವರು ಕವಿಯಾಗಿ ಮೂಡಿ ನಾಡು ನುಡಿ ಗಳಿಗೆ ಶಕ್ತಿಯನ್ನು ತುಂಬಿದ್ದಾರೆ. ಅವರ ಕಾವ್ಯವಾಹಿನಿ ಕಥೆಯಾಗಿ, ಕಾದಂಬರಿ ಯಾಗಿ, ನಾಟಕವಾಗಿ, ಜೀವನ ಚರಿತ್ರೆಯಾಗಿ, ವಿಮರ್ಶೆಯಾಗಿ, ಶಿಶುಸಾಹಿತ್ಯವಾಗಿ, ಭಾವಗೀತೆಗಳಾಗಿ, ದರ್ಶನಾತ್ಮಕ ಮಹಾಕಾವ್ಯವಾಗಿ ಸಾಹಿತ್ಯದ ವಿವಿಧ ಪ್ರಕಾರಗಳಲ್ಲಿ ಹರಿದು ಕನ್ನಡ ಸಾಹಿತ್ಯವನಕ್ಕೆ ಮಧುಮಹೋತ್ಸವವನ್ನು ತಂದೊಡ್ಡಿದೆ. ಕನ್ನಡದ ಜನ ಒಂದು ; ಕನ್ನಡದ ಮನ ಒಂದು ; ಕನ್ನಡದ ಚೇತನ ಒಂದು ಎಂಬ ದಿವ್ಯದರ್ಶನ ವನ್ನು ತೋರಿದೆ. ಇಂತಹ ನಮ್ಮ ಕವಿ ಭಾರತದ ರಾಷ್ಟ್ರಮನ್ನಣೆಯನ್ನು ಪಡೆದು ನಮಗೆ ಗೌರವ–ಅಭಿಮಾನಗಳನ್ನು ತಂದುಕೊಟ್ಟಿದ್ದಾರೆ. ಅನೇಕ ಜೀವಮಾನಗಳ ಕಾಲದಲ್ಲಿ ಮಾಡಬಹುದಾದ ಕೆಲಸಗಳನ್ನು ಒಂದೇ ಜೀವಮಾನದಲ್ಲಿ ಮಾಡಿತೋರಿ ದ್ದಾರೆ. ಈಗ ವಿಶ್ವವಿದ್ಯಾನಿಲಯದ ಗೌರವದ ಸ್ಥಾನದಲ್ಲಿ ನಿಂದು ಕನ್ನಡಕ್ಕೆ ರಕ್ಷೆ ಯಾಗಿದ್ದಾರೆ.

ಇಂತಹ ನಮ್ಮ ಕವಿವರ್ಯರಿಗೆ ನಮ್ಮ ಪ್ರೀತಿಯ ಸಂಕೇತವಾಗಿ, ನಮ್ಮ ಅಭಿ ಮಾನದ ಸೂಚಕವಾಗಿ ಈ ಪುಟ್ಟ 'ಉಡುಗೊರೆ'ಯನ್ನು ಅರ್ಪಿಸುತ್ತಿದ್ದೇವೆ.

ತಾಯಿ ಶಾರದೆಯನ್ನು

" ಹೇ ದೇವಿ
ಆಯುರಾರೋಗ್ಯಮಂ ಶಾಂತಿ ಸೌಭಾಗ್ಯಮಂ
ದಯಪಾಲಿಸೌ ನಿನ್ನ ಕನ್ನಡ ಕಂದನೀತಂಗೆ,
ಸುರುಳಿಗುರುಳಂದಮೆಸೆವಾತ್ಮ ಸೌಂದರ್ಯಮಂ
ಮುಡಿಪನರ್ಚಿಸಿ ಮಣಿಯುವೀ ಕವಿ ಕುವೆಂಪುವಿಗೆ !"

ಎಂದು ಪ್ರಾರ್ಥಿಸಿ ಇದನ್ನು ಒಪ್ಪಿಸುತ್ತಿದ್ದೇವೆ.

ಭಗವತ್ಕೃಪೆಯಿಂದ ಇದನ್ನು ಅರ್ಪಿಸುವ ಭಾಗ್ಯ ನಮ್ಮದಾಗಿದೆ. ಆದರೆ ನಾವು ಕೇವಲ ನಿಮಿತ್ತಮಾತ್ರರು. ನಮ್ಮ ಹಿಂದೆ ಅನೇಕ ಶಕ್ತಿಗಳು ಕೆಲಸಮಾಡಿ ಇದನ್ನು ರೂಪಗೊಳಿಸಿವೆ. ಅದರಲ್ಲೂ, ಪ್ರೊ. ಸಿ. ಡಿ. ನರಸಿಂಹಯ್ಯ, ಎಂ.ಎ. (ಕ್ಯಾಂಟಬ್); ಶ್ರೀಮತಿ ಜಯಲಕ್ಷ್ಮಮ್ಮಣ್ಣಿ, ಎಂ. ಎ., ಶ್ರೀ ಕ. ವೆಂ. ರಾಘವಾಚಾರ್, ಎಂ. ಎ., ಬಿ.ಟಿ., ಶ್ರೀ ತ. ಸು. ಶಾಮರಾವ್, ಎಂ. ಎ., ಶ್ರೀ ಹೆಚ್. ಎಂ. ಶಂಕರನಾರಾಯಣ ರಾವ್, ಎಂ. ಎ., ಶ್ರೀ ಎಸ್. ವಿ. ಪರಮೇಶ್ವರ ಭಟ್ಟ, ಎಂ. ಎ., ಶ್ರೀ ಎನ್. ಎಸ್. ವೀರಪ್ಪ, ಬಿ.ಎಸ್ಸಿ., (ಆನರ್ಸ್) ಬಿ.ಟಿ., ಶ್ರೀ ಎಸ್. ಅನಂತನಾರಾಯಣ, ಎಂ.ಎ., ಶ್ರೀ ದೇ. ಜವರೇಗೌಡ, ಎಂ.ಎ., ಶ್ರೀ ಉ.ಕಾ. ಸುಬ್ಬರಾಯಾಚಾರ್, ಎಂ.ಎ.,-ಇವರು ನಮಗೆ ಹಿರಿಯ ಆತ್ಮೀಯರಾಗಿ, ಸಲಹೆಗಾರ ಮಂಡಳಿಯಲ್ಲಿರಲು ಒಪ್ಪಿ ಮಾರ್ಗದರ್ಶನ ಮಾಡಿದ್ದಾರೆ. ಆತ್ಮೀಯರಾದ ಶ್ರೀ ಪ್ರಭುಶಂಕರ; ಶ್ರೀ ಜಿ. ಎಸ್. ಶಿವರುದ್ರಪ್ಪ; ಸೋದರಿಯರಾದ ಬಿ. ಎಸ್. ರುಕ್ಕಮ್ಮ, ಬಿ. ಎಸ್. ಮಯೂರ; ಬಿ. ಕೆ. ಶಾಂತ; ಗೆಳೆಯರಾದ ಕ. ಶಂ. ಕರುಣಾಕರನ್, ಅ. ರಾ. ಮಿತ್ರ, ಪಾ. ಶ. ಶ್ರೀನಿವಾಸ, ಬಿ. ರು. ಲಕ್ಷ್ಮಣಗೌಡ, ಭ. ಮಂಜುನಾಥ, ಜ. ಹೊ. ಮಹಲಿಂಗಯ್ಯ, ಪಿ. ಎಸ್. ನಂಜುಂಡಪ್ಪ, ಬಿ. ಎಸ್. ರುದ್ರಸ್ವಾಮಿ, ಪ. ಮಲ್ಲೇಶ್—ಇವರುಗಳು ನಮ್ಮೊಡನೆ ದುಡಿದು ಮಾಡಿದ ಕೆಲಸ ವರ್ಣಿಸಲಸದಳ. ಇವರೆಲ್ಲರಿಗೂ ನಾವು ಅತ್ಯಂತ ಕೃತಜ್ಞರು. ನಾವು ಕೊಟ್ಟ ಅತ್ಯಲ್ಪ ಅವಧಿಯಲ್ಲಿ ಶ್ರಮವಹಿಸಿ, ಇಷ್ಟು ಮುದ್ದಾಗಿ ಮುದ್ರಿಸಿಕೊಟ್ಟಿದ್ದಾರೆ "ತಾಂಡವಮೂರ್ತಿ ಮುದ್ರಣಾಲಯದ" ಮಾಲೀಕರಾದ ಶ್ರೀ ಸಿ. ನಟರಾಜ್, ಬಿ.ಎಸ್ಸಿ., ಮತ್ತು ಶ್ರೀ ಎಂ. ಎಸ್. ಕೆ. ಮೂರ್ತಿ, ಬಿ.ಎಸ್ಸಿ, ಅವರು. ಬೇಸರವಿಲ್ಲದೆ ಸಹಕರಿಸಿ ಕೆಲಸಮಾಡಿದ್ದಾರೆ ನಾರಾಯಣ್, ನಾಗಣ್ಣ, ಸುಂದರ್‌ರವರು. ಈ ಕೆಲಸದಲ್ಲಿ ಅವರು ತೋರಿದ ವಿಶ್ವಾಸ, ಉತ್ಸಾಹ ಅಪಾರ. ಅವರಿಗೆ ನಮ್ಮ ಅನಂತ ವಂದನೆಗಳು.

ಕೇವಲ ಎರಡು ತಿಂಗಳಲ್ಲಿ ಈ ವಿಚಾರವನ್ನು ಯೋಚಿಸಿ, ಕೆಲಸಮಾಡಿ—ಇದನ್ನು ರೂಪುಗೊಳಿಸಿದ್ದೇವೆ. ಕಾಲದ ಒತ್ತಡದಿಂದ ಕೃತಿ ನಮ್ಮ ಕಲ್ಪನೆಯ ಸಹಯಾತ್ರಿಯಾಗಿಲ್ಲ ಎಂಬುದು ನಮಗೆ ಗೊತ್ತು. ಇದರಿಂದ, ನಾವು ಹಾಕಿಕೊಂಡ ಪರಿಮಿತಿಯನ್ನೇ ಇನ್ನೂ ಪರಿಮಿತಿಗೊಳಿಸಿ ಕೆಲಸಮಾಡಬೇಕಾಯಿತು. ಪ್ರಕಟಿಸಲು ಆರಿಸಿದ ಕೆಲವು ಲೇಖನಗಳನ್ನು ಅನಿವಾರ್ಯವಾಗಿ ಬಿಡಬೇಕಾಯಿತು. ಅನೇಕ ತಪ್ಪುಳಗು ನಮ್ಮಿಂದ ಆಗಿರಬಹುದು. ಅವನ್ನು ದಯೆಯಿಟ್ಟು ಕ್ಷಮಿಸಿ.

ನಮ್ಮ ಈ ಸಾಹಸವನ್ನು ಕನ್ನಡದ ಜನ ಮೆಚ್ಚುತ್ತದೆ, ಹರಸುತ್ತದೆ ಎಂದು ನಾವು ನಂಬಿದ್ದೇವೆ.

೨೬ ಜನವರಿ, ೧೯೫೬. ಪ. ವಿ. ಚಂದ್ರಶೇಖರ,
ಮಹಾರಾಜಾ ಕಾಲೇಜ್ ವಿದ್ಯಾರ್ಥಿನಿಲಯ, ಜ. ಶಿ. ಪರಶಿವಮೂರ್ತಿ.
ಮೈಸೂರು.

# ಹಿತವಚನ

ಶತಂ ಜೀವ ಶರದೋ ವರ್ಧಮಾನಃ

ಮೈಸೂರು ವಿಶ್ವವಿದ್ಯಾನಿಲಯದ ವಿದ್ಯಾರ್ಥಿ ಮತ್ತು ಅಧ್ಯಾಪಕರ ಪರವಾಗಿ ಶ್ರೀ ಕೆ. ವಿ. ಪುಟ್ಟಪ್ಪನವರಿಗೆ 'ಉಡುಗೊರೆ' ಎಂಬ ಅಭಿನಂದನ ಗ್ರಂಥವನ್ನು ಅರ್ಪಿಸಬೇಕೆಂದು ತಾವು ಮಾಡಿರುವ ಸಂಕಲ್ಪ ತೀರ ಸಮಂಜಸವಾಗಿದೆ. ಆ ಬಗ್ಗೆ ನಾನು ತಮ್ಮೆಲ್ಲರನ್ನೂ ಅಭಿನಂದಿಸುತ್ತೇನೆ.

ಶ್ರೀ ಪುಟ್ಟಪ್ಪನವರಿಗೆ ಶ್ರೀದೇವರು ದೀರ್ಘಾಯುರಾರೋಗ್ಯಾದಿ ಸಕಲ ಭಾಗ್ಯವನಿತ್ತು ಕಾಪಾಡುತ್ತಿರಲಿ! ಹಾಗೂ ಕನ್ನಡ ಸಾಹಿತ್ಯ ಪ್ರಪಂಚದಲ್ಲಿ ಅವರು ಶ್ರೇಷ್ಠಕವಿ ಎಂಬ ಕೀರ್ತಿ ಇಂದೂ, ಮುಂದೂ ಉತ್ತರೋತ್ತರವಾಗಿ ಬೆಳೆದು ಚಿರಕಾಲ ಬಾಳಿರುವಂತೆ ಆತನು ಅವರಲ್ಲಿ ಅನುಗ್ರಹಿಸಲಿ ಎಂದು ಆತನನ್ನು ಪ್ರಾರ್ಥಿಸುತ್ತೇನೆ.

**ಗೋವಿಂದ ಪೈ**

* * * *

ಕುವೆಂಪು ಅವರ ವಿಷಯದಲ್ಲಿ ನಾವು ಪ್ರೀತಿ ತೋರಿ ಹೆಮ್ಮೆ ಪಟ್ಟರೆ ದೇವರು ನಮಗೆ ಕೊಟ್ಟಿರುವ ವರದ ಬೆಲೆಯನ್ನು ನಾವು ಕಾಣಬಲ್ಲವರಾಗಿದ್ದೇವೆಯೆಂದಲ್ಲವೆ ಅರ್ಥ? ಆ ವರದ ಫಲವನ್ನನುಭವಿಸುವ ಭಾಗ್ಯ ನಮ್ಮ ಜನಕ್ಕೆ ಚಿರಕಾಲ ನಡೆದು ಬರಲಿ.

**ಡಿ. ವಿ. ಗುಂಡಪ್ಪ**

* * * *

ಮಹಾರಾಜಾ ಕಾಲೇಜಿನ ವಿದ್ಯಾರ್ಥಿಗಳೂ ಅಧ್ಯಾಪಕ ವೃಂದವೂ ಕವಿವರ್ಯ ಕುವೆಂಪು ಅವರಿಗೆ ಜನವರಿ ೨೯ ನೆಯ ಶುಭದಿನದಲ್ಲಿ ಒಂದು ಉಡುಗೊರೆ ಗ್ರಂಥವನ್ನು ಸಮರ್ಪಿಸುವುದನ್ನು ಕೇಳಿ ಬಹು ಸಂತೋಷವಾಯಿತು. ಶ್ರೀ ಕುವೆಂಪು ಅವರ ವಿಷಯದಲ್ಲಿ ನಿಮ್ಮೆಲ್ಲರ ವಿಶ್ವಾಸ ನಿರಂತರವಾಗಿದ್ದುಕೊಂಡು ಅನೇಕ ಸಂದರ್ಭಗಳಲ್ಲಿ ಪ್ರಕಟವಾಗುತ್ತಿರಲೆಂದು ಹೃತ್ಪೂರ್ವಕವಾಗಿ ಆಶಿಸುತ್ತೇನೆ. ತಮ್ಮೆಲ್ಲರಿಗೂ ಕನ್ನಡದ ಮೇಲೂ ಕನ್ನಡನಾಡಿನ ಕವಿಗಳಮೇಲೂ ಇರುವ ಆದರ ಅಭಿಮಾನಾಸ್ಪದವಾದುದೆಂದು ತುಂಬ ಹರ್ಷಿಸುತ್ತೇನೆ. ಕವಿವರ್ಯರಿಗೆ ನನ್ನ ಶುಭಾಶಯಗಳನ್ನು ತಿಳಿಸಿ.

**ಪು. ತಿ. ನರಸಿಂಹಾಚಾರ್**

ನಾಡಿನ ಗಣ್ಯಕವಿಗಳ ಗುಣಗ್ರಹಣ, ಅಭಿನಂದನ, ಸಮುಚಿತ ವಿಮರ್ಶೆ ಎಷ್ಟು ಚೆನ್ನಾಗಿ ನಡೆಯುವುದೋ ಅಷ್ಟು ಆ ನಾಡಿನ ಜನರ ಸಂಸ್ಕೃತಿ ಬೆಳೆದಿದೆ ಎಂದು ತಿಳಿಯಬೇಕು. ಹೊಸ ತಲೆಮಾರಿನ ತರುಣರಲ್ಲಿ ಕಾವ್ಯಪ್ರೇಮವು ಹೆಚ್ಚುತ್ತಿರುವುದು ಬಹಳ ಹೆಮ್ಮೆಯ ವಿಷಯ. ಮಾನ್ಯ ಶ್ರೀ 'ಕುವೆಂಪು' ಅವರು ಪಡೆದುಬಂದ ಕವಿಗಳು. ನಮ್ಮಿಂದ ಅವರು ಯಥೋಚಿತವಾದ ರಸಾಸ್ವಾದವನ್ನು ಮಾತ್ರ ಪಡೆಯಬಹುದು. ಅದು 'ಉಡುಗೊರೆ'ಯ ರೂಪದಲ್ಲಿ ದೊರೆತಿದೆ ಎಂದು ಹಾರೈಸುತ್ತೇನೆ.

**ರಂ. ಶ್ರೀ. ಮುಗಳಿ**

* * * *

ಶ್ರೀ ಕುವೆಂಪು ಅವರು ಕಳೆದ ಮೂವತ್ತು ವರ್ಷಗಳಿಗೆ ಮೇಲ್ಪಟ್ಟು ಉಜ್ವಲ ಕಾವ್ಯವನ್ನೂ ಸಾಹಿತ್ಯವನ್ನೂ ನಿರ್ಮಿಸಿದ್ದಾರೆ. ಕನ್ನಡದ ಹಿರಿಮೆಗಾಗಿ, ಕರ್ನಾಟಕದ ಏಳಿಗೆಗಾಗಿ ನಿರ್ಭೀತರಾಗಿ ದುಡಿದಿದ್ದಾರೆ. ಅವರ ಕಾವ್ಯದಲ್ಲಿ ಒಂದು ಅನನ್ಯವಾದ ಸಹಜ ಸೌಂದರ್ಯವಿದೆ; ಭಾವ ಶುದ್ಧಿಯಿದೆ; ಆದರ್ಶ ಮಮತೆ ಇದೆ. ಕಿರಿಯ ಭಾವಗೀತೆಗಳಲ್ಲಿಯಂತೆ ಹಿರಿಯ ಕೃತಿಗಳಲ್ಲೂ ಅವರ ಪ್ರತಿಭೆ ರೂಪ ತಾಳಿದೆ. ಇಂದಿನ ಯುಗದ ಪುಣ್ಯಪುರುಷರ ಸ್ಫೂರ್ತಿಯಿಂದ ಅವರ ತಾತ್ವಿಕ ದರ್ಶನಕ್ಕೆ ಒಂದು ವಿಕಾಸ ಬಂದಿದೆ. ಇದೆಲ್ಲ ನಾಡಿನ ಪ್ರಗತಿ ಪಥದಲ್ಲಿ ಹೆಚ್ಚಿನ ಉತ್ಸಾಹಕ್ಕೆ ಕಾರಣವಾಗಿದೆ. ಇಂತಹ ವ್ಯಕ್ತಿತ್ವಕ್ಕೆ ಆದರದ "ಉಡುಗೊರೆ"ಯನ್ನು ಸಲ್ಲಿಸುವುದೆಂದರೆ ಅದು ಜನತೆಯ ಪರಿಣತಮತಿಯ ಪ್ರತೀಕ; ಕಲ್ಯಾಣದ ಪಥದಲ್ಲಿ ಅದು ಮುಂದುವರೆಯುವುದರ ಪ್ರಮಾಣವಾಗಿದೆ.

**ವಿ. ಕೃ. ಗೋಕಾಕ**



**ಸಲಹೆಗಾರ ಮಂಡಳಿ**

ಪ್ರೊ. ಸಿ. ಡಿ. ನರಸಿಂಹಯ್ಯ, ಎಂ. ಎ. (ಕ್ಯಾಂಟಬ್)
ಶ್ರೀಮತಿ ಜಯಲಕ್ಷಮ್ಮಣ್ಣಿ, ಎಂ. ಎ.
ಶ್ರೀ ಕ. ವೆಂ. ರಾಘವಾಚಾರ್, ಎಂ. ಎ., ಬಿ. ಟಿ.
ಶ್ರೀ ತ. ಸು. ಶಾಮರಾಯ, ಎಂ. ಎ.
ಶ್ರೀ ಹೆಚ್. ಎಂ. ಶಂಕರನಾರಾಯಣರಾವ್, ಎಂ. ಎ.
ಶ್ರೀ ಎಸ್. ವಿ. ಪರಮೇಶ್ವರ ಭಟ್ಟ, ಎಂ. ಎ.
ಶ್ರೀ ಎ. ಎಸ್. ವೀರಪ್ಪ, ಬಿ. ಎಸ್‌ಸಿ., (ಆನರ್ಸ್) ಬಿ. ಟಿ.
ಶ್ರೀ ಎಸ್. ಅನಂತನಾರಾಯಣ, ಎಂ. ಎ.
ಶ್ರೀ ದೇ. ಜವರೇಗೌಡ. ಎಂ. ಎ.

**ಕೋಶಾಧಿಕಾರಿಗಳು :**

ಶ್ರೀ ಉ. ಕಾ. ಸುಬ್ಬರಾಯಾಚಾರ್, ಎಂ. ಎ.

**ಸಂಪಾದಕರು :**

ಪ. ವಿ. ಚಂದ್ರಶೇಖರ
ಜ. ಶಿ. ಪರಶಿವಮೂರ್ತಿ

**ಸಹಾಯಕ ಸಮಿತಿ :**

ಶ್ರೀ ಕ. ಶಂ. ಕರುಣಾಕರನ್
ಶ್ರೀ ಅ. ರಾ. ಮಿತ್ರ
ಶ್ರೀ ಪಾ. ಶ. ಶ್ರೀನಿವಾಸ
ಶ್ರೀ ಬಿ. ರು. ಲಕ್ಷ್ಮಣಗೌಡ
ಶ್ರೀ ಭ. ಮಂಜುನಾಥ
ಶ್ರೀ ಜ. ಹೊ. ಮಹಲಿಂಗಯ್ಯ
ಶ್ರೀ ಪಿ. ಎಸ್. ನಂಜುಂಡಪ್ಪ
ಶ್ರೀ ಬಿ. ಎಸ್. ರುದ್ರಸ್ವಾಮಿ
ಶ್ರೀ ಪ. ಮಲ್ಲೇಶ್

# ಒಳಪಿಡಿ

ಶಿವಕೃಪೆಗೆ

ತೃಣಮೆ ಖಡ್ಗಂ; ಪನಿ ಕಡಲ್, ಕಿಡಿ ಸಿಡಿಲ್, ಶ್ರದ್ಧೆ ತಾಂ
ಸಾಣೆಯಿರೆ, ತಾಳ್ಮೆಯೆ ತಪಂ. ಧರ್ಮಶಕ್ತಿಯುಂ
ಯೋಗಗೊಂಡಿರೆ, ಕರ್ಮಿಯುಯಿರ್ ಕಾಯ್ವಾತನುಂ. ಶಿಲ್ಪಿ
ಕೈಯಿಟ್ಟೆರಾ ಕಾಣ್ಬ ಕಾಡುಗಲ್ಲಿಂದುಣ್ಮದೇಂ
ಕಲಾಪ್ರತಿಮೆ? ನಿಶ್ಶಬ್ದಿಯ್ಯೆ ಈಶ್ವರ ಕೃಪಾಬ್ಧಿ.
ಬರ್ಪುದನರಿಯಲಾರೆವಂತೆಯೆ ಮಹತ್ಕೃತಿ ತಾಂ
ಮಹನ್‌ಮೌನಿ.

ಶ್ರೀ ಕುವೆಂಪು

(ಶ್ರೀ ರಾಮಾಯಣ ದರ್ಶನಂ)

# ಕುವೆಂಪು—ದೂರದಿಂದ

## ಅಶ್ವತ್ಥ

ಈ ಉಡುಗೊರೆ ಗ್ರಂಥಕ್ಕೆ ಏನನ್ನು ಬರೆಯಬೇಕೆಂದು ಯೋಚಿಸಿದಾಗ ನನ್ನ ಮನಸ್ಸಿಗೆ ಮೊಟ್ಟಮೊದಲು ಬಂದ ಅಂಶ ಅವರ ಬರವಣಿಗೆಯಲ್ಲ, ಅವರ ಜೀವನವಲ್ಲ, ಅವರ ವ್ಯಕ್ತಿಪರಿಚಯವೂ ಅಲ್ಲ. ಯಾಕೆಂದರೆ ಇವೆಲ್ಲವೂ ನನ್ನಿಂದ ಯಾವಾಗಲೂ ದೂರವಾಗಿಯೇ ಇದ್ದುಬಿಟ್ಟವೆ. ' ದೂರ ' ಎಂದೆನಲ್ಲವೆ ? ನನಗೆ ಮೊಟ್ಟಮೊದಲು ಹೊಳೆದ ಅಂಶ ಈ ದೂರವೇ. ಇಲ್ಲಿ 'ದೂರ' ಶಬ್ದವನ್ನು ಯಾವ ಯಾವ ರೀತಿಯಲ್ಲಿ ಅರ್ಥಮಾಡಿಕೊಂಡರೂ ಅದೆಲ್ಲಾ ಸರಿಯೇ. ಆದರೂ ನಾನು ಹೇಳುತ್ತಿರುವ ಅರ್ಥ ವೆಂದರೆ ಕೇವಲ ಭೌತಿಕವಾದ ದೂರ—ಗಜ, ಮೈಲಿಗಳ ವಿಚಾರ. ನಾನು ಅವರಿಗೆ ಯಾವಾಗಲೋ ಒಮ್ಮೊಮ್ಮೆ ಹತ್ತಿರ ಬಂದಿದ್ದೇನೆಂದು ಹೇಳಿದರೂ ಅದು ಜ್ಯೋತಿಷ್ಕರು ಒಂದು ಗ್ರಹಕ್ಕೆ ಇನ್ನೊಂದು ಇಂಥ ಕಾಲದಲ್ಲಿ ಹತ್ತಿರವಾಗಿತ್ತು, ಹತ್ತಿರವಾಗುತ್ತದೆ ಎಂದು ಹೇಳುವಂತೆಯೇ–ಸಂಪರ್ಕ, ಸಾಮೀಪ್ಯವಲ್ಲ. ಆ ಹತ್ತಿರದಲ್ಲೂ ದೂರವೇ ! ಹೀಗೆಂದರೆ ಕುವೆಂಪು ಒಂದು ಗ್ರಹ, ನಾನೊಂದು ಗ್ರಹ ಎಂದು ಹೇಳಿಕೊಳ್ಳುವ ಉದ್ಧಟತನಕ್ಕೆ ಇಳಿದೆನೆಂದು ಯಾರೂ ಭಾವಿಸಬಾರದು. ಉಹುಂ, ನಾನು ಗ್ರಹವಲ್ಲ. ಹಾಗೇ ಉಪಗ್ರಹವೆಂದು ಹೇಳಿಕೊಳ್ಳುವ ನಮ್ರತೆಯಾಗಲೀ ಚಾತುರ್ಯವಾಗಲೀ ನನ ಗಿಲ್ಲ. ಹಾಗೆ ನೋಡಿದರೆ ಕುವೆಂಪುರವರಿಂದ ಬೆಳಕು ಶಾಖಗಳೆರಡನ್ನೂ ಬೇಕಾದಷ್ಟು ಅಂಶದಲ್ಲಿ ಹೊಂದಿದವರು ಅವರನ್ನು ಗ್ರಹವೆನ್ನದೆ ಸೂರ್ಯನೇ ಎಂದಾರು. ಅಂತೂ ನಾನು ಕಾವ್ಯ ವರ್ಣನೆಯ ಕೆಲಸಕ್ಕೆ ಕೈಹಾಕಿ ಅವಲಕ್ಷಣ ಎನ್ನಿಸಿಕೊಳ್ಳುವುದಿಲ್ಲ. ನನ್ನ ಮಾತು ' ದೂರದ ' ವಿಷಯದಲ್ಲೇ ಸಿಲ್ಲಲಿ.

ವರ್ಷದ ಹತ್ತು ಹನ್ನೊಂದು ತಿಂಗಳಿನಲ್ಲೆಲ್ಲ ನನ್ನ ಗತಿ ಅವರಿಂದ ನನ್ನನ್ನು ಸಾವಿರದ ಏಳುನೂರು ಮೈಲಿಯಲ್ಲೇ ಇಟ್ಟಿರುತ್ತದೆ. ಉಳಿದ ಕಾಲದಲ್ಲಿ ಹತ್ತಿರಕ್ಕೆ ಹೋದೆನೆಂದರೂ ಚಾಮರಾಜಪುರಂಗೂ, ವಾಣಿವಿಲಾಸ ಮೊಹಲ್ಲಾಕ್ಕೂ ಇರುವಷ್ಟು ಅಂತರಕ್ಕಿಂತೇನೂ ಕಡಿಮೆಯಲ್ಲ. ಆದರೂ ಒಂದು ಬಾರಿ ಕೇವಲ ಹಲವು ಗಜಗಳ ಹತ್ತಿರ–ದೂರಕ್ಕೆ ಬಂದಿದ್ದುದುಂಟು. ಅದನ್ನು ಇದೇ ಮುಂದೆ ಹೇಳುತ್ತೇನೆ. ಸ್ವಲ್ಪ ತಾಳಿ. ಹೀಗೆ ಕುವೆಂಪು ನನಗೆ ದೂರದಿಂದಲೇ ಮಾತ್ರ ಗೊತ್ತೆಂದೇ ಈ ತಲೆಯ ಬರಹ.

ನೋಡಿ, ದೂರದಿಂದಲೇ ನೋಡುವುದರಲ್ಲಿ ಲಾಭವೂ ಇದೆ–ನಷ್ಟವೂ ಇದ್ದಂತೆ. ಲಾಭ ನಷ್ಟ ಇವೆಲ್ಲ ಯಾವುದನ್ನು ಯಾರನ್ನು ನೋಡುತ್ತಿದ್ದೇವೆ ಎನ್ನುವುದರ ಮೇಲೆ ಗೊತ್ತುಮಾಡತಕ್ಕವು. ಒಂದು ಹೂವನ್ನೋ, ಒಂದು ಆಟದ ಸಾಮಾನನ್ನೋ, ಒಂದು ಚಿತ್ರವನ್ನೋ, ಶಿಲ್ಪವನ್ನೋ ನೋಡಬೇಕಾದರೆ ಹತ್ತಿರದಿಂದ ನೋಡುತ್ತೇವೆ. ಕೈ

ಯಲ್ಲೇ ಹಿಡಿದೂ ನೋಡುತ್ತೇವೆ, ಹಣ್ಣಾದರೆ ಅದುಮಿಯೂ ಮೂಸಿಯೂ ನೋಡ ಬಹುದು. ಹೊನ್ನಾದರೆ, ರೇಷ್ಮೆಯಾದರೆ, ತಿಕ್ಕಿಯೂ ನೋಡಬಹುದು. ಅದೇ ಪರೀಕ್ಷೆಯ ರೀತಿ, ಪರಿಚಯದ ರೀತಿ. ಆದರೆ ಅದೇ ಬೆಟ್ಟವನ್ನು ನೋಡಬೇಕಾದರೆ ಅದರ ಮೇಲೆ ನಿಂತು ನೋಡುವುದಿಲ್ಲ–ಕೆಳಗೇ ಸ್ವಲ್ಪವಾದರೂ ದೂರದಿಂದಲೇ ನೋಡುತ್ತೇವೆ. ಇನ್ನೂ ದೂರದಿಂದ ನೋಡಿದರೆ ಇನ್ನೂ ಚೆನ್ನವೇ. ಹಾಗೇ ಕಡಲಿನ ವಿಷಯವೂ. ನಾನು ಬೊಂಬಾಯಿನಲ್ಲಿ ಜುಹು ತೀರಕ್ಕೆ ಹೋಗಿ ಅಲ್ಲಲ್ಲಿ ನಲಿದಾಡಿದ್ದೇನೆ; ಅಲೆಗೆ ಕಾಲನ್ನೂ ಒಡ್ಡಿ ಆನಂದಿಸಿದ್ದೇನೆ; ಆದರೆ ಕಡಲನ್ನು ನೋಡುವ ಆನಂದವನ್ನು ಅನುಭವಿಸಿದಾಗಲೆಲ್ಲ ನನ್ನ ಕಣ್ಣು ಆ ಪಚ್ಚೆಯ ಹಾಸುಗಲ್ಲನ್ನು ಒಳಗೊಂಡು ದಿಗಂತದ ವರೆಗೂ ಹೋಗಿರುತ್ತಿತ್ತು. ಸಮುದ್ರವನ್ನು ನೋಡುವುದು ಹಾಗೇ. ಹತ್ತಿರ ನೋಡುವುದು ಬಾವಿಯಲ್ಲಿ ಬಗ್ಗಿದಂತೋ, ನಿಮ್ಮ ಚಹದ ಬಟ್ಟಲಿನೊಳಗೆ ನೋಡಿದಂತೋ ಆಗುತ್ತದೆ. ಕಾಣುವುದು ಬಾವಿಯ ನೀರು, ಬಟ್ಟಲಿನ ಚಹ–ಕಡಲಲ್ಲ. ಹಾಗೇ ನಾನು ಒಮ್ಮೆ ಅದೇ ಅರಬ್ಬಿ ಸಮುದ್ರವನ್ನು ದೂರದ 'ಕಂಡೆವಿಲ್ಲಿ' ಗುಡ್ಡದ ಮೇಲಿನಿಂದಲೂ ನೋಡಿದ್ದೇನೆ–ಪರಿಣಾಮ, ಒನಕೆ ಚಿಗುರಿದ ಹಾಗೆ ನನ್ನಿಂದಲೂ 'ಕಂಡೆವಿಲ್ಲಿ ಕಂಡೆವಿಲ್ಲಿ' ಎಂದು ಒಂದು ಪದ್ಯ–ಅಲ್ಲ ಕವಿತೆ–ಹೊರಟೇಬಿಟ್ಟಿತು. ಹಾಗಿತ್ತು ದೂರದ ಕಡಲು ಅದರ ರಮ್ಯ ದೃಶ್ಯ! ಕುವೆಂಪುರವರನ್ನು ನಾನು ಕಂಡಿರುವುದೂ ಹೀಗೇ. ಬಹುಶಃ ಸರಿಯಾಗಿಯೇ.

ಹುಂ, ಸುಮಾರು ಇಪ್ಪತ್ತು, ಮೂವತ್ತು ಗಜ ಹತ್ತಿರಕ್ಕೆ ಬಂದಿದ್ದ ಒಂದೇ ಒಂದು ಪರ್ವಕಾಲವೆಂದರೆ ಸುಮಾರು ಇಪ್ಪತ್ತಮೂರು ಇಪ್ಪತ್ತನಾಲ್ಕು ವರ್ಷಗಳ ಹಿಂದೆ! ಪ್ರಾಚೀನ ಚರಿತ್ರೆ! ಆಗ ಅವರು ದಳ ಅರಳುವ ಜಾಜಿಯ ಹಾಗಿದ್ದರು–ಶುಭ್ರವಾದ ಬಿಳಿಯ ಖಾದಿ ದಟ್ಟಿ, ಕುರ್ತ, ಮೇಲುವಸ್ತ್ರ; ಅರಳುತ್ತಿದ್ದ ಯೌವನ, ಪ್ರಸರಿಸುತ್ತಿದ್ದ ಹೆಸರಿನ ದಳಗಳು. ಬೆಂಗಳೂರು ಸೆಂಟ್ರಲ್ ಕಾಲೇಜಿನ ಗಣಿತಶಾಸ್ತ್ರ ಭವನದಲ್ಲಿ ತುಂಬು ಸಭೆ. ಹೊಸ ಕನ್ನಡ ಕಣ್ಣು ಬಿಡುತ್ತಿದ್ದ ಕಾಲದ ಉತ್ಸಾಹ ತುಂಬಿಸಿದ್ದ ಸಭೆ. ನೆನಪು ನೆಟ್ಟಗಿದ್ದರೆ 'ಬಾಲಕವಿ ಸಮ್ಮೇಳನ' ಸಮಾರಂಭ. ಆಗ 'ಕುವೆಂಪು' ಇನ್ನೂ 'ಕೆ. ವಿ. ಪುಟ್ಟಪ್ಪ' ಮತ್ತು ಬಾಲಕವಿ. ಬಾಲಕವಿಗಳಿಗೆ ಮುಂದಾಳಾಗಿ ಸಮ್ಮೇಳನಕ್ಕೆ ಅಧ್ಯಕ್ಷರು. ಆಗ ಇನ್ನೂ ನಮಗೆ ಸ್ವಾತಂತ್ರ್ಯ ಬಂದಿರಲಿಲ್ಲ; ನಮ್ಮ ಸರಕಾರವಾಗಲೀ ನಮ್ಮ ಮಂತ್ರಿಗಳಾಗಲೀ ಇರಲಿಲ್ಲ–ಈಗಿರುವಂತೆ. ಆಗತಾನೆ ಮೈಸೂರಿನ ರಾಮಕೃಷ್ಣಾಶ್ರಮದ ಜೋಗಿ ತನ್ನ ಕಿಂದರಿಯನ್ನು ಬಾರಿಸಿದ್ದ–ಬಾರಿಸುತ್ತಿದ್ದ. ತಂಡತಂಡವಾಗಿ ಇಲಿಗಳು ಕಣ್ಣೆತ್ತಿ ಕತ್ತೆತ್ತಿ ಹಿಂಬಾಲಿಸುತ್ತಿದ್ದುವು. ಹೌದು ಅದೇ ವರ್ಷವೋ ಏನೋ ರಾಮಕೃಷ್ಣಾಶ್ರಮವಾಸಿ ಬ್ರಹ್ಮಚಾರಿ ಧ್ಯೇಯವಾದಿ ಕೆ. ವಿ. ಪುಟ್ಟಪ್ಪನವರಿಗೆ ಬಿ. ಎಂ. ಶ್ರೀಯವರ ಸುವರ್ಣ ಪದಕ, ಮೊದಲನೆಯ ಬಾರಿಗೆ 'ಬೊಮ್ಮನ ಹಳ್ಳಿಯ ಕಿಂದರಿ ಜೋಗಿ'ಗಾಗಿ ಕೊಡಲ್ಪಟ್ಟಿತ್ತೆಂದು ಕಾಣುತ್ತದೆ. ಆಗ ಪದಕವೂ ಹೊಸದು, ಜೋಗಿಯ ಬಗೆಯ ಕವನವೂ ಹೊಸದೇ ಇದ್ದಿರ

ಬೇಕು. ನಿಜ, ಅವರೆಗಾಗಲೇ ಶ್ರೀಯವರ 'ಇಂಗ್ಲಿಷ್ ಗೀತಗಳು', ಡಿ. ವಿ. ಜಿಯವರ 'ನಿವೇದನ', ಹೀಗೆ ಕೆಲವು ಹೊರಗೆ ಇಣಿಕಿ ಕನ್ನಡ ಕವನ ಪ್ರಪಂಚದಲ್ಲಿ ಕ್ರಾಂತಿಯನ್ನೆಬ್ಬಿಸಿದ್ದವೆಂದು ಕಾಣುತ್ತದೆ. ಮೆಚ್ಚಿಗೆಯನ್ನು ಪಡೆದು ಹೆಸರುವಾಸಿಯಾಗಿದ್ದವು ಎಂದೂ ಊಹಿಸುತ್ತೇನೆ–ನಾನು ಆಗಲೂ ಕನ್ನಡ ಸಾಹಿತ್ಯದ ಬಗ್ಗೆ ಅಲ್ಪ ಸ್ವಲ್ಪ ಅಜ್ಞಾನವನ್ನು ಸಂಪಾದಿಸಿಕೊಂಡಿದ್ದವನೇ, ಈಗಿನ ಹಾಗೇ. ಅದಕ್ಕೇ ಸ್ವಲ್ಪ ಅಳುಕು, ಧೈರ್ಯವಾಗಿ ಹೇಳುವುದಕ್ಕೆ. ಹಾಗೂ ನಾನು ಅಪ್ಪಿತಪ್ಪಿ ಕನ್ನಡದ ಮರಳಿಗೆ ಕಾಲಿಟ್ಟವನೇ. ಈ ಮರಳಿನ ಮೇಲುಗಡೆ ನೀಲಾಗಸದಲ್ಲಿ ಹಾರಾಡುತ್ತ ಹಾಡುವ ಹಕ್ಕಿಗಳಿದ್ದಾರೆ–ಕುವೆಂಪುವಿನಂಥ ಕವಿಗಳು, ಮರಳಿನ ಪಾತ್ರದಮೇಲೆ ಹರಿಯುವ ನೀರನ್ನು ಕಾಲುವೆಗೆ ಕೊಳಾಯಿಗಳಿಗೆ ಹಾಯಿಸುವವರೂ ಇದ್ದಾರೆ, ನದಿಯ ನೀರಿನಲ್ಲಿ ಬಟ್ಟೆಯೊಗೆಯುವವರೂ, ಪಾತ್ರೆ ತೊಳೆಯುವವರು ಕೈ ಮೈ ತೊಳೆಯುವವರೂ, ಇನ್ನೂ ಏನು ಏನನ್ನೋ ಮಾಡುವವರೆಲ್ಲರೂ ಇದ್ದಾರೆ. ನೀರನ್ನು ಕುಡಿಯುವವರೂ, ಅದರಲ್ಲಿ ಈಸುವವರೂ ಇದ್ದಾರೆ. ಜತೆಗೆ ಮರಳಿನಿಂದ ಕಪ್ಪೆಗೂಡುಗಳನ್ನು ಕಟ್ಟಿ ಒಡೆದು ನಲಿದಾಡುವವರೂ ಇದ್ದಾರೆ. ನನ್ನ ಒಬ್ಬಿಬ್ಬರು ವಿಮರ್ಶಕರು ಕೂಗಿ ಕೂಗಿ ಹೇಳಿರುವಂತೆ ನಾನು ಇನ್ನೂ ಮರಳಿನಲ್ಲಿ ಬರಿ ತಪ್ಪು ಹೆಜ್ಜೆಯನ್ನಿಡುತ್ತ ಕೇಕೆ ಹಾಕುತ್ತಿದ್ದೇನೆ. ಹೀಗಿದ್ದು ನನ್ನ ಅಂಕಿ, ಅಂಶ, ಅಭಿಪ್ರಾಯಗಳು ಒಂದೊಂದು ತಪ್ಪು ಹೆಜ್ಜೆಯಾದರೂ ಆಗಬಹುದು. ಆಗಲೇಳಿ. ನಾನು ಹೇಳಬೇಕೆಂದಿದ್ದುದು 'ಇಂಗ್ಲೀಷ್ ಗೀತೆಗಳು' ಹೊಸಗನ್ನಡ ಕವನದ ಅಂಕದ ಪರದೆಯಾಗಿ ಮೇಲೆ ಹೋದರೆ 'ಬೊಮ್ಮನ ಹಳ್ಳಿ'ಯ ಹಾಡು ದೃಶ್ಯದ ಪರದೆಯಂತೆ ಹಿಂದೇ ಕಾಣಿಸಿಕೊಂಡಿತು. ಇಲ್ಲ, ಇವು ಸೂತ್ರಧಾರ ನಟಿಯರಂತೇ ಕವನ ದೃಶ್ಯದಲ್ಲಿ ಕಾಣಿಸಿಕೊಂಡವೆಂದರೂ ಸಲ್ಲುತ್ತದೆ. ಸೂತ್ರಧಾರನ ಆಕರ್ಷಣೆ ಒಂದಾದರೆ ನಟಿಯದೇ ಒಂದು. 'ಕಿಂದರಿ ಜೋಗಿ'ಯ ತಿಳಿ ಕವನ ನಟಿಯಂತೆಯೇ ಆಕರ್ಷಿಸಿತು. ನಟಿಯ ಮೇಲ್ಪಂಗ್ತಿಯೆಂದಮೇಲೆ ಕೇಳಬೇಕೆ—ಈಗಲೂ ನಿಮ್ಮ ಹೆಣ್ಣುಮಕ್ಕಳನ್ನು, ಯಾಕೆ, ಗಂಡುಮಕ್ಕಳನ್ನೂ ಕೇಳಿನೋಡಿ 'ತಾರೆ'ಗಳ ವೇಷಭೂಷಣ, ಹಾವ ಭಾವ ಅಲಂಕಾರ ವಿಲಾಸ ವಿಭ್ರಮಗಳ ವಿಚಾರ—ಒಮ್ಮೆಲೇ ಕವನಗಳು ಬಂದೇಬಂದವು, ಎಲ್ಲೆಲ್ಲಿಂದಲೋ, ಯಾರುಯಾರಿಂದಲೋ, ಕಂತೆ ಕಂತೆಯಾಗಿ, ರಾಶಿರಾಶಿಯಾಗಿ, ಗುಡ್ಡಗುಡ್ಡ, ಬೆಟ್ಟಬೆಟ್ಟವಾಗಿ. ಕವನವೆಂದರೆ ಎಷ್ಟು ಸುಲಭ! ನೋಡಿ 'ಕಿಂದರಿಜೋಗಿಯನ್ನು! ಎಲ್ಲೆಲ್ಲೂ ಕಟ್ಟುವವರೇ—ಸಿನಿಮಾ ಹಾಡುಗಳು ಎಲ್ಲ ತುಟಿಗಳಮೇಲೂ ಇದ್ದಂತೆ. ಸಿನಿಮಾ ಹಾಡು ಲತಾಮಂಗೇಶ್ಕರ್ ಳಿಂದಲೂ ಕೇಳಬಹುದು, ನಮ್ಮೂರು ಜಟಕಾ ಸಾಬಿಯಿಂದಲೂ ಕೇಳಬಹುದು, ಅಷ್ಟೇ ವ್ಯತ್ಯಾಸ ಕಿಂದರಿಜೋಗಿಯ ಕೀರ್ತಿಗೂ ಅದೇಜಾಡಿನಲ್ಲಿ ಹರಿದ ಅನೇಕಾನೇಕ ಕವಿತೆಗಳ ಪೈಕಿ ಹಲವಕ್ಕೂ. ಅಂದಮೇಲೆ ಈ ಘನವಾದುದಲ್ಲವಾದರೂ ಆಕರ್ಷಕವಾದ ಸುಲಭದಾರಿಯನ್ನು ಹಾಕಿ ಹಲವು ಹೊಸಗನ್ನಡ ಕವಿತೆಗಳ ನಡೆಗೆ ಆಸ್ಪದಕೊಟ್ಟ ಕೀರ್ತಿ ಪುಟ್ಟಪ್ಪನವರ ಈ ಕವಿತೆಗೆ ಸಲ್ಲುತ್ತದೆ—ಗುರುತರವಾದ ಘನವಾದ ಕವಿತೆಗಳ

ಸೌಲಭ್ಯ, ಸಾಧ್ಯತೆ, ಆಕರ್ಷಣೆಗಳನ್ನು ತೋರಿದ ಇಂಗ್ಲಿಷ್ ಗೀತೆಗಳಂತೆ.

ಈ ಜೋಗಿಯ ಹಾಡಿನ ಬಗ್ಗೆ ಇಷ್ಟೊಂದು ಕತೆಯನ್ನು—ಸುಳ್ಳೋ ನಿಜವೋ—ಯಾಕೆ ಬೆಳೆಸಿದ್ದೇನೆ? ಇದೂ ಒಂದು ದಾರಿಗಂಬ ಎಂತ ಒಂದು. ಪುಟ್ಟಪ್ಪನವರ ಕಡೆಗೆ ಜನದ ಗಮನವನ್ನು ಸೆಳೆದ ಮುಖ್ಯ ಯತ್ನಗಳಲ್ಲಿ ಒಂದು ಎಂದು ಇನ್ನೊಂದು. ಇದೇ ಸುಲಭ ಧಾಟಿಯಲ್ಲಿ ಬರೆಯಲ್ಪಟ್ಟು ಜನಪ್ರಿಯವಾದ 'ಕೊಳಲು' 'ಪಾಂಚಜನ್ಯ' ಮೊದಲಾದ ಮೊದಲ ಸಂಗ್ರಹಗಳ ಅನೇಕ ಕವನ ಕೊಂಬೆಗಳಿಗೆ ಇದು ಬೇರು, ಈ ಬಗೆಯ ಮುಂದಿನ ಯತ್ನಗಳಿಗೆ ಪ್ರೇರಣೆ ಎಂದು ಮತ್ತೊಂದು. ಅಲ್ಲದೆ ದಿನಗಳು ಕಳೆಯುತ್ತ ಹೋದಂತೆಲ್ಲ ಬದಲಾಯಿಸಿದ ಅವರ ಭಾಷೆಯನ್ನು ಓದುತ್ತ 'ಆಹಾ, ಇದೇ ಭಾವಗಳು ಅದೇ ಸುಲಭಶೈಲಿಯಲ್ಲಿ ಬರುವಂತಿದ್ದರೆ!' ಎಂದು ಮತ್ತೆ ಮತ್ತೆ ಬರುವ ಯೋಚನೆ ಇನ್ನೂ ಒಂದು. ಅದೂ ಅಲ್ಲದೆ ಕಿಂದರಿಜೋಗಿಯ ಆಕರ್ಷಣೆಗೆ ಬಿದ್ದು, ಇದೇ ಹಾದಿಯಲ್ಲಿ ನಡೆದ ಗುಂಡಪ್ಪನವರ 'ಪಟಾಕಿ' ಮುಂತಾಗಿ ಯಾವುಯಾವುವೋ ಹುಚ್ಚುಹಚ್ಚಿ ನಾನೂ ಎರಡುಸಾರಿ ಶ್ರೀಯವರ ಪದಕಕ್ಕೆ ಕೈಹಾಕುವಂತೆಮಾಡಿ ಅದರ ಎತ್ತರವನ್ನು ಮಾತ್ರ ಕಂಡುಕೊಂಡ ನನ್ನ ಸೋಲೇ ಇದ್ದರೂ ಇರಬಹುದು. ಅಂತೂ ಅವರ ಬೊಮ್ಮನಹಳ್ಳಿಯ ಜೋಗಿ ಆ ದಿನಗಳ ಅವರ ಇತರ ಕವನಗಳಂತೆ ನನ್ನಲ್ಲಿ ಮನೆಮಾಡಿಕೊಂಡಿದೆ.

ಬಾಲಕವಿ ಸಮ್ಮೇಳನದ ಮಾತು ಹೇಳುತ್ತಿದ್ದೆನಲ್ಲ. ಆಗ ಅವರು 'ಕಲ್ಕಿ' ಯನ್ನು ಓದಿದರೆಂದು ನೆನಪು. ಅವರನ್ನು ನೋಡಿದ, ಅವರ ನುಡಿಯನ್ನು ಕೇಳಿದ ಸಂದರ್ಭ ಅದೇ ಮೊದಲು, ಅದೇ ಕಡೆ—ಈವರೆಗೆ ನನಗೆ. ನಾನಾದರೂ ನನ್ನ ಬಳಿಯಲ್ಲಿ ಪುಟ್ಟಪ್ಪನವರ ಪ್ರವಾಹ ಹರಿಯುತ್ತಿರುವಾಗ—ಕನ್ನಡ ನಾಡಿನಲ್ಲಿ ಎಲ್ಲೆಲ್ಲೂ ಹರಿಯುತ್ತಿರುವಂತೆ—ಅದನ್ನೇ ನೋಡಿ ಆನಂದಿಸುತ್ತಿದ್ದೇನೆ, ಅದೇ ಸಾಕು ಬೇಕಾದಷ್ಟು. ಅದರ ಮೂಲವನ್ನು ನೋಡಲು ಹೊರಟಿಲ್ಲ; ನನಗೆ ಆ ಕುತೂಹಲ ಹುಟ್ಟಿಲ್ಲ. ಈ ಬರಹ ಪ್ರವಾಹದಲ್ಲಿ ಕಂಡ ಪ್ರತಿಬಿಂಬವನ್ನು ಬಿಟ್ಟರೆ, ನನಗೆ ದೊರೆತಿರುವ ಪರಿಚಯ ಆವರಿವರ ಮಾತು ಬರಹಗಳಲ್ಲಿನ ಅಭಿಪ್ರಾಯ ಚಿತ್ರ. ಈ ಪ್ರತಿಬಿಂಬ ಚಿತ್ರ ಕನ್ನಡಿಯ ಡೊಂಕಿಗೆ ತಕ್ಕಹಾಗೆ ಬೇರೆಬೇರೆಯಾಗಿರುವುದು ಸಹಜವೇ. ಅಂದರೆ ಇದರ ಒಂದು ಸಹಾಯವೆಂದರೆ ನನ್ನಲ್ಲಿ ಉಂಟಾಗಿರುವ ಊಹೆ—ಕನ್ನಡ ಬರಹಗಾರರ ಪೈಕಿ ತಮ್ಮ ಬರಹದಲ್ಲಿ ಬಹಳ ಮಟ್ಟಿಗೆ ಸಹಜವಾಗಿ ಪ್ರತಿಬಿಂಬಿಸಿರುವ ಸ್ವಲ್ಪ ಜನರಲ್ಲಿ ಕುವೆಂಪು ಒಬ್ಬರು ಎಂಬುದು. ಇದು ಕನ್ನಡ ಬರಹಗಾರರಲ್ಲಿ ಸಾಮಾನ್ಯವಲ್ಲ. ನನ್ನ ಸಹೋದ್ಯೋಗಿಗಳಲ್ಲಿ ಅನೇಕರ ಬರೆವ ಬಗೆ ಇರುವ ಬಗೆಗಳಿಗೆ ಇರುವ ಸಂಬಂಧವನ್ನು ಯೋಚಿಸಿಕೊಂಡರೆ ಆ ಗೋಕುಲಾಷ್ಟಮಿ—ಇಮಾಮ್‌ಸಾಬರ ಸಂಬಂಧವೇ ಮುಂದೆ ಬರುತ್ತದೆ. ಯಾಕೆ, ಆಚಾರ—ಬದನೇಕಾಯಿ, ಅನಾಚಾರ—ವೃಂದಾವನ ಇವೂ ಮುಂದೆ ಸುಳಿಯುತ್ತವೆ. ಒಂದೇ ಒಂದು ಉದಾಹರಣೆಯನ್ನು ತೆಗೆದುಕೊಳ್ಳಿ. ಕುವೆಂಪುರವರು 'ಕೀರ್ತಿಶನಿ'ಯನ್ನು ಬರೆದರು. ಆದರೆ ಕೀರ್ತಿ ಬೇಡ ಎನ್ನುತ್ತಾರೋ

ಇಲ್ಲವೋ ನನಗೆ ತಿಳಿಯದಿದ್ದರೂ ಕೀರ್ತಿಗಾಗಿ ಶನಿಯನ್ನೇನೋ ಹಿಂಬಾಲಿಸಿಲ್ಲ; ಅದಕ್ಕಾಗಿ ರಾಜಕೀಯ ಸಾಹಿತಿಯಾಗಿಲ್ಲ, ತಮ್ಮ ಡಂಗುರವನ್ನು ಹೊಡೆದುಕೊಳ್ಳುವ ಅವಕಾಶಗಳಿಗಾಗಿ ಹಸಿದು ಕಾದಿರುವುದೂ ತಿಳಿದುಬಂದಿಲ್ಲ. ತಮ್ಮ ಗುರಿ, ಶಕ್ತಿಗಳನ್ನು ಚೆನ್ನಾಗಿ ತಿಳಿದುಕೊಂಡು, ಚಿಲ್ಲರೆ ವಿಷಯಗಳಿಗೆ ಮನಸ್ಸು ಕೊಡದೆ—ಕೊಟ್ಟಿದ್ದರೆ ಅವರಿಗಿರುವ ಅನುಕೂಲದಲ್ಲಿ ಎಷ್ಟೆಷ್ಟನ್ನು ಸಾಧಿಸಿಕೊಳ್ಳಬಹುದಾಗಿತ್ತು!—ತಾವೇ ಎಳೆದುಕೊಂಡ ತೆರೆಯ ಮರೆಯಲ್ಲಿ ತಮ್ಮ ತಪಸ್ಸಿದ್ಧಿಯ ಫಲಗಳನ್ನು ನೀಡುತ್ತಿದ್ದಾರೆ. ಹೀಗೆಂದರೆ ಈ 'ದಂತದ ಗೋಪುರ'ದಲ್ಲಿರದೆ ಸಾಮಾನ್ಯ ಜೀವನಕ್ಕೂ ಕಾಲಿಟ್ಟಿದ್ದರೆ ಅವರ ಬರಹ ಇನ್ನಷ್ಟು ಚೆನ್ನಾಗಿರುತ್ತಿತ್ತು ಎನ್ನುವ ಆಕ್ಷೇಪಣೆ ಸಹಜವಾಗಿಯೇ ಬರುತ್ತದೆ—ಬಂದೂ ಇದೆ. ಇರಬಹುದು. ಆದರೆ ನಾನು ಒತ್ತಿಹೇಳುವ ಅಂಶ ಈ ತಪಶ್ಚರ್ಯೆ, ಈ ಮನಸ್ಸಿನ ಮೇಲಿನ ಶಕ್ತಿ ಅವರ ಕಾವ್ಯದಿಂದ ಏನಾದರೂ ಒಂದು ಅಂಶವನ್ನು ತೆಗೆದುಕೊಂಡಿದ್ದರೆ, ಆದಕ್ಕೂ ಮಿಗಿಲಾದ ಬೇರೆಯೊಂದು ಅಂಶವನ್ನು ಕೊಟ್ಟೇ ಇದೆ; ನಮಗೆ ಸಾಕಾದಷ್ಟು ವಾಸ್ತವಿಕತೆಯ ನೆರಳು ಸ್ಪಷ್ಟವಾಗಿರದಿದ್ದರೆ, ಕವಿ ಸಹಜವಾದ ಭವ್ಯ ಕಲ್ಪನೆಯ ಕಾಮನಬಿಲ್ಲು ಮೋಹಗೊಳಿಸುವಷ್ಟು ಇರುತ್ತದೆ.

ಕಿಂದರಿಜೋಗಿಯ ಹಿಂದೇ, ಅದರೊಡನೇ ಎನ್ನುವಂತೆ ಅನೇಕ ಕವಿತೆಗಳು, ಕವಿತಾ ಸಂಗ್ರಹಗಳೂ ಬಂದವು. ಹಾಗೇ 'ಯಮನ ಸೋಲು' ನಾಟಕವೂ ಬಂದಿತು. ಅದೇ ಧಾಟಿಯಲ್ಲಿ 'ರಕ್ತಾಕ್ಷಿ'ಯವರೆಗೂ ನಡೆಯಿತು. ಪುಟ್ಟಪ್ಪನವರಿಗೆ ಜನಪ್ರಿಯತೆಯನ್ನು ಸಂಪಾದಿಸಿಕೊಟ್ಟ ಬರಹಗಳಲ್ಲಿ 'ಯಮನ ಸೋಲು' ನಾಟಕದ ಭಾಗ ಅಷ್ಟಿಷ್ಟಲ್ಲ. ಅಂದಿನಿಂದ ಅನೇಕ ವರ್ಷಗಳು ಇದು ಎಷ್ಟು ಬಾರಿ ಅಭಿನಯಿಸಲ್ಪಟ್ಟಿತೋ ಏನೋ. 'ಟೊಳ್ಳುಗಟ್ಟಿ' 'ಕೈ'ರವರಿಗೆ ತಂದ ಕೀರ್ತಿಯನ್ನು ಇದು ಇವರಿಗೆ ತಂದಿತೆಂದರೂ ಸಲ್ಲುತ್ತದೆ. ಹೀಗೆಂದರೆ ಜಲಗಾರ, ಸ್ಮಶಾನ ಕುರುಕ್ಷೇತ್ರ–ಇತ್ಯಾದಿಗಳನ್ನು ಮರೆತೆನೆಂದಲ್ಲ. ದೊಡ್ಡ ನಾಟಕಗಳು 'ಬಿರುಗಾಳಿ' 'ರಕ್ತಾಕ್ಷಿ'ಗಳಿಗೆ ಒಂದು ಘಟ್ಟವಾಯಿತು. ಎಷ್ಟೋ ಕಾಲವಾದಮೇಲೆ ಎನ್ನುವ ಹಾಗೆ 'ಶೂದ್ರ ತಪಸ್ವಿ', 'ಬೆರಳ್ಗೆ ಕೊರಳ್' ಬಂದಿವೆ; ವಸ್ತು, ದೃಷ್ಟಿ, ಭಾವ, ಭಾಷೆಗಳಿಂದ ಹೊಗಳಿಸಿಕೊಂಡಿವೆ. ಆದರೂ ನನಗೆ ಅವು ತತ್ವಪ್ರಧಾನವಾದ ದೃಶ್ಯಕಾವ್ಯಗಳು. ನಾಟಕವೆಂದರೆ ನನ್ನ ಒಲವು 'ರಕ್ತಾಕ್ಷಿ'ಯ ಕಡೆಗೇ, 'ಹ್ಯಾಂಲೆಟ್'ನ ಚೌಕಟ್ಟೇ ಆದರೇನು; ಚಿತ್ರದಲ್ಲಿ ಎಷ್ಟೋ ಸ್ವಾತಂತ್ರ್ಯವಿದೆ. 'ಬಿರುಗಾಳಿ'ಯಂತೆ ಭಾಷಾಂತರವೇ ಆಗಿದ್ದರೂ ಅದರ ಬೆಲೆಗೆ ಧಕ್ಕೆಯೇನು ಇರುತ್ತಿರಲಿಲ್ಲ. ಅಲ್ಲಿಯ ಮಾನವತೆ, ಸಹಜತೆ, ಸರಳತೆ, ಸಂಪೂರ್ಣತೆಗಳು ನನ್ನನ್ನು ಅತ್ತ ಕಡೆಗೇ ಸೆಳೆಯುತ್ತವೆ. ಈಗ ನಾನು ಅವರ ಕೃತಿಗಳ ವಿಮರ್ಶೆಗೆ ಹೊರಟಿಲ್ಲ. ಅವರ ಬರಹದ ಜಾಡನ್ನು ಗುರುತಿಸುತ್ತಿದ್ದೇನೆ. ಎರಡನೆಯ ಘಟ್ಟದಲ್ಲಿ ಬಂದ ಕವನಗಳ, ನಾಟಕಗಳ ಭಾಷೆಯ ಜಟಿಲತೆಯನ್ನು ಕಾಣುತ್ತ ನನ್ನನ್ನೇ ನಾನು "ಇವರೇಕೆ ಹೀಗೆ ಪಾಂಡಿತ್ಯಭಾಷೆಯ ಆಕರ್ಷಣೆಗೊಳಗಾಗಿದ್ದಾರೆ. ಇದೇನು ಶಬ್ದಮೋಹವೇ" ಎಂದೂ ಕೇಳಿಕೊಳ್ಳುತ್ತಿದ್ದೆ. ಆದರೆ ಒಂದು ಬಾರಿ ಶ್ರೀ

ಸ. ಸ. ಮಾಳವಾಡರು ‘ಪಕ್ಷಿಕಾಶಿ’ಯಿಂದ ಕೆಲವು ಸಾಲುಗಳನ್ನು ಅರ್ಥಪೂರ್ಣವಾಗಿ ಓದಿದಾಗ, ನನಗೆ ತಾಳ್ಮೆ ಕಡಿಮೆಯಾಗಿದ್ದುದೇ ನನ್ನ ಅಭಿಪ್ರಾಯಕ್ಕೆ ಕಾರಣವೆಂದು ಗೊತ್ತಾಯಿತು. ಹಿಂದೆ ಕಣ್ಣಿಗೆ ತಟ್ಟನೆ ಕಂಡು ಕೈಗೆ ಸಿಕ್ಕುವ ನೆಲದ ಮೇಲಿನ ಪೈರು ಪಚ್ಚೆಯಂತಿರುತ್ತಿದ್ದ ಶಕ್ತಿ ಈಗ ಅಗೆದು ಪಡೆಯಬೇಕಾದ ಖನಿಜದಂತಿದೆಯೆಂಬುದು ಸ್ಪಷ್ಟವಾಯಿತು. ಆದರೂ ಈ ಘಟ್ಟದ ಬರಹದಲ್ಲಿ ಕೆಲವಕ್ಕೆ ಕೆಲವು ಸಂಸ್ಕೃತ ಕಾವ್ಯಗಳ ಪ್ರಖ್ಯಾತಿ—ಪೂಜೆಯಿದ್ದು ಪಠನವಿಲ್ಲದ ಪ್ರಖ್ಯಾತಿ–ಎಲ್ಲಿ ಬಂದುಬಿಡುತ್ತದೆಯೋ, ಅದೆಲ್ಲಿ ಬರಿ ಪಂಡಿತರ ಸೊತ್ತಾಗಿ ಕಾಲೇಜು ತರಗತಿಗಳಲ್ಲೇ ಮನೆಮಾಡಿಬಿಡುತ್ತದೆಯೋ ಎಂಬ ಭಯ ಬಿಟ್ಟು ಹೋಗಿಲ್ಲ. ಇದನ್ನು ಹೇಳಿಸುವ ತಿಳಿವಳಿಕೆಯೆಂದರೆ ಅವರು ಅಷ್ಟು ಸರಳವಾಗಿಯೂ ಬರೆಯಬಲ್ಲ ಶಕ್ತಿಯಿರುವವರೆಂಬುದು. ಅಂತೂ ಸಿಪ್ಪೆ ಸುಲಿಯುವವರಿಗೆ ಸೊಗಸಾದ ತೊಳೆಗಳೇನೋ ಇದ್ದೇ ಇವೆ.

ಟಾಲ್‌ಸ್ಟಾಯ್ ವಿಚಾರದಲ್ಲಿ ಬರೆಯುತ್ತ “ಅವನು ತನ್ನ ಇಪ್ಪತ್ತೇಳು ಕತೆಗಳನ್ನು ಮಾತ್ರವೇ ಬರೆದಿದ್ದರೂ ಜಗದ್ವಿಖ್ಯಾತ ಸಾಹಿತಿಯಾಗಿರುತ್ತಿದ್ದ” ಎಂದು ಒಬ್ಬಾತ ಹೇಳಿದ್ದಾನೆ. ಆ ಕತೆಗಳ ಜತೆಗೆ ಉತ್ತಮವಾದ ಕಾದಂಬರಿಗಳನ್ನೂ ಬರೆದ. ಇದರಿಂದ ಅವನು ನಮಗೆ ಮುಖ್ಯವಾಗಿ ಕಾದಂಬರಿಕಾರನಾಗಿಯೇ ಇದ್ದಾನೆ. ಕುವೆಂಪುರವರ ವಿಷಯದಲ್ಲೂ ಸ್ವಲ್ಪ ಹಾಗೇ ಹೇಳಬಹುದು—ಅಂದರೆ ಅವರು ಈಗಾಗಲೇ ಬರೆದಿರುವ ಕಥಾ ಸಂಕಲನಗಳನ್ನೂ ಗದ್ಯಗ್ರಂಥಗಳನ್ನೂ ಪ್ರಕಟಿಸಿದ್ದರೇ ಉತ್ತಮ ಸಾಹಿತಿಯೆಂದೆನಿಸಿಕೊಳ್ಳುತ್ತಿದ್ದರು. ‘ನನ್ನ ದೇವರು’ ‘ಮೀನಾಕ್ಷಿಯ ಮೇಷ್ಟರು’ ಇವುಗಳಂತಹ ಉತ್ತಮ ಕತೆಗಳು ಈ ದಾರಿಯಲ್ಲೇ ನಡೆಯುತ್ತ ಹೋಗಿದ್ದರೆ ಎಂತಹ ಭವಿಷ್ಯ ಸಾಧನೆಯಾಗುತ್ತಿದ್ದಿತೆಂದು ತಿಳಿಸುತ್ತವೆ. ಹಾಗೇ ಅವರ ‘ಮಲೆನಾಡಿನ ಚಿತ್ರಗಳು’ ‘ಕಾನೂರು ಸುಬ್ಬಮ್ಮ ಹೆಗ್ಗಡಿತಿ’ ‘ಸ್ವಾಮಿ ವಿವೇಕಾನಂದ’ ‘ರಾಮಕೃಷ್ಣ ಪರಮಹಂಸ’ ಇವು ಅವರ ಅಪೂರ್ವ ಗದ್ಯಶಕ್ತಿಗೆ ಸಾಕ್ಷಿಗಳು. ಆದರೆ ಇವು ಅವರ ಕಾವ್ಯ ರಾಶಿಯೊಳಗೆ ಮುಚ್ಚಿಹೋಗುತ್ತಿವೆ—ವಾಲ್ಟರ್ ಸ್ಕಾಟನ ನಾವೆಲುಗಳಲ್ಲಿ ಮುಚ್ಚಿಹೋದ ಅವನ ಕವನಗಳಂತೆ. ಇತ್ತೀಚೆಗೆ ಅವರಿಂದ ಬಂದ ಕೆಲವು ಪ್ರಬಂಧಗಳು, ರೇಡಿಯೋ ಭಾಷಣಗಳು ಅವೇ ಕಾಲದಲ್ಲಿ ಬರೆದ ಸೋದರ ಕವನಗಳಂತೆ ಹತ್ತಿ ಕೀಳಬೇಕಾದ ತೆಂಗು, ಕೈನೀಡಿ ಕೀಳಬಹುದಾದ ಬಳ್ಳಿದ್ರಾಕ್ಷಿಯಲ್ಲ.

ಶ್ರೀ ಪುಟ್ಟಪ್ಪನವರ ಮೊದಲು ಎರಡನೆಯ ಘಟ್ಟಗಳ ಬರಹಗಳೆಲ್ಲ ಒಂದು ತೂಕವಾದರೆ ಅವರ ಹೊಸ ಕೃತಿಯಾದ ರಾಮಾಯಣವೇ ಒಂದು ತೂಕ. ದೊಡ್ಡ ಕೆಲಸ. ಇದಕ್ಕೆ ಶಕ್ತಿಯೂ ಬೇಕು, ತಾಳ್ಮೆಯೂ ಬೇಕು, ಶ್ರದ್ಧೆಯೂ ಬೇಕು. ಇವೆಲ್ಲ ಇರುವ ಈಗಿನ ಕನ್ನಡ ಕವಿಗಳು ಎಷ್ಟಿದ್ದಾರೆ? ಇಂತಹ ಫಲಸಾಧನೆಗೆ ತಪಸ್ಸು ಬೇಕು. ಅದು ಪುಟ್ಟಪ್ಪನವರಿಗೆ ಸಾಧ್ಯವಾಗಿದೆ. ಈವರೆಗೆ ವಿಮರ್ಶಿಸಿದ ಒಬ್ಬಿಬ್ಬರು ವಿವರವಾಗಿ ವಿಮರ್ಶಿಸದಿದ್ದರೂ ಮುಕ್ತಕಂಠದಿಂದ ಹೊಗಳಿದ್ದಾರೆ. ಇನ್ನೂ ನಿಧಾನವಾಗಿ ಜನರೊಳಗೆ ಇಳಿದಂತೆ ಇದರ ವಿಷಯವನ್ನು ಇನ್ನಷ್ಟು ಮತ್ತಷ್ಟು ಕೇಳುತ್ತೇವೆ. ಸ್ವಭಾವ

ವಾಗಿ ಕೊಂಕು ತೆಗೆಯುವವರೂ, ಅಸೂಯಾಪರರೂ, ಪೂರ್ವ ನಿರ್ಣಯದವರೂ ಆಡುವ ಮಾತು ಇದ್ದೇ ಇರುತ್ತದೆ. ಅದಕ್ಕೆ ಕಾರಣವನ್ನು ಕೃತಿಯಲ್ಲಿ ಹುಡುಕಬೇಕಾಗಿಲ್ಲ, ಅವರಲ್ಲೇ ಹುಡುಕಬೇಕು. ಅದನ್ನು ಬಿಡೋಣ. ಪ್ರತಿಯೊಬ್ಬ ಪ್ರಸಿದ್ಧ ಕವಿಯೂ ಮುಖ್ಯವಾಗಿ ತನ್ನ ಒಂದು ಮಹಾಕೃತಿಯಿಂದ ಬಹುಮಟ್ಟಿಗೆ ಸ್ಮರಿಸಲ್ಪಡುತ್ತಾನೆ. ಇದಕ್ಕೆ ನಿದರ್ಶನಗಳನ್ನು ಕೊಡುತ್ತ ಹೋದರೆ ಪಟ್ಟಿ ಬಹಳ ಉದ್ದವಾದೀತು. ಹಲವರಿಗೆ ಇಂತಹದೊಂದೇ ಜೀವನದ ಫಲವಾಗಿದೆ, ಸಾಕಾಗಿಯೂ ಇದೆ. ಒಂದು ವೇಳೆ ಕಾರಣಾಂತರದಿಂದ ಪುಟ್ಟಪ್ಪನವರ ಇತರ ಕೃತಿಗಳೆಲ್ಲ ನಷ್ಟವಾಗಿಹೋದರೂ ರಾಮಾಯಣವೊಂದು ಉಳಿದರೆ ಅವರ ಚಿರಂಜೀವಿತ್ವಕ್ಕೆ ಸಂಜೀವಿನಿಯಾಗಬಲ್ಲದು. ಇಂತಹ ಒಂದು ಯತ್ನ ಅವರ ಜೀವನದ ಜೀವಾಳ, ಅವರ ಸಾಧನ ಶಕ್ತಿ, ಬಾಳ್ವೆಯ ನೀತಿಕ್ರಮಗಳನ್ನು ತಿಳಿಸುವುದಕ್ಕೆ ಸಾಕು. ವ್ಯಕ್ತಿತ್ವವನ್ನು ದೂರದಿಂದ ಹುಡುಕುವವರಿಗೆ ಇಲ್ಲಿ ಬೇಕಾದಷ್ಟು ಅಂಶ ದೊರಕುತ್ತದೆ; ಅವರನ್ನು ಸಮೀಪಕ್ಕೆ ತರುತ್ತದೆ. ನಮ್ಮ ತರುಣ ಕವಿಗಳು ಕೆಲವರು ಇತ್ತ ಗಮನ ಕೊಟ್ಟರೆ!

ಪುಟ್ಟಪ್ಪನವರ ಬರವಣಿಗೆಗಳಲ್ಲಿ ಇರುವ ಕೆಲವು ಅಂಶಗಳನ್ನು ಯೋಚಿಸಿಕೊಂಡಾಯಿತು. ಇನ್ನೊಂದು ಮುಖ್ಯಾಂಶ ಗಮನಾರ್ಹವಾದುದು. ಅದು ಅವರ ವ್ಯಕ್ತಿತ್ವ ಹೇಗೆ ಕೃತಿಯನ್ನು ಹೊಕ್ಕಿದೆಯೆಂಬುದನ್ನು ಚೆನ್ನಾಗಿ ತೋರಿಸುತ್ತದೆ. ಜನ ಸಾಮಾನ್ಯವಾಗಿ ಸಂಸಾರದಿಂದ ಸನ್ಯಾಸಕ್ಕೆ ಹೋಗುತ್ತಾರೆ. ಪುಟ್ಟಪ್ಪನವರ ರಾಮಕೃಷ್ಣಾಶ್ರಮ ಜೀವನ, ಅವರ ಅಂದಿನ ಧ್ಯೇಯ ನಿರ್ಧಾರಗಳು, ಇವುಗಳ ಬಗ್ಗೆ ಜನರು ಆಡುವುದು ನಿಜವಾದರೆ ಅವರು ಒಂದು ಬಗೆಯ ಸನ್ಯಾಸದಿಂದ ಸಂಸಾರಕ್ಕೆ ಹೋಗಿದ್ದಾರೆ. ಈ ಮೊದಲು ಜೀವನದ ಭದ್ರಮುದ್ರೆ ಅವರ ಕೃತಿಗಳ ರಸ ಸನ್ನಿವೇಶಗಳಲ್ಲೂ, ರಸಿಕ ಸಮಯಗಳಲ್ಲೂ ಕಾಣದೆ ಇಲ್ಲ. ಯೋಗದಿಂದ ಭೋಗಕ್ಕೆ ತಿರುಗಿದ ಸ್ವಭಾವ ಭೋಗದ ಕುದುರೆಗೆ ಲಗಾಮು. ಇದರ ಎಳೆತ ಒಂದೊಂದು ವೇಳೆ ಸ್ವಲ್ಪ ಜಾಸ್ತಿಯಾಗಿ ರಸಿಕತೆಯ ವೇಗವನ್ನು ಅಲ್ಲಲ್ಲಿ ತಡೆದಿದ್ದರೆ ಘನತೆಯ ದಾರಿ ಬಿಡದ ಗಾಂಭೀರ್ಯ ನಡೆಗೂ ಕಾರಣವಾಗಿದೆ. ಸುಲಭಶೀಲದ ಅಂಗಡಿಗಳಂತಿರುವ ಇಂದಿನ ಅನೇಕ ಬರಹಗಳನ್ನು ನೆನೆಸಿಕೊಂಡಾಗ ಈ ಸಂಯಮದ ಬೆಲೆ ಚೆನ್ನಾಗಿ ಗೊತ್ತಾಗುತ್ತದೆ.

ಇನ್ನೊಂದು ವಿಚಾರದಲ್ಲೂ ಪುಟ್ಟಪ್ಪನವರ ವೈಶಿಷ್ಟ್ಯವನ್ನು ನೆನೆಯಬೇಕು. ಟಾಗೋರರ ಗೀತಾಂಜಲಿ ಬಂದೀಚೆಗೆ ಶಬ್ದ ಚಿತ್ರಗಳನ್ನು ಆಧ್ಯಾತ್ಮಿಕ ಭಾವನೆಯಲ್ಲಿ ಕೊನೆಗಾಣಿಸುವುದು ಇಲ್ಲವೆ ಎರಡನ್ನೂ ಬೆರಸಿ ಕವನ ಹೆಣೆಯುವ ರೂಢಿ ಬಹಳ ಜನರಿಗೆ ಬಂದುಬಿಟ್ಟಿದೆ. ಈ ಅಸ್ವಾತಂತ್ರ್ಯದಿಂದ ಬಹಳ ಮಟ್ಟಿಗೆ ದೂರವಾಗಿರುವ ಸ್ವಲ್ಪ ಜನರಲ್ಲಿ ಪುಟ್ಟಪ್ಪನವರೂ ಒಬ್ಬರು; ಕನ್ನಡಿಗರಲ್ಲಿ ಪ್ರಮುಖರು ಎಂದರೂ ಸಂದೀತು. ಆಧ್ಯಾತ್ಮಿಕಕ್ಕೇ ಅವರು ಹಾರ್ದಿಕ ಸ್ವಾಗತವನ್ನಿತ್ತಿದ್ದರೂ ಕಾವ್ಯ ಸ್ವಾತಂತ್ರ್ಯವನ್ನು ಕಳೆದುಕೊಳ್ಳದಿರುವುದರಲ್ಲಿ ಜಾಗರೂಕರಾಗಿದ್ದಾರೆಂದೆನ್ನಿಸುತ್ತದೆ. ನಾವೆಲ್ಲರೂ ಎರವಲಾಗಿ ಬೇಕಾದಷ್ಟು ಅಂಶಗಳನ್ನು ತಂದೇ ತರುತ್ತೇವೆ. ಅಲ್ಲೋ ಇಲ್ಲೋ ಒಂದು

ಹೊಸದು ಹುಟ್ಟುತ್ತದೆ. ಆದರೆ ಪತ್ತುವಾದುದನ್ನು ಚೆನ್ನಾಗಿ ಸಾಕಿ, ಸಮ್ಮದನ್ನಾಗಿ ಮಾಡಿಕೊಳ್ಳುವುದಕ್ಕೆ ಒಂದು ಸಂಸ್ಕಾರ, ಶಕ್ತಿ, ಚಮತ್ಕಾರ ಎಲ್ಲವೂ ಬೇಕು—ಪರ ರಿಂದ ಕೊಂಡ ಪದಾರ್ಥವನ್ನು ತಿಂದು ಅರಗಿಸಿಕೊಂಡು ನಮ್ಮ ಮೈಬೆಳೆವಣಿಗೆಗೆ ಸೇರಿಸಿಕೊಂಡಂತೆ. ಈ ಶಕ್ತಿ ಪುಟ್ಟಪ್ಪನವರಲ್ಲಿದೆ. ಇದರಿಂದಲೇ ಅವರ ಬರಹ ಭಾವನೆ ಗಳಲ್ಲಿ ಹೊಸ ಗಾಳಿಯ ಸ್ವಭಾವ ಹೋಗಿಲ್ಲ.

ಮುಗಿಸುವ ಮುಂಚೆ ಇನ್ನೊಂದು ಮಾತನ್ನು ಹೇಳಬೇಕೆನ್ನಿಸುತ್ತದೆ. ಪುಟ್ಟಪ್ಪ ನವರು ಕನ್ನಡಕ್ಕೆ ಕೈ ಹಾಕಿದಾಗ ಕನ್ನಡ ಚಟುವಟಿಕೆಯ ಆರಂಭ ಕಾಲವೆಂದೇ ಹೇಳ ಬಹುದು. ವಿಶೇಷ ಉತ್ಸಾಹ ಪ್ರೋತ್ಸಾಹಗಳ ಕಾಲ. ವಿದ್ವಾಂಸರೂ, ಸಹೃದಯ ವಿಮರ್ಶಕರೂ ಆಗಿದ್ದ ಕೆಲವು ಮಹನೀಯರು ಹೊಸ ಯೋಗ್ಯತೆಯನ್ನು ಹುಡುಕಿ, ಬೆಳಕಿಗೆ ತಂದು ಬೆನ್ನು ತಟ್ಟುತ್ತಿದ್ದ ಕಾಲ. 'ಪ್ರಬುದ್ಧ ಕರ್ಣಾಟಕ' ನಿಜವಾಗಿಯೂ ಪ್ರಬುದ್ಧವಾದ ಕಾಲ. ಈಗಿನಂತೆ ಬರಹ ವಿಪುಲವಾಗಿಯೂ ಇರಲಿಲ್ಲ; ವಿಮರ್ಶೆ ಎಲ್ಲರ ಸೊತ್ತೂ ಆಗಿಹೋಗಿ ಭ್ರಾಂತಿಗೆ ಕಾರಣವಾಗಿರಲಿಲ್ಲ. ಒಟ್ಟಿನಲ್ಲಿ ಆಗ ಬಹಳ ಒಳ್ಳೆಯ ಅವಕಾಶದ ಕಾಲವೆನ್ನಬಹುದು. ಆದರೆ ಅಂತಹ ಅವಕಾಶವನ್ನು ಉಪಯೋ ಗಿಸಿಕೊಳ್ಳಬೇಕಾದರೆ ಯೋಗ್ಯತೆ ಇರಬೇಡವೆ? ಪುಟ್ಟಪ್ಪನವರಿಗೆ ಅಂತಹ ಯೋಗ್ಯತೆ ವಿಶೇಷವಾಗಿತ್ತೆಂದೇ ಅವರು ಅವಕಾಶವನ್ನು ಬಹಳ ಚೆನ್ನಾಗಿ ಉಪಯೋಗಿಸಿಕೊಂ ಡರು, ಸಾರ್ಥಕಪಡಿಸಿಕೊಂಡರು. ಅವರಿಗೆ ಉತ್ತೇಜನ ಕೊಟ್ಟದ್ದು ಪಾತ್ರದಲ್ಲಿ; ಕೊಟ್ಟವರಿಗೆ ಪೂರ್ಣ ತೃಪ್ತಿಯಾಗಿರಬೇಕು. ಅಥವ ನಾನು ತಪ್ಪು ಹೇಳುತ್ತಿದ್ದೇ ನೆಯೇ? ಪುಟ್ಟಪ್ಪನವರ ಪ್ರಭಾವ ಎಂತಹ ಕಾರ್ಮುಗಿಲಿನಲ್ಲಿಯೂ ಮಿಂಚಿಯೇ ಮಿಂಚುತ್ತಿದ್ದಿತು. ಯಾಕಿಲ್ಲ?

ಹಿಂದಿನ ಲೆಕ್ಕದಿಂದ ಪುಟ್ಟಪ್ಪನವರು ಆಗಲೇ ಒಂದೇಕೆ ಎರಡು ಮೂರು ಜೀವ ಮಾನಗಳ ಸಾಹಿತ್ಯ ಕೆಲಸವನ್ನು ಮಾಡಿದ್ದಾರೆನ್ನಬಹುದು. ಬರಿಯ ಗಾತ್ರವನ್ನೇ ಯೋಚಿಸಿದರೂ ಅಷ್ಟಿದೆ. ಸುಲಭ ಕೃತಿಗಳ ಇಂದಿನ ಅಳತೆಯಿಂದಲೂ ಅವರ ಕೆಲಸದ ಗಾತ್ರ ಬೇಕಾದಷ್ಟೇ. ಆದರೂ ಅವರಿಗೆ ಇನ್ನೂ ವಯಸ್ಸೇನು ಬಹಳವಿಲ್ಲ. ಈಗ ಮಾಡಿದಷ್ಟನ್ನೋ ಇನ್ನೂ ಹೆಚ್ಚನ್ನೋ ಮಾಡಬಹುದಾದಷ್ಟು ಕಾಲ ಅವರ ಮುಂದಿದೆ. ಇಂತಹವೇ, ಇನ್ನೂ ಹೆಚ್ಚು ಗುಣಗಳವೇ ಕೃತಿಗಳೆಷ್ಟೋ ಬರಬಹುದು, ಬಂದೂ ಬರುತ್ತವೆ. ಇದಕ್ಕೆ ಸಹಾಯವಾಗುವಂತೆ ವಿಧಿ ಅವರಿಗೆ ದೀರ್ಘಾಯುಸ್ಸನ್ನೂ ಆರೋ ಗ್ಯಭಾಗ್ಯವನ್ನೂ ದಯಪಾಲಿಸಲೆಂದು ಪ್ರಾರ್ಥಿಸುತ್ತೇನೆ. ಈ ಉಡುಗೊರೆ ಗ್ರಂಥ ಸಮರ್ಪಣೆಯ ಸಮಯದಲ್ಲಿ ಗೌರವ ಕೃತಜ್ಞತೆಗಳ ಕಾಣಿಕೆಯನ್ನು ಸಲ್ಲಿಸುವ ಅನೇಕಾನೇಕ ಕನ್ನಡಿಗರೊಡನೆ ನಾನೂ ಸಂತೋಷದಿಂದ ಸೇರಿಕೊಳ್ಳುತ್ತೇನೆ.



# ಗುರುಸಂದರ್ಶನ

## ಉ. ಕಾ. ಸುಬ್ಬರಾಯಾಚಾರ್

ಗುರುರ್ಬ್ರಹ್ಮಾ ಗುರುರ್ವಿಷ್ಣುಃ ಗುರುರ್ದೇವೋ ಮಹೇಶ್ವರಃ।
ಗುರುಸ್ಸಾಕ್ಷಾತ್ ಪರಂ ಬ್ರಹ್ಮ ತಸ್ಮೈ ಶ್ರೀಗುರವೇ ನಮಃ॥

ಗುರುಶಿಷ್ಯರ ಸಂಬಂಧ ಪುರುಷೋತ್ತಮನಿಗೂ ಜೀವಕ್ಕೂ ಇರುವ ಸಂಬಂಧದಂತೆ ಸನಾತನವಾದುದು, ನಿತ್ಯವಾದುದು. ಭಾರತೀಯ ಸಂಸ್ಕೃತಿಯಲ್ಲಿ ಗುರುವಿಗೆ ಹಿರಿಯ ಸ್ಥಾನವಿದೆ. ಗುರುವಿನಲ್ಲಿ ಭಕ್ತಿಯನ್ನಿಡುವುದು ಗುರುವಿಗಾಗಲ್ಲ, ಶಿಷ್ಯನ ಪ್ರಗತಿಗಾಗಿ. ಜ್ಞಾನವು ಗುರುಭಕ್ತಿಯ ಪ್ರಣಾಳಿಕೆಯಲ್ಲಿ ಹರಿದು ಶಿಷ್ಯನ ಪಾತ್ರವನ್ನು ತುಂಬುತ್ತದೆ. ಭವರೋಗದಲ್ಲಿ ನರಳುವ ಜೀವಕ್ಕೆ ಸದ್ಗುರುವಿನ ವಿಭೂತಿ ಸ್ಪರ್ಶವೇ ದಿವ್ಯೌಷಧ. ಅಂತಹ ಗುರುಗಳು ಅಜ್ಞಾನದ ತಿಮಿರಾಂಧಕಾರದಲ್ಲಿ ತೊಳಲುವ ಎನಿತೆನಿತೊ ಜೀವಿಗಳನ್ನು ಉದ್ಧರಿಸುತ್ತಾರೆ.

ತೀರ್ಥಹಳ್ಳಿಯ ಪ್ರೌಢಶಾಲೆಯಲ್ಲಿ ಓದುತ್ತಿದ್ದಾಗ ಶ್ರೀ ಪುಟ್ಟಪ್ಪನವರು ವಿರಚಿಸಿದ ರಕ್ತಾಕ್ಷಿ ನಾಟಕವನ್ನು ಓದಿದೆ. ಅಂದಿನ ಆ ಪುಸ್ತಕದಲ್ಲಿ ಕವಿವರ್ಯರ ಭಾವಚಿತ್ರವಿತ್ತು. ಆ ತೇಜೋಪೂರ್ಣ ವದನಮಂಡಲವನ್ನು ಕಂಡು ಆಶ್ಚರ್ಯ ಚಕಿತನಾದೆ. ಯೋಗಿಯೊಬ್ಬನನ್ನು ಸಂದರ್ಶಿಸಿದಂತಾಯಿತು. ಅವರ ಕೃತಿಗಳನ್ನು ಓದಲಾರಂಭಿಸಿದೆ. ಸಾಧ್ಯವಾದಷ್ಟು ಅರ್ಥಮಾಡಿಕೊಂಡೆ. ದಿನ ಕಳೆದಂತೆ ಶ್ರೀ ಪುಟ್ಟಪ್ಪನವರನ್ನು ಸಂದರ್ಶಿಸುವ ಸೌಭಾಗ್ಯ ಲಭಿಸಲೆಂದು ಮನಸ್ಸಿನಲ್ಲಿ ಹಾರೈಸಿದೆ.

೧೯೩೭, ಮೇ ತಿಂಗಳಿರಬೇಕು. ಆಗತಾನೆ ಎಸ್. ಎಸ್. ಎಲ್. ಸಿ. ಪರೀಕ್ಷೆ ಮುಗಿದಿತ್ತು. ತೀರ್ಥಹಳ್ಳಿಯ ತುಂಗಾನದಿಯಲ್ಲಿ ಮಿಂದು, ಈಜಿ, ದೋಣಿಯಲ್ಲಿ ವಿಹರಿಸುತ್ತಿದ್ದ ಕಾಲವದು. ಒಂದು ದಿನ ನನ್ನ ನಾಲ್ಕೈದು ಜನ ಮಿತ್ರರು "ಮದುವೆಯನ್ನೇ ಮಾಡಿಕೊಳ್ಳುವುದಿಲ್ಲವೆಂದು ಅನೇಕರು ಹೇಳುತ್ತಿದ್ದ ಪುಟ್ಟಪ್ಪನವರು ಮದುವೆಯಾಗಿದ್ದಾರಂತೆ" ಎಂದರು. "ನಾವೇಕೆ ಅವರನ್ನು ಹೋಗಿ ನೋಡಬಾರದು" ಎಂದು ಹೇಳಿದೆ ನಾನು. ಮರುದಿನ ಮೂರು ಗಂಟೆಗೆ ಹೊರಡಬೇಕೆಂದು ನಿಷ್ಕರ್ಷೆ ಮಾಡಿಕೊಂಡೆವು. ಯೋಚಿಸಿದಂತೆ ಮರುದಿನ ತುಂಗಾನದಿಯನ್ನು ದಾಟಿ ಆರು ಮೈಲಿ ನಡೆದು ಇಂಗ್ಲಾದಿಯನ್ನು ಸೇರಿದೆವು. ಮದುವೆಯ ಸಮಾರಂಭ ಮುಗಿದು ಎರಡು ಮೂರು ದಿನಗಳಾಗಿದ್ದುವು. ಮನೆಯ ಮುಂದೆ ಕುಳಿತಿದ್ದ ಅಪರಿಚಿತರೊಬ್ಬರನ್ನು "ಪುಟ್ಟಪ್ಪನವರು ಎಲ್ಲಿದ್ದಾರೆ? ನೋಡಬಹುದೋ" ಎಂದು ಕೇಳಿದೆವು. "ಮಹಡಿಯ ಮೇಲಿದ್ದಾರೆ, ಹೋಗಿ ನೋಡಿ" ಎಂದು ಹೇಳಿದರು. ಏಣಿಯ ಹಂತಗಳನ್ನು ಹತ್ತಿ ಮಹಡಿಯ ವಿಶಾಲವಾದ ಹಜಾರದಲ್ಲಿ ಯಾರೊಡನೆಯೋ ಮಾತನಾಡುತ್ತ ಕುಳಿತಿದ್ದ ಶ್ರೀ ಪುಟ್ಟಪ್ಪನವರನ್ನು ಕಂಡೆವು. ಹತ್ತಿರ ಹೋಗಿ ಮಾತನಾಡುವ ಧೈರ್ಯ ನಮಗಾಗ

ಲಿಲ್ಲ. ಒಬ್ಬೊಬ್ಬರಾಗಿ ದೂರದಿಂದಲೇ ಕಂಡು ಮನಸ್ಸಿನಲ್ಲಿಯೇ ನಮಿಸಿದೆವು. ಅದೇ ಶ್ರೀ ಪುಟ್ಟಪ್ಪನವರ ದೂರದ ಅಸ್ಪಷ್ಟ ಪ್ರಥಮ ಸಂದರ್ಶನ.

ಜೀವನ ಯಾತ್ರೆಯಲ್ಲಿ ಅಲ್ಲಿಲ್ಲಿ ಸಂಚರಿಸಿ ೧೯೩೩ರ ಡಿಸೆಂಬರ್ ತಿಂಗಳಲ್ಲಿ ಮೈಸೂರಿಗೆ ಬಂದೆ. ಒಂಟಿಕೊಪ್ಪಲಿನ ಮಾಧ್ಯಮಿಕ ಶಾಲೆಯಲ್ಲಿ ಉಪಾಧ್ಯಾಯನಾದೆ. ಶ್ರೀ ಪುಟ್ಟಪ್ಪನವರು ಕಾಲೇಜಿನಲ್ಲಿ ಅಧ್ಯಾಪಕರಾಗಿರುವುದೂ, ಒಂಟಿಕೊಪ್ಪಲಿನಲ್ಲಿ ಅವರ ಮನೆಯಿರುವುದೂ ತಿಳಿಯಿತು. ಎರಡು ಮೂರು ಬಾರಿ ಅವರ ಮನೆಯ ಬಳಿ ಸಂಚರಿಸಿದೆ. ಅವರನ್ನು ಕಾಣುವ ಧೈರ್ಯವಾಗಲಿಲ್ಲ. ಒಂದು ದಿನ ಅವರ 'ಕೊಳಲು' ಸಂಗ್ರಹವನ್ನು ಓದುತ್ತಿದ್ದೆ. ರಾತ್ರಿ ಎಂಟು ಗಂಟೆಯಾಗಿತ್ತು. ಈಗಲೇ ಹೋಗಿ ಏಕೆ ಅವರನ್ನು ಕಾಣಬಾರದು? ಎಂಬ ಮನಸ್ಸಾಯಿತು. ಒಂಟಿಕೊಪ್ಪಲಿನ ಎತ್ತರದಲ್ಲಿದ್ದ ಅವರ ಮನೆಗೆ ಹೋದೆ. ಹೊರಗಡೆಯ ಕಾಂಪೌಂಡಿನ ಬಾಗಿಲಿಗೆ ಬೀಗ ಹಾಕಿತ್ತು. ಕಾಂಪೌಂಡ್ ಹತ್ತಿ ಹಾರಿ ಮನೆಯ ಜಗುಲಿಯ ಮೇಲೆ ಹೋಗಿ ನಿಂತೆ. ಒಳಗಡೆಯ ಹಜಾರದಲ್ಲಿ ಕವಿವರ್ಯರು ವೃತ್ತಾಂತ ಪತ್ರಿಕೆಯನ್ನೋದುತ್ತ ಕುಳಿತಿದ್ದರು. 'ಸಾರ್' ಎಂದೆ! "ಏನು, ಏನುಬೇಕು?" ಎಂದು ಕೇಳುತ್ತ ಹೊರಗಡೆ ಬಂದರು. "ಕೆಲವು ವಿಷಯಗಳನ್ನು ಕೇಳಬಂದಿದ್ದೇನೆ" ಎಂದೆ. "ಈಗ ಸಮಯವಿಲ್ಲ, ಇನ್ನೊಮ್ಮೆ ಬನ್ನಿ" ಎಂದರು. ಎಂತು ಹೋದೆನೊ ಅಂತೆಯೆ ಹಿಂತಿರುಗಿದೆ. ಇನ್ನೆರಡು ಬಾರಿ ಅವರನ್ನು ಕಾಣಲು ಹೋದಾಗಲೂ ಅದೇ ಉತ್ತರ! ಆದರೂ ಅವರನ್ನು ಕಾಣಬೇಕೆಂಬ ಅಭೀಪ್ಸೆ ಮಾಯವಾಗಲಿಲ್ಲ

ಮತ್ತೊಂದು ದಿನ ಬೆಳಗ್ಗೆ ಸುಮಾರು ೯ ಗಂಟೆಯ ಸಮಯ, ಅವರ ಸಂದರ್ಶನಕ್ಕಾಗಿ ಹೋದೆ. ಅವರ ಪರೀಕ್ಷೆಯಲ್ಲಿ ತೇರ್ಗಡೆಯಾಗಿದ್ದೆನೆಂದು ಕಾಣುತ್ತದೆ, "ಕುಳಿತುಕೋ" ಎಂದರು. ಮನೆಯನ್ನು ಅಲಂಕರಿಸಿದ್ದ ಬಳ್ಳಿಗಳ ಮಧ್ಯೆ ದೂರದ ತೆಂಗಿನ ಮರದ ತೋಟವೂ ಪಾಂಡವಪುರದ ಬೆಟ್ಟಗಳೂ ಕಾಣಿಸುತ್ತಿದ್ದವು. ಆತ್ಮ, ಜೀವ, ದೇವರು, ಈ ವಿಚಾರವಾಗಿ ಅವರು ನೀಡಿದ ವಿವರಣೆಯನ್ನು ಏಕಾಗ್ರತೆಯಿಂದ ಕೇಳಿದೆ. ಮಾತನಾಡುವಾಗ ಸ್ವಲ್ಪ ಹೊತ್ತು ಮೌನವಾಗಿರುತ್ತಿದ್ದರು. ಅದೂ ಒಂದು ರೀತಿಯ ಉಪದೇಶವೆಂದು ಭಾವಿಸಿದೆ. ಆಗಲೇ ಹನ್ನೊಂದು ಗಂಟೆಯಾಗಿತ್ತು. "ಆಗಲಿ, ಹೊತ್ತಾಯಿತು" ಎಂದು ಅವರು ಎದ್ದಾಗ ನಾನು ನಮಸ್ಕಾರ ಮಾಡಿ ಹೊರಟೆ.

೨

ಕಾಲನದಿ ಹರಿಯ ತೊಡಗಿತು. ಶ್ರೀ ಪುಟ್ಟಪ್ಪನವರು ಕನ್ನಡ ಉಪಪ್ರಾಧ್ಯಾಪಕರಾಗಿ ಬೆಂಗಳೂರಿಗೆ ಹೊರಟು ಹೋದರು. ಒಮ್ಮೆ ನನ್ನ ಹೃದಯದ ಹೋರಾಟವನ್ನು ಕುರಿತು ಒಂದು ಕಾಗದವನ್ನು ಬರೆದೆ. ಅವರು ಬರೆದ ಉತ್ತರದಲ್ಲಿ ಒಂದು ವಾಕ್ಯವನ್ನು

ಇಲ್ಲಿ ನೆನೆಯುತ್ತೇನೆ: "ನಿನ್ನ ಹೃದಯದಲ್ಲಿರುವ ಗುರುವೇ ನಿನಗೆ ದಾರಿತೋರಿಸುತ್ತಾನೆ." ಈ ಸೂಕ್ತಿ ಸಾಧಕನಿಗೆ ಮಾರ್ಗದರ್ಶನ ಮಾಡುವ ಕೈದೀವಿಗೆಯಂತಿದೆ. ಶಾಲೆಯ ಉಪಾಧ್ಯಾಯವೃತ್ತಿಯನ್ನು ಬಿಟ್ಟು ಇಂಟರ್ ಮುಗಿಸಿ ಮಹಾರಾಜಾ ಕಾಲೇಜಿನಲ್ಲಿ ಬಿ. ಎಸ್‌ಸಿ. ತರಗತಿಗೆ ಸೇರಿದೆ. ಒಂದು ತಿಂಗಳು ಕಳೆದ ಮೇಲೆ ಅವ್ಯಕ್ತ ಶಕ್ತಿಯೊಂದು ನನ್ನನ್ನು ಕನ್ನಡ ಆನರ್ಸ್ ತರಗತಿಗೆ ಸೇರಿಸಿತು ಮೊದಲನೆಯ ಆನರ್ಸ್ ದಾಟುವ ವೇಳೆಗೆ ಶ್ರೀ ಪುಟ್ಟಪ್ಪನವರು ಪ್ರಾಧ್ಯಾಪಕರಾಗಿ ಮೈಸೂರಿಗೆ ಬಂದರು. ಅವರ ಶಿಷ್ಯನಾಗುವ ಸುಯೋಗ ಲಭಿಸಿತು. ಅವರು ತೆಗೆದುಕೊಳ್ಳುತ್ತಿದ್ದ ಪಾಠ 'ಕಾವ್ಯ ಮೀಮಾಂಸೆ.' ಪಾಠ, ಕಾವ್ಯ ಮೀಮಾಂಸೆಯಾದರೂ ಅಲ್ಲಿ ಮನಶ್ಶಾಸ್ತ್ರ, ಖಗೋಳ ಶಾಸ್ತ್ರ, ತತ್ತ್ವಶಾಸ್ತ್ರ, ಮೊದಲಾದ ಜ್ಞಾನದ ಬಹುಮುಖಗಳ ಪರಿಚಯವಾಗುತಿತ್ತು. ಅವರ ಉಪನ್ಯಾಸ ವಿಧಾನವನ್ನು ಪರಿಚಯ ಮಾಡಿಕೊಡಲು ತರಗತಿಯ ನೋಟ್ಸ್‌ನಿಂದ ಎರಡು ದಿನಗಳ ಉಪನ್ಯಾಸಗಳ ಸಾರಾಂಶವನ್ನು ಬರೆದುಕೊಂಡಂತೆಯೇ ಇಲ್ಲಿ ಕೊಟ್ಟಿದ್ದೇನೆ. ಒಂದು ಉಪನ್ಯಾಸ ಆನರ್ಸ್ ತರಗತಿಯದು; ಮತ್ತೊಂದು ಎಂ. ಎ. ತರಗತಿಯದು.

....ಬೇರೆ ಬೇರೆ ಕವಿಗಳಿಗೆ ಬೇರೆ ಬೇರೆ ತತ್ತ್ವಗಳು ಹಿಡಿಸಿವೆ. ಕ್ರೈಸ್ತ ಮತ ತತ್ತ್ವ, ಗ್ರೀಕ್ ತತ್ತ್ವ ಇತ್ಯಾದಿ. ಕವಿಯ ವ್ಯಕ್ತಿತ್ವದ ಬೆಳವಣಿಗೆಗೆ ಆಯಾ ತತ್ತ್ವಗಳು ಪೋಷಕವಾಗುತ್ತವೆ. ಲೌಕಿಕ ದೃಷ್ಟಿಯ ಕವಿಗಳಿಗೂ ದಾರ್ಶನಿಕ ಕವಿಗಳಿಗೂ ಅಂತರವಿದೆ. ಇವರ ಕೃತಿಗಳನ್ನು ಅಧ್ಯಯನ ಮಾಡುವುದರಿಂದ ಲಭಿಸುವ ದೃಷ್ಟಿ ಬೇರೆಯೇ. ಬರ್ನ್ಸ್ ಕವಿಯ ಕೃತಿಯನ್ನು ಓದುವಾಗ ಕವಿ ಸಾಮಾನ್ಯನೆಂದು ಓದುತ್ತೇವೆ. ಮಿಲ್ಟನ್, ಕಾಳಿದಾಸ, ವಾಲ್ಮೀಕಿ ಇವರನ್ನು ಓದುವಾಗ ನಮ್ಮ ದೃಷ್ಟಿ ಬೇರೆ. ಉಪನಿಷತ್ತು ಭಗವದ್ಗೀತೆಗಳನ್ನು ಓದುವಾಗ ಬೇರೆ ದೃಷ್ಟಿಯೇ ಬೇಕಾಗುತ್ತದೆ. ಬೇರೆ ಬೇರೆ ಭೂಮಿಕೆಗಳಲ್ಲಿ ಸಂಚರಿಸುವಾಗ ಬೇರೆ ಬೇರೆ ಶರೀರಗಳನ್ನು ತಾಳಬೇಕಾಗುತ್ತದೆ. ನಮ್ಮಲ್ಲಿ ವಿಮರ್ಶಾ ದೃಷ್ಟಿ ಬೆಳೆದಿಲ್ಲ. ಇದನ್ನು ಪಾಶ್ಚಾತ್ಯರಿಂದ ನಾವು ಪಡೆಯಬೇಕು. ಪ್ರಾಚ್ಯ ಪಾಶ್ಚಾತ್ಯ ದೃಷ್ಟಿಗಳ ಸಂಗಮದಿಂದಲೇ ಹೊಸ ದೃಷ್ಟಿ ಲಭಿಸುವುದು, ಹೊಸ ಚೈತನ್ಯ ಸಂಚರಿಸುವುದು. ನಮ್ಮಲ್ಲಿ ಪ್ರಾಚೀನರು ಎಲ್ಲ ಶಾಸ್ತ್ರಗಳನ್ನೂ ಸೂತ್ರರೂಪವಾಗಿ ಹೇಳಿದ್ದಾರೆ. ಈಚೆಗೆ ಎಲ್ಲವನ್ನೂ ವಿಸ್ತಾರವಾಗಿ ಹೇಳುವ ಮನೋಭಾವ ಬೆಳೆಯುತ್ತಿದೆ. ಜ್ಞಾನಕ್ಕೆ 'ಆನೆರೋಗ' ಹಿಡಿಸಬಾರದು. 'ಆನೆರೋಗ' ಎಂದರೆ ತಿಳಿಯಿತು ತಾನೆ? Elephantiasis! ಹತ್ತು ಪುಟಗಳಲ್ಲಿ ಬರೆಯುವುದನ್ನು ಇನ್ನೂರು ಪುಟಗಳಲ್ಲಿ ತುಂಬುವ ಹವ್ಯಾಸ ಪ್ರಗತಿಪರವಲ್ಲ.

ಜನ್ಮಾಂತರ, ಈಶ್ವರಕೃಪೆ, ಎಂಬ ಮಾತುಗಳು ನಮ್ಮ ದೇಶದಲ್ಲಿ ಶಕ್ತಿಪೂರ್ಣವಾಗಿ ಉಪಯೋಗಿಸುವ ಮಾತುಗಳು. ಅವುಗಳಿಗೆ ನಿರ್ದಿಷ್ಟವಾದ ಅರ್ಥವಿದೆ. ವೇದ ಉಪನಿಷತ್ತುಗಳಿಗೂ, ಬೈಬಲ್ ಮೊದಲಾದ ಗ್ರಂಥಗಳಿಗೂ ತಾರತಮ್ಯವಿದೆ. ನಮ್ಮವರು ಕಂಡದ್ದನ್ನು ಆಲೋಚಿಸಿದರು, Sages started with intution,

ಪಾಶ್ಚಾತ್ಯರು ಆಲೋಚಿಸಿದುದನ್ನು ಕಾಣಲಾರಂಭಿಸಿದರು, they started with intellect.

ಸಾಹಿತ್ಯ ಮೀಮಾಂಸೆಯ ತತ್ವಗಳು ಮೂಲತಃ ಒಂದೇ ಎಂದು ಸ್ಥೂಲವಾಗಿ ಹೇಳಬಹುದು. Imagination, intution, emotion ಎಂಬ ಪದಗಳನ್ನು ಪಾಶ್ಚಾತ್ಯರು ಯಾವ ಅರ್ಥದಲ್ಲಿ ಉಪಯೋಗಿಸುವರು ಎಂಬುದನ್ನು ತಿಳಿಯಬೇಕು. ಸಮಯ, ಸಂದರ್ಭ, ಸನ್ನಿವೇಶಗಳಿಗನುಸಾರವಾಗಿ ಅರ್ಥ ಬೇರೆಯಾಗುತ್ತದೆ. ನಮ್ಮ ಪ್ರಾಚೀನ ಕಾವ್ಯ ಮೀಮಾಂಸಕರು ಉಪಯೋಗಿಸಿರುವ ಪ್ರತಿಭೆ, ಅಲಂಕಾರ, ರಸ, ರೀತಿ, ಗುಣ ಮೊದಲಾದವುಗಳ ಅರ್ಥವನ್ನು ನಿರ್ದಿಷ್ಟವಾಗಿ ತಿಳಿಯಬೇಕು. ತುಲನಾತ್ಮಕ ದೃಷ್ಟಿಯಿಂದ ವ್ಯಾಸಂಗ ಮಾಡುವುದರಿಂದ ನಮ್ಮ ತಿಳಿವಳಿಕೆ ಹೆಚ್ಚಾಗುತ್ತದೆ. ಚಾರಿತ್ರಿಕ ವಿಮರ್ಶೆಯೊಡನೆ ತುಲನಾತ್ಮಕ ವಿಮರ್ಶೆಯನ್ನೂ ಇಟ್ಟುಕೊಳ್ಳುವುದು ಉತ್ತಮ.

ಇಂಗ್ಲೀಷಿನ Aesthetics ಎಂಬ ಪದಕ್ಕೆ 'ಸೌಂದರ್ಯ ಮೀಮಾಂಸೆ' ಎಂದು ಕನ್ನಡದಲ್ಲಿ ಹೇಳಬಹುದು. 'Principles of literary Criticism' ಎಂದರೆ 'ಸಾಹಿತ್ಯ ವಿಮರ್ಶೆಯ ಮೂಲ ತತ್ತ್ವಗಗಳು.' ಸಾಹಿತ್ಯ ಮೀಮಾಂಸೆ, ಕಾವ್ಯ ಮೀಮಾಂಸೆ, ಸೌಂದರ್ಯ ಮೀಮಾಂಸೆ, ರಸ ಮೀಮಾಂಸೆ—ಈ ಪದಗಳ ಅರ್ಥ ವ್ಯಾಪ್ತಿಯನ್ನು ಗಮನಿಸಿ!

ಕಾವ್ಯ ಮೀಮಾಂಸೆ ಯಾವ ಯಾವ ಘಟ್ಟದಲ್ಲಿ ಹೇಗೆ ಹೇಗೆ ಬೆಳೆದು ಬಂದಿತೆಂಬುದನ್ನು ತಿಳಿಯಬೇಕು. ನೋಡಿ, ನೀವು ಹೆಚ್ಚಾಗಿ ಕೆಲಸ ಮಾಡಬೇಕು. ಎಲ್ಲವನ್ನೂ ನನ್ನಿಂದಲೇ ನಿರೀಕ್ಷಿಸಬೇಡಿ. **ವಿದ್ಯಾರ್ಥಿಗಳು ಬತ್ತ ಬೆಳೆಯುವ ಗದ್ದೆಗಳಾಗಬೇಕು, ಬರಿಯ ಚೀಲಗಳಾಗಬಾರದು**....ಯಾವ ವಿಷಯದಲ್ಲಿಯೂ ಆಧಿಕ್ಯಕ್ಕೆ ಹೋಗದೆ ಉತ್ತಮವಾದದ್ದನ್ನು ವಿಸರ್ಜಿಸದೆ ಕಾವ್ಯ ತತ್ತ್ವಗಳನ್ನು ಸಮರ್ಥಿಸಿದವನೆಂದರೆ ಧ್ವನ್ಯಾಲೋಕದ ಕರ್ತೃವಾದ ಆನಂದವರ್ಧನ. ಕಾವ್ಯಮೀಮಾಂಸೆಯನ್ನು ವ್ಯಾಸಂಗ ಮಾಡುವವರು ವೇದಗಳಿಂದ ಪ್ರಾರಂಭಿಸಬೇಕು. ತತ್ತ್ವಗಳನ್ನು ಅರಿತು ಪ್ರಯೋಗಿಸಬೇಕು. ಆಗ ಅದು ಪ್ರಾಯೋಗಿಕ ಕಾವ್ಯಮೀಮಾಂಸೆಯಾಗುತ್ತದೆ. The supplied poetics must become applied poetics. ಕವಿ, ಕಾವ್ಯ, ಸಹೃದಯ—ಇವರನ್ನು ದೃಷ್ಟಿಯಲ್ಲಿಟ್ಟುಕೊಂಡೇ ಕಾವ್ಯ ವಿಮರ್ಶೆಗೆ ತೊಡಗಬೇಕು........ಶ್ರೀ ರಾಮಾಯಣದ ಕರ್ತೃವಾದ ವಾಲ್ಮೀಕಿಯ ಪ್ರತಿಭೆಯಿಂದ ಸಮಷ್ಟಿ ಮನಸ್ಸು ಹೇಗೆ ಜಾಗ್ರತವಾಯಿತೆಂಬುದನ್ನು ಗಮನಿಸಿ! "ಋಷಿ ವಾಲ್ಮೀಕಿಯ ಕಾವ್ಯ ಜಾಹ್ನವಿ" ಎಂಬ ಲೇಖನವನ್ನು ಓದಿ....

........ವೇದ ಸೂಕ್ತಗಳಿಂದ ದಾಸರ ಪದಗಳವರೆಗೆ ಹರಿದು ಬಂದ ಭಾವಗೀತೆಗಳನ್ನು ಗಮನಿಸಿ. ಪುರಾಣಗಳ ಮರಿಗಳೇ ಜನಪದ ಸಾಹಿತ್ಯ, ಲಾವಣಿ ಮೊದಲಾದುವು. ಭಾವಗೀತೆಗಳಲ್ಲಿ ಅನೇಕ ವಿಧಗಳಿವೆ: ಪ್ರಣಯಗೀತೆ, ಪ್ರಕೃತಿಗೀತೆ, ಶೋಕ

ಗೀತೆ, ನಾಟಕಗೀತೆ, ರಾಷ್ಟ್ರಗೀತೆ, ಯಕ್ಷಗಾನ ಇತ್ಯಾದಿ.

ಗಿರಿಜಾಕಲ್ಯಾಣದಲ್ಲಿ ಬರುವ 'ಬೇಟೆನಾಯಿ ಮತ್ತು ಬೇಡ' ಈ ವರ್ಣನೆಯನ್ನು ಗಮನಿಸಿ. ಇದು ಉತ್ತಮ ಶೋಕಗೀತೆ.

........ರೀತಿಯೆಂದರೆ ಪ್ರಕಾಶನ ವಿಧಾನ. 'ರೀತಿರಾತ್ಮಕಾವ್ಯಸ್ಯ' ಎಂಬ ವಾಮನನ ಉಕ್ತಿಯನ್ನು ಗಮನಿಸಿ. ಬೀಜದಲ್ಲಿರುವ ಸಂಕಲ್ಪಕ್ಕೆ ಸಹಯೋಗಿಯಾಗಿಯೇ ಅರಳಿ ಮರದ ಸೃಷ್ಟಿಯಾಗಿದೆ. The poet is as helpless as the seed. ಬೀಜ ಹೇಗೆ ತನ್ನ ರೀತಿಯನ್ನು ಬದಲಿಸಲಾರದೋ ಹಾಗೆ ಕವಿಯೂ ತನ್ನ ರೀತಿಯನ್ನು ಬದಲಿಸಲಾರ.

ಮಾರ್ಗವೆನ್ನುವುದು ಭಾಷೆಗೆ ಸಂಬಂಧಿಸಿದುದು. ಪಂಪಮಾರ್ಗ, ಕುಮಾರವ್ಯಾಸ ಮಾರ್ಗವೆಂದು ಹೇಳಬೇಕಾಗುತ್ತದೆ.

ರೀತಿಯ ಅಂಗವೇ ಛಂದಸ್ಸು. ಇದು ಚಿತ್ಸಂಕಲ್ಪದಿಂದಲೇ ಮೂಡಿ ಬರುತ್ತದೆ. ಇದನ್ನು ಋತ ನಿಯಮವೆಂದೇ ಹೇಳಬೇಕು. ನಮ್ಮ ಬಾಳೆಲ್ಲವೂ ಛಂದಸ್ಸೇ ! ಹಾವು ಜಿಂಕೆ, ಮೀನು ಇವುಗಳ ನಡಗೆಯ ಛಂದಸ್ಸನ್ನು ವ್ಯಾಳವಿಕ್ರೀಡಿತ, ಮೃಗವಿಕ್ರೀಡಿತ, ಮತ್ಸ್ಯವಿಕ್ರೀಡಿತ ಎಂದು ಕರೆಯಬಹುದಲ್ಲವೇ ? ಮಾನವನನ್ನು ಗಮನಿಸಿ ! ಧ್ಯಾನಿಸುತ್ತ ನಡೆವಾಗ, ನಾಯಿ ಅಟ್ಟಿಸಿಕೊಂಡು ಬಂದಾಗ, ಕಟ್ಟಿರುವೆ ಕಡಿದಾಗ, ಮರಳಿನ ಮೇಲೆ ನಡೆವಾಗ, ಬಿಸಿಲಿನಲ್ಲಿ ಕಾದ ಟಾರಿನಮೇಲೆ ಬರಿಗಾಲಿನಲ್ಲಿ ನಡೆವಾಗ ನಮ್ಮ ಛಂದೋಗತಿ ಬೇರೆಯಾಗುವುದಲ್ಲವೇ ?

**—ಆನರ್ಸ್ ತರಗತಿಯಿಂದ**

........ಸಮತೆಯ ಮೇಲೆ ಅಸಮತೆ ಇದೆ. ವೈವಿಧ್ಯ, ಸರ್ವ ಸೃಷ್ಟಿಯ ಜೀವಾಳ. ಸಂಪೂರ್ಣ ಸಮತೆಯಿದ್ದರೆ ಸೃಷ್ಟಿಯಿಲ್ಲ. ಚಲನೆ ಕೂಡ ಅಸಮತೆಯಿಂದಲೇ. ಅಸಮತೆ ನಿರಂತರವಾಗಿ ಸಮತೆಯನ್ನು ಸಾಧಿಸುತ್ತದೆ. ಸರ್ವ ಸಮತೆ ಇದ್ದರೆ ಈ ಪ್ರಶ್ನೆ ಇಲ್ಲ. ಯೋಗಿಯ ದೃಷ್ಟಿ ಎಲ್ಲೆಲ್ಲಿಯೂ ಭಗವತ್ ತತ್ತ್ವವನ್ನು ಸಂದರ್ಶಿಸಿದರೂ ಲೀಲೆಯಲ್ಲಿ ವಿಭೂತಿತತ್ತ್ವವನ್ನು ಕಾಣುತ್ತದೆ.

ಕಾವ್ಯ ವಿಷಯವೂ ಕೂಡ ಕಾವ್ಯದ ಮೇಲ್ಮೆ ಕೀಳ್ಮೆಗಳಿಗೆ ಕಾರಣವಾಗುತ್ತದೆ. ವಿಷಯದ ಮಹಿಮೆಯನ್ನು ಅಮುಖ್ಯವೆಂದು ಹೇಳುವುದಕ್ಕಾಗುವುದಿಲ್ಲ. ಲೋಕ ವಿಷಯ ಕವಿ ಪ್ರತಿಭಾ ವಶವಾದೊಡನೆ ವಸ್ತುವಾಗುತ್ತದೆ. ಕಾವ್ಯದಲ್ಲಿ ಕೃತಿ ತಂತ್ರವಾಗಲಿ, ಸೌಂದರ್ಯವಾಗಲಿ ಸರ್ವಸ್ವವಲ್ಲ. Art is not only the technique or the expression of beauty.

ಬ್ರಾಹ್ಮೀ ಪ್ರಜ್ಞೆಯೇ ಕವಿಯ ಮೂಲಕ ಪ್ರಕಾಶವಾಗುತ್ತದೆ. ಕವಿ ಪ್ರಕಾಶಿಸುವುದು ಚಿಚ್ಛಕ್ತಿಯ ಸ್ವಯಂ ಅಭಿವ್ಯಕ್ತಿಯನ್ನು. ಅಂದರೆ ಕವಿದರ್ಶನದ ಉಪಾಧಿಯಲ್ಲಿ ಚಿಚ್ಛಕ್ತಿಯ ಸ್ವಯಂ ಅಭಿವ್ಯಕ್ತಿ. ಆದುದರಿಂದ ಕವಿಸೃಷ್ಟಿಯೆನ್ನುವುದು

ಚಿಚ್ಛಕ್ತಿಯ ಪ್ರಕಾರವೇ. ಕವಿ ಒಂದು ಪ್ರಣಾಳಿಕೆ. ಪ್ರಣಾಳಿಕೆಯ ಉತ್ಪತ್ತಿ, ಶಕ್ತಿ ಔನ್ನತ್ಯಗಳ ಮೂಲಕ ಆ ಶಕ್ತಿ ಪ್ರಕಟವಾಗುತ್ತದೆ. ಮಹಾ ಕಾವ್ಯವೆಂದರೆ ಚಿಚ್ಛಕ್ತಿಯ ವಿಶೇಷ ಅಭಿವ್ಯಕ್ತಿ. ಕಲೆಯಲ್ಲಿ ಸೌಂದರ್ಯ ಪುರುಷಾರ್ಥಗಳು (Aesthetic values) ಇವೆ; ಮನೋಮಯ ವಿಜ್ಞಾನಮಯ ಮೊದಲಾದ ಅಧ್ಯಾತ್ಮ ಪುರುಷಾರ್ಥಗಳೂ (Soul values) ಇವೆ. ಆದುದರಿಂದಲೇ ಕಾವ್ಯ ಸೃಷ್ಟಿಯಾದ ಮೇಲೆ ಅನೇಕ ವಿಷಯಗಳನ್ನು ಕವಿ ತನ್ನ ಕೃತಿಯಿಂದಲೇ ಅರಿಯುತ್ತಾನೆ.

ಪ್ರಜ್ಞಾವಲಯದಲ್ಲಿ ಸೋಪಾನಗಳಿವೆ. ಹೋಮರ್ ಮಾನವ ವ್ಯಾಪಾರದ ಬಹಿರ್‌ಕ್ರಿಯೆಗಳನ್ನು ಚಿತ್ರಿಸಿದ್ದಾನೆ. ಅಂದರೆ ಹೆಚ್ಚಾಗಿ ಅಲ್ಲಿ ಚಿತ್ರಿತವಾಗಿರುವುದು ಅನ್ನಮಯ. ಷೇಕ್ಸ್‌ಪಿಯರ್ ಹೋಮರ್‌ನಗಿಂತಲೂ ಮುಂದೆ ಹೋಗಿ ವಿಜ್ಞಾನಮಯ, ಆನಂದಮಯಗಳನ್ನು ಅಭಿವ್ಯಕ್ತಗೊಳಿಸಿದ್ದಾನೆ.

ಈಗ 'ಲತಾನಟಿ'* ಎಂಬ ಚಿಕ್ಕ ಕವನವನ್ನು ಉದಾಹರಣೆಗಾಗಿ ತೆಗೆದುಕೊಳ್ಳೋಣ. ಇಲ್ಲಿ ಮೊದಲು ಕಾಣುವುದು ಪ್ರಕೃತಿಯ ಹೊರ ಸೌಂದರ್ಯವನ್ನು. ಇನ್ನೂ ಮುಂದೆ ಹೋದಾಗ ಪ್ರಾಣಮಯ, ಮನೋಮಯ ಸೌಂದರ್ಯವನ್ನೂ ಕಾಣುತ್ತೇವೆ. ಈ ಕವನದ ಹಿನ್ನೆಲೆ ಮಲೆ, ಬನ, ಬಾನು. "ನೆನೆ ಶಿವನಂ ತಾಂಡವಯತಿ" ಎಂದು ಹೇಳುವಾಗ ಅಧ್ಯಾತ್ಮ ಪುರುಷಾರ್ಥವನ್ನು ಕಾಣಬಹುದು. ಲೋಕ ವ್ಯಾಪಾರದ ಲತೆಯ ಕುಣಿತ ಬಹುದೂರ ವ್ಯಾಪಿಸಿ ಅಲೌಕಿಕಕ್ಕೆ ಕೊಂಡೊಯ್ಯುತ್ತದೆ.

ಕಲೆ ಎನ್ನಿಸಿಕೊಳ್ಳಲು ಕೃತಿ, ಸೌಂದರ್ಯ ಪೂರ್ಣವಾಗಿರಬೇಕು. ಆದರೆ ಜೀವನಕ್ಕಾಗಿ ಕಲೆ, ಆತ್ಮೋನ್ನತಿಗಾಗಿ ಕಲೆ ಎಂಬುದನ್ನು ಮರೆಯಬಾರದು. ಬದುಕನ್ನು ಕೊಲೆ ಮಾಡುವ ಕಲೆ ಬೇಡ. ಆತ್ಮೋಲ್ಲಾಸಕ್ಕೆ ಮಾರ್ಗದರ್ಶಕವಾಗುವ ಕಲೆ ಮಾನ್ಯ.

**—ಎಂ. ಎ. ತರಗತಿಯಿಂದ**

ಕವಿಗುರುಗಳ ಉಪನ್ಯಾಸ ಹೇಗಿರಬಹುದೆಂಬುದನ್ನು ಮೇಲಿನ ಕಿಂಚಿತ್ ದರ್ಶನದಿಂದ ಸ್ವಲ್ಪ ಮಟ್ಟಿಗೆ ಕಲ್ಪನಾಗೋಚರವಾಗುವಂತೆ ಮಾಡಿಕೊಳ್ಳಬಹುದು. ಅವರ ಉಪನ್ಯಾಸ ಕೇವಲ ಬುದ್ಧಿಯ ಮಟ್ಟದಲ್ಲಿ ನಡೆವ ಗಣಿತ ಕರ್ಮದ ವಿಷಯ ನಿರೂಪಣೆಯಲ್ಲ, ಅದೊಂದು ಸೃಷ್ಟಿಕ್ರಿಯೆ. ಕವಿವರ್ಯರೂ, ದಾರ್ಶನಿಕರೂ, ಸಾಧಕರೂ ಆದ ಶ್ರೀ ಗುರುವಿನ ಬೋಧೆಯನ್ನು ಪೂರ್ಣವಾಗಿ ಅಂದು ಗ್ರಹಿಸದಿದ್ದುದಕ್ಕಾಗಿ ಇಂದು ಮನಸ್ಸು ಚಿಂತಿಸುತ್ತಿದೆ. 'ಶ್ರದ್ಧಾವಾನ್ ಲಭತೇ ಜ್ಞಾನಂ' ಎಂಬ ಗೀತಾ ವಾಕ್ಯ ಎಷ್ಟು ಸತ್ಯವೆಂಬುದು ಇಂದು ಸಂವೇದ್ಯವಾಗುತ್ತಿದೆ.

---

*ಪಕ್ಷಿಕಾಶಿ—ಪುಟ ೧೨

ಆನರ್ಸ್ ಮುಗಿಸಿ ಅಧ್ಯಾಪಕನಾದೆ. ಒಮ್ಮೊಮ್ಮೆ ಗುರುಗಳ ಬಳಿಗೆ ಹೋದಾಗ ನನ್ನ ಸಂದೇಹ ನಿವಾರಣೆಗಾಗಿ ಕೆಲವು ಪ್ರಶ್ನೆಗಳನ್ನು ಕೇಳಿದುದುಂಟು. ಆ ಕೆಲವು ಸಂದರ್ಶನಗಳಲ್ಲಿ ನಾನು ಕೇಳಿ ತಿಳಿದುದನ್ನು ನೆನಪಿರುವಷ್ಟು ಇಲ್ಲಿ ಬರೆದಿದ್ದೇನೆ.

೧೧–೧೦–೫೩ ಭಾನುವಾರ ಸಂಜೆ, ಆರು ಗಂಟೆಯ ಸಮಯ. ಗುರುವರ್ಯ ರೊಬ್ಬರೇ ಅವರ ಮನೆಯ ಮುಂದಿನ ಹೂದೋಟದಲ್ಲಿ ನಿಂತಿದ್ದರು. ಆಕಾಶದಲ್ಲಿ ಮನೋಹರ ಭವ್ಯಾಕಾರವನ್ನು ತಾಳಿ ಸಂಚರಿಸುತ್ತಿದ್ದ ಬೆಳ್ಮುಗಿಲಿನಲ್ಲಿ ಅವರ ದೃಷ್ಟಿ ಸಂಚರಿಸುತ್ತಿತ್ತು. ನಾನು ಹತ್ತಿರ ಹೋದೆ, ನಮಿಸಿದೆ. ಶಾಂತ ಮುಖ ಮುದ್ರೆಯಿಂದಲೇ ಸ್ವೀಕರಿಸಿದರು. "Walking ಹೋಗೋಣವೇ? ನಿನಗೇನಾದರೂ ಬೇರೆ ಕೆಲಸ ವಿದೆಯೇ?" ಎಂದು ಕೇಳಿದರು. "ಇಲ್ಲ, ಹೋಗೋಣ" ಎಂದೆ. ಅವರು ಮನೆಯೊಳಕ್ಕೆ ಹೋಗಿ ಬರುವವರೆಗೆ ಅಲ್ಲಿಯೇ ನಿಂತು ತೋಟದ ಸುತ್ತಲೂ ದೃಷ್ಟಿಯನ್ನು ಚೆಲ್ಲಿದೆ. ಜಿನಿಯ, ಡೇಲಿಯ, ಆಸ್ಟರ್, ಸೂರ್ಯಕಾಂತಿ, ಗುಲಾಬಿ ಇತ್ಯಾದಿ ಬಹು ಪುಷ್ಪಗಳಿಂದ ಸುಂದರವಾದ ತೋಟ ಮೇಲುಗಾಳಿಯಲ್ಲಿ ಸಂತೋಷದ ತರಂಗಗಳನ್ನು ಹಬ್ಬಿಸುತ್ತಿತ್ತು. ಕವಿವನಶ್ರೀ, ಕವಿಕಲ್ಪನಾಶ್ರೀಯಂತೆ ಬಹುರೂಪನೆಂದು ಯೋಚಿಸುತ್ತಿರುವಾಗಲೇ ಗುರುಗಳು ಬಂದರು.

........ದಾರಿ ಸಾಗಿತು. ಒಂಟಿಕೊಪ್ಪಲಿನ ಮನೆಗಳನ್ನು ದಾಟಿ ಬಯಲನ್ನು ಸೇರಿದೆವು. ಸಂಜೆಯ ಅನಿರ್ವಚನೀಯ ಕಾವ್ಯ ಬಾನಿನಲ್ಲಿ ಹಬ್ಬಿತ್ತು. ಪಶ್ಚಿಮದ ಬಾನಂಚಿನಲ್ಲಿ ಕೆಂಪು ಮಿಶ್ರವಾದ ಹೊಂಬಣ್ಣದ ಸಂಧ್ಯಾಕಾಂತಿ ಮನಮೋಹಕವಾಗಿತ್ತು. ಆ ದೃಶ್ಯವನ್ನು ಆಸ್ವಾದಿಸಿದ ಗುರುಗಳು "ಇದನ್ನೇ ಅಲ್ಲವೇ ನಮ್ಮ ಕವಿಗಳು 'ವಿಷ್ಣು ಪದ ಪಂಕೇರುಹ' ಎಂದು ಕರೆದುದು? ಇದನ್ನೇ 'The glorious divine colour' ಎಂದು ಹೇಳುವುದು!" ಎಂದು ಹೇಳುತ್ತಾ ಮೌನವಾದರು. ತಂಗಾಳಿ ಬೀಸುತ್ತಿತ್ತು. ನಡಿಗೆ ಮೌನವಾಗಿ ಸಾಗುತ್ತಿತ್ತು. ಸ್ವಲ್ಪ ದೂರ ಸಾಗಿದ ಮೇಲೆ 'ಅಲ್ಲಿ ನೋಡು' ಎಂದು ಬಾನಪಟದಲ್ಲಿ ಧ್ಯಾನಮಗ್ನ ಮೂರ್ತಿಯಂತಿದ್ದ ಮೇಘಶಿವನ ಅದ್ಭುತ ಕಲಾಕೃತಿಯನ್ನು ತೋರಿದರು. ಮೊದಲು ಆ ಮೂರ್ತಿಯನ್ನು ಗುರುತಿಸುವುದು ಕಷ್ಟವಾಯಿತು. ಸ್ವಲ್ಪ ಹೊತ್ತಿನಲ್ಲಿಯೇ ಆ ಮೇಘಶಿವನ ಮೂಗು, ಕಣ್ಣು, ಬಾಯಿ ಇತ್ಯಾದಿ ಬೇರೆ ಬೇರೆ ಅಂಗಗಳನ್ನು ಗುರುತಿಸಿದೆ. ತಲೆಯ ಮೇಲ್ಗಡೆ ಚೆದುರಿಹೋಗಿದ್ದ ಮೋಡಗಳು ಜಟಾಜೂಟದಂತೆ ಶೋಭಿಸುತ್ತಿದ್ದುವು. ಆಶ್ವೀಜ ಶುದ್ಧ ಬಿದಿಗೆಯ ಚಂದ್ರನೂ ಮೋಡಗಳ ಮರೆಯಲ್ಲಿ ಇಣುಕುತ್ತಿದ್ದ.

"ನೋಡು, ಇಂತಹ ಗಗನ ಚಿತ್ರವನ್ನು ಮೊದಲು ಕಲ್ಪನೆ ಗುರುತಿಸುತ್ತದೆ. The more it imagines, the more it creates. ಅನಂತರ ಅಲ್ಲಿ

ಪ್ರಾಣ ಪ್ರತಿಷ್ಠೆಯಾಗುತ್ತದೆ. ಇಂತಹ ಶಿಲ್ಪವನ್ನೂ ರಸಾನುಭೂತಿಯನ್ನೂ ಯಾವ ದೇವಸ್ಥಾನದಲ್ಲಿ ಕಾಣುವುದು ಸಾಧ್ಯ! ಮೋಡದಲ್ಲಿ ದೇವತಾ ಆವಿರ್ಭಾವವೂ ಅನಂತರ ಅಲ್ಲಿ ದೇವತಾ ಸಂಚಾರವೂ ಧ್ಯಾನ ಗೋಚರವಾಗುತ್ತದೆ. 'ಅಧಿದೇವತಾ ಆವಿರ್ಭೂತಿ' ಎಂಬ ಅನುಭವವನ್ನು ಒಂದು ಕವನದಲ್ಲಿ ಮೂರ್ತಿಸಬೇಕೆಂದಿದ್ದೇನೆ."

"ಸಾಧಕನು ಒಂದು ಶಿಖರವನ್ನೇರಿದರೆ ಮತ್ತೊಂದು ಶಿಖರವು ಕಾಣುವುದಲ್ಲವೇ? ಇದಕ್ಕೆಲ್ಲಿ ಅಂತ್ಯ?" ಎಂದು ಕೇಳಿದೆ.

ಕವಿವರ್ಯರು ಮಂದಸ್ಮಿತರಾಗಿ "ಅನಂತವನ್ನು ಅನಂತವಾಗಿಯೇ ನೋಡಬೇಕು; ಪೂರ್ಣಸಿದ್ಧಿಯೆಂದರೆ ಅನಂತವೇ. ಮನೋಮಯಕ್ಕೆ ಇದು ಸಂವೇದ್ಯವಾಗುವುದು ಕಷ್ಟ. Mathematical mind cannot grasp it. ಆದುದರಿಂದಲೇ ಋಷಿವಾಣಿ :

ಯತೋ ವಾಚೋ ನಿವರ್ತಂತೇ ಅಪ್ರಾಪ್ಯ ಮನಸಾ ಸಹ ।
ಆನಂದಂ ಬ್ರಹ್ಮಣೋ ವಿದ್ವಾನ್ನಬಿಭೇತಿ ಕುತಶ್ಚನ ॥

ಎಂದು ಹೇಳುವುದು. ಅದು ಅನಿರ್ವಚನೀಯ.

........ಮೋಡಗಳ ವರ್ಣನೆ ಶ್ರೀ ರಾಮಾಯಣದರ್ಶನದಲ್ಲಿ ಅಲ್ಲಲ್ಲಿ ಬರುತ್ತದೆ. ಬೆಂಗಳೂರಿನ ವಿಶ್ವೇಶ್ವರ ಪುರದಲ್ಲಿ ಮನೆ ಮಾಡಿಕೊಂಡಿದ್ದಾಗ ನೆಲದ ಬಂಧನದಿಂದ ಪಾರಾಗಲು ಮಹಡಿಯನ್ನೇರುತ್ತಿದ್ದೆ. ಬೃಹತ್ತಿನ ಬಳಿಗೆ ನಾವು ಹೋಗಲಾರದಿದ್ದರೂ ಬೃಹತ್ತು ಮೋಡ ಮೊದಲಾದ ಆಕಾರಗಳಲ್ಲಿ ನಮ್ಮ ಬಳಿಗೆ ಬರುತ್ತದೆ. ಬೆಂಗಳೂರಿನಲ್ಲಿದ್ದಾಗಲೇ 'ಮೋಡಗಳು' ಮತ್ತು 'ರೋರಿಕ್ ಚಿತ್ರಶಾಲಾಸ್ಮೃತಿ' ಎಂಬ ಕವನಗಳು ಉದಯವಾದುವು.

ಗುರುಗಳ ದೃಷ್ಟಿ ಪಶ್ಚಿಮದ ಬಾನಂಚಿನತ್ತ ಸಾಗಿತು. ಸರೋವರದಂತಿದ್ದ ಆ ಹೊಂಬೆಳಕನ್ನು ಕಂಡು, "ಯಾವ ಮರ್ತ್ಯಸರೋವರ ಈ ಅಧ್ಯಾತ್ಮ ಸರೋವರಕ್ಕೆ ಸಮನಾದೀತು? ನೋಡುತ್ತ ನೋಡುತ್ತ ಅದರಲ್ಲಿಯೆ ಲೀನವಾದರೆ ನಮ್ಮನ್ನು ಎಲ್ಲಿಗೆ ಕೊಂಡೊಯ್ಯಬಹುದು, ಯೋಚಿಸಿನೋಡು!" ಎಂದರು.

ಅಷ್ಟರಲ್ಲಿಯೇ ಮುಚ್ಚಂಜೆಯ ಮೌನವನ್ನು ತೇನೆಹಕ್ಕಿಗಳು ತಮ್ಮ ಮಂಜುಳ ಧ್ವನಿಯಿಂದ ಭೇದಿಸಿದವು. ಅಲ್ಲಲ್ಲಿ ಮತ್ತೆ ಮತ್ತೆ ಹಾಡಲಾರಂಭಿಸಿದವು. "ಇವೇನು ನಮ್ಮನ್ನು ಎಚ್ಚರಿಸಲೆಂದೇ ಉಲಿಯುತ್ತಿವೆಯೋ?" ಎಂದರು.

ದಾರಿಸಾಗಿತ್ತು. ದೂರದಲ್ಲಿ ಚಾಮುಂಡಿಬೆಟ್ಟ ವಿದ್ಯುದ್ದೀಪಗಳಿಂದ ಸಾಲಂಕೃತವಾಗಿ ಶೋಭಿಸುತಿತ್ತು. "ನೋಡು ಒಮ್ಮೊಮ್ಮೆ ಪ್ರಾತಃಕಾಲದಲ್ಲಿ ಹತ್ತಿ ಮೋಡಗಳು ಬೆಟ್ಟವನ್ನು ಚುಂಬಿಸುವಂತೆ ಮುತ್ತಿರುತ್ತವೆ. ಸ್ವರ್ಗಚುಂಬಿಯೆಂದರೆ ಸ್ವರ್ಗವೇ ಇಳಿದು ಬರುವುದು ಎಂಬ ಅರ್ಥದಲ್ಲಿಯೂ ಸತ್ಯ."

ಬಿದಿಗೆಯ ಚಂದ್ರನ ಬೆಳಕನ್ನು ನುಂಗಿ ಕತ್ತಲು ಮೆಲ್ಲನೆ ಬುವಿಯನ್ನು ಆವರಿಸುತ್ತಿತ್ತು. ನಮ್ಮದಾರಿ ಮೌನವಾಗಿಯೇ ಸಾಗಿತು.

"ಶ್ರೀ ರಾಮಾಯಣದರ್ಶನದಲ್ಲಿ ಚಿತ್ರಿತವಾಗಿರುವ ಶ್ರೀರಾಮ ಸೀತೆಯರ ಪಾತ್ರ ನಿರೂಪಣೆ ಕಷ್ಟವಲ್ಲವೇ" ಎಂದು ಕೇಳಿದೆ.

"ಪಾತ್ರಗಳನ್ನು ಚಿತ್ರಿಸುವಾಗ ಸಾಹಿತ್ಯ ದೃಷ್ಟಿ, ಮನೋವಿಜ್ಞಾನ ದೃಷ್ಟಿ, ದರ್ಶನ ದೃಷ್ಟಿ—ಹೀಗೆ ಮೂರು ದೃಷ್ಟಿಗಳಿವೆ. ಇವುಗಳನ್ನು ಒಳಗೊಳ್ಳುವುದೇ ಪೂರ್ಣ ದೃಷ್ಟಿ ಆ ದೃಷ್ಟಿಯಿಂದ ಪಾತ್ರಗಳನ್ನು ನಿರೂಪಿಸುವುದು ಉತ್ತಮ."

ಮತ್ತೆ ಮಾತಿಲ್ಲದೆ ದಾರಿಸಾಗಿತ್ತು. ನನ್ನ ಮನಸ್ಸು ಮೇಘಶಿವನನ್ನು ನೆನೆಯುತ್ತಿತ್ತು. ಮನೆ ಸಮಿಾಪಿಸಿದೊಡನೆ ಶ್ರೀ ಕುವೆಂಪು ಅವರಿಗೆ ನಮಿಸಿ ಮನೆ ಸೇರಿದೆ. ಮನದಲ್ಲಿ ಏನೋ ಶಾಂತಿ ಮೂಡಿತ್ತು!

೪

೧೫-೧೧-೫೩, ಭಾನುವಾರ ಸಂಜೆ, ಮತ್ತೊಮ್ಮೆ ಗುರುಗಳೊಡನೆ ಗಾಳಿ ಸಂಚಾರಕ್ಕೆ ಹೊರಟಿದ್ದೆ. ಸ್ವಲ್ಪ ಛಳಿ ಇದ್ದುದರಿಂದ ಉಣ್ಣೆಯ ಕೋಟನ್ನು* ಧರಿಸಿದ್ದರು. ಬರುತ್ತಿದ್ದ ತುಂತುರು ಮಳೆಯು ನಿಂತು ಬಾನು ಸ್ವಚ್ಛವಾಗಿತ್ತು. ಸ್ವಲ್ಪ ದೂರ ಹೋದ ಮೇಲೆ "ಲೋಕವೃತ್ತವನ್ನೂ, ಸುಖದುಃಖಗಳನ್ನೂ ಸೃಷ್ಟಿಸುವುದು ನಮ್ಮ ಪ್ರಜ್ಞೆಯೇ?" ಎಂದು ಕೇಳಿದೆ.

"ನಮ್ಮ ಪ್ರಜ್ಞೆಯೂ ಲೋಕವೃತ್ತವೂ ಸಮ ಸತ್ಯಗಳು. ಲೋಕವನ್ನು ಮರ್ತ್ಯ ಪ್ರಜ್ಞೆ, ಸೃಷ್ಟಿಸಿತು ಎನ್ನುವುದು ತಪ್ಪು. ಇವೆರಡೂ ವಿರಾಟ್ ಪ್ರಜ್ಞೆಯ ಸೃಷ್ಟಿ. ವಾಸ್ತವವಾಗಿ ವ್ಯಕ್ತಿಯಲ್ಲ ಕೆಲಸಮಾಡುವುದು, ಆತ್ಮವೇ! ಆದರೆ ಅಹಂಕಾರ ತಾನೇ ನಡೆಸುತ್ತೇನೆ ಎಂದು ತಿಳಿಯುತ್ತದೆ. 'ಅಹಂಕಾರ ವಿಮೂಢಾತ್ಮ ಕರ್ತಾಹ ಮಿತಿ ಮನ್ಯತೇ" ಎಂಬ ಭಗವದ್ಗೀತೆಯ ನುಡಿಯೂ ಇದನ್ನೇ ಹೇಳುತ್ತದೆ. ಸಿದ್ಧಪುರುಷರಲ್ಲಿ ಈ ಅಹಂಕಾರ ಸುಟ್ಟದಾರದಂತಿರುತ್ತದೆ ಎಂದು ಪರಮಹಂಸರು ಹೇಳಿದ್ದಾರೆ. ಅಹಂಕಾರ, ಚೈತ್ಯಪುರುಷ, ಜೀವ—ಈ ವಿಷಯವಾಗಿ ಶ್ರೀ ಅರವಿಂದರು ಕೊಡುವ ವಿವರಣೆಯನ್ನು ಗಮನಿಸಬೇಕು. ಜೀವವನ್ನೆ ಒಟ್ಟಿನಲ್ಲಿ ಈಶ್ವರನೆನ್ನಬಹುದು. ಜೀವ ಸನಾತನದ ಅಂಶ. ಸತ್ತು ಹುಟ್ಟುವುದು ಚೈತ್ಯಪುರುಷ 'psychic being.' The evolutionary process is for the psychic being. The Jiva is not evolutionary. ಜೀವ, ದೇವ ಎರಡೂ ಒಂದೇ. ಜೀವಕ್ಕೆ ಕೊಡುವ ಮೂರು ನಾಲ್ಕು ವಿವರಣೆಗಳು ಪ್ರತಿಮಾ ವಿಧಾನಗಳೇ ಹೊರತು ಬೇರೆಯಲ್ಲ. ಆದುದರಿಂದ ಜೈನರು ಸ್ಯಾದ್ವಾದವನ್ನು ತಂದುದು."

---

*ಸುಮಾರು ಇಪ್ಪತ್ತು ವರ್ಷಗಳಿಂದಲೂ ಕವಿವರ್ಯರ ಸೇವೆಯಲ್ಲಿದೆ ಎಂದು ಕಾಣಿಸುತ್ತದೆ. ಕವಿವರ್ಯರಲ್ಲಿ ವಿಶೇಷ ಭಕ್ತಿ ಇದೆ ಈ ಕೋಟಿಗೆ!

ಮೋಡಗಳು ಸಂಜೆಯ ಬಾನನ್ನು ಆವರಿಸಿದ್ದುವು.

ದೂರದಲ್ಲಿ ತೇನೆಹಕ್ಕಿಗಳು ತಮ್ಮ ಮಧುರ ಕಂಠದಿಂದ ಸಂಧ್ಯಾರಾಗವನ್ನು ಹಾಡುತ್ತಿದ್ದುವು. ಸಮಸ್ತ ಪ್ರಕೃತಿಯೂ ಧ್ಯಾನ ಮಗ್ನವಾಗಿತ್ತು

ಸಂಧ್ಯಾ ಗಗನವನ್ನು ಕಾಣುತ್ತಿದ್ದ ಶ್ರೀ ಕುವೆಂಪು ವೀಕ್ಷಣೆಯ ವಿಷಯವಾಗಿ ಮಾತನಾಡಲುಪಕ್ರಮಿಸಿದರು.

"ಕಣ್ಣಿನಿಂದ ನೋಡುವುದು ಸುಲಭ ಮತ್ತು ಸಹಜ. ಅದಕ್ಕಿಂತಲೂ ಅಪ್ರಯತ್ನವಾದುದು ಮತ್ತೊಂದಿರಲಾರದು. ಆದರೆ ಕಣ್ಣಿನ ರಚನೆಯ ಶಾಸ್ತ್ರವನ್ನು ತಿಳಿಯಲು ತುಂಬಾ ಶ್ರಮಪಡಬೇಕಾಗುತ್ತದೆ. ಶಾಸ್ತ್ರವನ್ನು ಎಷ್ಟು ವಿವರಿಸಿದರೂ 'ನೋಟ'ವೇನೆಂದು ವಿವರಿಸುವುದು ಸಾಧ್ಯವಲ್ಲ. ಚಿಂತನಕ್ಕೆ ಪೂರ್ವಸ್ಥಿತಿಯನ್ನು ಎಷ್ಟು ವಿವರಿಸಿದರೂ ಅಸ್ಪಷ್ಟವೇ. ಶ್ರೀ ಅರವಿಂದರು ಕೇವಲವನ್ನು ಕೂಡ ಪ್ರಯತ್ನಸಾಧ್ಯವಾದ ರೀತಿಯಲ್ಲಿ ಅನುಭವದ ಕಾಂತಿಯಿಂದ ವಿವರಿಸಿದ್ದಾರೆ. ಸಿದ್ಧ ಪುರುಷನಾದ ತತ್ತ್ವಜ್ಞಾನಿ ಹೇಳುವುದಕ್ಕೂ ಕೇವಲ ತತ್ತ್ವಶಾಸ್ತ್ರವನ್ನು ಓದಿದವನು ಹೇಳುವುದಕ್ಕೂ ಇರುವ ವ್ಯತ್ಯಾಸವನ್ನು ಶ್ರೀ ಅರವಿಂದರ 'Life Divine' ಓದಿದರೆ ತಿಳಿಯುತ್ತದೆ. ಸಾಮಾನ್ಯರ ಗ್ರಹಣ ಶಕ್ತಿಯಲ್ಲಿಯೇ ಅವಿದ್ಯಾ ಅಂಶವಿದೆ. ಆದುದರಿಂದ ಸಾಮಾನ್ಯದೃಷ್ಟಿ ಪೂರ್ಣದೃಷ್ಟಿಯಲ್ಲ. ಏಕದಲ್ಲಿ ಅನೇಕವನ್ನೂ, ಅನೇಕದಲ್ಲಿ ಏಕವನ್ನೂ ಕಾಣಲು ವಿಶೇಷ ಪ್ರಯತ್ನ ಬೇಕು."

ದಾರಿ ಸಾಗಿತು. ಕುಕ್ಕನಹಳ್ಳಿಯ ಕೆರೆಯಪಕ್ಕದ ರಸ್ತೆಯಲ್ಲಿ ನಡೆಯುತ್ತಿದ್ದೆವು. ಕವಿವರ್ಯರು ಕೆರೆಯನ್ನು ನೋಡುತ್ತ ಸ್ವಲ್ಪಕಾಲ ನಿಂತರು. "ನೋಡು, ಈ ಕೆರೆ ಹಿಂದೆಂದೂ ಇಷ್ಟು ತುಂಬಿರಲಿಲ್ಲ. ತುಂಬಿದ ಹೃದಯದಂತೆ ನಿಸ್ತರಂಗವಾಗಿದೆ" —ಎಂದರು.

'ಕವನ ಸೃಷ್ಟಿ ನಡೆಯುವುದು ಹೇಗೆ? ಒಮ್ಮೊಮ್ಮೆ ಕೆಲವರಿಗೆ ಕೆಲವು ಕವನ ಪಾದಗಳು ಮಿಂಚಿ ಮರೆಯಾಗುತ್ತವಲ್ಲ!' ಎಂದು ಕೇಳಿದೆ.

"ರಸಾನುಭವವಾದಾಗಲೇ ಕವನ ರಚನೆಯಾಗಬೇಕೆಂಬ ನಿಯಮವಿಲ್ಲ. ಚೇತನ ಒಂದು ಕಡೆ ಕುಳಿತು ಪದ್ಮಾಸನಸ್ಥಿತವಾಗಬಹುದು. ಅದರ ಅಧ್ಯಕ್ಷತೆಯಲ್ಲಿ ಬಹು ದಿನಗಳನಂತರ ಕವನ ಸೃಷ್ಟಿಯಾಗಬಹುದು. 'ಮಿಣುಕು ಹುಳುಗಳು' ಎಂಬ ಕವನಕ್ಕೆ ನಾನು ಎಂಟು ವರ್ಷದ ಹುಡುಗನಾಗಿದ್ದಾಗ ಉಂಟಾದ ರಸಾನುಭವವೇ ಕಾರಣ. ಆಗ ನಾನು ಮಾಧ್ಯಮಿಕಶಾಲೆಯ ಒಂದನೆ ತರಗತಿಯಲ್ಲಿ ಓದುತ್ತಿದ್ದೆನೆಂದು ಕಾಣುತ್ತದೆ. ಒಂದುದಿನ ನಮ್ಮ ಮಾವ ಮತ್ತು ಚಿಕ್ಕಪ್ಪನವರು ತೀರ್ಥಹಳ್ಳಿಗೆ ಬಂದವರು, 'ಮನೆಗೆ ಬರ್ತೀಯೇನೋ, ನಡಿ' ಎಂದು ನನ್ನನ್ನು ದೇವಂಗಿಗೆ ಕರೆದುಕೊಂಡು ಹೊರಟರು. ಆ ಕಾಡು ದಾರಿಯಲ್ಲಿ ಒಂದು ದಿಬ್ಬವನ್ನು ಹತ್ತಿ ಇಳಿಯಬೇಕು. ಅಲ್ಲಿಯೇ ಕೆರೆಯೊಂದಿದೆ. ಕಗ್ಗತ್ತಲು ಸುತ್ತಲೂ ಆವರಿಸಿತ್ತು. ದಿಬ್ಬವನ್ನು ಇಳಿದೊಡನೆ ಕೆರೆಯೇ ಬಗ್ ಎಂದು ಹತ್ತಿಕೊಂಡು ಉರಿಯುವಂತೆ ಕಂಡಿತು. ಲಕ್ಷಾಂತರ ಮಿಣುಕು

ಹುಳುಗಳು ತಮ್ಮ ಬೆಳಕಿನಿಂದ ಮೆರೆಯುತ್ತಿದ್ದುವು. A poem was born in the soul of a child! ಅಂದು ನನಗಾದ ರಸಾನುಭವ ಹದಿನೈದು ವರ್ಷಗಳ ಮೇಲೆ ಕವನ ರೂಪ ತಾಳಿತು. ಒಂದು ಭಾವಗೀತೆಯ ಉದಯ ಹೀಗಾಗಿರಲು ಒಂದು ಮಹಾಕಾವ್ಯದ ಸೃಷ್ಟಿ ಹೇಗೆಂದು ವಿವರಿಸುವುದು? ಮಹಾಕಾವ್ಯ ಒಂದು ಕಾಲ, ಒಂದು ದೇಶದ್ದಲ್ಲ. ಜನ್ಮಾಂತರದ ಸಂಸ್ಕಾರಗಳೆಲ್ಲವೂ ಅಲ್ಲಿ ಚಿರಮುದ್ರಿತವಾಗಿರುತ್ತವೆ. ಅದು ಒಂದು ಜೇತನದ್ದೂ ಅಲ್ಲವೆಂದು ಕಾಣುತ್ತದೆ!

"ಒಂದು ದಿನ ಬೆಳಗ್ಗೆ ಸುಮಾರು ೬–೭ರ ಸಮಯ, ಇದೇ ಕೆರೆಯ ಮಾರ್ಗವಾಗಿ ಬರುತ್ತಿದ್ದೆ. ಅದೋ ಆ ಹೊಂಗೆಯ ಮರದ ಕೆಳಗಡೆ ನಿಂತು ಕೆರೆಯ ವಿಪುಲ ವಿಸ್ತಾರವನ್ನು ನೋಡಿದೆ. ಆಗತಾನೆ ಸೂರ್ಯನ ಬೆಳಕು ಕೆರೆಯ ವಕ್ಷದ ಮೇಲೆ ಚೆಲ್ಲಿತ್ತು; ಹಕ್ಕಿಗಳು ಹಾಡುತ್ತಿದ್ದುವು, ಹಾರುತ್ತಿದ್ದುವು. ಇದೊಂದು ಭಗವಂತನ ಸೌಂದರ್ಯದ ಚೂರೆನಿಸಿತು ನನಗೆ ಆ ದೃಶ್ಯ. ಪ್ರತಿಭಾಶಾಲಿಯಾದ ಚಿತ್ರಗಾರನಾಗಿದ್ದರೆ ಅದನ್ನು ಕಂಡು ಅದ್ಭುತವಾದ ವರ್ಣ ಚಿತ್ರವನ್ನೇ ಬರೆಯುತ್ತಿದ್ದನೋ ಏನೋ? ಆ ದೃಶ್ಯದ ಫೋಟೋ ತೆಗೆದುಕೊಂಡಿದ್ದರೆ ಅದು ಪ್ರತಿಕೃತಿಯಾಗುತ್ತಿತ್ತು. ಪ್ರತಿಕೃತಿಯಲ್ಲಿ ಸೌಂದರ್ಯವೇನೋ ಇರುತ್ತದೆ. ಆದರೆ ಪ್ರತಿಮಾ ವಿಧಾನದಲ್ಲಿ ಆ ಸೌಂದರ್ಯದ ಕ್ಷೇತ್ರ ತುಂಬಾ ವಿಸ್ತಾರವಾಗುತ್ತದೆ."

ಯೋಗಿಯ ಮನಸ್ಸು ಕನ್ನಡಿಯಂತಲ್ಲವೇ? ಎಂದು ಕೇಳಿದೆ.

"ಯೋಗಿಯ ಮನಸ್ಸು ಕೇವಲ Passivity ಅಲ್ಲ. ಅದು God's activity. ಭಗವಂತನ ಸಂಕಲ್ಪವೇ ಯೋಗಿಯ ಸಂಕಲ್ಪವಾಗುತ್ತದೆ."

ಕೆರೆಯ ದಾರಿಯನ್ನು ಬಿಟ್ಟು ವಾಲ್ಮೀಕಿ ರಸ್ತೆಯಲ್ಲಿ ಬರುತ್ತಿದ್ದೆವು. "ನಮ್ಮ ಮನಸ್ಸಿನಲ್ಲಿ ಎಷ್ಟೋ ಸಂಕಲ್ಪಗಳಿರುತ್ತವೆ, ಆದರೆ ಕಾರ್ಯರೂಪಕ್ಕೆ ತರುವುದಕ್ಕಾಗುವುದಿಲ್ಲ, ಅದಕ್ಕೆ ಕಾರಣವೇನಿರಬಹುದು?"

"ಸ್ವಾಮಿ ಶಿವಾನಂದರು ನಿನಗೆ ಎಷ್ಟು ಸೇವಾವಕಾಶವಿದೆಯೋ ಅಷ್ಟನ್ನೇ ಮಾಡು, ಸೇವೆಯಲ್ಲಿಯೂ ಅಹಂಕಾರ ಪಡಬೇಡ ಎಂದು ಹೇಳಿದ್ದಾರೆ. ಭಗವಂತನ ಇಚ್ಛೆ ಇರುವಷ್ಟು ಕೆಲಸ ನಡೆಯುತ್ತದೆ. ಚಿಂತಿಸುವುದು ಒಳಿತಲ್ಲ."

"ನೀವು 'ಆದಿಕವಿ ಸಂಭೂತಿ' ಎಂಬ ಕಾವ್ಯವನ್ನು ರಚಿಸಬೇಕೆಂದು ಹೇಳಿದ್ದಿರಿ. ಅದನ್ನು ಪ್ರಾರಂಭಿಸಿದ್ದೀರಾ?"

"ನೋಡು, ಅತೀತ ಪ್ರಜ್ಞೆಯ ವ್ಯಾಪಾರಗಳನ್ನು ಪ್ರತಿಬಿಂಬಿಸುವಾಗ ನಮ್ಮ ಕಲ್ಪನೆಯ ಸ್ವರೂಪವೇ ವ್ಯತ್ಯಾಸವಾಗುತ್ತದೆ. ಅದು ಸಾಮಾನ್ಯ ಜೇತನಕ್ಕೆ ಅಸಂಭವವೂ ವೈಪರೀತ್ಯವೂ ಆಗಿ ಕಂಡೀತು! ಆ ದೃಶ್ಯ ಕಾವ್ಯವನ್ನು ಎಂದು ಬರೆಯುವೆನೋ ತಿಳಿಯದು.

"ಶ್ರೀ ಶಾರದಾದೇವಿಯವರ ಶತಮಾನೋತ್ಸವ ಸಂದರ್ಭದಲ್ಲಿ ಒಂದು ಕವನ ಬರೆದುಕೊಡಬೇಕೆಂದು ಕೇಳಿದ್ದಾರೆ. ಏನೋ ಅಸ್ಪಷ್ಟವಾಗಿ ಹೊಳೆಯುತ್ತಿದೆ. Per-

haps the unwritten poem may be greater. The written poem may insult the experience. ಅರೂಪಕಾವ್ಯ, ಚಿತ್ತಪ್ರಸಾದವನ್ನೂ ಆನಂದ ಪ್ರವಾಹವನ್ನೂ ಆಲೋಚನೆಯನ್ನೂ ಪ್ರತಿಮೆಗಳನ್ನೂ ಪ್ರತಿಬಿಂಬಿಸುವುದಾದರೆ ಬಹಿಃಪ್ರಕಟವಾಗದಿದ್ದರೂ ನಷ್ಟವಿಲ್ಲ. ಆಗ ಅನುಭವವೇ ಅದರ ಪ್ರಕಾಶನ. ಆದರೆ ಅರೂಪಕಾವ್ಯ ಸಾಕಾರಕಾವ್ಯವಾಗಲು ಕಾಯಬೇಕು, ಪ್ರಾರ್ಥಿಸಬೇಕು. ತಪಸ್ಯೆಯೇ ಎಲ್ಲವನ್ನೂ ತರುವದು. ಶ್ರೀ ಮಾತೆಯಲ್ಲಿ ಆ ಮಹಾ ಚಿಚ್ಛಕ್ತಿ ಅಲ್ಪ ರೂಪದಲ್ಲಿರಲು ಒಪ್ಪಿ ಗೋಚರವಾದುದರಿಂದ ಸ್ವಲ್ಪ ಅಪಚಾರವಾದರೂ ಸಂಕಟಕರ. ಕವನವೇನಾದರೂ ಸಿದ್ಧವಾದರೆ, ಆ ಕವನಕ್ಕೆ "ಸಾಮಾನ್ಯತಾ ಅವತಾರಿಣಿ ಶ್ರೀ ಮಾತಾ ಶತಮಾನೋತ್ಸವ ಮಹಾಪ್ರಗಾಥ" ಎಂದು ಹೆಸರಿಡಬೇಕೆಂದಿದ್ದೇನೆ.

ದಾರಿಸಾಗಿತು. ಮನೆ ಸಮೀಪಿಸಿದೊಡನೆ ಗುರುಗಳಿಗೆ ನಮಿಸಿ ಮನೆ ಸೇರಿದೆ. ಮನಸ್ಸು ಅಂದು ಕೇಳಿದುದನ್ನೇ ನೆನೆಯುತ್ತಿತ್ತು.



೫

೩–೧೧–೫೩ ಬೆಳಗ್ಗೆ ೮-೩೦ರ ಸಮಯ, ಗುರುಗಳ ಮನೆಗೆ ಹೋದೆ. ಮನೆಯ ತೋಟದ ಎಳಬಿಸಿಲಲ್ಲಿ ಕವಿವರ್ಯರು ಅಂತರ್ಮುಖಿಗಳಾಗಿ ಸಂಚರಿಸುತ್ತಿದ್ದರು. ಸ್ವಲ್ಪ ಹೊತ್ತು ತೋಟದಲ್ಲಿ ಸಂಚರಿಸಿ ಮನೆಯ ಮುಂಭಾಗದ ಜಗುಲಿಯ ಕುರ್ಚಿಯಲ್ಲಿ ಕುಳಿತೆವು. ತೋಟದ ಮರಗಳ ಮರೆಯಲ್ಲಿ ದೂರದ ಹಸಿರು ಹೊಲ ಕಾಣಿಸುತ್ತಿತ್ತು. ನೀಲಾಕಾಶದ ಸುದೂರ ದೂರದಲ್ಲಿ ಕೆಲವು ಮೋಡಗಳು ನಿಶ್ಚಿಂತೆಯಿಂದ ತೇಲುತ್ತಿದ್ದವು. ನಾನು ಅವತಾರದ ಮಾತೆತ್ತಿದೆ.

"ನೀನು ಶ್ರೀ ಅರವಿಂದರ 'Essays on the Gita' ಓದು. ಅಲ್ಲಿ ಅವತಾರದ ವಿವರಣೆ ಸಮಗ್ರವಾಗಿದೆ. ಆದರೆ ಓದುವಾಗ 'ಕಂಡು' ಓದಬೇಕು.

"ಶ್ರೀ ಶಾರದದೇವಿಯವರೂ ಅವತಾರವೇ. ತಮ್ಮ ವೈಧವ್ಯವನ್ನೂ ಹೇಗೆ ಭಗವದರ್ಪಿತ ಮಾಡಿದರೆಂಬುದನ್ನು ಅವಲೋಕಿಸಿದರೆ ಆಶ್ಚರ್ಯವಾಗುತ್ತದೆ. ಒಂದು ದೃಷ್ಟಿಯಿಂದ ಶ್ರೀ ರಾಮಕೃಷ್ಣ ಪರಮಹಂಸರೂ, ಶ್ರೀ ಶಾರದಾದೇವಿಯವರೂ ಸತಿಪತಿಯರು. ಮತ್ತೊಂದು ದೃಷ್ಟಿಯಿಂದ ಪರಮೇಶ್ವರ ಪರಮೇಶ್ವರಿಯರು. ಒಂದು ದಿನ ಒಬ್ಬ ಭಕ್ತರು 'ನೀವು ಪಶುಪ್ರಾಣಿಗಳಿಗೂ ಮಾತೆಯೇ?' ಎಂದು ಕೇಳಿದರಂತೆ. ಆಗ ಶ್ರೀ ಮಾತೆ 'ಹೌದು' ಎಂದು ಉತ್ತರ ಕೊಟ್ಟರು. In the midst of pain and suffering she says that she is Sarvamaheswari!

"My poem 'ಆದಿಕವಿ ಸಂಭೂತಿ'—ಅದೊಂದು ಅಂತರ್‌ಸಾಹಸವಾಗುತ್ತದೆ. ಹೊರಗಡೆಯ ವಿಷಯಗಳೇ ಮುಖ್ಯ ವಿಷಯಗಳಾಗುವುದಿಲ್ಲ. ಅನು ಭಾವ,

ರಸಸ್ಥಿತಿಗಳಲ್ಲಿಯೂ ಹೆಚ್ಚಿನ ಸತ್ಯ ವಸ್ತುವಾಗುತ್ತದೆ. ಆದರೆ ಆ ಕಾವ್ಯರೀತಿ ನನಗಿನ್ನೂ ಮಸುಕು! ಏಕ ಅನೇಕವಾಗಿ, ಅನೇಕ ಮತ್ತೆ ಏಕವಾಗುವ ಪೂರ್ಣ ದೃಷ್ಟಿಯ ಪೂರ್ಣವ್ಯಾಪಾರಗಳು ಅನೇಕ ಲೋಕಗಳಲ್ಲಿ ಅನೇಕ ಪ್ರಜ್ಞಾ ವ್ಯಾಪಾರಗಳಲ್ಲಿ, ನಾರಕ ತಿರ್ಯಕ್ ಮೊದಲಾದ ಗತಿಗಳಲ್ಲಿ ಅರಳಿ ಸಂಚರಿಸಬೇಕೆಂದು ಕಾಣುತ್ತದೆ. ಅರಳಿ ಮರದ, ಬೀಜದಲ್ಲಿರುವ ಸಂಕಲ್ಪದಂತೆ ನನಗೆ ಆ ಕಾವ್ಯ ಕಾಣಿಸುತ್ತಿದೆ. ಆ ಕೃತಿ ಏನಾದರೂ ಕೃತಿರೂಪದಲ್ಲಿ ಮೂಡಬೇಕಾದರೆ ಭಗವಂತನ ಕೃಪೆಬೇಕು. It will deal with worlds and images weird and uncommon. ಅದನ್ನು ನನ್ನ ಪ್ರಜ್ಞೆ ನನ್ನ ಪ್ರತಿಭೆ ಹೇಗೆ ಹಿಡಿದಿಡುತ್ತದೆಯೋ ನಾನರಿಯೆ. ಶ್ರೀ ಅರವಿಂದರ ' Future Poetry ' ಓದುತ್ತ ಅವರು ಹೇಳುವುದನ್ನೇ ನಾನು ಯೋಚಿಸುತ್ತಿರುವೆನಲ್ಲವೇ ಎಂದು ಆ ಭಾಗವನ್ನು ಗುರುತಿಸಿದ್ದೇನೆ.

"ಶ್ರೀ ರಾಮಾಯಣದರ್ಶನದಲ್ಲಿ ಹಿಂದಿನ ಘಟನೆಯನ್ನು ದರ್ಶನದ ಅಭಿವ್ಯಕ್ತಿಗಾಗಿ ಉಪಯೋಗಿಸಿದೆ. ಆದರೆ ' ಆದಿಕವಿ ಸಂಭೂತಿ 'ಯಲ್ಲಿ ಯಾವ ಘಟನೆಯನ್ನೂ ತೆಗೆದುಕೊಳ್ಳುವುದಿಲ್ಲ. ಬಹುಶಃ ಈ ಕಾವ್ಯ ದೃಶ್ಯಚಂಪುವಾಗಬಹುದು. ಅಂದರೆ ನಾಟಕ, ಗದ್ಯ, ಕಾವ್ಯ—ಇವುಗಳೆಲ್ಲದರ ಸಮನ್ವಯ. ಮೊದಲನೆಯ ಸರ್ಗ ಬಹುಶಃ ನಾಸದೀಯ ಸರ್ಗವಾಗಬಹುದು. ಆ ಅವ್ಯಕ್ತ ಗರ್ಭದ ಋಷಿಧ್ವನಿ ' ಕೋ ಅದ್ಧಾ ವೇದ ಕ ಇಹ ಪ್ರವೋಚತ್ ' ಹೀಗೆ ಸ್ಮರಿಸಿ ಕೆಳಗಿಳಿಯಬಹುದು. ನನ್ನ ವ್ಯುತ್ಪತ್ತಿ, ಕಲ್ಪನೆ, ಪ್ರತಿಭೆ-ಅದನ್ನು ಕಲ್ಪಿಸಿಕೊಂಡಾಗ ನಡುಗುತ್ತದೆ. ಭಗವಂತನ ಆಶೀರ್ವಾದ, ಕೃಪೆ ಇವುಗಳಿಲ್ಲದಿದ್ದರೆ ಆ ಕಾವ್ಯದ ಉದಯ ಸಾಧ್ಯವಿಲ್ಲ. ಈ ಜನ್ಮದ ಕೃತಿಯೋ ಅಲ್ಲವೋ ಎನಿಸಿದೆ! ಬರೆಯಲಾರದ ಮಹಾಕಾವ್ಯದಿಂದಲೂ ಒಮ್ಮೊಮ್ಮೆ ಮಹಾಕವಿಯಾಗಬಹುದೆಂದು ಕಾಣುತ್ತದೆ!"

ಆಗಲೇ ಸಮಯವಾಗಿತ್ತು. ಕವಿವರ್ಯರು ತಮ್ಮ ಕೆಲಸಗಳಿಗಾಗಿ ಮೇಲೆದ್ದರು. ನಾನು ಅಭಿವಂದಿಸಿ ಮನೆಗೆ ಬಂದೆ. ಈ ಲೌಕಿಕದಿಂದ ಮೇಲೇರಿ ಮನೋಮಯ ವಿಜ್ಞಾನಮಯದಲ್ಲಿ ವಿಹರಿಸಿದರೆ ಚೇತನಕ್ಕೆ ಎನಿತೊಂದು ಆನಂದ, ಎನಿತೊಂದು ಶ್ರೀಮಂತತೆ! ಎಂದು ಯೋಚಿಸುತ್ತಿತ್ತು ಮನಸ್ಸು.

೬

ಸಾಮಾನ್ಯವಾಗಿ ಶ್ರೀ ಕುವೆಂಪು ಅವರು ಮಾತನಾಡುವುದು ಕಡಮೆ. ಒಂದೋ ಎರಡೋ ಮಾತುಗಳಲ್ಲಿ ಹೇಳಬೇಕಾದುದನ್ನು ಹೇಳಿ ಮುಗಿಸುವುದು ಅವರ ಸ್ವಭಾವ. ಆದರೆ, ಒಮ್ಮೊಮ್ಮೆ ಅವರು ಕಾಲವನ್ನು ಮರೆತು ಕೇಳುವವರನ್ನು ಕಾಲಾತೀತವಾದ ಬೇರೊಂದು ಲೋಕಕ್ಕೆಳೆದೊಯ್ಯುತ್ತಾರೆ. ಒಂದು ನಿದರ್ಶನ, ಇಲ್ಲದಿದ್ದರೆ ಪೂರ್ಣ ಮೌನ—ಇದು ಅವರ ಉಪದೇಶದ ರಹಸ್ಯ.

ಉಷಃ ಕಾಲದಲ್ಲಿಯೋ, ಸಂಜೆಯಲ್ಲಿಯೋ ಪ್ರಕೃತಿಯ ವೈಚಿತ್ರ್ಯಮಯ ಸುಂದರ ಸಾನ್ನಿಧ್ಯದಲ್ಲಿ ಸಂಚರಿಸುವುದೆಂದರೆ ಅವರಿಗೆ ಬಹು ಪ್ರೀತಿ. ಅವರ ಮನೆಯಲ್ಲಿ ಅತಿ ಭೋಗವಸ್ತುಗಳಿಗೆ ಅವಕಾಶವಿಲ್ಲ. ಎಲ್ಲವೂ ಸರಳ, ಸುಂದರ, ನಿರ್ಮಲ. ಹೂಗಳೆಂದರೆ ಅವರಿಗೆ ಪ್ರಾಣ. ಅವರ ಮನೆಯ ಸುಂದರ ತೋಟದಲ್ಲಿ ಎನಿತೆನಿತೊ ಹಕ್ಕಿಗಳು ಹಾರಿ ಬಂದು ತಮ್ಮ ಸವಿಗೊರಲಿಂಚರದಿಂದ ಕವಿಹೃದಯವನ್ನು ಸಂತೋಷಗೊಳಿಸುತ್ತವೆ.

ಒಂದು ದಿನ ರಾತ್ರಿ ಎಂಟುಗಂಟೆಯ ಸಮಯಕ್ಕೆ ಗುರುಗಳ ಮನೆಗೆ ಹೋಗಿದ್ದೆ. ಬೆಳುದಿಂಗಳು ಹಾಲು ಚೆಲ್ಲಿತ್ತು. ಮನೆಯ ವಿದ್ಯುದ್ದೀಪಗಳು ಆರಿಸಲ್ಪಟ್ಟಿದ್ದುವು. ಆದರೆ ಮನೆಯ ಬಾಗಿಲು ತೆರೆದಿತ್ತು. ಇದೇನಿದು, ಎಂದು ಸುತ್ತಲೂ ನೋಡಿದೆ. ಬಾನುಲಿಯ ವೀಣಾಧ್ವನಿ ಮನೆಯ ಒಳಗಿನ ರೇಡಿಯೋ ಮೂಲಕ ಮಂದ ಮಂದವಾಗಿ ತೋಟವನ್ನು ತುಂಬುತ್ತಿತ್ತು. ವೀಣಾಧ್ವನಿಯನ್ನು ಆಲಿಸುತ್ತ ಕವಿವರ್ಯರು ತೋಟದ ಮರದ ನೆರಳಿನಲ್ಲಿ ಕುರ್ಚಿಯ ಮೇಲೆ ಕುಳಿತಿದ್ದರು. ನನಗೂ ಒಂದು ಕುರ್ಚಿಯನ್ನು ತರಹೇಳಿ ಕುಳಿತುಕೊಳ್ಳುವಂತೆ ಸನ್ನೆಮಾಡಿದರು. ನಾನೂ ಕುಳಿತೆ. ಶಾಂತವಾಗಿ ಸಂಗೀತದ ನಾದಮಯ ಲೋಕದಲ್ಲಿ ನನ್ನ ಚೇತನ ಸುಳಿಯ ತೊಡಗಿತು. ಗುರುಗಳು ಮೌನವಾಗಿಯೇ ಇದ್ದರು. ದಾರಿಯಲ್ಲಿ ಹೋಗುವವರ ಕಿವಿಯೊಡೆಯುವಂತೆ ರೇಡಿಯೋ ತಿರಿಗಿಸುವ ರೀತಿಗೂ ಈ ನಿರ್ಮಲ ರಸರೀತಿಗೂ ಎಷ್ಟು ವ್ಯತ್ಯಾಸ! ಎಂದು ಯೋಚಿಸಿದೆ. ವೈಜ್ಞಾನಿಕ ವಸ್ತುಗಳನ್ನು ದೈವೀ ರೀತಿಯಲ್ಲಿ ಉಪಯೋಗಿಸಿದರೆ ಜೀವನ ಎಷ್ಟು ಪ್ರಶಾಂತಮಯ, ಆನಂದಮಯ ಎಂದು ಯೋಚಿಸಿದೆ. ಅಂದು ಶ್ರೀ ಕುವೆಂಪು ನನಗಿತ್ತ ಉಪದೇಶ ಆ ಮೌನಗೀತ.

ಶ್ರೀ ಗುರುವಿನ ಅಗ್ನಿಸ್ಪರ್ಶ, ಜೀವದ ಜಡವನ್ನು ಹೇಗೆ ಪರಿವರ್ತಿಸಬಹುದೆಂಬುದನ್ನು ಈ ಸಂದರ್ಶನದ ಕಿಂಚಿತ್ ದರ್ಶನದಿಂದ ಕಾಣಬಹುದು. ಅನಂತದೆಡೆಗೆ ಪ್ರಯಾಣ ಹೊರಟ ಜೀವಕ್ಕೆ ದಾರಿತೋರುವ ಮಹಾಶಕ್ತಿ ಗುರು. ಅಜ್ಞಾನದ ಅಂಧಕಾರದಲ್ಲಿರುವ ಜೀವವನ್ನು ಮಹಾಪುರುಷರತ್ತ, ಸಾಕ್ಷಾತ್ಕಾರದತ್ತ ಮುನ್ನಡೆಸುವ ಗುರು ಲಭಿಸುವುದೂ ಭಗತ್ಕೃಪೆಯಿಂದಲೇ. ಅಂತಹ ಪುಣ್ಯಪ್ರದವಾದ ಅವಕಾಶವನ್ನು ಸದುಪಯೋಗ ಪಡಿಸಿಕೊಳ್ಳುವ ಸಾಧಕನೇ ಧನ್ಯ. ಶ್ರೀಕುವೆಂಪುರವರ ಗುರುತ್ವ ಬಹು ಮುಖವಾದುದು. ಗುರುಸಂದರ್ಶನದ ಈ ಸ್ವಲ್ಪ ಪರಿಚಯ ಆ ಬಹುತ್ವವನ್ನು ಹಣತೆ ಬೆಳಕಿನಲ್ಲಿ ತೋರುವ ಪ್ರಯತ್ನ!



# ಪರಮಹಂಸರ ವಾತ್ಸಲ್ಯವಕ್ಷದಲ್ಲಿ

## ಪ್ರಭುಶಂಕರ

ಕಳೆದ ಶತಮಾನದ ಮಧ್ಯಭಾಗದಲ್ಲಿ ದಕ್ಷಿಣೇಶ್ವರದ ದೇವಗಂಗೆಯಲ್ಲಿ ವಿಕಸಿತವಾದ ಕೋಟಿದಳದ ಪರಮಹಂಸಮಹಾಪದ್ಮ ತನ್ನ ಹೃದಯದ ಅಮೃತ ಮಕರಂದ ಪಾನಕ್ಕಾಗಿ ಸಹಸ್ರಾರು ಭೃಂಗಗಳನ್ನು ತನ್ನ ಮೌನ ಸೌರಭವಾಣಿಯಿಂದ ಆಹ್ವಾನಿಸಿತು. ಹತ್ತಿರದಿಂದ, ದೂರದಿಂದ, ಪೂರ್ವದಿಂದ, ಪಶ್ಚಿಮದಿಂದ, ಲೋಕ ವಿಖ್ಯಾತಿಯನ್ನು ಪಡೆದ, ಪಡೆಯಲಿರುವ, ಅಖ್ಯಾತಿಯ ಪರಮರಕ್ಷೆಯಲ್ಲೇ ಮಹತ್ತಿನ ಶಿಖರವನ್ನು ಮುಟ್ಟಿದ, ಮುಟ್ಟಬೇಕಾದ, ವರ್ತಮಾನದ ಭವಿಷ್ಯತ್ತಿನ ಅಸಂಖ್ಯಾತ ದಿವ್ಯಚೇತನಗಳು ತಮ್ಮ ಅನಂತಜನ್ಮಗಳ ಸಂಸ್ಕಾರಪರಿಪಕ್ವತೆಯ ಏಕೈಕ ಗುಣದಿಂದ, ಅರ್ಹತೆಯಿಂದ, ಮೌನವಾಗಿಯೇ ಬಂದ ಈ ಆಹ್ವಾನವಾಣಿಗೆ ಎದೆ ತೆರೆದು, ಹೃದಯ ತುಂಬಿ ಝೇಂಕರಿಸಿ ಬಳಿಸಾರಿದುವು. ಆ ದೇವಗಂಗೆಯಲ್ಲಿ ಮಿಂದು ಪುನೀತವಾಗಿ, ಆ ದೇವ ಮಕರಂದವನ್ನು ಸವಿದು ತೃಪ್ತವಾದುವು. ಕೆಲವು ಉನ್ಮತ್ತವಾಗಿ ಹಾಡಿದುವು; ಮತ್ತೆ ಕೆಲವು ಬ್ರಹ್ಮಾನುಭೂತಿಯ ಮಹತ್ತಿನಿಂದ ಮೌನವಾದುವು.

ಇಲ್ಲಿ, ದೂರದ ದಕ್ಷಿಣದಲ್ಲಿ, ಮಲೆನಾಡಿನ ಶ್ರೀಮಂತಗರ್ಭದಲ್ಲಿ, ಭೀಷ್ಮ ಸುಂದರ ಪ್ರಕೃತಿ ತನ್ನ ಚೇತನ ಸಮಸ್ತವನ್ನೂ ಪ್ರಪ್ರಥಮ ಬಾರಿಗೆ ಮಹತ್ಪ್ರಮಾಣದಲ್ಲಿ ಒಂದು ವಾಣಿಯಲ್ಲಿ ಹಾಡುವ ಮಹಾ ಪ್ರಯತ್ನದಲ್ಲಿತ್ತು. 'ವ್ಯೋಮ ಮಂಡಿತ ಸಹಸ್ರ ಶೈಲಾಗ್ರ'ಗಳನ್ನು ಅನಂತ ವಿಸ್ತೃತ ಮಹಾಶ್ಯಾಮಲಾರ್ಣವಗಳನ್ನು, ಪ್ರಳಯ ಸಮನಾದ ತನ್ನ 'ಮುಸಲ ವರ್ಷಧಾರೆ'ಗಳನ್ನು ನೆತ್ತರಿನೊಡನೆ ತನ್ನ ದೇಹದ ಧಮನಿ ಧಮನಿಗಳಲ್ಲೂ ಧರಿಸಬಲ್ಲ, ಅಪೂರ್ವ ಮನೋಹರವಾದ ತನ್ನ ಶೃಂಗಗಳಲ್ಲಿ ಸಂಗಮಿಸುವ ಉದಯಾಸ್ತಗಳ ವೈಭವವನ್ನು ತನ್ನ ಹೃದಯದಲ್ಲಿ ತಳೆಯಲು ಸಮರ್ಥವಾದ, ತನ್ನಾತ್ಮದಲ್ಲಿ ಅವನಾತ್ಮವನ್ನು ಲೀನಗೊಳಿಸಬಲ್ಲ ಒಂದು ಮಹಾ ಚೇತನದ ಉದಯಕ್ಕಾಗಿ ಅದು ಹಾರೈಸುತ್ತಿತ್ತು.

ಅಲ್ಲಿ, ಅದರ ಹೃದಯದಲ್ಲಿ, ಕಿರುದುಂಬಿಯೊಂದು ಉದಯಿಸಿತು. ಹೂವಿನಿಂದ ಹೂವಿಗೆ ಹಾರಿ ಮಕರಂದಪಾನದಲ್ಲಿ ತೊಡಗಿತು. ಒಂದು ಬಳ್ಳಿಯಿಂದ ಮತ್ತೊಂದಕ್ಕೆ, ಒಂದು ಗಿಡದಿಂದ ಮತ್ತೊಂದು ಗಿಡಕ್ಕೆ, ಒಂದು ಪರ್ವತ ಪಂಕ್ತಿಯಿಂದ ಮತ್ತೊಂದು ಪರ್ವತ ಪಂಕ್ತಿಗೆ ಮಕರಂದವನ್ನು ಅರಸುತ್ತಾ ಹಾರಿತು. ಆದರೆ ಯಾವುದರಿಂದಲೂ ಅದಕ್ಕೆ ತೃಪ್ತಿ ದೊರೆಯಲಿಲ್ಲ. ಏಕೆಂದರೆ ಅವುಗಳಿಗೆಲ್ಲ ಮಧುತ್ವವನ್ನು ನೀಡುವ ಶಕ್ತಿಯ ಪರಿಚಯ ಅದಕ್ಕೆ ಇನ್ನೂ ಆಗಿರಲಿಲ್ಲ. ಅದರ ಪರಿಚಯವಿಲ್ಲದೆ ಈ ಎಲ್ಲ ಅದ್ಭುತವಾದರೂ ಅಸ್ಪಷ್ಟವಾಗಿ ತೋರಿತು. ಕೊನೆಗೆ, ಕೊಟ್ಟಕೊನೆಗೆ ದೂರದ ದಕ್ಷಿಣೇಶ್ವರದ ದೈವೀಪಂಕಜದ ಸೌರಭಲಾಭ ಇದಕ್ಕಾಯಿತು :

ನಿನ್ನಡಿದಾವರೆಯಲಿ ಹೂ ಕುಡಿಯುವ
　　ಮರಿದುಂಬಿಯು ನಾನು ;
ಹೇ ಗುರುದೇವನೆ, ನೀನೆನ್ನಾತ್ಮಕೆ
　　ಮಧುಮಾಸದ ಜೇನು !
ವಿವಿಧ ಪಯೋಜದಿ ವ್ಯರ್ಥಾಯಾಸದಿ
　　ತೊಳಲಿದೆ ತೃಪ್ತಿಯ ಚಿರನಿಧಿಗೆ ;
ಬಾಯಾರಿಕೆಯಿಂದೆದೆ ಕುದಿಗೊಂಡಿರೆ
　　ಮೈದೋರಿದೆಯೈ ನೀ ತುದಿಗೆ ! *

ಮೊದಲು ತನಗಿಂತ ಅನಂತಪಾಲು ಭವ್ಯವಾಗಿದ್ದದ್ದು, ದೈತ್ಯ ಭೀಷಣವಾಗಿದ್ದದ್ದು, ಈತನ ವ್ಯಕ್ತಿತ್ವವನ್ನು ಕ್ಷಣಾರ್ಧದಲ್ಲಿ ನುಂಗಿ ನೊಣೆಯಬಲ್ಲುದಾಗಿದ್ದುದು, ಈಗ, ಈ ಮೈದೋರಿಕೆಯ ಬಳಿಕ, ಈತ ತನಗಿಂತ ಭವ್ಯವಾಗಿ ಬೆಳೆದುದನ್ನು ಕಂಡು, ಕಿರುದುಂಬಿಯೊಂದು ಆತ್ಮವೈನತೇಯನಾಗಿ ಪರಿವರ್ತನೆ ಹೊಂದಿದುದನ್ನು ಕಂಡು, ತನ್ನ ಸೌಮ್ಯತೆಯನ್ನು ತೋರಿ, ತನ್ನ ಹೃದಯವನ್ನು ಸೂರೆಗೊಟ್ಟು, ಸಖಿಯಾಗಿ ಒಡನಾಡಿ, ಮಾತೆಯಾಗಿ ಮೈದಡವಿ, ತನ್ನ ಒಲವಿನ ಕೊಳಲಾಗಿ, ವೀಣೆಯಾಗಿ, ಪಾಂಚಜನ್ಯವಾಗಿ ಈತನ ವ್ಯಕ್ತಿತ್ವವನ್ನು ಉಪಯೋಗಿಸಿಕೊಂಡಿತು.

" ಕವಿಧಮನಿಯ ರಕುತದಲ್ಲಿ
ತೇಲಾಡಿತು ಹಿಮಾಲಯ ;
ಉಚ್ಛ್ವಾಸದಿ ಸ್ಪಂದಿಸಿತಾ
ಸಹ್ಯಾದ್ರಿಯ ಅರಣ್ಯಚಯ ! †

ಇದಾದ ಬಗೆಯೋ !

" ಚಿದ್ರೂಪಿಣಿ ಭವತಾರಿಣಿ ಉತ್ತರೋತ್ತರೇ
ಕವಿಯನೆತ್ತಿ ರಕ್ಷಿಸಲ್ಕೆ
ಬಂದಳಿತ್ತ ದಕ್ಷಿಣಕ್ಕೆ
ಶ್ರೀ ವಿವೇಕ ಪರಮಹಂಸ ದಕ್ಷಿಣೇಶ್ವರೇ :
ಕಣ್ದೆರೆಯಿತು ಬೋಧನಾ
ಗರಿಗೆದರಿತು ಸಾಧನಾ
ಅಲೋಕಲೋಕ ಯಾತ್ರಿಯಾಯ್ತು ದಿವ್ಯದರ್ಶನ.
ಲಲಿತಾದ್ರಿಯ ಲಲಿತಸಂಗ
ಚಾಮುಂಡಿಯ ರುದ್ರರಂಗ

---

*ಅಗ್ನಿಹಂಸ ಪುಟ ೩ ನಿನ್ನಡಿದಾವರೆಯಲಿ †ವಿಶ್ವವಿದ್ಯಾನಿಲಯೆ ಭಗವತಿ ಶ್ರೀ ಸರಸ್ವತಿಗೆ ಪ್ರ. ಕ. ಸಂ. ೩೨. ಸಂ. ೪

ಕಾರಂಜಿಯು ಜಲ ತರಂಗ
ತಾವಾದುವು ವಿದ್ಯಾಂಬಿಕೆಯಂತರಂಗ!
ಬಾನಾದುದು ಭಗವಂತನ ಮಾನಸ ಚಿದ್ರೂಪ;
ಬುವಿಯಾದುದು ಭಗವತಿಯ ಮೈತ್ರಿಯ ಮೃದ್ರೂಪ
ಜಗವೆಲ್ಲವು ತಾನಾದುದು ರಸಲೀಲಾರೂಪ!
ರಸದೃಷ್ಟಿಗೆ ಬ್ರಹ್ಮಾಂಡವೆ ಋತಚಿನ್ಮಯ ಕಾವ್ಯಮಯ:
ಅನುಭಾವದ ವಿಜ್ಞಾನಕೆ ಅನ್ನವು ಆನಂದಮಯ! ‡

ಜಗನ್ಮಾತೆ ಕವಿಯನ್ನೆತ್ತಿ ರಕ್ಷಿಸುವುದಕ್ಕಾಗಿ ದಕ್ಷಿಣಕ್ಕೆ ಅವತರಿಸಿ ಬಂದಳು! ಪರಮಹಂಸ ಕೃಪಾರೂಪಿಣಿಯಾಗಿ ಬಂದಳು!

ಪರಮಹಂಸರು ಜನ್ಮತಃ ಪವಾಡದ್ವೇಷಿ. ಯಾವ ವಿಧದಿಂದಲೂ ಪವಾಡ ಪ್ರದರ್ಶಿತವಾಗಬಾರದು ಎಂಬುದು ಅವರ ಜೀವನದ ನಿಯಮ, ಶಿಷ್ಯರಿಗೆ ಅಪರಿತ್ತ ಉಪದೇಶ. ಕಲ್ಲನ್ನು ರೊಟ್ಟಿಯನ್ನಾಗಿ ಮಾಡುವ, ಸತ್ತವನನ್ನು ಬದುಕಿಸುವ ಸಾಮಾನ್ಯ ಜನಮನೋರಂಜನೆಯ ಪವಾಡಗಳನ್ನು ಅವರು ಹೃತ್ಪೂರ್ವಕವಾಗಿ ದ್ವೇಷಿಸಿದರು.

ಆದರೆ ಬಳಿಗೆ ಬಂದ ಭಕ್ತಹೃದಯಗಳನ್ನು ಭಗವದನುಭೂತಿಗೆ ಸಿದ್ಧಗೊಳಿಸುವ ಒಂದು ವಿಷಯದಲ್ಲಿ ಮಾತ್ರ ತಮ್ಮ ಈ ಕಠೋರನಿಯಮವನ್ನು ಅವರು ಮುರಿಯುತ್ತಿದ್ದರು—ಮಹದುದ್ದೇಶಕ್ಕಾಗಿ ಭಗವಂತ ಅಪರೂಪವಾಗಿ ತನ್ನ ನಿಯಮಗಳನ್ನು ಒಮ್ಮೊಮ್ಮೆ ತಾನೇ ಮುರಿಯುವಂತೆ. ಸ್ಪರ್ಶನೋಟಗಳಿಂದ ಆ ಜೀವಿಗಳು ತಮ್ಮ ಚೇತನವನ್ನು ಮುತ್ತಿರುವ ಕರ್ಮಪಾಶಗಳ ಪರಂಪರೆಯನ್ನು ಕಳೆದುಕೊಂಡು ಅತ್ಯಮೋಘವಾದ ಆಧ್ಯಾತ್ಮಿಕ ಅನುಭವಗಳನ್ನು ಪಡೆಯುವುದಕ್ಕೆ ತಕ್ಕ ಪಾತ್ರಗಳಾಗುವಂತೆ ಮಾಡುವುದರಲ್ಲಿ ಮಾತ್ರ ಪವಾಡವೆಂದು ನಮ್ಮ ಕಣ್ಣಿಗೆ ತೋರುವಂತಹ ರೀತಿಯಲ್ಲಿ ಅವರು ವರ್ತಿಸುತ್ತಿದ್ದುದುಂಟು.

ಪರಮಹಂಸರ ಜೀವನಾನಂತರ ನಡೆದಿರುವ ಅನೇಕ ಪವಾಡಗಳಲ್ಲಿ ಅತ್ಯಂತ ಆನಂದದಾಯಕವಾದದ್ದು ಕುವೆಂಪು ಸೃಷ್ಟಿ.

ನಲವತ್ತು ವರ್ಷಗಳಷ್ಟು ಹಿಂದೆ ಅಕ್ಷರ ವಿದ್ಯೆ ಮಲೆನಾಡಿನ ಕಾರ್ಗತ್ತಲೆಯನ್ನು ಪ್ರವೇಶಿಸಲು ಹಿಂಜರಿಯುತ್ತಿದ್ದ ಆ ಕಾಲದಲ್ಲಿ ಪರಮಹಂಸಕೃಪೆಯ ಕಿರಣ ಅದನ್ನು ಹೊಕ್ಕು ಕವಿಶಿಶುವನ್ನು ಹೊರಕ್ಕೆಳೆದು ತಂದು ಆತನಲ್ಲಿ ಮಹಾಪರಿವರ್ತನೆಯನ್ನು ಉಂಟುಮಾಡಲು ತೊಡಗಿತು.

ಶ್ರೀ ಕೆ. ವಿ. ಪುಟ್ಟಪ್ಪನವರನ್ನು ಕುವೆಂಪುವನ್ನಾಗಿ ಮಾರ್ಪಡಿಸಿತು. ಜಗತ್ತಿನ ಆಧ್ಯಾತ್ಮದ ಇತಿಹಾಸದಲ್ಲಿ ನರೇಂದ್ರ ಸ್ವಾಮಿ ವಿವೇಕಾನಂದರಾದದ್ದು ಎಂತಹ ಮಹತ್ವದ ಘಟನೆಯೋ ಸಮಗ್ರ ಕನ್ನಡ ಸಾಹಿತ್ಯದ ಇತಿಹಾಸದಲ್ಲಿ ಪುಟ್ಟಪ್ಪ ಕುವೆಂಪು

‡ವಿಶ್ವವಿದ್ಯಾನಿಲಯದ ಭಗವತಿ ಶ್ರೀ ಸರಸ್ವತಿಗೆ ಪ್ರ. ಕ. ಸಂ. ೩೨. ಸಂ. ೪

ವಾದದ್ದು ಅಷ್ಟೇ ಮಹತ್ವದ ಘಟನೆ ಎಂಬುದು ಅದ್ಯತನದ ಖಂಡದೃಷ್ಟಿಯನ್ನು ಮೀರಿನಿಲ್ಲುವ ಪೂರ್ಣದೃಷ್ಟಿಗೆ ಸರ್ವಗ್ರಾಹ್ಯವಾದ ಸತ್ಯವಾಗಿ ಗೋಚರವಾಗುತ್ತದೆ. ಎರಡು ಘಟನೆಗಳ ಹಿಂದೆಯೂ ಒಂದೇ ಮಹಾಶಕ್ತಿ ಕ್ರಿಯಾಭಿಮುಖವಾಗಿರುವುದು ಸ್ಪಷ್ಟವಾಗುತ್ತದೆ.

ಪರಮಹಂಸರ ಜೀವನ–ಉಪದೇಶಗಳ ಪರಿಚಯವಾಗುವ ಮೊದಲು ಭಾರತದ ಅಂತರಂಗದಲ್ಲಿ ಸದಾ ಪ್ರವಹಿಸುತ್ತಿರುವ ಧರ್ಮ ಪ್ರವಾಹದ ಪರಿಚಯ ಪುಟ್ಟಪ್ಪನವರಿಗೆ ಇರಲಿಲ್ಲವೆಂದಲ್ಲ. ಅನಂತತೆಯ ಆಕಾಂಕ್ಷೆ ಅಸ್ಪಷ್ಟವಾಗಿ ಅವರ ಹೃದಯದಲ್ಲಿತ್ತು. ಇಲ್ಲಿ ಅಲ್ಲಿ, ಅಲ್ಲಿ ಇಲ್ಲಿ ಅದು ತನ್ನ ಬುದ್ಧಿಯ ಪಂಜವನ್ನು ಮುಂದೆಸೆದು ಸಿಕ್ಕಿದುದೆಲ್ಲವನ್ನೂ ಕೆದಕುತ್ತಲೇ ಇತ್ತು. ಹಿರಿಯ ಅಯಸ್ಕಾಂತದ ಆಕರ್ಷಣೆಗೆ ಸಿಲುದಕಿ ಅನುಭವವನ್ನು ಅವರ ಹೃದಯ ಪಡೆಯುತ್ತಲೇ ಇತ್ತು. 'ಅನಂತತೆಯನ್ನು ಯಾವಾತ ಅರಿಸಿಕೊಳ್ಳುತ್ತಾನೆಯೋ ಅನಂತತೆ ಆತನನ್ನು ಅರಿಸಿಕೊಂಡಿದೆ' ಎನ್ನುತ್ತಾರೆ ಶ್ರೀ ಅರವಿಂದರು. ಪುಟ್ಟಪ್ಪನವರು ಅತೀತಶಕ್ತಿಯ ಆಶ್ರಯಕ್ಕಾಗಿ ತಮ್ಮ ಬಾಹುಗಳನ್ನು ಅನೇಕ ಕಡೆಗಳಿಗೆ ಹರಹಿ ಅರಸುತ್ತಿರುವಾಗ ಆ ದಿವ್ಯಶಕ್ತಿ ತನ್ನ ಈ ಕಂದನಿಗೆ ಆಶ್ರಯ ನೀಡಲು ಸಮಯವನ್ನು ಕಾಯುತ್ತಿತ್ತು.

ಸುಮಾರು ೧೯೨೫ ರಲ್ಲಿ ಪುಟ್ಟಪ್ಪನವರು ಮೊದಲನೆಯ ವರ್ಷದ ಬಿ.ಎ. ತರಗತಿಯಲ್ಲಿ ಓದುತ್ತಿದ್ದ ದಿನಗಳಲ್ಲಿ ನಡೆದ ಒಂದು ಘಟನೆ. ಆ ವೇಳೆಗೆ ಪುಟ್ಟಪ್ಪನವರಿಗೆ ಮೈಸೂರಿನಲ್ಲಿ ಸ್ಥಾಪಿತವಾಗಿದ್ದ ಶ್ರೀ ರಾಮಕೃಷ್ಣಾಶ್ರಮದ ಪರಿಚಯವಾಗಿತ್ತು. ವಿವೇಕಾನಂದರ ಸಿಂಹವಾಣಿ ಮೊಳಗಿ ಕಾಲು ಶತಮಾನದಷ್ಟು ಕಳೆದು ನಾಡಿನ ತುಂಬ ಆ ವಾಣಿ ಅನುರಣಿತವಾಗುತ್ತಿದ್ದುದು ಕೇಳಿಬರುತ್ತಿತ್ತು. ಅದು ಎಲ್ಲ ತರುಣ ಹೃದಯಗಳನ್ನೂ ಸೆರೆಹಿಡಿದು ಅಲ್ಲಿ ಮಹಾಕ್ರಾಂತಿಯನ್ನೆಬ್ಬಿಸಿತ್ತು. ಅದಕ್ಕೆ ಪ್ರತಿತುಡಿತವನ್ನು ನೀಡಿದ ಹೃದಯಗಳಲ್ಲಿ ಪುಟ್ಟಪ್ಪನವರದೂ ಒಂದು. ತನ್ನ ಅನ್ವೇಷಣೆಯಲ್ಲಿ ಮುಂದುವರಿದ ಅದು ಶ್ರೀ ರಾಮಕೃಷ್ಣಾಶ್ರಮವನ್ನು ಕಂಡಿತು.

ಆಗ ಪುಟ್ಟಪ್ಪನವರ ವಾಸ ಸಂತೇಪೇಟೆಯ ಒಂದು ಹೋಟೇಲಿನ ಕೊಠಡಿಯಲ್ಲಿ–ಅವರೇ ವರ್ಣಿಸುವಂತೆ 'ಚಟ್ಟದಷ್ಟಗಲದ ಒಂದು ಕೊಠಡಿಯಲ್ಲಿ!' ಪ್ರಶಾಂತಿಗೆ ಒಲಿದ ಇವರ ಚೇತನ ಆ ಸಂತೆಯ ನಡುವೆ, ಗಾಳಿಬೆಳಕುಗಳಿಗೆ ಹಗೆಯಾದ ಕಿರುಕೋಣೆಯಲ್ಲಿ ಹೇಗೆ ದಿನಕಳೆಯುತ್ತಿತ್ತೊ ಭಗವಂತನಿಗೇ ಗೊತ್ತು!

ಅಂದಿನ ದಿನಗಳಲ್ಲಿ ಆಶ್ರಮದ ಅಧ್ಯಕ್ಷರು ಸ್ವಾಮಿಸಿದ್ಧೇಶ್ವರಾನಂದರು. ವಾತ್ಸಲ್ಯವೇ ಮೈವೆತ್ತಂತಹ ಸ್ವಾಮಿ. ಆಶ್ರಮಕ್ಕೆ ಬಂದುಹೋಗಿ ಮಾಡುತ್ತಿದ್ದ ಈ ವರ್ಚಸ್ವೀ ತರುಣನನ್ನು ಕಂಡರೆ ಅವರಿಗೆ ಅಪಾರ ಪ್ರೇಮ. ಮುಂದೆ ಈ ಪ್ರೇಮ ಬೆಳೆದು ಪುಟ್ಟಪ್ಪನವರು ಅವರಿಗೆ ಆಧ್ಯಾತ್ಮಿಕ ಪುತ್ರನಂತೆಯೇ ಆದರು!

ಆಗಲೇ ಮೈಸೂರಿಗೆ ಹೊಸದಾಗಿ ಬಂದಿದ್ದು, ಬನುಮಯ್ಯನವರ ಕೊಲಿಜಿಯೇಟ್ ಹೈಸ್ಕೂಲಿನಲ್ಲಿ ಉಪಾಧ್ಯಾಯರಾಗಿದ್ದರು ಶ್ರೀ ನಾ. ಕಸ್ತೂರಿ. ಅವರಿಗೂ

ಸ್ವಾಮಿಗಳಿಗೂ ತುಂಬ ಸ್ನೇಹ. ಇಬ್ಬರಿಗೂ ಪುಟ್ಟಪ್ಪನವರಲ್ಲಿ ತುಂಬು ಅಕ್ಕರೆ. ಇವರು ಬರೆಯುತ್ತಿದ್ದ ಸಿರಿಗನ್ನಡದ ಕವನಗಳನ್ನು, ಕನ್ನಡದ ಗಂಧವೇ ಇಲ್ಲದ ಆ 'ಮಲೆಯಾಳಿ'ಗಳು, ಇವರಿಂದ ಓದಿಸಿ ಕೇಳಿ ಆನಂದವನ್ನು ಸೂಸಿ ಇನ್ನೂ ಇನ್ನೂ ಬರೆಯುವಂತೆ ಪ್ರೋತ್ಸಾಹಿಸುತ್ತಿದ್ದರು.

ಒಂದು ಸಲ ಇದ್ದಕ್ಕಿದ್ದಂತೆಯೇ ಈ ಹುಡುಗ ಒಟ್ಟಿಗೇ ನಾಲ್ಕಾರು ದಿನ ಆಶ್ರಮಕ್ಕೆ ಬರಲಿಲ್ಲ. ಸ್ವಾಮಿಜಿಗೂ ಶ್ರೀ ಕಸ್ತೂರಿಯವರಿಗೂ ಆಶ್ಚರ್ಯವಾಯಿತು. ಆಶ್ಚರ್ಯ ಕಾತರಕ್ಕೆ ಎಡೆಗೊಟ್ಟಿತು. ಸರಿ, ಕಸ್ತೂರಿಯವರು ಹುಡುಕಿಕೊಂಡು ಹೊರಟರು. ತಮ್ಮ ಕೋಣೆಯಲ್ಲಿ ಇವರು ಬೇಯುವ ಜ್ವರದಲ್ಲಿ ಮಲಗಿದ್ದಾರೆ. ಕಸ್ತೂರಿಯವರು ಅವರನ್ನು ಅಲ್ಲಿಂದಾಗಲೇ ಆಸ್ಪತ್ರೆಗೆ ಸಾಗಿಸಿದರು. ಅಂದಿನ ದಿನವೇ ಶ್ರೀ ಕಸ್ತೂರಿಯವರೂ ಅವರ ಉಳಿದ ಕೆಲವರು ಗೆಳೆಯರೂ ಸೇರಿ ಸ್ಥಾಪಿಸಿದ್ದ 'ಶ್ರೀ ವಿವೇಕಾನಂದ ಸ್ಕೌಟ್ ದಳ'ದ ಮೊದಲನೆಯ ಗುಡ್‌ಟರ್ನ್ ಇದು!

ಕೆಲವು ದಿನಗಳಲ್ಲಿ ಜ್ವರ ಇಳಿದು ಪುಟ್ಟಪ್ಪನವರು ಗುಣಮುಖರಾಗುತ್ತಾ ಬಂದರು. ವೈದ್ಯರು ಇನ್ನು ಮನೆಗೆ ಹೋಗಬಹುದು ಎಂದರು. ಆದರೆ ಈಗ ಮನೆ ಮಠವಾಗಿತ್ತು! ಏಕೆಂದರೆ ಇನ್ನು ಮುಂದೆ ಪುಟ್ಟಪ್ಪನವರು ಆಶ್ರಮದಲ್ಲಿಯೇ ಇರಬೇಕು ಎಂಬುದು ಸ್ವಾಮೀಜಿಯಿಂದ ನಿಶ್ಚಿತವಾಯಿತು. ಸಂತೇಪೇಟೆಯ ಕೊಠಡಿ ಸೊರಗಿತು!

ಇಲ್ಲಿಂದ ಮುಂದೆ ಹನ್ನೆರಡು ವರ್ಷಗಳಷ್ಟು ದೀರ್ಘಕಾಲ ಆಶ್ರಮ ಅವರಿಗೆ ತನ್ನ ಮಮತೆಯ ಮಾತೃವಕ್ಷದಲ್ಲಿ ತಾವನ್ನು ನೀಡಿತು. ಪರಮಹಂಸರು ತಮ್ಮ ಅಮೃತ ಹಸ್ತಗಳಿಂದ ಈ ಮುದ್ದುಕಂದನನ್ನು ಎತ್ತಿಕೊಂಡರು, ಅವರನ್ನು ಲೋಕದಪಾಲಿಗೆ ಇಲ್ಲಗೈಯುವುದಕ್ಕಾಗಿಯಲ್ಲ; ಅದರ ಬದಲು ಪೋಷಿಸಿ, ಜಗತ್ತಿನ ಅನಂತ ಮುಖವಾದ ದುಷ್ಟಶಕ್ತಿಗಳಿಂದ ಅವರನ್ನು ರಕ್ಷಿಸಿ, ಪೂರ್ಣನನ್ನಾಗಿಸಿ ಮತ್ತೆ ಜಗತ್ತಿಗೆ ನೀಡುವುದಕ್ಕಾಗಿ! ಇವರು ಸಂನ್ಯಾಸಿಯಾಗುತ್ತಾರೆ ಎಂದು ಕೆಲವರು ಹೆದರಿ ಮಠವನ್ನು ದೂಷಿಸಿದರು, ಸಂನ್ಯಾಸಿಯಾಗಲಿಲ್ಲವಲ್ಲ ಎಂದು ಕೆಲವರು ಕೊರಗಿದರು. ಇಬ್ಬರನ್ನೂ ಕಂಡು ಪರಮಹಂಸರು ಮುಗುಳುನಗೆ ನಕ್ಕರು! ಅಂತರಂಗದ ತ್ಯಾಗ ಸಂನ್ಯಾಸಕ್ಕಿಂತ ದೊಡ್ಡದು ಎಂಬ ಗೀತೆಯ ಮೂಲಮಂತ್ರವನ್ನು ಅರಿತವರು ಮಾತ್ರ ಕಿರಿಯ ಸಂನ್ಯಾಸಿಯಾಗಿ ಒಳಹೊಕ್ಕ ಇವರು ಹಿರಿಯ ಸಂನ್ಯಾಸಿಯಾಗಿ ಹೊರಕ್ಕೆ ಬಂದುದನ್ನು ಕಂಡು ಸುಖಿಸಿದರು. ಅವರೇ ಒಂದು ಕಡೆ ಹೇಳಿದ್ದಾರೆ.*

ಆಶ್ರಮದಲ್ಲಿ ಹನ್ನೆರಡು ವರ್ಷಗಳು ಅವರಿಗೆ ತಪಸ್ಸಿನ ಕಾಲವಾಯಿತು. ಮುಂದೆ ಅವರ ಜೀವನದ ಮಹಾಕಾವ್ಯಕ್ಕೆ ಅದು ಅತಿಭದ್ರವಾದ ತಳಹದಿಯನ್ನು ನೀಡಿತು. ಮತಕೋಮುಗಳ ದುಷ್ಟ ಸರ್ಪಗಳನ್ನು ಮೆಟ್ಟಿನಿಂತು, ಕಾಲ ದೇಶಗಳ ಎಲ್ಲೆಯನ್ನು

---

*"ನನ್ನದು ಕಾವಿಯ ದಾರಿಯಲ್ಲ; ಸಂಸಾರಿಯ ದಾರಿಯಲ್ಲ. ನನ್ನದು ಮೂರನೆಯ ದಾರಿ: ನಾನು ಮುರಾರಿ." ಕಿಂಕಿಣಿ: ನಾನು ಮುರಾರಿ! ಪು ೨೭

ಮೀರಿ ಬೆಳೆದು ವಿಶ್ವತೋವಿಶಾಲವಾದ ವಿಶ್ವದರ್ಶನವನ್ನು ಒಳಗೊಳ್ಳುವ ಮನಸ್ಸು ರೂಪಿತವಾದದ್ದು ಈ ಕಾಲದಲ್ಲಿಯೆ.

ಪರಮಹಂಸರ ಒಲುಮೆ ಕರುಣೆಗಳು ಒಂದು ವ್ಯಕ್ತಿಯಲ್ಲಿ ಮೈದಳೆದು ಇವರನ್ನು ಪ್ರೀತಿಯಿಂದ ಪೋಷಿಸುತ್ತಿದ್ದರೆ ಅದು ಸ್ವಾಮಿ ಸಿದ್ಧೇಶ್ವರಾನಂದರು. ಇವರಲ್ಲಿ ಅಡಗಿರುವ ಮಹತ್ತಿನ ಬೀಜವನ್ನು ಅವರು ಗುರುತಿಸಿ ಅದರ ಅಬಾಧಿತವಾದ ವಿಕಾಸಕ್ಕೆ ಸರ್ವ ವಿಧದಿಂದಲೂ ಅಣಿಮಾಡಿಕೊಟ್ಟರು. ಅವರನ್ನು ಕುರಿತು ಪುಟ್ಟಪ್ಪನವರು ಒಂದು ಕವನ ಬರೆದಿದ್ದಾರೆ:

"ನಿಮಗೆ ನಾನಾವ ರೀತಿಯಿಂದೆನಿತು ಋಣಿ
ಎಂದು ಕಳೆದ ಕಾಲದ ಪುಸ್ತಕದ ಪುಟಗಳನ್
ಒಂದೊಂದನೆಯೆ ಮಗುಚಿ ನೋಡಿದರೆ ಪುಟಗಳನ್,
ಥಳಿಸುವುದು ವಜ್ರ ವೈಡೂರ್ಯಮಯ ನೆನಹು ಗಣಿ,
ಕೃತಜ್ಞತೆಯ ಕಣ್ ಕೋರೈಸುವೋಲ್ ! ದೇಹಮಂ
ಕಾಣ್ಕೆಗೈದಿರಿ ದೇವ ಧನ್ವಂತರಿಯ ಗುಡಿಗೆ;
ಪ್ರಾಣಮಂ ಕೊಂಡೊಯ್ದು ಭಾಗೀರಥಿಯ ತಡಿಗೆ
ಮೀಯಿಸಿದರದನು ಗುರುಮಂತ್ರದಿಂ. ಸ್ನೇಹಮಂ
ಸವಿಯೊಡ್ಡಿ, ಶಿವಲಲಾಟಾಕ್ಷಿಯೊಳ್ ಅಭೀತಿಯುಂ
ಚರಿಸುವಂತೆಸಗಿಹಿರಿ. ಸಂನ್ಯಾಸಯೋಗದಿಂ
ಧರ್ಮ ಗರ್ವದ ಸೋಂಕು ಸುಳಿಯದಾ ಪ್ರೀತಿಯಿಂ
ಸಾಮಾನ್ಯತೆಯನಾಂತು, ಕಲೆಗಳನುರಾಗದಿಂ
ರಸಯೋಗಿಯಾಗಿರ್ಪ ಸೀಮೆ ಶಾಂತಿಯ ಭಟಂ,
ಮೇಣ್ ಆತ್ಮದಾನಂದ ಸಿದ್ಧೇಶ್ವರನೆ ದಿಟಂ !

ಸಾಧುವಿಗಿರುವ ಹಿರಿಯುಬಂಧನ ಸಾಧುತ್ವದ ಹೆಮ್ಮೆ! ಶ್ರೀ ಸ್ವಾಮಿ ಸಿದ್ಧೇಶ್ವರಾನಂದರು ಅದರ ಅಭಾವದ ಮೂರ್ತಿ. ಮೈತ್ರಿ ಕರುಣೆಗಳು ಅವರ ಒಡನಾಡಿಗಳು. ಪುಟ್ಟಪ್ಪನವರನ್ನು ತಾಯಿಯಂತೆ, ಒಲುಮೆಯ ಗೆಳೆಯನಂತೆ ಅವರು ನೋಡಿಕೊಂಡರು. ಅವರ ಸಹನೆಗೆ ಎಲ್ಲೆಯೇ ಇಲ್ಲ. ಇವರ ವಿಷಯದಲ್ಲಿ ಎಲ್ಲ ನಿಯಮಗಳನ್ನೂ ಸಡಿಲಿಸುತ್ತಿದ್ದರು. ಇವರ ಯೋಗಕ್ಷೇಮ, ಇವರ ಯಶೋಲಾಭ, ಇತರ ಆತ್ಮಶ್ರೀಯಸ್ಸು ಇವುಗಳ ಕಡೆಗೆ ಅವರು ಕೊಟ್ಟ ಗಮನ ಚಿರಸ್ಮರಣೀಯವಾದುದ್ದು. ಈಗ ಅವರು ಪ್ಯಾರಿಸ್ಸಿನ ರಾಮಕೃಷ್ಣ ಮಠದ ಅಧ್ಯಕ್ಷರಾಗಿದ್ದಾರೆ. ಈ ಕ್ಷಣವೂ ಈ ಮಹಾಕವಿಯ ಪುರೋಭಿವೃದ್ಧಿಯನ್ನು ಕೇಳಿ ಕೇಳಿ ಸುಖಿಸುತ್ತಾರೆ.

ಶ್ರೀ ಪುಟ್ಟಪ್ಪನವರು ಮಾತಿನ ನಡುವೆ ಈಚೆಗೆ ಒಂದು ಸಂಗತಿ ತಿಳಿಸಿದರು: "ಆಶ್ರಮದಲ್ಲಿದ್ದ ದಿನಗಳು. ಅಂದು ನಾನು 'ಯಮನ ಸೋಲು' ನಾಟಕ ಬರೆಯುತ್ತಿದ್ದೆ. ಏಕಾಗ್ರಚಿತ್ತದಿಂದ ಬಾಹ್ಯದ ಅರಿವು ಅಷ್ಟಾಗಿ ಇಲ್ಲದೆ ನಾಟಕ ಬರೆಯುತ್ತಿದ್ದ

ಸಮಯದಲ್ಲಿ ಎರಡೇ ಎರಡು ಸಲ ನನ್ನ ಕಾವ್ಯ ಸಮಾಧಿಗೆ ಭಂಗವೊದಗಿತು. ಎಷ್ಟು ಹೊತ್ತಾದರೂ ನಾನು ಊಟಕ್ಕೆ ಹೋಗದೇ ಇದ್ದುದನ್ನು ನೋಡಿ ಸ್ವಾಮೀಜಿ ಬಂದು ದಢಾರನೆ ಬಾಗಿಲು ತೆಗೆದು 'ಪುಟ್ಟಪ್ಪ, ಊಟದ ಸಮಯ ಮೀರಿದೆ. ಊಟ ಮಾಡು ಹೋಗು' ಎಂದರು. ನನಗೆ ಮಿತಿಮೀರಿದ ಕೋಪ ಬಂತು: 'ಸ್ವಾಮೀಜಿ, ನೀವು ಹೋಗಿ, ಊಟಮುಗಿಸಿ, ನನ್ನ ಊಟವನ್ನು ತಟ್ಟೆಯಲ್ಲಿಟ್ಟು ಮುಚ್ಚಿಬಿಡಿ, ನಾನು ಅನಂತರ ಊಟಮಾಡುತ್ತೇನೆ!' ಪಾಪ, ಸ್ವಾಮೀಜಿ ಏನೂ ಹೇಳದೆ ಬಂದಂತೆಯೇ ಹಿಂದಿರುಗಿದರು!

ಇನ್ನೊಂದು ಸಲ ಅಡ್ಡಿಯೊದಗಿತು: ಸಾವಿತ್ರಿ ಮತ್ತು ಯಮ ಇವರ ನಡುವೆ ನಡೆದ ಸಂಭಾಷಣೆಯನ್ನು ಬರೆಯುತ್ತಿದ್ದೆ. ಸ್ವಾಮೀಜಿ ಬಂದು ಹೋದಾಗ ತೆರೆದ ಬಾಗಿಲು ಹಾಗೆಯೇ ತೆರೆದಿತ್ತು. ಒಂದು ಅಳಿಲು ಭಯದಿಂದ ಚೀರುತ್ತಾ ನನ್ನ ಕೊಠಡಿಯೊಳಕ್ಕೆ ಓಡಿಬಂದಿತು. ಅದರ ಹಿಂದೆಯೇ ಕಪ್ಪನೆಯ ಬೆಕ್ಕೊಂದು—ಅಷ್ಟೊಂದು ಕಪ್ಪನೆಯ ಬೆಕ್ಕನ್ನು ನಾನು ಕಂಡೇ ಇರಲಿಲ್ಲ—ಅದನ್ನು ಅಟ್ಟಿಸಿಕೊಂಡು ಬಂದು ಅದನ್ನು ಕಚ್ಚಿಕೊಂಡು ಓಡಿತು. ನನಗೆ ಮೃತ್ಯು ದರ್ಶನವಾಯಿತು! ಒಂದು ಬೆಕ್ಕಿನ ಹಿಡಿತದಿಂದ ಅಳಿಲನ್ನು ರಕ್ಷಿಸಲು ನನ್ನಿಂದ ಸಾಧ್ಯವಾಗಲಿಲ್ಲ! ಅಥವಾ ಅಲ್ಲಿಯೇ ಬಳಿಯಲ್ಲಿದ್ದ ನನ್ನ ಟ್ರಂಕಿನ ಹಿಂದೆ ಅದು ಅವಿತುಕೊಂಡಿದ್ದರೆ ಆ ಬೆಕ್ಕಿಗೆ ಅದನ್ನು ಹಿಡಿಯಲಾಗುತ್ತಿರಲಿಲ್ಲ. ಅದನ್ನು ಕಂಡು ಮೃತ್ಯು ಎಂತಹ ಅನಿವಾರ್ಯವಾದದ್ದು ಎಂಬುದು, ನಿಯಮಿತವಾದ ಕಾಲದಲ್ಲಿ ಅದು ಹೇಗೋ ಪ್ರತ್ಯಕ್ಷವಾಗುತ್ತದೆ ಎಂಬುದು, ನನಗೆ ಅಲ್ಲಿಯೇ, ಸಕಾಲದಲ್ಲಿ ಅನುಭವಕ್ಕೆ ಬಂತು!"

ಎರಡನೆಯ ಘಟನೆ ಜಗನ್ಮಾತೆ ಹೇಗೆ ಇವರಿಗೆ ಕಾವ್ಯದಲ್ಲಿ ಚಿತ್ರಿತವಾಗಬೇಕಾಗಿದ್ದ ಪ್ರತಿಯೊಂದು ಘಟನೆಯನ್ನೂ ಪ್ರತಿಮೆಯಾಗಿಯೋ ರೂಪಕವಾಗಿಯೋ ಪ್ರತ್ಯಕ್ಷಪಡಿಸುತ್ತಿದ್ದಳು ಎಂಬುದಕ್ಕೆ ಸಾಕ್ಷಿಯಾಗಿದ್ದರೆ ಮೊದಲನೆಯ ಘಟನೆ ಸ್ವಾಮೀಜಿಯ ಸಹನೆಯನ್ನು, ಆತ್ಮದ ಮಹತ್ತಿನಿಂದ ಮೂಡಿದ ವಿನಯವನ್ನೂ ಪುಟ್ಟಪ್ಪನವರಲ್ಲಿ ಅವರಿಗಿದ್ದ ಅಪಾರವಾದ ಪ್ರೇಮವನ್ನು ಸೂಚಿಸುತ್ತದೆ.

ಪುಟ್ಟಪ್ಪನವರು ಪ್ರಾರಂಭದಿಂದಲೂ 'ಸರ್ವಾರಂಭ ಪರಿತ್ಯಾಗಿ!' ಅವರಿಗೆ ಸಂಬಂಧಿಸಿದ ಯಾವುದೇ ಕೆಲಸವನ್ನಾದರೂ ಭಗವಂತನೇ ಪ್ರಾರಂಭಿಸಬೇಕು! ಈ ಕಾರ್ಯ ಪ್ರಾರಂಭದ ಸಂನ್ಯಾಸದ ನಿಯಮಕ್ಕೆ ಅಧ್ಯಾತ್ಮ ಹೊರತಾಗಲಿಲ್ಲ. ಸ್ವಾಮೀಜಿಯೆ ಮುಂದಾಗಿ ಇವರನ್ನು ಒಪ್ಪಿಸಿ ಕಲ್ಕತ್ತೆಗೆ ಕರೆದೊಯ್ದು ಇವರಿಗೆ ಬದುಕಿನಲ್ಲೇ ಅತ್ಯಂತ ಮಹತ್ತಾದ ಲಾಭವನ್ನು ದೊರಕಿಸಿಕೊಡಬೇಕಾಯಿತು. ಅದರಿಂದಲೇ ಸ್ವಾಮೀಜಿಯನ್ನು ಕುರಿತ ತಮ್ಮ ಕವನವನ್ನು ಅವರು—

........ದೇಹಮಂ

ಕಾಣ್ಕೆಗೈದಿರಿ ದೇವ ಧನ್ವಂತರಿಯ ಗುಡಿಗೆ;
ಪ್ರಾಣಮಂ ಕೊಂಡೊಯ್ದು ಭಾಗೀರಥಿಯ ತಡಿಗೆ

ವಿೀಯಿಸಿದರದನು ಗುರುಮಂತ್ರದಿಂ !

—ಎಂದಿರುವುದು.

ಸ್ವಾಮೀಜಿಯ ಮಮತೆಯ ಸುಳಿಗೆ ಸಿಕ್ಕಿದ ಪುಟ್ಟಪ್ಪನವರು ತಮಗೆ ದೊರೆಯಲಿರುವ ದಿವ್ಯಸಂಜೀವಿನಿಯ ಸ್ವಭಾವದ ಅರಿವಿಲ್ಲದೆಯೇ ಮಂತ್ರಮುಗ್ಧರಂತೆ ಕಲ್ಕತ್ತೆಗೆ ನಡೆದು ಶ್ರೀ ಗುರು ಸನ್ನಿಧಿಯನ್ನು ಕಂಡರು.

ಶ್ರೀ ಗುರು ! ಮೃಣ್ಮಯವನ್ನು ಚಿನ್ಮಯವನ್ನಾಗಿಸುವ ಗುರು ! ಭವಭವಗಳ ಕರ್ಮರಾಶಿಯನ್ನು ಸುಟ್ಟುರುಹುವ ಶ್ರೀ ಗುರು. ಸಾಮಾನ್ಯನನ್ನು ಸರ್ವಮಾನ್ಯನನ್ನಾಗಿ ಮಾಡುವ ಮಹಾಗುರು. ಸ್ಪರ್ಶಮಾತ್ರದಿಂದ ಅಂತರಂಗದ ಕಣ್ಣನ್ನು ತೆರೆಯುವ ಪುಣ್ಯಗುರು. ಪುಟ್ಟಪ್ಪನವರಿಗೆ ದೊರೆತವರು ಅಂತಹ ದೇವಗುರು—ಸ್ವಾಮಿ ಶ್ರೀ ಶಿವಾನಂದರು.

ಸ್ವಾಮಿ ಶ್ರೀ ಶಿವಾನಂದರು ಶ್ರೀ ರಾಮಕೃಷ್ಣ ಪರಮಹಂಸರ ಅಂತರಂಗ ಶಿಷ್ಯರು. ಸ್ವಾಮಿ ವಿವೇಕಾನಂದರೇ ಅವರನ್ನು 'ಮಹಾಪುರುಷ' ಎಂದು ಕರೆದುದರಿಂದ ಭಕ್ತ ವೃಂದದನಡುವೆ 'ಮಹಾಪುರುಷ ಮಹಾರಾಜ್' ಎಂದು ಪ್ರಖ್ಯಾತರಾಗಿದ್ದರು. ಅವರದು ಗೊಮ್ಮಟನಂತಹ ವ್ಯಕ್ತಿತ್ವ. ಹಿಮಾಲಯದ ಭವ್ಯತೆಯಿದ್ದರೂ ಶಿಶುವಿನ ಮುಗ್ಧತೆ. ಪುಟ್ಟಪ್ಪನವರನ್ನು ಅನೇಕ ವರ್ಷಗಳಿಂದ ಹತ್ತಿರದಿಂದ ಅವ್ಯಾಜಪ್ರೇಮಗೌರವಗಳಿಂದ ಕಾಣುತ್ತಿರುವವರು, ಮೊದಲಸಲ ಅವರನ್ನು ಕಂಡು ಮಾತನಾಡುವವರು ತಪ್ಪದೆ ಈ ಪ್ರಶ್ನೆ ಕೇಳುತ್ತಾರೆ: "ಈ ಶಿಶುಮುಗ್ಧತೆ ಎಲ್ಲಿಯದು ?" ಎಂದು. ಮಹಾಪುರುಷ ಮಹಾರಾಜರ ವ್ಯಕ್ತಿತ್ವವನ್ನು ಬಲ್ಲವರಿಗೆ ಈ ಕನ್ನಡದ ಕಂದನಿಗೆ ಇಂತಹ ಮುಗ್ಧತೆಯನ್ನು ನೀಡಿದವರು ಅವರೇ ಇರಬೇಕು ಎನಿಸುತ್ತದೆ.

ಸಾಕ್ಷಾತ್ ಪರಮಹಂಸರ ಆಪ್ತಶಿಷ್ಯವರ್ಗಕ್ಕೆ ಸೇರಿದ ಈ ಮಹಾ ಪುರುಷರ ಜೀವನದ ಪರಿಚಯಕ್ಕೆ ಇದು ಸ್ಥಳವಲ್ಲ. ಅವರ ಮಾತುಕತೆಗಳನ್ನು ಅನುವಾದಿಸಿ 'ಗುರುವಿನೊಡನೆ ದೇವರಡಿಗೆ' ಎಂಬ ಹೆಸರಿನಲ್ಲಿ ಪ್ರಕಟಿಸಿರುವ ತಮ್ಮ ಪುಸ್ತಕಕ್ಕೆ ಮುನ್ನುಡಿ ಬರೆಯುತ್ತಾ ಪುಟ್ಟಪ್ಪನವರು ಅವರ ಬಗೆಗೆ ಹೇಳಿರುವ ಒಂದೆರಡು ಮಾತುಗಳನ್ನು ಇಲ್ಲಿ ನೆನೆಯಬಹುದು: "ತಪಸ್ಯೆಯಲ್ಲಾಗಲಿ ಸಾಧನೆಯಲ್ಲಾಗಲಿ ಗುರುಕೃಪೆಗೆ ಪಾತ್ರವಾಗುವುದರಲ್ಲಾಗಲಿ ಲೋಕಸೇವೆಯಲ್ಲಾಗಲಿ ಆತ್ಮಶ್ರೀಯಲ್ಲಾಗಲಿ ಸ್ವಾಮಿ ವಿವೇಕಾನಂದರಿಗೆ ಯಾವ ವಿಧದಿಂದಲೂ ಹೆಚ್ಚೇನೂ ದ್ವಿತೀಯರಲ್ಲದ ಇತರ ಅಂತರಂಗ ಶಿಷ್ಯವರೇಣ್ಯರ ಹೆಸರಾಗಲಿ ಜೀವನವಾಗಲಿ ವಿಶಾಲಲೋಕದ ಕಿವಿಗೆ ಇನ್ನೂ ವಿಶೇಷವಾಗಿ ಬಿದ್ದಿಲ್ಲ." ಅಂತಹವರಲ್ಲಿ ಒಬ್ಬರು ಸ್ವಾಮಿ ಶಿವಾನಂದರು. ಮತ್ತೆ: "....ಅವರು ತಮ್ಮ ಬದುಕನ್ನೆಲ್ಲ ತಮ್ಮ ಪ್ರತ್ಯೇಕತೆಯ ನಿರ್ಮೂಲನಕ್ಕಾಗಿಯೆ ಸವೆಸಿ, ಸಮರ್ಪಿಸಿ, ತಮ್ಮತನವನ್ನು ಸಂಪೂರ್ಣವಾಗಿ ಗುರುಚರಣಕ್ಕರ್ಪಿಸಿ, ತಮ್ಮ ಬೇರೆಯತನವನ್ನು ಬೇರುಳಿಯದಂತೆ ಕಿತ್ತು ಭಗವಂತನಲ್ಲಿ ಐಕ್ಯರಾಗಿದ್ದಾರೆ."

ಇಂತಹ ದೇವಚೇತನ, ಪರಮಹಂಸರಿಂದ ಮಂತ್ರದೀಕ್ಷೆಯನ್ನೂ, ಅದರೊಡ

ನೆಯೇ ಸಹಸ್ರಾರು ಜೀವಿಗಳ ಉದ್ಧಾರಕ್ಕೆ ಬೇಕಾದ ಅಮಿತವಾದ ಆತ್ಮಶಕ್ತಿಯನ್ನೂ ಸ್ವೀಕರಿಸಿದ ದಿವ್ಯಚೇತನ, ಪುಟ್ಟಪ್ಪನವರಿಗೆ ಮಂತ್ರದೀಕ್ಷೆಯನ್ನು ನೀಡಿತು. ಶ್ರೀ ಸ್ವಾಮಿ ಶಿವಾನಂದರ ಪವಿತ್ರ ಚರಣಗಳನ್ನು ಸ್ಪರ್ಶಿಸಿ ಕಣ್ಣಿಗೊತ್ತಿಕೊಳ್ಳುವ ಅಮೃತ ಮುಹೂರ್ತದಲ್ಲಿಯೇ ಪುಟ್ಟಪ್ಪನವರು ದಕ್ಷಿಣೇಶ್ವರದ ದೇವಮಾನವ ಪರಮಹಂಸರ ಪವಿತ್ರತಮ ಚರಣಗಳನ್ನೂ ಸ್ಪರ್ಶಿಸಿ ಕಣ್ಣಿಗೊತ್ತಿಕೊಂಡರು. ದಿವ್ಯತೆಯ ಹೊನಲು ಅವರ ಸಕಲಕೋಶಗಳನ್ನೂ ತುಂಬಿ ಹರಿಯಿತು!

ಅವರ ಭವವೇ ಬದಲಾಯಿತು. ಜನ್ಮ, ಕುಲಗಳ ಬಿಂದು ಆ ಶಕ್ತಿಸಾಗರದಲ್ಲಿ ಲಯವಾಯಿತು. ಲೌಕಿಕವಾಗಿ ಕೂಡ ಅವರು ಶ್ರೀ ರಾಮಕೃಷ್ಣಗೋತ್ರ ಸಂಜಾತ ರಾದರು:

........ತಾಯಿ ಹಸುಳೆಯನೆರ್ದೆಗೆ
ಒತ್ತುಕೊಳ್ವಂದದಿಂದಾತು ಪ್ರೇರೆಯಯ್, ಗುರುವೆ,
ಮಂತ್ರದೀಕ್ಷೆಯ ನಿಮ್ಮಡಿಯ ಶಿಷ್ಯಸಾಮಾನ್ಯನಂ,
ಮಾನ್ಯಕುಪ್ಪಳಿ ವೇಂಕಟಾರ್ಯಂಗೆ ಮೇಣ್ ಪೂಜ್ಯೆ
ಸೀತಮ್ಮನೆಂಬಭಿಧಾನದಾ ಮಾತೃದೇವತೆಗೆ
ಸಂಭವಿಸಿದೀ ಪುಣ್ಯನಂ, ಧನ್ಯನಂ, ದೀನನಂ:
ಕೌಸಲೆಯ ನಂದನಂ ಮೇಣ್ ದೇವಕಿಯ ಕಂದನುಂ
ತಾನೊಂದೆ ಮೆಯ್ಯೊಳಿಂದವತಾರಮೆತ್ತಿದಾ
ಶ್ರೀ ರಾಮಕೃಷ್ಣ ಭಗವದ್‌ಗೋತ್ರ ಸಂಜಾತನಂ;
..................................................
ಭವತಾರಿಣೀ ತಾರಕ ಚರಣ ನಾಮರೂಪನಾ
ಶ್ರೀ ಶಿವಾನಂದ ಚಿತ್ಕಿರಣೋತ್ಥ ಹೃತ್ಕೇಂದ್ರನಂ! *

ಕುಪ್ಪಳಿಯಲ್ಲಿ ಜನಿಸಿದ ಮಲೆನಾಡಿನ ಶಿಶು, ಶ್ರೀ ಶಿವಾನಂದರ ಚಿತ್ಕಿರಣ ತಮ್ಮ ಹೃದಯ ಕೇಂದ್ರವನ್ನು ತೆರೆಯಲು ಶ್ರೀ ರಾಮಕೃಷ್ಣ ಭಗವನ್‌ಗೋತ್ರ ಸಂಜಾತರಾದರು! ಪುಟ್ಟಪ್ಪನವರ ಕಾವ್ಯದ ಬೇರುಗಳನ್ನು ಥೇಮ್ಸ್‌ನದೀ ತೀರದಲ್ಲಿ ಮರಳಗೆದು ಹುಡುಕುತ್ತಿರುವ ವಿದ್ವಾಂಸರೊಬ್ಬರು ಒಂದು ದಿನ 'ಏನಿದು' ಈ "ಶ್ರೀ ರಾಮಕೃಷ್ಣ ಗೋತ್ರ ಯಾವುದು, ಅರ್ಥವೇ ಆಗುವುದಿಲ್ಲವಲ್ಲ?" ಎಂದರು. ಕಡಲಿನೊಡನೆ ಒಂದಾದ ನದಿಯಗೋತ್ರ ಕಡಲಿನಗೋತ್ರವೇ! ಸದ್ಯಕ್ಕೆ ಪುಟ್ಟಪ್ಪನವರು ಕನ್ನಡದ ಪುಣ್ಯದಿಂದ ವರ್ಡ್ಸ್‌ವರ್ತ್ ಮಿಲ್ಟನ್ನರ ಗೋತ್ರದವರಲ್ಲ!

ಈ ಸಮಯದಲ್ಲೇ ಪರಮಹಂಸರ ಮತ್ತೊಬ್ಬ ಅಂತರಂಗಶಿಷ್ಯರೂ, ಪರಮಹಂಸರ 'ವಚನ ವೇದ'ವನ್ನು ಭವಿಷ್ಯಜಗತ್ತಿನ ಉದ್ಧಾರಕ್ಕಾಗಿ ಬರೆಹದ ರೂಪದಲ್ಲಿ

---

*ಶ್ರೀ ರಾಮಾಯಣ ದರ್ಶನಂ. ಶ್ರೀ ಸಂಪುಟಂ. ಸಂ. ೧ ಪುಟ ೪೪೨

ಕಾಪಾಡಿಟ್ಟವರೂ ಆದ ಮಹೇಂದ್ರನಾಥಗುಪ್ತ ಅಥವಾ ಮಾಸ್ಟರ್ ಮಹಾಶಯ ಅಥವ ‘ಮ’ ಅವರ ದರ್ಶನವೂ ಪುಟ್ಟಪ್ಪನವರಿಗೆ ದೊರೆಯಿತು: ಕ್ರಿ. ಶ. ೧೯೨೯ನೆಯ ಅಕ್ಟೋಬರ್ ತಿಂಗಳು ಒಂಬತ್ತನೆಯ ತೇದಿಯ ದಿನ ಆ ಮಹಾಪುರುಷನನ್ನು ಕಲ್ಕತ್ತೆಯ ಆತನ ಮನೆಯಲ್ಲಿ ಸಂದರ್ಶಿಸಿ ಎರಡು ಗಂಟೆಗಳ ಕಾಲ ಸಂಭಾಷಣೆ ಮಾಡುವ ಸುಯೋಗವು ಈ ಗ್ರಂಥಕರ್ತನಿಗೆ ಲಭಿಸಿತ್ತು. ನಾವು ಅಲ್ಲಿಗೆ ಹೋದಾಗ ಸಂಜೆಗಪ್ಪಾಗಿತ್ತು. ಮಾಸ್ಟರ್ ಮಹಾಶಯನು ತನ್ನ ಉನ್ನತ ಸೌಧದ ಶಿಖರ ವೇದಿಕೆಯಲ್ಲಿ ಧ್ಯಾನಾಸಕ್ತನಾಗಿದ್ದನು. ನಮ್ಮನ್ನು ಜನ್ಮಜನ್ಮಾಂತರದ ಬಂಧುಗಳಂತೆ ಸ್ವೀಕರಿಸಿ ಆದರಿಸಿದನು. ಶಾಂತನೂ ಸತ್ಯಶೀಲನೂ ಮಧುರ ಭಾಷಿಯೂ ಆಗಿರುವ ಆತನಲ್ಲಿ ಪರಮಹಂಸ ಶ್ರೀ ರಾಮಕೃಷ್ಣರ ಪ್ರಭಾವವು ಪ್ರಸ್ಫುಟವಾಗಿತ್ತು. ನೀಳವಾದ ಗಡ್ಡದಿಂದಲೂ ನರೆತ ಬೆಳ್ಳಿಗೂದಲಿಂದಲೂ ಜರಾಶೀರ್ಣ ಶರೀರದಿಂದಲೂ ಆ ವೃದ್ಧಮೂರ್ತಿಯ ಮಂಗಳ ದೃಶ್ಯವು ಪೂರ್ವಕಾಲದ ಮಹರ್ಷಿಗಳನ್ನು ಮನಸ್ಸಿಗೆ ತರುತ್ತಿತ್ತು. ಅತಿ ಸಾಧಾರಣ ವಸ್ತ್ರಧಾರಿಯಾಗಿದ್ದ ಅವನು ಗಾಂಭೀರ್ಯ ನಿರಹಂಕಾರತೆಗಳು ರೂಪುಗೊಂಡಂತಿದ್ದನು.*

ಇವರೊಡನೆ ಮಾತನಾಡುತ್ತಾ ಆ ಮಹಾಶಯನು ನುಡಿದ ಮಾತುಗಳು ಇವು. “ಸಾಧಾರಣ ಮನುಷ್ಯನು ಈಶ್ವರನನ್ನು ಪ್ರತ್ಯಕ್ಷವಾಗಿ ನೋಡಲು ಸಾಧ್ಯ ಎಂಬುದನ್ನು ನಂಬಲಾರನು. ಆದರೆ ಸದಾ ಈಶ್ವರನಲ್ಲಿಯೇ ಬಾಳಿ, ಆತನನ್ನು ಕಂಡು ಮಾತಾಡುತ್ತಿದ್ದ ಮಹಾದೇವಮಾನವನೊಬ್ಬನನ್ನು ಸೇವಿಸುವ ಮಹಾಪುಣ್ಯವು ನಮ್ಮದಾಗಿತ್ತು.”† “ಆತನಿಗೆ ನಮಸ್ಕರಿಸಿ ಹಸ್ತಲಾಘವವಿತ್ತು ಬೀಳ್ಕೊಂಡ ಮೇಲೆ ಮಹಾವ್ಯಕ್ತಿಯೊಬ್ಬನ ದರ್ಶನವಾಯಿತೆಂದು ಮನದಲ್ಲಿಯೇ ಹಿಗ್ಗಿದೆವು. ಕಲ್ಕತ್ತೆಯ ಚಂಚಲ ದ್ರುತ ಜೀವನ ಸಮುದ್ರದಲ್ಲಿ ಮಾಸ್ಟರ್ ಮಹಾಶಯನು ಸ್ಥಿರಶಾಂತ ದ್ವೀಪವಾಗಿದ್ದಾನೆ.”‡

ಪರಮಹಂಸರ ಅಂತರಂಗ ವಲಯಾನುವರ್ತಿಗಳಾಗಿದ್ದ ಈ ಎರಡು ಭಗವದ್ದೀಪ್ತ ಚೇತನಗಳನ್ನು ಸಂದರ್ಶಿಸಿ, ಪರಮಹಂಸರ ಪುಣ್ಯತಪಸ್ಸಿನ ಮಂಗಳಧಾಮವಾಗಿದ್ದ ದಕ್ಷಿಣೇಶ್ವರದ ದಿವ್ಯವಾತಾವರಣದಲ್ಲಿ ಸಂಚರಿಸಿ ಪುಟ್ಟಪ್ಪನವರು ಮತ್ತೆ ಮೈಸೂರಿಗೆ ಹಿಂದಿರುಗಿದರು. ಈ ಅನುಭವ ಅವರ ಜೀವನದ ಉದ್ದಕ್ಕೂ ಸ್ವರ್ಗೀಯ ಶ್ಯಾಮಲವಾಗಿ ಅವರ ಹೃದಯದಲ್ಲಿ ಉಳಿಯಿತು. ಲೌಕಿಕವೋ ಅಲೌಕಿಕವೋ ಯಾವುದೇ ಕೆಲಸಕಾರ್ಯಗಳ ನಡುವೆ ಅವರಿದ್ದರೂ ಬೇಕಾದ ಗಳಿಗೆಯಲ್ಲಿ ಮನಸ್ಸನ್ನು ಅಧ್ಯಾತ್ಮದ ಗಂಗೆಯಲ್ಲಿ ತೇಲಿಬಿಡುವ ಶಕ್ತಿ ಅವರಿಗೆ ದೊರೆತ್ತಿತ್ತು. ಗುರುದೇವನಿಗೆ ಎಂಬ ಒಂದುಸಾನೆಟ್ಟಿನಲ್ಲಿ ಈ ಮಾತಿದೆ:

---

*ಕುವೆಂಪು: ಶ್ರೀ ರಾಮಕೃಷ್ಣ ಪರಮಹಂಸ-ಯಾತ್ರಿಕರು: ಪುಟ ೧೪೮ †ಅದೇ.

‡ಅಲ್ಲೇ. ಮಾಸ್ಟರ್ ಮಹಾಶಯನ ಮಂಗಳಾತ್ಮವು ೧೯೩೨ನೆಯ ಜೂನ್ ತಿಂಗಳು ೪ನೆಯ ತಾರೀಕು ತನ್ನ ಇಹ ಯಾತ್ರೆಯನ್ನು ಪೂರೈಸಿ ಬ್ರಹ್ಮಲೀನವಾಯಿತು.

ಧ್ಯಾನ ನದಿಯಲಿ ಕಲ್ಪನೆಯ ನಾವೆಯಲಿ ತೇಲಿ
ದಕ್ಷಿಣೇಶ್ವರಕೈದಿ ನಾ ಬಾಳುತಿರೆ ಮರಳಿ
ಕಳೆದ ಕಾಲದಲಿ, ಚಿಮ್ಮುವುದು ನನ್ನೆದೆಯರಳಿ
ಪೂತ ಸಾನ್ನಿಧ್ಯದಲಿ ರೋಮಾಂಚವನು ತಾಳಿ!
ಗಗನ ವಿಸ್ತೀರ್ಣತೆಯ ನೀಲ ಮೌನ ಸಮಾಧಿ,
ಪಂಚವಟಿ ವಿಟಪಿ ವೃಂದದ ವಿಹಂಗಮಗಾನ,
ಮಂದಮಂದಾಕಿನಿಯ ಗಂಭೀರ ಕಲತಾನ,
ಜಗದಂಬೆಯಾಲಯದಿ ಪರಮಹಂಸನ ಬೋಧಿ!
ನೀನೆನ್ನ ಜೀವನ ಚಿರಂತನ ಧ್ರುವತಾರೆ,
ಸರ್ವರುಚಿ ಭಾವ ಸಂಸ್ಕಾರಗಳ ಸ್ಪರ್ಶಮಣಿ,
ಆಶೆ ಆಕಾಂಕ್ಷೆ ಆದರ್ಶಗಳ ರತ್ನಖನಿ,
ಹೇ ಸಮನ್ವಯಮೂರ್ತಿ! ನೀನಿಳೆಗೆ ಮೈದೋರೆ–
ಮುಕ್ತಿಯರಳಿತು ಧರ್ಮಸೇವಾ ತಪಸ್ಸಿನಲಿ
ಮನುಜ ಗೌರವ ಗಿರಿಯ ಮಾನಸ ಸರಸ್ಸಿನಲಿ! *

ಪರಮಹಂಸರಿಗೂ–ಕುವೆಂಪುವಿಗೂ ಇರುವ ಸಂಬಂಧವನ್ನು ಈ ಒಂದು ಸಾನೆಟ್ ಸುಂದರವಾಗಿ ಚಿತ್ರಿಸಿದೆ. ನೆನೆದಾಗ ಮನಸ್ಸು ಆ ದೇವಮಾನವನ ಸುತ್ತ ಸುತ್ತಬಲ್ಲುದು. ಆತನ ತಪೋಭೂಮಿಯನ್ನು ಸಂದರ್ಶಿಸಬಲ್ಲುದು. ಆತ ಇವರ ಜೀವನದ 'ಚಿರಂತನ ಧ್ರುವತಾರೆ.' ಜೀವನದ ರುಚಿಯನ್ನು, ಜನ್ಮಜನ್ಮಗಳ ಭಾವ ಸಂಸ್ಕಾರಗಳನ್ನು ತನ್ನಡಿಯ ಸ್ಪರ್ಶಮಣಿಯಿಂದ ಹೊನ್ನಾಗಿಸಿದ ದಿವ್ಯ ಸಮನ್ವಯಮೂರ್ತಿ! ಬಾಳು ಆತನ ನೇಮಿಯ ಸುತ್ತ ಸುತ್ತುವ ಚಕ್ರ.

ಈ ಯಾತ್ರೆಯಾದ ಬಳಿಕವೂ ಸುಮಾರು ಐದು ವರ್ಷಗಳ ಕಾಲ ಶ್ರೀ ಕುವೆಂಪು ಆಶ್ರಮದಲ್ಲಿಯೇ ಇದ್ದರು. ವಿದ್ಯಾರ್ಥಿದೆಸೆ ಮುಗಿದು ಉಪಾಧ್ಯಾಯವೃತ್ತಿಯನ್ನವಲಂಬಿಸಿದ ಬಳಿಕವೂ ಅವರ ವಾಸ ಅಲ್ಲಿಯೇ. ಅವರ ಅನೇಕ ಉತ್ತಮ ಕೃತಿಗಳು ಈ ಸಮಯದಲ್ಲಿಯೇ ರಚಿತವಾದುವು. ಈ ಯುಗದ ಮೇರುಕೃತಿಯಾದ 'ಜಗದ್ಭವ್ಯ ರಾಮಾಯಣ'ದ ಉಗಮವಾದುದೂ ಆ ಮಾನಸ ಸರಸ್ಸಿನಲ್ಲಿಯೇ.

ಐದು ವರ್ಷಗಳ ಅನಂತರ ಶ್ರೀ ಕುವೆಂಪು ಆಶ್ರಮದಿಂದ ಮನೆಗೆ ಹೋದರು. ಇಂದಿಗೂ ಕುವೆಂಪುರವರಿಗೆ ಆಪ್ತಮಿತ್ರರಾಗಿರುವ ಶ್ರೀ ಸ್ವಾಮಿ ದೇಶಿಕಾನಂದಜೀಯವರು ಒಮ್ಮೆ ಹೇಳಿದರು: "ನೋಡು, ಜನ ಹೇಳುತ್ತಿದ್ದರು: 'ಸ್ವಾಮಿಜೀ, ಇವರನ್ನು ಸಂನ್ಯಾಸಿ ಮಾಡಿಬಿಡಬೇಡಿ.' ನಾನು ಹೇಳುತ್ತಿದ್ದೆ: ಇಲ್ಲ ಖಂಡಿತ ಇಲ್ಲ. ನಾವೇ ನಿಂತು ಮನೆ ಕಟ್ಟಿಸಿ ನೋಡಿ ಸುಖಿಸುತ್ತೇವೆ. ಹಾಗೇ ಮಾಡಿದೆವಯ್ಯಾ. ನಿಂತು

---

*ಅಗ್ನಿಹಂಸ ಪುಟ ೧೧

ಮನೆ ಕಟ್ಟಿಸಿದೆವು. ಆತನನ್ನು ಮನೆ ಸೇರಿಸಿದೆವು."

ಶ್ರೀ ಗುರುದೇವ ನೀಡಿದ ಸತಿಯನ್ನು ಕಂಡು ಈ ಮುಗ್ಧ ತರುಣ ನುಡಿದ ನುಡಿಯನ್ನು ಓದಿದರೆ ಕಣ್ಣಿನ ಅಂಚಿನಲ್ಲಿ ಎರಡು ಹನಿ ನೀರು ಇಂದೂ ಮೂಡುತ್ತದೆ.

ತಾಯ ಚರಣ ಕಿರಣವೊಂದು
ಕೃಪೆಯುಲೆನ್ನ ಪೊರೆಯಲೆಂದು
ನಿನ್ನರೂಪದಿಂದ ಬಂದು
ಸಲಹುತಿರುವುದೆನ್ನ ನಿಂದು!
ಮರೆಯುತದನು ಒಮ್ಮೆಯೊಮ್ಮೆ
ಗಂಡನೆಂಬ ಗಂಡು ಹೆಮ್ಮೆ
ಮನವ ಮಥಿಸೆ ತಡೆಯಲಮ್ಮೆ:
ಮರ್ತ್ಯನೊಂದು ಮನಃ ಸ್ಥಿತಿ
ಮತ್ತೆ ಮತ್ತೆ ಈ ವಿಸ್ಮೃತಿ;
ಹೇ ಮಾಸತಿ, ಪ್ರೇಮಾವತಿ,
ಮೃಣ್ಮಯದಲಿ ಚಿನ್ಮಯರತಿ,
ಮನ್ನಿಸೆನ್ನ ಭಗವತಿ! *

ಭಗವತಿ! ಗುರುಕೃಪೆಯಿಂದ ಕಣ್ಣಿನ ಕಾಳಿಕೆ ಕಳೆದು ಸತಿ ಭಗವತಿಯಾಗಿ ತೋರಿದರು. ಸತಿಯುತನ ಮರೆದು ಭಗವತಿಯುತನ ನೆಲೆಗೊಂಡಿತು. ಸಂಸಾರ ಬಂಧನವಾಗಲಿಲ್ಲ. ಪೊರೆಯುವ ಕೈ ಅಲ್ಲಿಯೂ ಪೊರೆಯಿತು. ಇಲ್ಲಿಯೂ ಪೊರೆಯುತ್ತಿದೆ. ಅಲಿಪ್ತಸ್ಥಿತಿ ಸಾಧಿತವಾದ ಈ ಜೀವಕ್ಕೆ ಸಂಸಾರವೂ ಪರಮನ ಪೂಜೆಯಾಯಿತು:

ಶ್ರೀ ಮಾತೆಯ ಪಾದದಲಿ
ಮಕ್ಕಳು ನಾಲ್ವರು ನಾಲ್ವೆರಳು;
ಸಹಧರ್ಮಿಣಿ ಸತಿ ಹೆಬ್ಬೆರಳು!
ಶ್ರೀ ಗುರುವಾಶೀರ್ವಾದದಲಿ
ಕವಿಗೀ ಸಂಸಾರವೆ ಪೂಜೆ;
ಪೂಜೆಯೆ ಸಂಸಾರದ ಓಜೆ!
ಸಂಸಾರದ ಪೂಜೆ
ಶ್ರೀ ಪಾದದ ಪೂಜೆ
ಶ್ರೀ ಪಾದದ ಪೂಜೆ
ಸಂಸಾರದ ಸೇವೆ! †

---

*ಚಂದ್ರಮಂಚಕೆ ಬಾ ಚಕೋರಿ ಪುಟ ೭

†ಶ್ರೀ ಪಾದದ ಪೂಜೆ. ಚಂದ್ರಮಂಚಕೆ ಬಾ ಚಕೋರಿ ಪುಟ ೨೬

ಇಂತಹ ಸ್ಥಿತಿ ಸಾಧಿತವಾದ ವ್ಯಕ್ತಿ ಮನೆಯಲ್ಲಿದ್ದರೂ ಒಂದೆ, ಮಠದಲ್ಲಿದ್ದರೂ ಒಂದೆ.

ಪರಮಹಂಸರ ಪರಮಕೃಪೆ ಇವರ ಮೂಲಕ ಕನ್ನಡ ಸಾಹಿತ್ಯದ ಮೇಲೆ ಏನೆಲ್ಲ ಪರಿಣಾಮ ಮಾಡಿದೆ ಎಂಬುದು ಬೇರೆಯೇ ಮಹಾಪ್ರಬಂಧದ ವಿಷಯವಾಗುತ್ತದೆ. 'ರಾಮಾಯಣ ದರ್ಶನಂ' ಮಹಾಕಾವ್ಯದುದ್ದಕ್ಕೆ ಆ ಪ್ರಭಾವವನ್ನು ಗುರುತಿಸ ಬಹುದು. ಎರಡು ಗದ್ಯ ಮಹಾಕಾವ್ಯಗಳಾದ ಜೀವನ ಚರಿತ್ರೆಗಳು—'ಶ್ರೀ ರಾಮ ಕೃಷ್ಣ ಪರಮಹಂಸ' ಮತ್ತು 'ಸ್ವಾಮಿ ವಿವೇಕಾನಂದ' ಇದರ ಪ್ರಭಾವದಿಂದ ಮೂಡಿದವೇ. ಈ 'ಕೃಪಾಮಹಿಮೆ'ಗೆ ಕುವೆಂಪುರವರ ಕಾವ್ಯವಾಣಿಯಿಂದಲೇ ಮಂಗಳ ವನ್ನು ಹಾಡುವುದು ಸೂಕ್ತವೆನಿಸುತ್ತದೆ:

"ಯಾರರಿಯದಿಹ ಹೆಬ್ಬನದ ಕೆರೆಯ ಕೆಸರು ಮೂಲೆಯಲಿ ತಾವರೆ ಪೊದಳಿ ದಂದು, ದೇವಾಲಯದ ಗರ್ಭಗೃಹದಲಿ ದೇವ ದೇವನ ಮುಡಿಯಮೇಲೆ ತಾನು ಮಂಡಿಸುವೆನೆಂದು, ಅದು ಕನಸಿನಲ್ಲಿಯೂ ಭಾವಿಸಿರಲಿಲ್ಲ.

ನಿಬಿಡ ತರುಛಾಯೆಯಲಿ ಬನಗತ್ತೆಯಲಿ ತುಂಬಿ ತಂಬೆಲರುಗಳೊಡನೆ ಸರಸ ವಾಡಿ ನಿಶ್ಚಿಂತ ಶಾಂತಿಯಲಿ ತಲ್ಲೀನವಾಗಿತ್ತು.

ತನ್ನಿರವಿಗೆ ತಾನೆ ಮಾರುವೋಗಿತು. ಮನದಲಿ ಮಹದಾಕಾಂಕ್ಷೆಯ ನೆಳಲೂ ಸುಳಿದಿರಲಿಲ್ಲ.

ಗಿರಿಕಂದರಗಳನೇರಿಳಿಯುತ ನೀನಲ್ಲಿಗೈತಂದೆ, ಓ ನನ್ನ ಪ್ರೇಮವಿಹಾರಿ!

ಅಲ್ಲಿ ಪರ್ವತವಿತ್ತು; ಅಲ್ಲಿ ಕಾನನವಿತ್ತು; ಅಲ್ಲಿ ಮಹಾನಭವಿತ್ತು; ಹೆಮ್ಮರ ವಿತ್ತು; ಕೇದಗೆಯಿತ್ತು; ಆ ಮಹಾ ಸಂಮ್ಮೇಲನದಲಿ ಕೆರೆಯ ಮೂಲೆಯ ಕೆಸರಿನಲಿ ತೇಲುವ ಕಿರುತಾವರೆ ನಿನ್ನ ಕಣ್ಣಿಗೆ ಬಿತ್ತು.

ಅಂದು ಕನಸಾಗಲೊಲ್ಲದುದು ಇಂದು ನನಸಾಗಿದೆ!

ಆ ತಾವರೆಯಿಂದು ದೇವಾಲಯದಲಿ ದೇವದೇವನ ಮುಡಿಯಮೇಲೆ ರಾರಾ ಜಿಸುತ್ತಿದೆ.

ನಿನ್ನ ದೇವಾರಾಧನೆಗಾಗಿ ಯಾವ ಯಾವ ಮೂಲೆಗಳಿಂದ ಹೂ ಕೊಯ್ದು ತರುತ್ತಿರುವೆ, ಓ ನನ್ನ ಪ್ರೇಮವನ ವಿಹಾರಿ?" *

ಹರಿಃ ಓಂ ತತ್ ಸತ್.

---

*ಕಿಂಕಿಣಿ ಪುಟ ೩೮



# ಕನ್ನಡಕ್ಕೆ ಶ್ರೀ ಕುವೆಂಪು ಅವರ ಕಾಣಿಕೆ : ಮಹೋಪಮೆ

ಎಂ. ವಿ. ಸೀತಾರಾಮಯ್ಯ

ಯಾವ ಸಾಹಿತ್ಯಕೃತಿಯೇ ಆಗಲಿ, ಅದಕ್ಕೆ ಶೋಭೆಕೊಡುವ ಯಾವ ಅಲಂಕಾರವೇ ಆಗಲಿ, ತನ್ನ ಅಂತಸ್ಸತ್ತ್ವದಿಂದ ಚಿರಕಾಲಿಕವಾದ ಬೆಲೆಯನ್ನು ಪಡೆಯುತ್ತದೆ; ಅಷ್ಟೇ ಅಲ್ಲ, ಸಾರ್ವತ್ರಿಕವಾದ ಮನ್ನಣೆಯನ್ನೂ ಪಡೆಯುತ್ತದೆ. ಇಂಥ ಮನ್ನಣೆಗೆ ಪಾತ್ರವಾದ ಕಾವ್ಯಾಲಂಕಾರಗಳಲ್ಲಿ ಮಹೋಪಮೆಯೂ ಒಂದು.

ಕಾವ್ಯ ಎಷ್ಟು ಪುರಾತನವೋ ಆದರ ಕೆಲವು ಅಲಂಕಾರಗಳೂ ಅಷ್ಟೇ ಪುರಾತನವಾದುವು. ಕಾವ್ಯಕನ್ನಿಕೆ ಸರ್ವಾಲಂಕಾರ ಭೂಷಿತೆಯಾಗಿ ಸೌಂದರ್ಯಸಾಗರದಲ್ಲಿ ಮೈದೋರಿದ ಲಾವಣ್ಯಲಕ್ಷ್ಮಿ. ಆ ಎಲ್ಲ ಅಲಂಕಾರಗಳಲ್ಲಿ, ಉಪಮೆ ರೂಪಕಗಳು ಆ ನಿತ್ಯವಧುವಿನ ಆತ್ಮದ್ಯೋತಕಗಳಾದ ಎರಡು ಕಣ್ಣುಗಳು. ರೂಪಕದಲ್ಲಿ ಉಪಮೆ ಅಂತರ್ಗತವಾದುದರಿಂದ ಉಪಮೆಯೊಂದೆ ಅವಳ ದೃಷ್ಟಿಯೆನ್ನಬಹುದು. ಕಣ್ಣೆರಡಾದರೂ ದೃಷ್ಟಿ ಒಂದೆ ತಾನೆ?

ಪ್ರಾಚೀನತಮ ಕಾವ್ಯಗಳಾದ ರಾಮಾಯಣ, ಮಹಾಭಾರತ, ಇಲಿಯಡ್, ಒಡಿಸ್ಸೀ, ಡಿವೈನ್ ಕಾಮೆಡಿ-ಇವೆಲ್ಲ ಉಪಮೆಗಳಿಂದ ತುಂಬಿ ತುಳುಕುತ್ತಿವೆ. 'ಉಪಮಾ ಕಾಳಿದಾಸಸ್ಯ' ಎಂಬ ಉಕ್ತಿಯಂತೂ ಲೋಕಪ್ರಸಿದ್ಧವಾಗಿದೆ. ಕನ್ನಡದಲ್ಲಿ,ಲಕ್ಷ್ಮೀಶನು ' ಉಪಮಾಲೋಲ ' ಎಂಬ ಪ್ರಶಸ್ತಿಗೆ ಪಾತ್ರನಾಗಿದ್ದಾನೆ.

ಉಪಮೆಯಂತೆಯೇ ಮಹೋಪಮೆಯೂ ಪುರಾತನವಾದ ಕಾವ್ಯಾಲಂಕಾರ; ಆದರೆ, ಪಡುವಣಸೀಮೆಯಲ್ಲಿ ಮಾತ್ರ ಪ್ರಚುರವಾಗಿದ್ದುದು. ಅದನ್ನು ಮೊತ್ತ ಮೊದಲು ಕಾವ್ಯದೇವಿಗೆ ತೊಡಿಸಿ ಧನ್ಯನಾದವನು, ಮಾನ್ಯನಾದವನು, ಮಹಾಕವಿ ಹೋಮರ್. ಆದ್ದರಿಂದಲೇ, ಮಹೋಪಮೆಗೆ (ಮಹಾಕಾವ್ಯದಲ್ಲಿ ಬಳಸುವ ಉಪಮೆ : Epic Simile) 'ಹೋಮರುಪಮೆ' (Homeric Simile) ಎಂಬ ನಾಮಾಂತರವೂ ಎಂದಿನಿಂದಲೂ ರೂಢಿಯಲ್ಲಿದೆ. ಆತನ ತರುವಾಯ ಡ್ಯಾಂಟೆ, ಮಿಲ್ಟನ್, ಮ್ಯಾಥ್ಯೂ ಆರ್ನಲ್ಡ್ ಮತ್ತು ಟೆನಿಸನ್–ಈ ಪ್ರಾಚೀನ ಅರ್ವಾಚೀನ ಕವಿಗಳು ತಮ್ಮ ಕಾವ್ಯಗಳಲ್ಲಿ ಮಹೋಪಮೆಯನ್ನು ಸಾರ್ಥಕವಾಗಿ ಬಳಸಿದ್ದಾರೆ. " ನಮ್ಮ ಪ್ರಾಚೀನ ಸಾಹಿತ್ಯದಲ್ಲಿ ಮಹೋಪಮೆಯನ್ನು ಸರ್ವಾಂಶಗಳಲ್ಲಿಯೂ ಸಂಪೂರ್ಣವಾಗಿ ಹೋಲುವ ಉಪಮೆಗಳು ದುರ್ಲಭವಾಗಿದ್ದರೂ ಅದರ ಛಾಯೆಗಳೇನೋ ಅಲ್ಲಲ್ಲಿ ದೊರೆಯುತ್ತವೆ"*

---

*ಇಲ್ಲಿ ಉದ್ಧರಿಸಿರುವ ವಾಕ್ಯವೂ ಮುಂದೆ ಮಹೋಪಮೆಯ ಲಕ್ಷಣವನ್ನು ತಿಳಿಸುವಾಗ ಉದ್ಧರಿಸಿರುವ ವಾಕ್ಯಗಳೂ ಶ್ರೀ ಕುವೆಂಪು ಅವರ 'ಮಹೋಪಮೆ' (ಸಂಭಾವನೆ: ಪುಟ ೩೪೯-೩೬೦) ಎಂಬ ಲೇಖನದಿಂದ ಎತ್ತಿಕೊಂಡವು. ಈ ಋಣ ಹಿರಿದೆ.

(ಉದಾ., ಲಕ್ಷ್ಮೀಶ), ಅಷ್ಟೆ. ನಿಜವಾಗಿ ನೋಡಿದರೆ, "ನಮ್ಮ ಕಾವ್ಯದೇವಿಗೆ ಪಾಶ್ಚಾತ್ಯ ಕಾವ್ಯದೇವಿಯಿತ್ತ ಹೊಸಕಾಣಿಕೆ–'ಮಹೋಪಮೆ'." ನಮ್ಮ ದೇಶದಲ್ಲಿ ಅಪೂರ್ವವಾದ ಈ ಚೆಲುವಾದ ಒಡವೆಯನ್ನು ರಸಶರಧಿಯನ್ನು ದಾಟಿ ಪಡುವಣ ಸೀಮೆಯಿಂದ ಕನ್ನಡ ಸೀಮೆಗೆ–ಅಷ್ಟೇಕೆ, ಬಹುಶಃ ಭಾರತಕ್ಕೇ–ಮೊತ್ತಮೊದಲು ತಂದ ಕೀರ್ತಿ ಸಂಪೂರ್ಣವಾಗಿ ಶ್ರೀ ಕುವೆಂಪು ಅವರಿಗೇ ಸಲ್ಲಬೇಕು. ಅವರು ವಿನಯದಿಂದ ಹೇಳಿರುವ ಮೇಲಿನ ಮಾತನ್ನೇ ನಾವು ಹೇಳುವುದಾದರೆ, "ಕನ್ನಡಕ್ಕೆ ಶ್ರೀ ಕುವೆಂಪು ಕೊಟ್ಟ ಕಾಣಿಕೆ–ಮಹೋಪಮೆ" ಎಂದು ಹೇಳಬಹುದು. (ನ ಭೂತಃ; ಬಹುಶಃ, ನ ಭವಿಷ್ಯತಿ) ಶ್ರೀ ಕುವೆಂಪು ಅವರು ಮಹೋಪಮೆಯನ್ನು ಮೊತ್ತಮೊದಲು ತಮ್ಮ 'ಚಿತ್ರಾಂಗದಾ' ಎಂಬ ಕಾವ್ಯದಲ್ಲಿಯೂ, ಈಚೆಗೆ ತಮ್ಮ ಮಹಾಛಂದಸ್ಸಿನ ಮಹಾಕಾವ್ಯ 'ಶ್ರೀ ರಾಮಾಯಣ ದರ್ಶನ'ದಲ್ಲಿಯೂ ಕಾವ್ಯಮಹಿಮೋತ್ಕರ್ಷಕ್ಕೆ ಪೋಷಕವಾಗುವ ರೀತಿಯಲ್ಲಿ ಬಳಸಿ, ಕನ್ನಡ ಕಾವ್ಯದೇವಿಗೆ ಹೊಸ ತೊಡವನ್ನು ತೊಡಿಸಿ 'ಕಾಲದಿಂದ ಮಾಸದ' ಶೋಭೆಯನ್ನುಂಟುಮಾಡಿದ್ದಾರೆ. ಅವರ ಮಹೋಪಮಾ ನಿರ್ವಹಣವು ಪ್ರಯೋಗದ ಮೊದಲ ಹಂತವನ್ನು ಮೆಟ್ಟಿಯೂ ಮೆಟ್ಟದೆ ಸಿದ್ಧಿಯ ಕಡೆಯ ಹಂತವನ್ನು ಮುಟ್ಟಿರುವುದು ಕನ್ನಡದ ಸುಯೋಗ. ಇಷ್ಟು ಮಾತ್ರವಲ್ಲ: ಲಕ್ಷ್ಯನಿರ್ಮಾತೃವಾದ ಕವಿಯೇ ಲಕ್ಷಣಕಾರನೂ ಆಗಿರುವುದು ಇನ್ನೊಂದು ಭಾಗ್ಯವಿಶೇಷ.

ಶ್ರೀ ಕುವೆಂಪು ಅವರೇ ನಮ್ಮ ಮುಂದಿಟ್ಟಿರುವ ಲಕ್ಷ್ಯ–ಲಕ್ಷಣಗಳ ಸಮನ್ವಯವೇ ಪ್ರಕೃತಲೇಖನದ ಮುಖ್ಯ ಉದ್ದೇಶ. ಆದ್ದರಿಂದ, ಕುವೆಂಪು ರಚಿತ ಮಹೋಪಮಾ ರಸಚಿತ್ರಮಾಲಿಕೆಯನ್ನು ಸಂದರ್ಶಿಸುವ ಮೊದಲು, ಅವರು ನಿರೂಪಿಸಿರುವ ಲಕ್ಷಣವಿವರಗಳನ್ನು ಸಂಗ್ರಹವಾಗಿ ತಿಳಿದುಕೊಳ್ಳುವುದು ಅಪ್ರಸಕ್ತವಾಗಲಾರದು.

## ೨

"ಉಪಮಾ ಅಲಂಕಾರಕ್ಕೂ ಕಾವ್ಯಕ್ಕೂ ಯಾವ ಸಂಗಮಹಿಮೆ ಇದೆಯೋ ಅದೇ ಸಂಗಮಹಿಮೆ ಮಹೋಪಮಾ ಅಲಂಕಾರಕ್ಕೂ ಮಹಾಕಾವ್ಯಕ್ಕೂ ಅದಕ್ಕಿಂತಲೂ ಮಹತ್ತಾಗಿಯೇ ಇದೆ."

"ಉಪಮಾ ಎಂದರೆ ಸಂಪದ್ಯುಕ್ತವಾದ ಹೋಲಿಕೆ. ಅಲಂಕಾರ ಎನ್ನಿಸಿಕೊಳ್ಳುವಾಗ ರಸಸ್ಪರ್ಶಿಯಾಗುವುದೇ ಉಪಮೆಗೆ ಮುಖ್ಯ ಪ್ರಯೋಜನ. ಸಹೃದಯದಲ್ಲಿ ಭಾವಗಳನ್ನು ಎಚ್ಚರಿಸಿ, ತನ್ಮೂಲಕ ರಸಾನುಭವಕ್ಕೆ ಕಾರಣವಾಗುತ್ತದೆ ಉಪಮಾ ಅಲಂಕಾರ....ಒಂದು ಪ್ರಕೃತ ವಿಷಯದ ಭಾವಕೋಶಕ್ಕೆ ಮತ್ತೊಂದು ಅನ್ಯವಿಷಯದ ಭಾವಕೋಶವನ್ನು ಸಂಗಗೊಳಿಸಿ, ಪ್ರಕೃತ ವಿಷಯದ ಭಾವಕೋಶದ ವೃದ್ಧಿಯಿಂದ ರಸವೃದ್ಧಿಯಾಗುವಂತೆ ಮಾಡುವುದೇ ಉಪಮಾ ಅಲಂಕಾರದ ಉದ್ದೇಶ....ಭಾವ

ಕೋಶವೆಂದರೆ ಪದದ ಅರ್ಥವನ್ನು ಕೇಂದ್ರಬಿಂದುವಾಗುಳ್ಳ ರಾಗಾನುಭವಗಳ, ನಿಷ್ಕೃಷ್ಟ ತೀರವಿಲ್ಲದ, ಅಸ್ಪಷ್ಟಪಾರಾವಾರ ಅಥವಾ ಪರಿವೇಷ....ಕಾವ್ಯಕಲೆಯ ರಸಾಸ್ವಾದನೆಗೂ ಆನಂದಾನು ಭವಕ್ಕೂ ಅತ್ಯಂತ ಆವಶ್ಯಕವಾದ ಸಹಕಾರಿ ಈ ಭಾವಕೋಶಪುಷ್ಟಿ. ಉಪಮಾ ಅಲಂಕಾರ ಒಂದು ರಸವತ್ತಾದ ಸಾಧನ, ಈ ಭಾವಕೋಶಪುಷ್ಟಿಗೆ. ಭಾವಕೋಶಪುಷ್ಟಿಗೆ ನೇರವಾಗಿ ನೆರವಾಗದ ಯಾವ ವಿಧಾನವೂ ಅಲಂಕಾರವಲ್ಲ. ಆದ್ದರಿಂದ, ಉಪಮಾ ಅಲಂಕಾರವೊಂದೇ ನಿಜವಾದ ಅಲಂಕಾರ."

"ಮಹೋಪಮೆ ಎಂದರೆ ಮಹಾ ಉಪಮೆ. ಮಹಾ ಎಂದರೆ ದೀರ್ಘ ಎಂದಷ್ಟೇ ಅರ್ಥವಾಗದಿದ್ದರೂ ದೀರ್ಘತೆಯೂ ಅದಕ್ಕೊಂದು ಅನಿವಾರ್ಯವಾದ ಆತ್ಮಲಕ್ಷಣ. ಬರಿಯ ದೀರ್ಘತೆಯಲ್ಲಿ ಏನಿದೆ ಎಂದು ನಿರ್ಲಕ್ಷಿಸುವುದು ಅಲ್ಪಾನುಭವಕ್ಕೆ ಅಥವಾ ಅನುಭವದ ಅಲ್ಪತೆಗೆ ಕುರುಹಾಗುತ್ತದೆ. ಇನ್ನೇನಿಲ್ಲದಿದ್ದರೂ ಬರಿಯ 'ಮಹಾಗಾತ್ರ' ಮಾತ್ರದಿಂದಲೇ ಮಹತ್ತು ಸ್ಫುರಿಸುವುದನ್ನು ದಿನ ದಿನದ ಬಾಳಿನಲ್ಲಿ ನಾವು ಅನುಭವಿಸುತ್ತಿದ್ದೇವೆ. ಬಹುಶಃ ಮಹತ್ತಲ್ಲದುದಕ್ಕೆ ಬೃಹತ್ತು ಸಂಘಟಿಸುವುದಿಲ್ಲ ಎಂಬುದು ಸೃಷ್ಟಿರಹಸ್ಯವೋ ಏನೋ! ಅಂತೂ ಬೃಹತ್ತಾದುದೆಲ್ಲ ಮಹತ್ತಾಗಿ ತೋರುತ್ತದೆ ಎಂಬುದು ನಿರ್ವಿವಾದ....ಉಪಮೆಮಾಡುವ ಕೆಲಸವನ್ನೇ ಮಾಡುತ್ತದೆ ಮಹೋಪಮೆ. ಇನ್ನೂ ಬೃಹತ್ತಾಗಿ, ಇನ್ನೂ ಮಹತ್ತಾಗಿ. ಪ್ರಕೃತ ವಿಷಯಕ್ಕೆ ದೂರವಾಗಿರುವುದರ ಶ್ರೀಮಂತ ಭಾವಕೋಶವನ್ನು ಪ್ರಕೃತ ವಿಷಯಕ್ಕೆ ಜಲಕ್ಕನೆ ತಗಳ್ಚುವುದೇ ಉಪಮೆಯ ಕರ್ತವ್ಯ....ಅದೊಂದು ಆಧ್ಯಾತ್ಮಿಕಕ್ರಿಯೆ....ವಿಸ್ತಾರಗೊಂಡರೆ, ವಿವರ ವರ್ಣನೆಯಿಂದ ದೀರ್ಘವಾದರೆ, ಬೃಹತ್ತಾದರೆ ಉಪಮೆ ಮಹೋಪಮೆಯಾಗುತ್ತದೆ....ಭಾವಕೋಶ ಬರಿದಾಗಿರುವಾತನಿಗೂ ಅಥವಾ ಅಲ್ಪಸ್ವಲ್ಪ ತುಂಬಿರುವಾತನಿಗೂ ಮಹೋಪಮೆ ಬಹಳ ಉಪಕಾರ ಮಾಡುತ್ತದೆ....ಓದುಗನೇ ಬಹುಕಾಲದ ಪ್ರಯತ್ನದಿಂದಲೂ ಶ್ರಮದಿಂದಲೂ ಪಡೆಯಬಹುದಾದ ಅನುಭವಗಳನ್ನೆಲ್ಲಾ ಮಹೋಪಮೆ ಒಟ್ಟಿಗೆ ತಂದುಕೊಡುತ್ತದೆ. ಆ ಅನುಭವಗಳು ಕವಿಯ ಅನುಭವಗಳಾಗಿಯೂ ಹೊರಹೊಮ್ಮಿರುವುದರಿಂದ ಹೊಸತಾಗಿಯೂ ರಸವತ್ತಾಗಿಯೂ ಇರುತ್ತದೆ....ಸಣ್ಣ ಕವನಗಳಲ್ಲಿಯೂ ಭಾವಗೀತೆಗಳಲ್ಲಿಯೂ ಬರುವ ಉಪಮೆಗಳನ್ನೆಲ್ಲ ವಿಸ್ತರಿಸಿ ಮಹೋಪಮೆಗಳನ್ನಾಗಿ ಮಾಡಲೆಳಸಿದರೆ ಅಸಂಗತವಾಗುತ್ತದೆ. ಮಹಾಕಾವ್ಯಗಳಿಗೆ ಮಾತ್ರ ಮಹೋಪಮೆ ಒಪ್ಪುತ್ತದೆ....ಮಹಾಕಾವ್ಯವು ಮಹಾಯಾತ್ರೆಯಂತೆ. ಮಹೋಪಮೆ ಅಲ್ಲಿಯೇ ಕೊಟ್ಟಿರುವ ಆ ಯಾತ್ರೆಯ ವರ್ಣನಾಚಿತ್ರದಂತೆ.

"ಯಾವುದು ತನಗೆ ತಾನೆ ಇದ್ದಿದ್ದರೆ ಸಾಧಾರಣವಾಗಿಯೇ ಉಳಿಯುತ್ತಿತ್ತೊ ಅದು ಮಹೋಪಮೆಯ ಸಾನ್ನಿಧ್ಯದಲ್ಲಿ ಮಹತ್ತಿಗೇರುತ್ತದೆ....ಮಹೋಪಮೆಯಲ್ಲಿ ಪರಿಣಾಮರಮಣೀಯತೆಯೇ ಅಗ್ರಗಣ್ಯಫಲ ಮತ್ತು ಪರಮಗಮ್ಯ.ಅವಯವ ಸಾದೃಶ್ಯ ಇರಬಹುದು, ಅಥವಾ ಇಲ್ಲದಿರಬಹುದು........ಸಂಸ್ಕಾರಗಳನ್ನು ಉದ್ದೀಪನಗೊಳಿಸಿ ಮಹೋಪಮೆ ತನ್ನ ಕಾರ್ಯಸಾಧನೆ ಮಾಡಿಕೊಳ್ಳುತ್ತದೆ. ಸಂಸ್ಕಾರಗಳನ್ನು ಹೊಸ

ದಾಗಿ ಸೃಷ್ಟಿಸಲೂ ಪ್ರಯತ್ನಿಸುತ್ತದೆ."

ಮೇಲೆ ಉದ್ಧರಿಸಿರುವ ಮಹೋಪಮೆಯ ಲಕ್ಷಣವಿವರಗಳನ್ನು ಹೀಗೆ ಸಂಗ್ರಹಿಸಬಹುದು: ೧. (ವಿಸ್ತಾರವಾದ ಅಥವಾ ವಿವರವಾದ ವರ್ಣನೆಯಿಂದ ಕೂಡಿದ) ದೀರ್ಘತೆ, ಅಥವಾ ಬೃಹತ್ತು; ೨. ಭಾವಕೋಶಸಂಪತ್ತು; ೩. ರಸಪುಷ್ಟಿ, ೪. ನೂತನ ಸಂಸ್ಕಾರಸೃಷ್ಟಿ, ೫. (ಈ ಎಲ್ಲ ಗುಣಗಳಿಂದ ಘಟಿತವಾದ) ಮಹತ್ತು: ಈ 'ಮಹತ್ತ್ವ' ಪೂರ್ಣವಾದ ಉಪಮೆಯ ಪರಮಫಲ ಪರಿಣಾಮರಮಣೀಯತೆ. ಈ ಪರಿಣಾಮರಮಣೀಯತೆ ಸಿದ್ಧಿಸುವುದು, "ಪ್ರಕೃತ ವಿಷಯಕ್ಕೆ ದೂರವಾದ ಭಾವಕೋಶವನ್ನು ಜಲಕ್ಕನೆ ತಗುಳ್ಚಿದಾಗಲೇ." ವಜ್ರದ ಮೂಗುತಿ ಮಾರಾಟದ ಪೆಟ್ಟಿಗೆಯಲ್ಲಿ ಥಳಥಳಿಸುತ್ತ ಮನೋಹರವಾಗಿರಬಹುದು; ನೀಟಾದ ನಾಸಿಕವನ್ನು ಅಲಂಕರಿಸಿದಾಗಲೆ ಅದರ ಅಸ್ತಿತ್ವದ ಸಾರ್ಥಕ್ಯ. ಮಹೋಪಮೆ ತನ್ನ ಮಟ್ಟಿಗೆ ತಾನು ಸುಂದರವಾದ, ಭಾವಪೂರ್ಣವಾದ, ರಸವತ್ತಾದ ವರ್ಣನಾಚಿತ್ರವಾಗಿರಬಹುದು; ಆದರೆ, ಅದರ ಪರಿಣಾಮರಮಣೀಯತೆ ಸಿದ್ಧಿಸುವುದು ಮಹಾಕಾವ್ಯದಲ್ಲಿ ಉಚಿತಪ್ರಯೋಗದ ಮೂಲಕವಾಗಿಯೇ. ಅದೊಂದು ಸಹಯೋಗ ಸೌಂದರ್ಯಸಿದ್ಧಿ; ಪ್ರಭಾವಪಾರಸ್ಪರ್ಯ; ಶೋಭಾವಿನಿಮಯ.

ಆದರೂ, ವಜ್ರದ ಮೂಗುತಿ ಅಂಗಯ್ಯಮೇಲಿದ್ದರೂ ಒಂದು ಕಲಾಕೃತಿಯೇ ಆಗಿರುವಂತೆ, ಮಹೋಪಮೆ ತನ್ನಮಟ್ಟಿಗೆ ತಾನು ಸ್ವಸಂಪೂರ್ಣವಾದ ವರ್ಣನಾಚಿತ್ರವಾಗಿರಬಹುದು; ಪ್ರತ್ಯೇಕ ಅಸ್ತಿತ್ವಕ್ಕೆ ಯೋಗ್ಯತೆ ಪಡೆದಿರಬಹುದು: ಕಾವ್ಯದಲ್ಲಿ ಪ್ರತಿಯೊಂದು ಪಾತ್ರಕ್ಕೂ ಇತರ ಪಾತ್ರಗಳ ಸಾಹಚರ್ಯದಿಂದ ಹೊರತಾಗಿ ಒಂದು ಪ್ರತ್ಯೇಕ ಅಸ್ತಿತ್ವವಿರುವಂತೆ. ಹೀಗೆ, ಪ್ರತಿಯೊಂದು ಮಹೋಪಮೆಯೂ ಒಂದೊಂದು ಸುಂದರ ಚಿತ್ರ: ಅನೇಕವೇಳೆ, ಸುಂದರ ವರ್ಣಚಿತ್ರ. ಮಹಾಕಾವ್ಯ ಯಾತ್ರಿಕನ ರಸಯಾತ್ರೆಯಲ್ಲಿ ಮಹೋಪಮಾ ವರ್ಣೋಜ್ವಲ ದೃಶ್ಯಗಳು ರಸವೈವಿಧ್ಯವನ್ನೂ ಅನುಭವ ವೈವಿಧ್ಯವನ್ನೂ ಒದಗಿಸುವ ವಿಶ್ರಾಂತಿ ವಿಹಾರಸ್ಥಾನಗಳು. ಈ ಗುಣ ಭೂಯಿಷ್ಠವಾದ ಮಹೋಪಮೆಯನ್ನು "ವರ್ಣನಾತ್ಮಕ ಭಾವಗೀತೆ" ಯೆಂದೇ ಕರೆಯಬಹುದು. ಶ್ರೀ ಕುವೆಂಪು ಸೃಷ್ಟಿಯ ಮಹೋಪಮೆಗಳ ವ್ಯಾಸಂಗದಿಂದ ಯಾರಿಗಾದರೂ ಈ ವಿಶೇಷಲಕ್ಷಣವೊಂದು ಹೊಳೆಯದಿರದು. ಕೈಕೊಂಡ ಒಡವೆಯ ಮಾದರಿ ಪಡುವಣದ್ದಾದರೂ, ತನ್ನ ಹೊನ್ನುರನ್ನದಿಂಗ ಅದನ್ನು ನಮ್ಮದೆನಿಸಿ, ಕನ್ನಡ ಕಾವ್ಯದೇವಿಗೆ ಸರ್ವವಿಧಗಳಲ್ಲಿಯೂ ಒಪ್ಪುವಂತೆ ತೊಡಿಸಿರುವುದು ಶ್ರೀ ಕುವೆಂಪು ಅವರ ಹಿರಿಮೆ.

೩

ಶ್ರೀ ಕುವೆಂಪು ಅವರು ತಮ್ಮ (೧೯೩೬ರಲ್ಲಿ ಪ್ರಕಟಿಸಿದ) 'ಚಿತ್ರಾಂಗದಾ' ಎಂಬ (೨೪೯೬ ಪಂಕ್ತಿಗಳ) ದೀರ್ಘ ಕಾವ್ಯದಲ್ಲಿಯೂ ಈಚೆಗೆ ಪ್ರಕಟಿತವಾದ ಅವರ 'ಮೇರುಕೃತಿ' 'ಶ್ರೀ ರಾಮಾಯಣ ದರ್ಶನ'ದಲ್ಲಿಯೂ ವಿಪುಲ ಸಂಖ್ಯೆಯಲ್ಲಿ (ಒಟ್ಟು

೨೪) ಮಹೋಪಮೆಯನ್ನು ಬಳಸಿದ್ದಾರೆ. ಇತರ ಮಹಾಕವಿಗಳು ಪ್ರಯೋಗಿಸಿರುವ ಮಹೋಪಮೆಗಳ ಸಂಖ್ಯೆಯನ್ನು ಪ್ರಕೃತ ಲೇಖಕನು ಲೆಕ್ಕಹಾಕಿಲ್ಲವಾದರೂ, ಸಂಖ್ಯಾ ದೃಷ್ಟಿಯಿಂದ ಕುವೆಂಪು ಹಿಂದಿನ ಮಹಾಕವಿಗಳನ್ನೂ ಮೀರಿಸಿರಬಹುದೆಂಬ ಸಂತಸದ ಶಂಕೆ ಅವನನ್ನು ಬಾಧಿಸುತ್ತಿದೆ; ಗುಣದೃಷ್ಟಿಯಿಂದ ಹೋಮರಾದಿಯಾದ ಪುರಾಣ ಕವಿಗಳಿಗಾಗಲಿ ಮಿಲ್ಟನ್, ಮ್ಯಾಥ್ಯೂ ಆರ್ನಲ್ಡ್ ಮುಂತಾದ ಈಚಿನ ಆಂಗ್ಲ ಕವಿಗಳಿಗಾಗಲಿ ಹಿಂದೆ ಬಿದ್ದಿಲ್ಲ. ಆ ಪಾಶ್ಚಾತ್ಯಕವಿಗುರುಕುಲವು "ಶಿಷ್ಯಾದಿಚ್ಛೇತ್ ಪರಾಜಯಂ" ಎಂದು ಸಂತಸಪಟ್ಟರೂ ಪಡಬಹುದಾಗಿದೆ.

ಹೋಮರನ ಮಹೋಪಮೆಯೊಂದನ್ನು ಗಮನಿಸೋಣ:

Æneas first with threatening mein advanced,
Nodding his ponderous helm ; before his breast
His shield he bore, and poised his brazen spear.
He met Achilles from the opposing ranks ;
Fierce as a ravening lion, whom to slay
Pour forth the stalwart youths, the United strength
Of the roused village ; he unheeding moves
At first ; but wounded by a javelin thrown
By some bold youth, he turns, with gaping jaws,
And frothing fangs, Collecting for the spring,
His breast too narrow for his mighty heart ;
And with his tail he lashes both his flanks
And sides, as though to rouse his utmost rage ;
Then on, in pride of strength, with glaring eyes
He dashes, if some hunters he may slay,
Or in the foremost rank himself be slain.
So moved his dauntless spirit Peleus' son
Æneas to Confront........

ಮೇಲಿನ ಮಹೋಪಮೆಯಲ್ಲಿ ಬೇಟೆಯ ಬಾಳಿನ ಒಂದು ಅನುಭವ ವಿಶೇಷವು "ಭಯಂಕರವೈರಿ ಇದಿರ್ಮಲೆತು ಮುನ್ನುಗ್ಗುವ ಚಿತ್ರದ ಮತ್ತು ಭಾವದ ಭೀಕರತೆಯನ್ನು ಓದುಗನ ನಾಳಗಳಲ್ಲಿ" ಧುಮುಕಿಸುತ್ತದೆ. (ಇಂಗ್ಲೀಷು ಭಾಷಾಂತರದಲ್ಲಿ ಮೂಲದ ಸೊಗಸು ಎಷ್ಟರಮಟ್ಟಿಗೆ ಇಳಿದುಬಂದಿದೆಯೊ ತಿಳಿಯದು.)

ಶ್ರೀ ಕುವೆಂಪು ಅವರೂ ಬೇಟೆಯ ಜೀವನದ ಪ್ರತ್ಯಕ್ಷಾನುಭವಪ್ರಪಂಚದ ಒಂದು ದೃಶ್ಯವನ್ನು ಹೀಗೆ ಚಿತ್ರಿಸಿದ್ದಾರೆ:

"ಕಾಳೆಗದ ನೆವದಿಂದೆ ಪೊತ್ತುತಹೆ ರವಿಸೂನುವಂ" ಎಂದು ತಮ್ಮನ ಮೇಲಣ ವೈರವನ್ನು ಮರೆತು, ಸುಗ್ರೀವನ ಬಳಿಗೆ ಬಂದು, "ತಮ್ಮನಂ ಪೊತ್ತುತಾಯುರ್ಗ್ಗೆ ಧಾವಿಸಿದನಯ್ ದೈತ್ಯಬಲಶಾಲಿ, ಆ ವಾಲಿ! ಸನ್ಮಿತ್ರನಂ ಪೊತ್ತೋಡುವಾತನಂ ಕಂಡು 'ಹಾ ಕೈವಿರ್ಮಾರ್ದುದಾ' ಎನುತೆ ಮುಂಗೆಟ್ಟು, ಬೇರೆ ಬಟ್ಟೆಯ ಕಾಣದಯ್ಯಯ್ಯೋ, ರಘುಕುಲದ ಶುಭ್ರಕೀರ್ತಿಯ ದಾಶರಥಿ, ಕಣೆಯ ಬಟ್ಟೆಯನೆ ಕೈಕೊಂಡೆಚ್ಚನ್ ಕಠೋರ ಶರಮೃತ್ಯುವಂ ವಾನರನ ಬೆನ್ಗೆ! ಬಿದ್ದನ್‌ವಾಲಿ, ಬಿದ್ದುದೆನೆ ಕಲ್ಪದ್ರುಮಂ ವೆರಸಿ ಸಗ್ಗದೈರಾವತಂ ನೆಲಕೆ!

"ದೀವದ ಹೋರಿಯಂ ಕಟ್ಟಿ ಬೇಂಟೆಗಂ
ಮರಸು ಕುಳಿತಿರೆ ಮರದ ತುದಿ ಮಂಚಿಗೆಯ ಮೇಲೆ,
ಸೋವತವನರಸಿ ಬರ್ಪುದು ಪಸಿದ ಪುಲಿ. ಮುಂದೆ
ಕೊರ್ವಿದೆರೆಯಂ ಕಂಡದಂ ಕೊಳ್ವಲಂಪಿಂದೆ
ಹೊಂಚಿ ಮುಂಬರಿಯುತಿರಲೀಡೇಳುವುದು ಕೋವಿ.
ನೆರಕೆ ತಗುಲಿದ ಗುಂಡಿನೇರಿಂಗೊಡನೆ ಜೀವಿ
ಮೈಮರೆದುರುಳೆ, ಮರಸಿನಿಂದಿಳಿದು ಬಂದು, ಆ
ಬೇಂಟೆಗಾರಂ ತನ್ನ ಬೇಂಟೆಯನೊಸೆದು ನೋಡಿ
ಮೆಚ್ಚುವನ್, ತನ್ನ ಬೀರದ ಬೆನ್ಗೆ ತಾನೆ ಕೈ
ಚಪ್ಪರಿಸಿ! ಓಡಿದರೊ ಬಿಳ್ದಿಂದ್ರಜನ ಬಳಿಗೆ
ರಾಮಾದಿಗಳುಮಂತೆ."

(ಮಹಾ ಸಂ. ೧; ಪು ೩೧೧-೩೧೨; ಪಂ. ೨೮೦-೨೯೦)

ಹೋಮರನ ಮಹೋಪಮೆಯೊಂದಿಗೆ ಇದನ್ನು ಹೋಲಿಸಿದರೆ, ಇದರ ಸೌಂದರ್ಯ ವಿಶೇಷ ಸ್ಪಷ್ಟಗೊಳ್ಳುತ್ತದೆ. ಅಲ್ಲಿ ಚಿತ್ರ ಹೆಚ್ಚು ವಿವರಪೂರ್ಣವಾಗಿದೆ; ಮುನ್ನುಗ್ಗಿ ಬರುವ ಕೆರಳಿದ ಮೃಗರಾಜನ ಚಿತ್ರ ಕಣ್ಣಿಗೆ ಕಟ್ಟಿದಂತಿದೆ; ಸ್ವಗ್ರಾಮ ರಕ್ಷಣೆಗೆ ಮುನ್ನುಗ್ಗಿದ ಯುವಕ ವೃಂದದ ಧೀರನಾಯಕ, ಅವನ ಭರ್ಜಿಯ ಎಸೆತದಿಂದ ಕೆರಳಿ ನುಗ್ಗಿಬಂದ ಕೇಸರಿ—ಈ ಚಿತ್ರದ ಭಾವಕೋಶದಲ್ಲಿ ಘಟನೆಯ ಭೀಕರ ಅನಿವಾರ್ಯತೆ ಇಡಿದು ತುಂಬಿದೆ. ಇಲ್ಲಿನ ಭಾವಪೂರ್ಣಕೋಶವು ಈನಿಯಸ್ ಮತ್ತು ಅಖಿಲೀಸ್ ಮಹಾವೀರರ ಸಂಘಟ್ಟನೆಯ ಸನ್ನಿವೇಶಕ್ಕೆ ಭಾವಪುಷ್ಟಿಯನ್ನೆರೆದು, ವೀರರಸದ ಉತ್ಕರ್ಷಕ್ಕೆ ಸಹಾಯಕವಾಗಿದೆ. ಕುವೆಂಪು ಅವರ ಈ ಮಹೋಪಮೆ (ಸಂಗ್ರಹವಾಗಿರುವ ಕಾರಣದಿಂದ) ಅಷ್ಟು ವಿವರಪೂರ್ಣವಾಗಿಲ್ಲದಿದ್ದರೂ, ಭಾವಪೋಷಣೆಯ ಹಾಗೂ ರಸೋತ್ಕರ್ಷದ ಕಾರ್ಯದಲ್ಲಿ ಅಷ್ಟೇ ಸಮರ್ಥವಾಗಿದೆ, ಯಶಸ್ವಿಯಾಗಿದೆ. ಈ ಉಪಮೆಯನ್ನು ಕೊಡದೆಯೇ, "ರಘುಕುಲದ ಶುಭ್ರಕೀರ್ತಿಯ ದಾಶರಥಿ ಎಚ್ಚನ್ ಕಠೋರ ಶರಮೃತ್ಯುವಂ ವಾನರನ ಬೆನ್ಗೆ. ಬಿದ್ದನ್‌ವಾಲಿ. ಓಡಿದರೊ ಬಿಳ್ದಿಂದ್ರಜನ ಬಳಿಗೆ ರಾಮಾದಿಗಳ್"—ಎಂದಿಷ್ಟೇ ಹೇಳಿದ್ದರೆ, ಸನ್ನಿವೇಶದ

ವಿಷಮ ದಾರುಣತೆಯೇ ಮನಂಬುಗುತ್ತಿರಲಿಲ್ಲ. ಮರಸಿನಿಂದ ಹುಲಿಯನ್ನು ಕೊಂದ ಬೇಟೆಗಾರನ ಸುರಕ್ಷಿತ ಸುಲಭವೀರದ ಚಿತ್ರವು ರಾಮನು "ವಾಲಿಯ ಬೆನ್ಗೆ" ಕಣೆಯೆಚ್ಚ ಸನ್ನಿವೇಶದ ಊಹಾತೀತ ದಾರುಣತೆಗೆ ಭಾವಾಕೃತಿ ಕೊಡುವುದಲ್ಲವೆ? "ತನ್ನ ಬೀರದ ಬೆನ್ಗೆ ತಾನೆ ಕೈಚಪ್ಪರಿಸಿ"ಕೊಂಡ ಬೇಟೆಗಾರನ ಬೀರವೇ ರಾಮನ ಬೀರವೂ ಎಂದು ಕ್ಷಣಮಾತ್ರವಾದರೂ ನಮಗೆ ರಾಮನ ಬಗೆಗೆ ತಿರಸ್ಕಾರಭಾವವುಂಟಾಗದೆ ಇರುವುದಿಲ್ಲ. "ಆ ವೀರನ ಶರೀರದೆಡೆ ನಿಂದು ಸೀತಾಸ್ವಾಮಿ ಸುಯ್ದು, ತನ್ನೊಳಗೆ ತಾಂ ಬಯ್ದುಕೊಂಡನ್ ತನ್ನ ಬಿಲ್ಲಾಣ್ಮೆಯಂ"—ಎಂದು ರಾಮನ ಆತ್ಮತಿರಸ್ಕೃತಿಯನ್ನು ಮುಂದೆ ಸೂಚಿಸಿರುವುದು ಮೊದಲೇ ನಮ್ಮಲ್ಲಿ ಉಂಟಾಗುವ ತಿರಸ್ಕಾರಭಾವದ ಉಚಿತ ವಿಸ್ತರಣೆ. ವಾಲಿ ಅನಿರೀಕ್ಷಿತ ಮರಣಕ್ಕೆ—ಅದೂ ತಮ್ಮನೊಂದಿಗೆ ಸೌಹಾರ್ದಸ್ಥಾಪನೆಗೆ ತೆರಳುತ್ತಿದ್ದಾಗ—ಈಡಾದ ಸನ್ನಿವೇಶದ ಕರುಣರಸವನ್ನು ಮಹೋಪಮೆ ಬಹು ಚೆನ್ನಾಗಿ ಪೋಷಿಸುತ್ತದೆ. ಅಲ್ಲದೆ, ಹುಲಿಯನ್ನು ಮರಸಿನಿಂದ ಕೊಂದ ಬೇಟೆಗಾರನು ಹಿಗ್ಗಿನಿಂದ ತನ್ನ ಬೆನ್ನನ್ನು ತಾನೆ ತಟ್ಟಿಕೊಂಡು ನಿಂತ ಹಿಗ್ಗಿನ ಭಾವವು, ಅಸಾಧ್ಯವೈರಿಯಾದ ದೈತ್ಯಬಲಶಾಲಿ ವಾಲಿ ಮಡಿದುರುಳಿದ ಕೂಡಲೆ ರಾಮಾದಿಗಳು ಅವನ ಬಳಿಗೆ **ಓಡಿದರು** ಎಂಬ ಸರ್ವಸಾಧಾರಣ ಶಬ್ದಕ್ಕೆ "ಜಳಕ್ಕನೆ ತಗುಳ್ಚಿಕೊಂಡು" ಅದೆಂತು ಭಾವಪ್ರದಾನಗೈಯುತ್ತದೆ! ಅಲ್ಲದೆ, 'ಬೆನ್ಗೆ' ಎಂಬ ಮಾತಿನ ಪ್ರಯೋಗದ ವ್ಯಂಗ್ಯಮಾರ್ಮಿಕತೆ ಈ ಮಹೋಪಮೆಯ ಪ್ರಕರಣದಲ್ಲಿ ಗಮನಾರ್ಹವಾಗಿದೆ. ಹೀಗೆ, ಮಹೋಪಮೆಗೂ ಪ್ರಸ್ತುತ ಸಂಗತಿಗೂ ನಾನಾ ವಿಧ ಳಲ್ಲಿ ಭಾವಸಾದೃಶ್ಯ ಘಟಿಸಿ, ಮಹೋಪಮೆ ತನ್ನ ಪರಮಫಲವಾದ ಪರಿಣಾಮ ರಮಣೀಯತೆಯನ್ನು ಸಾಧಿಸಿದೆ.

೪

ಶ್ರೀ ಕುವೆಂಪು ಅವರ ಮಹೋಪಮಾ ಪ್ರಯೋಗಕೌಶಲವು 'ಚಿತ್ರಾಂಗದಾ' ಕಾವ್ಯದಲ್ಲಿ ಪ್ರಥಮ ಪ್ರಯತ್ನವಾದರೂ ಸಾಧಿಸಬೇಕಾದ ಸಿದ್ಧಿಯನ್ನು ಸಾಧಿಸಿದೆ. ಈ "ಮೊತ್ತಮೊದಲನೆಯ ಸಾಹಸ" "ಸಮರ್ಪಕವಾದ ಸಫಲವಾದ ಸಾಹಸ." ಈ ಸಾಹಸ ಕಾರ್ಯದಲ್ಲಿ, "ಮಹತ್ತಾಗಿ ಸೋಲುವುದೂ ಗೆಲವಿನ ಮಹತ್ತಿಗಿಂತ ಕೀಳಲ್ಲವಷ್ಟೇ!" ಎಂದು ಸೋಲನ್ನಪ್ಪಿಕೊಳ್ಳಲು ಕವಿ ಸಿದ್ಧನಾಗಿದ್ದರೂ ಅದನ್ನು ನಿರ್ಣಯಿಸುವವರು ನಾವು ತಾನೆ! 'ಚಿತ್ರಾಂಗದಾ' ಕಾವ್ಯಕ್ಕೆ ಸಲ್ಲಬಹುದಾದ ಗೆಲವಿನ ಬಹುಪಾಲು ಅಲ್ಲಿ ಬಳಸಿರುವ ಮಹೋಪಮೆಗಳಿಗೆ ಸಲ್ಲುತ್ತದೆ. ಗೆಲವಿನ ಮಹತ್ತು 'ರಾಮಾಯಣ ದರ್ಶನ'ಕ್ಕೆ ಮೀಸಲಾಗಿದೆ. 'ಚಿತ್ರಾಂಗದಾ' ಕಾವ್ಯದಲ್ಲಿ ಮಹೋಪಮಾವಲ್ಲರಿ ಭೂಮಿಯಲ್ಲಿಯೇ ಅಂಕುರಿಸಿ, ಅಲ್ಲಿಯೇ ಹಬ್ಬಿ ಹರಡಿ, ಸುಂದರ ಪುಷ್ಪಗಳನ್ನು ಬಿಟ್ಟು ನಮ್ಮ ಕಣ್ಣು ತಣಿಸಿ ರಸಸಂಸ್ಕಾರವನ್ನು ಮಾತ್ರ ಉಂಟುಮಾಡಿದರೆ, ಅದು 'ರಾಮಾ

ಯಣ ದರ್ಶನ'ದಲ್ಲಿ ಭೂವ್ಯೋಮವ್ಯಾಪಿಯಾಗಿ, ಗಗನವಲ್ಲರಿಯಾಗಿ, ಅತೀಂದ್ರಿಯದ ಆಧ್ಯಾತ್ಮಿಕ ಪ್ರಪಂಚವನ್ನೂ ಸೋಂಕಿ, ರಸಸಂಸ್ಕಾರದೊಂದಿಗೆ ಆತ್ಮಸಂಸ್ಕಾರವನ್ನೂ ಉಂಟುಮಾಡುತ್ತದೆ.

ಮೊದಲು, 'ಚಿತ್ರಾಂಗದಾ' ಕಾವ್ಯದ ಮಹೋಪಮಾ ಮಾಲಿಕೆಯನ್ನು ಸಂದರ್ಶಿಸೋಣ.

'ಚಿತ್ರಾಂಗದಾ' ಕಾವ್ಯದಲ್ಲಿ ಒಟ್ಟು ಏಳು ಮಹೋಪಮೆಗಳು (ಸು. ೨೦೦ ಪಂಕ್ತಿಗಳು) ದೊರೆಯುತ್ತವೆ.

೧. ಜಿಂಕೆಯು ಮರಿಯನ್ನು ಬೆಂಬತ್ತಿ ಹಿಡಿಯಲಾರದೆ ವಿಫಲಳಾದ ಚಿತ್ರಾಂಗದೆಯ ವ್ಯರ್ಥಪ್ರಯತ್ನವನ್ನು ಉಪಮಿಸಲು, ಬಾಲೆಯೊಬ್ಬಳು ಬಣ್ಣದ ಚಿಟ್ಟೆಯನ್ನು ಬೆನ್ನಟ್ಟಿಹೋದ ಮನೋಹರ ಚಿತ್ರ. [ಪಂ. ೮೨–೯೬]

೨. ತನ್ನ "ಬಯಕೆಯಾರಾಧನೆಯ ಮೂರ್ತಿ"ಯಾದ ಅರ್ಜುನನು ಅಯಾಚಿತನಾಗಿ ಎದುರುಬಂದು ನಿಂತಾಗ, 'ಅಂಜದಿರು' ಎಂಬ ನುಡಿಗೆ ಕೆರಳಿ ಮಲೆತು ನಿಂತ ಚಿತ್ರಾಂಗದೆಯನ್ನು "ನುಡಿಗಣೆಯ ಬಿರುಮಳೆಯ ಸುರಿದು" ಅವನು ತಿರಸ್ಕರಿಸಿ ಹೊರಟುಹೋಗುತ್ತಾನೆ. ಆಗ, "ಲಜ್ಜೆಭಯ ವಿಸ್ಮಯದ ಭಾರದಿಂ ಕುಸಿದು ಕುಗ್ಗಿ" ನಿಂತ ಚಿತ್ರಾಂಗದೆಯನ್ನು—ಬೇಟೆಗೆ ಹೋಗಿ, ಬೇಟೆ ಸಿಕ್ಕದೆ ಬೇಸರದಿಂದ ಕಣ್ಮುಚ್ಚಿ ನಿದ್ದೆಯಲ್ಲಿ ಮುಳುಗಿ, ಕಣ್ತೆರದ ಕೂಡಲೆ ತನ್ನ ಮೊಗದ ಮೇಲೆಯೇ ಕರಡಿಯ ಮೋರೆ ಕಂಡು, ಅದು ಓಡಿಹೋದ ಮೇಲೆ ಮಂಕುಮಂಕಾಗಿ ಮಿಳ್ಮಿಳನೆ ನೋಡುವ ಕೆಚ್ಚೆದೆಯ ಕಿರಾತಕಲಿಗೆ ಹೋಲಿಸಿರುವ ಬೇಟೆಯ ಬಾಳಿನ ಹಾಸ್ಯಚಿತ್ರ.

ಇಲ್ಲಿನ ಹಾಸ್ಯರಸ, ಚಿತ್ರಾಂಗದೆಯ ಶೋಚನೀಯ ಸ್ಥಿತಿಯ ಕರುಣ ರಸಕ್ಕೆ ಪೋಷಕವಾಗಿಯೇ ಇದೆ. ಅವಳ ಸ್ಥಿತಿ ಶೋಚನೀಯವಾಗುವುದಕ್ಕೆ ಮೊದಲು, ಹಾಸ್ಯಾಸ್ಪದವಾಗಿಯೂ ಕಾಣುತ್ತದೆ. ಜಿಂಕೆಯನ್ನು ಬೆಂಬತ್ತಿದ ಬೇಟೆಗಾತಿ ಚಿತ್ರಾಂಗದೆಯನ್ನು ಕುರಿತ ಈ ಪ್ರಕರಣದಲ್ಲಿ ಬೇಟೆಯ ಜೀವನದ ಮಹೋಪಮೆಯ ಔಚಿತ್ಯವೂ ಗಮನಾರ್ಹವಾಗಿದೆ. [ಪಂ. ೩೮೩–೪೦೬]

೩. ಮೊದಲ ಸಂದರ್ಶನದಲ್ಲಿ ಸೋಲುವಡೆದ ಕೈರಾತಕನ್ಯೆ ಚಿತ್ರಾಂಗದೆ "ತನ್ನ ಗಂಡಸುತನಕೆಪೇಸಿ," ಸರ್ವಾಲಂಕಾರಭೂಷಿತೆಯಾಗಿ, ಅರ್ಜುನಸಿದ್ದ ಕಾಡಿನ ಗುಡಿಯೊಳಗೆ ಏಕಾಂಗಿನಿಯಾಗಿ ತೆರಳುತ್ತಾಳೆ. ಸಂಧ್ಯಾಪೂರ್ಣಿಮೆ ಸುಮನೋಹರವಾಗಿದೆ. ಬೆಳ್ದಿಂಗಳಿಂಗಡಲ ನಡುವೆ ನಡುವೆ ಅವಳ "ಪ್ರೇಮಕಾತರಪೂರ್ಣ ರಾಕೆಯ ಹೃದಯನೌಕೆ" ತೇಂಕಾಡುತ್ತಿದೆ. ಈ ಹೃದಯನೌಕಾಸ್ವಾಮಿನಿಯಾದ "ಕಾಮಿನಿ ಕಿರೀಟೆಯುಂ ಅರಸಿ ಅಲೆಯುತಿರೆ, ದೂರ ರಂಜಿಸಿದೆ ಕೆಂಬೆಂಕೆ." ಆಶೆನಿರಾಶೆಗಳ ಅಲೆಗಳಲ್ಲಿ ಹೊಯ್ದಾಡುತ್ತಿದ್ದ ಈ ಹೃದಯ ನೌಕಾಸ್ವಾಮಿನಿ ಅರ್ಜುನನನ್ನು ಕಂಡು ಸಂತಸಗೊಂಡುದನ್ನು—ಹೊಸ ದೇಶಗಳನ್ನು ಕಂಡುಹಿಡಿಯಲು ಹಡಗುಪಡೆ ಕೂಡಿಕೊಂಡು ಪಯಣ ಹೊರಟು, ಎಷ್ಟು ಕಾಲ ಕಳೆದರೂ ನೀರಲ್ಲದೆ ನೆಲವನ್ನು ಕಾಣದೆ, ಹಡಗಿನ

ಮುಂದಿಯ ದಂಗೆಯನ್ನು ಎದುರಿಸಬೇಕಾದ ಸ್ಥಿತಿಯೊದಗಿ, ಭೋಂಕನೆ ಭೂಭಾಗವನ್ನು ಕಂಡುಹಿಗ್ಗಿದ ನೌಕಾಸ್ವಾಮಿಯ ಆನಂದಕ್ಕೆ ಹೋಲಿಸಿರುವ ಮಹೋಪಮೆಯು ನವೀನತೆ ನೂತನ ಅನುಭವದ ಸಂಸ್ಕಾರವನ್ನುಂಟುಮಾಡಿಕೊಡುವುದರ ಮೂಲಕ ಉಪಾದೇಯವಾಗಿದೆ. [ಪಂ. ೫೭೦-೭೦೪]

೪. ಇದೊಂದು ಚಿಕ್ಕ ಮಹೋಪಮೆ : 'ಸ್ವಪ್ನದರ್ಶನ'ದಲ್ಲಿ 'ಮಧುರ ಮದನನ ಮೂರ್ತಿ'ಯನ್ನು ಕಂಡು, ಕಾರ್ಮುಗಿಲನ್ನು ಕಂಡು ಉಬ್ಬಿ ಕುಣಿಯುವ ನವಿಲಂತೆ "ಚಿತ್ರಾಂಗದೆಯ ಹೃದಯ ನಲಿನಲಿದು ನರ್ತಿಸಿದ" ಸಂದರ್ಭದ ಚಿತ್ರ. ಕವಿಸಮಯದ ನೆರಳು ಕವಿದು, ಚಿತ್ರ ನಾವೀನ್ಯಶೂನ್ಯ ಸಾಮಾನ್ಯವಾಗಿದೆ. [ಪಂ. ೭೧೫-೭೨೧]

೫. ಇದೂ ಚಿಕ್ಕದೆ; ಆದರೆ ಪ್ರಭಾವಶಾಲಿಯಾಗಿದೆ: "ಕುರುಡು ಮೋಹದೊಳದ್ದಿ ಮರುಳ್ಗೊಂಡು" ಚಿತ್ರಾಂಗದೆಯ ಕಡೆಗೆ ನುಗ್ಗುತ್ತಿರುವ ಅರ್ಜುನನನ್ನು—'ಭೀಷ್ಮಫಣಿ ನೇತ್ರಸೂತ್ರ'ದೆಳೆತಕ್ಕೆ ಸಿಲುಕಿದ ಜಿಂಕೆ ಮರಿಗೆ ಹೋಲಿಸಿರುವ ಚಿತ್ರ. ಇದನ್ನು ಕವಿ ತಾನು ಹೇಳದೆ, ವ್ರತಭ್ರಷ್ಟನಾಗಲಿರುವ ಅರ್ಜುನನನ್ನು ಹಂಗಿಸುವ ಚಿತ್ರಾಂಗದೆಯಿಂದ ಹೇಳಿಸಿರುವುದು—ಈ ಮಹೋಪಮೆಯ ವೈಶಿಷ್ಟ್ಯ.

೬. ಕಾವ್ಯದಲ್ಲೆಲ್ಲಾ ತನ್ನ ಸುದೀರ್ಘತೆಯಿಂದಲೂ ರಸಭಾವಪರಿಪೂರ್ಣತೆಯಿಂದಲೂ ಮಹಿಮೆವೆತ್ತ ಮನೋಹರ ಮಹಾಮಹೋಪಮೆಯಿದು. ಮುಂತಿಳಿಸದೆ ಅರ್ಜುನನು ಪ್ರಿಯೆಯನ್ನು ತೊರೆದುಹೋಗಲು, ಚಿತ್ರಾಂಗದೆ "ತಿರುಗಿದಳ್ ತಿರುತಿರುಗಿ, ತೊಳಲಿದಳ್ ತೊಳತೊಳಲಿ, ಬಗೆಯದೆ ಬಳಲ್ಕೆಯಂ, ಬೆಮೆಗೊಂಡ ಪಾಂಗಿನಿಂ, ಪಾಸುಪೊಕ್ಕಾಗಿ ಬನಬೆಟ್ಟಗಳಲೆಲ್ಲೆಲ್ಲಿಯುಂ; ಮಿಗಗಳುಂ ಬೆಕ್ಕಸದಿನಲ್ಲಲ್ಲಿ ನಡೆಗೆಟ್ಟವೋಲ್ ನಿಂತು ಕೌತುಕದಿನೀಕ್ಷಿಸುವ ತೆರದಿ!" ಅವಳ ದುರ್ಭರ ದಾರುಣಸ್ಥಿತಿ ಆ ಸ್ಥಿತಿಯಲ್ಲಿನ ಹೆಣ್ಣಿಗೆ ಮಾತ್ರ ಸುಸಂವೇದ್ಯ. ಆದರೆ, ಕೃತ್ತಿಕೆಯ ತಿಂಗಳಲ್ಲಿ ನವಿಲು ಕಲ್ಲಿನ ಕಾಡಿನ ಬಳಿ ಗಂಡುನವಿಲನ್ನು ಕಳೆದುಕೊಂಡ ಹೆಣ್ಣುನವಿಲಿನ ಶೋಕಾತಿಭಾರದ ರಸಚಿತ್ರವನ್ನು ನಮ್ಮ ಮುಂದಿಟ್ಟು, ಚಿತ್ರಾಂಗದೆಯ ಹೃದಯ ದರ್ಶನಮಾಡಿಸುತ್ತಾನೆ ಕವಿ! ಸುದೀರ್ಘ ಕಾವ್ಯದಲ್ಲಿ ಮಹೋಪಮೆಯ ಪೂರ್ಣಪ್ರಯೋಜನದ ಅರಿವಾಗುವುದು ಇಂಥ ಸನ್ನಿವೇಶದಲ್ಲಿ. ಚಿತ್ರಾಂಗದೆಯ ಕಾಮವು ಪ್ರೇಮಕ್ಕೆ ತಿರುಗಿದ ರಸಮಯ ಸನ್ನಿವೇಶವಿದು. ಅವಳ ವಿರಹ ವಿಹ್ವಲತೆಯ ವಿಪ್ರಲಂಭ ಶೃಂಗಾರವನ್ನು ಧ್ವನಿಸಲು ಪ್ರಾಣಿಜಗತ್ತಿನ ಮೂಕಶೋಕಕ್ಕಿಂತ ಸಮರ್ಥವಾದುದು ಬೇರೆ ಇನ್ನಾವುದು? ಇಲ್ಲಿ ಮಹೋಪಮೆ ಪ್ರಸ್ತುತ ಸನ್ನಿವೇಶಕ್ಕೆ ರಸವನ್ನು ಹಾಯಿಸುವ ರಸಸಂಧಿಯಾಗಿ ತನ್ನ ಪರಮಪ್ರಯೋಜನವನ್ನು ಸಾಧಿಸಿರುವುದರಿಂದ ಸನ್ನಿವೇಶವೂ ರಸಸ್ಯಂದಿಯಾಗಿ ಪರಿಣಮಿಸಿದೆ. ಈ ಹೃದಯಂಗಮ ಸನ್ನಿವೇಶವನ್ನು ಪರಿಚಯಮಾಡಿಕೊಳ್ಳಲು ಕವಿಯ ವರ್ಣೋಜ್ಜ್ವಲ ವಾಕ್‌ಪ್ರಪಂಚವನ್ನೇ ಪ್ರವೇಶಿಸಬೇಕು :

" ಕೃತ್ತಿಕೆಯ

ತಿಂಗಳಲಿ, ವಿಪಿನ ಪರಿವೃತ ವಿಪುಲ ವಿಸ್ತರದ
ಗದ್ದೆಕೋಗಿನಲಿ, ಹಳದಿಯ ಪೈರು ಬೆಳೆಬೆಳೆದು
ಹಬ್ಬಿಯಿರೆ ಶಾಲಿವನ......................
ಲೋಲಶೀಲ ಸಮೀರನೊಯ್ಯನೊಯ್ಯನೆ ತೀಡೆ........
ತೆರೆಯೆದ್ದು ತೆರೆಬಿದ್ದು ಬತ್ತ ಬಿತ್ತರ ಗದ್ದೆ
ತೆನೆವುಲ್ಗೆ ತೆನೆಯುಜ್ಜುವುದು ಸುಯ್ದನಿಯ ಸೂಸಿ.
ಹೊಂಬಣ್ಣವೆರಚುವುದು ಮುಂಬಿಸಿಲ್. ತುಂಬುವುದು
ಕಾಡುಗಳನ್ನೆಲ್ಲ ಪೊನ್ಬೆನೆಯ ಕಮ್ಮಿತು ಗಾಳಿ
ಮಿಗವಕ್ಕಿಗಳ ಹಿಂಡನೌತಣಕ್ಕಾಹ್ವಾನಿಸಿ !
ಬಂದೆರಗಿದಪ್ಪವಾ ವ್ರೀಹಿ ವಿಸ್ತಾರಕ್ಕೆ
ಬನಮೆಚ್ಚ ಕೆಮ್ಮೊನೆಯ ಪಸುರ್ಗರಿಯ ಕಣೆಗಳೆನೆ
ಗಿಳಿವಿಂಡು ದಂಡು ; ಕಬ್ಬಿನ ಗರಿಗೆ ಹಕ್ಕಿಗಳ
ಕರಿಮುಗಿಲ್; ಗುಬ್ಬಳಿಸಿ ಪಟಪಟನೆ ಹಾರಿಬಹ
ಹೊರಸುಗಳ ಸಮುದಯಂ ; ಪುರುಲೆಗಳ ಪೆರ್ಮಂದೆ ;
ಬರ್ಹಿಗಳ ರಮಣೀಯ ಸಮುದಾಯಮಿತ್ಯಾದಿ
ನಾನಾ ಶಕುಂತವ್ರಜಂ. ಪೊಲಗಾಹಿಯುಬ್ಬರಿಸಿ
ದಿಕ್ಕುದಿಕ್ಕಂಬೊಕ್ಕು ತಾನೆಳ್ಪುತಿರಲ್........
ಪೀಡಿತ ಗ್ರಾಮ ಶ್ಯಾಮಾಂಗಿ........ಖಗತತಿಯ
ಕಾಡಿಸುತ್ತೋಡಿಸುತ್ತಿರೆಯಿರೆ, ಮನೋಹರಂ
ಮೋಹನ ಮಯೂರ ಮಿಥುನಂ ಬೆಳಗು ಪೊಳ್ತಿನೊಳೆ
ನವಿಲುಕಲ್ಲಿನ ಕಾಡಿನೆತ್ತರದ ಕೋಡಿನಿಂ
ಬೆಳೆದ ಗದ್ದೆಯ ಹಳದಿಗಿಳಿತಂದು, ಮೆಲ್ಲನೆಯೆ
ಮೂಲೆಗದ್ದೆಯಲಿ ಮೆಲ್ಲುತೆ ನೆಲ್ಲನೊಚ್ಚತಂ
ಪಾರಿದಪವೊಲ್ಮೆವೊಯ್ಯಾರದಿಂ ಗಿರಿನೆತ್ತಿಗೆ.
ಒಡಲಿಚನಲಂಪಿನಿಂದೊನಪಿನೊಲಗಾರ್ತಿಯಂ
ಹೃದಯಮಿಲನಕೆ ಮೋಹಿಸುವ ಮಧುರ ಮನದಿಂದೆ
ತಾನಾ ಪುರುಷಕೇಕಿ ಬರ್ಹಿಣಿಯ ಸಮ್ಮುಖದಿ
ಬಿಚ್ಚುತೆ ಕಲಾಪ ಮೇಚಕ ಸಹಸ್ರಂಗಳಂ
ರಚಿಸಲನುಗೆಯ್ವುದು ಪ್ರಣಯಮಯ ನರ್ತನದಿ
ದೇವಾಪ್ಸರಾ ಲಾಸ್ಯಮಯ ನಂದನೋದ್ಯಾನಮಂ.
ಆನಂದಸ್ಪಂದನದ ಬರ್ಹಿಪಿಂಛಧ್ವನಿಗೆ,



ಬಣ್ಣಬಣ್ಣದ ಕಣ್ಣುಕಣ್ಣುಗಳ ಕುಣಿತಕ್ಕೆ,
ಪೊಳೆವ ಹಸುರಿನ ಕಾಂತಿ ಮಿರುಗುತಿರೆ ಬಿಂಕದಿಂ
ಕೊಂಕುವಾ ನೀಲಕಂಠದ ಗಾಡಿಗರುವಕ್ಕೆ,
ಪದವೆತ್ತಿ ಪದವಿಟ್ಟು ತಿರೆಯ ತಲ್ಲಣಗೊಳಿಸಿ
ಕುಣಿವ ಬಿನ್ನಾಣಕ್ಕೆ, ನೆತ್ತಿಯ ವಿಜೃಂಭಿಸುವ
ಚೂಡ ಚಲನಾ ವೈಖರಿಗೆ ಸೋಲ್ವಪುದು ಜಗವೆ!
ಸೋಲದಿರ್ಪುದೆ ನವಿಲ್ಪೆಣ್ಣು? ಕುಣಿವಿನಿಯನಂ
ವ್ಯಾಬದ್ಧಲಕ್ಷ್ಯದೃಷ್ಟಿಯಿನೆಳೆದು ಪೀರ್ವಂತೆ
ನೋಡುತಿರಲುತ್ಫುಲ್ಲತೋಲ್ಲಾಸದಿಂದೆ, ಹಾ!
ಕಳ್ದಡಗಿದರಗುಲಿಯಡೊರ್ವ ಬಿಯದಂ ಬಿಟ್ಟ
ಮೃತ್ಯುಮಯ ಬಾಣವದೊ ಗಂಡು ನವಿಲೆದೆಯಲ್ಲಿ
ನಟ್ಟುರ್ಚಳಿಸಿ ಚಿಮ್ಮುತಿದೆ ಬಿಸಿಯ ನೆತ್ತರಂ!
ಸಂಜೆಯೋಕುಳಿಯಲ್ಲಿ ಮಿಂದಡವಿ ಪಸುರಂತೆ
ರಂಜಿಸಿದೆ ನೆಲಕುರುಳಿ ಬಿಳ್ದು ನೆಗೆನೆಗೆಯುವಾ
ಶೋಣಿತ ಪ್ಲಾವಿತ ಮಯೂರನೆರ್ದೆ, ಕೆಂಪೇರಿ
ಕರುಣಭೀಕರವಾಗಿ! ಒರ್ಮೊದಲೆ ಬಿರಿದತ್ತು
ಪ್ರಣಯನೃತ್ಯದ ಮೋಹಸಂಕಲ್ಪ ಬುದ್ಬುದಂ!
ನಾರಾಚದೇರಿಗಾರಪೆ ಸೋಗೆ ನರಳುದನಿಯಂ
ಬೀರಿ ಚೀರಿಡೆ, ಕಾಣಿಸಲ್ ಜವನ ಜವದಿಂ ಬಳಿಗೆ
ನುಗ್ಗಿ ಬರ್ಪಾ ಮಾಯ್ದು ಕರ್ವೇಡನುಂ, ಬೆದರಿ,
ಬರ್ಹಿವಧು ತಾಂ ಪ್ರಾಣಭಯದಿಂದೆ ಪ್ರಾಣೇಶನಂ
ಮರಣಮುಖನಂ ಬಿಟ್ಟು, ಕಣ್ಣು ಮೋಹರ್ದೆಗೆಟ್ಟು
ಪಾರಿದಪುದಾರ್ತನಾದಂಗೈಯುತಲ್ಲಿಂದೆ
ದೂರಾಂತರದ ಕಾನನಾಂತರಕೆ. ನೋವಿಂಗೆ
ಕೂಗುವಾ ಸುಂದರ ಮಯೂರನಂ ಬಂದೆರಗಿ
ಕುತ್ತಿಗೆಯ ಮುರಿದೆತ್ತಿಕೊಂಡೊಯ್ವನಾ ಕ್ರೂರ
ಶಬರನತಿ ಹರ್ಷದಿಂ, ವರ್ಷಮೇಘಂ ರಮ್ಯ
ಸುರಚಾಪಮಂ ಪೊತ್ತು ನಭದೊಳ್ ನಡೆಯುವಂತೆ!
ಬೈಗು ಬರಲೊಂಟಿತನಕುರೆ ಬಳಲಿ, ಬೇಸತ್ತು,
ವಿರಹದಿಂ ಪ್ರಿಯತಮ ಸಮಾಗಮ ಪ್ರತ್ಯಾಶೆ
ಹೃದಯಮಂ ಬೇಯಿಸಲ್ಕಾ ಬೇಟವೆಣ್ ಸೋಗೆ
ನವಿಲುಕಲ್ಲಿಗೆ ಮರಳಿಬಂದು ಕರೆವುದು ಕೇಗಿ

ತನ್ನೆರೆಯನಂ. ಬರಿದೆ! ಪ್ರಾಣಪ್ರಿಯಾಣ್ಮನಂ
ಕಾಣದಿರೆ ಪೊತ್ತುವುದು ಹರಣದುರಿ. ಸುತ್ತುತಿರೆ
ಹುಚ್ಚುಗಿಚ್ಚೇರಿ ಕರೆಕರೆದು ಪತಿವಿಹಗನಂ
ಶೋಕಾತಿಭಾರದಿಂದಾ ಕೇಕಿ, ಮುಚ್ಚುವುದು
ಮೆಲ್ಲನೆ ಭುವನಲಿಪ್ಸು ಬದ್ಧಭ್ರುಕುಟಿ ರಾತ್ರಿ!
ಅಂತಾ ಮಯೂರಸತಿಯಂ ಪೋಲ್ದು ಚಿತ್ರಾಂಗಿ
ಕರೆದೊರಲಿ ತೊಳಲುತಿರೆ ಸವ್ಯಸಾಚಿಯನರಸಿ
ಉನ್ಮತ್ತೆಯಂತೆ, ಕಂಡುದು ಕೈಯ ಬೆರಳಿನಲಿ
ರಂಜಿಪಂಗುಲಿ ಮುದ್ರೆ."

ಮೇಲಿನ ಮಹೋಪಮೆ, ಕಾವ್ಯದಿಂದ ತನಿಯಾಗಿ ತೆಗೆದಿರಿಸಿದರೂ ಸ್ವಸಂಪೂರ್ಣವಾದ, ಕರುಣರಸಭೂಯಿಷ್ಠವಾದ, ಸುಂದರವಾದ ವರ್ಣನಾತ್ಮಕವಾದ ಭಾವಗೀತೆ; ವರ್ಣರಂಜಿತವಾದ ಶಬ್ದಚಿತ್ರ. ಚಿತ್ರದ ವರ್ಣವಿನ್ಯಾಸವನ್ನು ಗಮನಿಸಿ: ಹಳದಿಯ ಪೈರು, ಅದರಮೇಲೆ ಹೊಂಬಣ್ಣವೆರಚುವ ಮುಂಬಿಸಿಲ್; ಪೈರಿಗೆ ಬಂದೆರಗುವ, ಬನಮೆಚ್ಚ ಕೆನ್ನೊಸೆಯ ಪಸುರ್ಗರಿಯ ಕಣೆಗಳೆನೆ ಗಿಳಿವಿಂಡುದಂಡು; ಪೀಡಿತ ಗ್ರಾಮಶ್ಯಾಮಾಂಗಿ; ಕಲಾಪಮೋಚಕ ಸಹಸ್ರಂಗಳ ಲಾಸ್ಯಮಯ ನಂದನೋದ್ಯಾನ, ಬಣ್ಣಬಣ್ಣದ ಕಣ್ಣುಗಳ ಕುಣಿತ, ಹೊಳೆವ ಹಸುರಿನಕಾಂತಿ— ಇವನ್ನು ಮರೆಯುವ ನೀಲಕಂಠದ ಗಾಢಿಗರುವ; ಸಂಜೆಯೋಕುಳಿಯಲ್ಲಿ ಮಿಂದಡವಿ ಪಸುರಂತೆ ಕೆಂಪೇರಿ ಕರುಣಭೀಕರವಾಗಿ ಕಾಣುವ ಶೋಣಿತ ಪ್ಲಾವಿತ ಮಯೂರನೆರ್ದೆ! ಕಾರುಣ್ಯಸೂಚಕವಾದ ಹಸುರನ್ನು ನೆತ್ತರುಗೆಂಪು ಎತ್ತಿತೋರಿಸಿ ಭಯಂಕರವಾಗಿದೆ. ಸತ್ತ ನವಿಲನ್ನು ಎತ್ತಿ ಒಯ್ಯುವ ಕರ್ವೇಡನಚಿತ್ರ, 'ವರ್ಷಮೇಘಂ ರಮ್ಯ ಸುರಚಾಪಮಂ ಪೊತ್ತು ನಭದೊಳ್ ನಡೆಯುವ' ಹೋಲಿಕೆಯಿಂದ ಬಣ್ಣವೇರಿದೆ. ಸಾಕೀ ಕರುಣಾಜನಕ ಚಿತ್ರದ ಮಾರ್ಮಿಕ ಮನೋಹರ ನೋಟವೆಂಬಂತೆ, ಅದರಮೇಲೆ ಇಳಿಯುತ್ತದೆ ಇರುಳ ಕಪ್ಪುತೆರೆ, ಕಟ್ಟಕಡೆಗೆ!

ಇದು ಕೇವಲ ನಿರ್ಜೀವ ನಿಶ್ಚಲ ವರ್ಣಚಿತ್ರವಲ್ಲ; ಸಜೀವ ರಸವದ್ವರ್ಣ ಚಲಚ್ಚಿತ್ರ! ಕವಿ ಈ ಅನ್ಯಾದೃಶವಾದ ಚಿತ್ರವನ್ನು ಓದುಗರ ಮನಃಪಟಲದ ಮೇಲೆ ಅಚ್ಚೊತ್ತಿ, "ಮುಚ್ಚುವುದು ಮೆಲ್ಲನೆ ಭುವನಲಿಪ್ಸು ಬದ್ಧಭ್ರುಕುಟಿರಾತ್ರಿ" ಎಂದು ಚಿತ್ರದಮೇಲೆ ಕರಿತೆರೆಯೆಳೆದರೂ, ಚಿತ್ರದ ನೆನಪು ನಮ್ಮ ಮನಃಪಟದಿಂದ ಎಂದೆಂದಿಗೂ ಅಳಿಸದು!

ಅರ್ಜುನನು ಹೇಳಿದ್ದ ಆರು ತಿಂಗಳ ಗಡುವು ಮುಗಿಯಲು 'ವರ್ಷ ಪ್ರಣಯ ಯಾತ್ರೆಯಾ ಮೇಘರಾಗಿಣಿಗೆ ಪ್ರಸ್ಥಾನ ಪ್ರಸ್ತಾವ ಮಾತ್ರದಿನುಪಮೆ ವೆತ್ತು ಪೊರಮಟ್ಟಳಾ ಚಿತ್ರೆಯಾಪ್ತ ಸಖಿಯರ್ವೆರಸಿ ಪಾರ್ಥನಸಿದಿರ್ಗೊಂಡು....ಕರೆದುತಂದಪೆನೆಂಬ ಪೆರ್ಮೆಯಾನಂದದಿಂದೆ.' ಉಪಮೆಯಲ್ಲಿ, ಜಡವೇಷದ ಮೇಘರತಿ ಸಹ್ಯಗಿರಿ ಮನ್ನ

ಥನನ್ನು ನೆನೆದು, ಅವನನ್ನು ಕುರಿತು ಪಯಣಮಾಡಿ, ಅವನನ್ನು ಸಂಭ್ರಮದಿಂದ ಆಲಿಂಗಿಸಿದ ಸುಂದರ ಚಿತ್ರವಿದೆ.

೫

ಇನ್ನು, " ಶ್ರೀ ಕುವೆಂಪುವ ಸೃಜಿಸಿದ ಮೇರುಕೃತಿ ಶ್ರೀ ರಾಮಾಯಣ ದರ್ಶನ " ದಲ್ಲಿನ ಮಹೋಪಮಾ ಚಿತ್ರಶಾಲೆಯನ್ನು ಪ್ರವೇಶಿಸೋಣ; ಚಿತ್ರಾಂಗದಾ ಕಾವ್ಯದಲ್ಲಿ ತೊಡಗಿದ ಕನ್ನಡದ 'ಮೊತ್ತಮೊದಲನೆಯ ಸಾಹಸ' ಈ ಜಗದ್ಭವ್ಯಕಾವ್ಯದಲ್ಲಿ ಹೇಗೆ ದಿವ್ಯಭವ್ಯವಾಗಿದೆಯೆಂಬುದನ್ನು ಪರಿಶೀಲಿಸೋಣ.

'ರಾಮಾಯಣ ದರ್ಶನ'ದ ಮಹಾಕಾವ್ಯವಲ್ಲರಿಯಲ್ಲಿ ಒಟ್ಟು ೧೭ (ಸು. ೩೨೫ ಪಂಕ್ತಿಗಳು) ಮಹೋಪಮಾಪುಷ್ಪಗಳು ಅರಳಿವೆ. ಕಾವ್ಯ ಪ್ರಮಾಣದೃಷ್ಟಿಯಿಂದ (ಒಟ್ಟು ೨೨, ೨೭೭ ಪಂಕ್ತಿಗಳು), 'ಚಿತ್ರಾಂಗದಾ' ಕಾವ್ಯಕ್ಕಿಂತ ಇಲ್ಲಿ ಮಹೋಪಮೆಯ ಅಲಂಕರಣ ಉಚಿತಪ್ರಮಾಣದಲ್ಲಿದೆಯೆನ್ನಬೇಕು.* ಸಂಯಮಪೂರ್ಣವಾದ ಸಮೀಚೀನದೃಷ್ಟಿ ಕಾವ್ಯದ ಒಡಲಿನಲ್ಲಿ ಹೇಗೋ ಅದರ ಅಲಂಕರಣದಲ್ಲಿಯೂ ಹಾಗೆಯೇ ಸುವ್ಯಕ್ತಗೊಂಡಿದೆ. ಇಲ್ಲಿನ ಮಹೋಪಮೆಗಳಿಗೂ ಈ ಮಾತು ಅನ್ವಯಿಸುತ್ತದೆ.

೧. ಸೀತಾಸ್ವಯಂವರದ ಸನ್ನಿವೇಶ. "ರಘುಕುಲ ಖಮಣಿ ಬಿಳಿಯಾನೆ ಸೊಂಡಿಲಂದದ ನೀಳತೋಳಿಂದೆ ತುಡುಕಿದನು ಕಲ್ಪಭೂರುಹ ಸದೃಶ ಚಾಪಮಂ ಸೀತಾ ಫಲದ ಬಯಕೆಯಿಂದೆ." ಈ ಭಾವಪೂರ್ಣ ಸಂದರ್ಭವನ್ನು ಪ್ರತಿಮಿಸಲು ಕವಿಪ್ರತಿಭೆಗೆ ಭೂಲೋಕದಲ್ಲಿ ಅವಲಂಬ ಸಿಕ್ಕದೆ, ಅದು ದೇವಲೋಕಕ್ಕೇರಿದೆ; ಅಲ್ಲಿ ಕಂಡ ಕಲ್ಪನಾದೃಶ್ಯವೊಂದನ್ನು ನಮ್ಮ ಮುಂದಿಟ್ಟಿದೆ: ಇಂದ್ರನನ್ನು ಹೊತ್ತ ಐರಾವತವು ದಿಕ್ಪಾಲಪುರಗಳಿಗೂ ವೈಕುಂಠ ಕೈಲಾಸ ಸತ್ಯಲೋಕಗಳಿಗೂ ಹೋಗಿ, ಅಮರಾವತಿಗೆ ಮರಳುವುದು; ತನ್ನ ಪಯಣದಲ್ಲಿ ದಿಕ್ಪಾಲಕರಿಂದ ಲಾಲಿತಪಾಲಿತವಾಗಿ, ಶಚೀದೇವಿಯರಮನೆಯ ಮುಂದೆ ಇಂದ್ರನನ್ನು ಇಳಿಸಿ, ಕನಕ ಶೃಂಖಲೆಯಿಂದ ಬಿಡುಗಡೆ ಹೊಂದಿ, ದೇವಲೋಕದ ಹಾಲುಹೊಳೆಯಲ್ಲಿ ಮಿಂದು, ನಂದನಕ್ಕೆ ನಡೆತಂದು, ಕಲ್ಪವೃಕ್ಷಕ್ಕೆ ತನ್ನ ಮೈತಿಕ್ಕುವುದು. ಇದರಿಂದ, ದೈತ್ಯಾಕೃತಿಯ ಆ ದೇವತರು ಕೂಡ ತೂಗಾಡುವುದು. "ಹೆಬ್ಬುಳ್ಳಿ ಹಂಬುವ ತೆರದಿ ಹೆಮ್ಮರನ ಮೆಯ್ಗೆ, ಕಲ್ಪದ್ರುಮದ ಗಾತ್ರಮಂ ತನ್ನ ನೀಳ್ದೀರ್ಘದು ಸೊಂಡಿಲ್ಗಳಿಂ ಸುತ್ತಿ, ಕ್ಷೀರಫೇನಶ್ವೇತ ಗೀರ್ವಾಣ ವಾರಣಂ ಮತ್ತ ವೈಖರಿಯಿಂದೆ ಜಗ್ಗಿ ಸೆಳೆವುದು, ಮರಂಬಳ್ಳಿಯಾಗುತೆ ಬಳ್ಕುವಂತೆ."

[ಮಹಾಸಂಪುಟಂ ೧; ಪು. ೪೮, ಪಂ. ೫೪೪-೫೬೬]

---

*ಚಿತ್ರಾಂಗದಾ: ೨೪೬೬ ಕಾವ್ಯಪಂಕ್ತಿಗಳಿಗೆ ೨೦೦ ಪಂಕ್ತಿಗಳು ಮಹೋಪಮೆ; ಅಂದರೆ, ಶೇ॥ ·೦೮; ರಾಮಾಯಣ ದರ್ಶನ: ೨೨, ೨೭೭ ಪಂಕ್ತಿಗಳಿಗೆ ೩೨೫ ಪಂಕ್ತಿಗಳು ಮಾತ್ರ, ಅಂದರೆ, ಶೇ॥ ·೦೧.

೨. "ಸುತವಿರಹ ಸಂತಾಪದಗ್ಧ ವಸುಧಾಧಿಪ" ದಶರಥನ ಶೋಚನೀಯ ಭಯಂಕರ ಚಿತ್ತವೈಕಲ್ಯದ ಸ್ಥಿತಿಯನ್ನು ಕೇವಲ ಕೆಲವು ಮಾತುಗಳಲ್ಲಿ ಮನಮುಟ್ಟುವಂತೆ ವರ್ಣಿಸಿ, ತೃಪ್ತಿಯಾಗದೆ, ಕರುಣರಸವನ್ನು ಧ್ವನಿಸಲು ಕವಿ ಮಹೋಪಮಾ ಸಾಧನವನ್ನು ಆಶ್ರಯಿಸುತ್ತಾನೆ. ಕವಿಯ ಮಾತುಗಳಲ್ಲಿಯೆ ಈ ಕರುಣೆಯ ಚಿತ್ರವನ್ನು ಕಾಣುವುದೊಳ್ಳಿತು :

"ದವದ ದಳ್ಳುರಿ ವಹಿಸೆ ಬಿರುವೇಸಗೆಯ ಮಲೆಯ
ನೀರಸಾರಣ್ಯಮಂ, ಬೆಂಕಿಯ ಬೇಲಿ ಬಳಸಿ
ಬರೆ, ಕಿಚ್ಚುಗೋಂಟೆಯ ನಡುವೆ ಸಿಲ್ಕಿದೊಂದಾನೆ
ಮುಪ್ಪಿನಿಂದೋಡಲಾರದೆ ಹೀಡುದಪ್ಪುತ್ತೆ
ಘೀಂಕರಿಪುದೊರಲಿ. ದಾವಾಗ್ನಿ ಸುತ್ತಿಂದೊತ್ತಿ
ಮುತ್ತುವುದು, ತುತ್ತುಗೊಳ್ವಾತುರದಿ ಧಾವಿಸುವ
ಮಿತ್ತುನೆತ್ತರ್ನಾಲಗೆಯ ಸೇನೆಯಂತೆ. ಆ
ಗಂಭೀರ ದಿಗ್ದಂತಿ, ತೊರೆದು ಗಾಂಭೀರ್ಯಮಂ,
ತರಳ ಚಂಚಲ ಚಿತ್ತದಿಂ ಬೀದಿವರಿವುದಯ್
ದೆಸೆದೆಸೆಗೆ. ಬಟ್ಟೆದೋರದಿರೆ, ಕವಿದಪುದು ಪೊಗೆ
ಕೆಟ್ಟಾಸೆಗತ್ತಲೋಲ್. ಮತ್ತೊಂದು ಮತ್ತೇಭದೊಲ್
ಭೀಮ ಧೂಮಸ್ತೋಮಮುರಿಬಂಡೆ ಪಾಂಗುರುಳಿ
ಮೇಲ್ವಾಯೆ, ಮುಲಿತೊಂದು ಮದಕರಿಗೆ ಕಾಳೆಗಂ
ಗೊಟ್ಟು ಮಾರ್ಮಲೆವಂತೆವೋಲ್ ಸೆಣಸಿ ಸೋಲ್ತುಸಿರಾರಿ
ಬೀಳುತಿರೆ, ಹೊಗೆಯಾನೆಯಿಂದುಗುವ ಮಿಂಚಿಂದೆ
ಸವೆದ ಮೊನೆಯಾಟೆ ದಂತಗಳಂತೆ ಕೇಸುರಿಯ
ಜ್ವಾಲಾಕಠಾರಿಗಳ್ ತಿವಿಯೆ ಮೈಚರ್ಮಮಂ,
ಮರಸೊಂದುವುದು ವಾರಣಂ.—ಮೈಮರೆದನಂತೆವೋಲ್
ಸುತವಿರಹ ಸಂತಾಪ ದಗ್ಧ ವಸುಧಾಧಿಪಂ !

[ಮಹಾಸಂ. ೧; ಪು. ೯೫, ಪಂ. ೪೫೫-೪೭೨]

ಅಲ್ಪಾವಕಾಶದಲ್ಲಿ ಅಪಾರಪರಿಣಾಮವನ್ನು ಸಾಧಿಸಿರುವ, ಅದ್ಭುತರಸಪೋಷಕ ಸಾಮರ್ಥ್ಯವುಳ್ಳ ಮಹೋಪಮೆಯಿದು. ಕೆಲವು ಮಹೋಪಮೆಗಳು ಒಳಉಪಮೆಗಳಿಂದ ಅಲಂಕೃತವಾಗಿರುವಂತೆ ಇದು ಕೆಲವು ಶಕ್ತಿಯುತ ರೂಪಕಗಳಿಂದ (ಬೆಂಕಿಯ ಬೇಲಿ, ಕಿಚ್ಚುಗೋಂಟೆ, ಮಿತ್ತುನೆತ್ತರ್ನಾಲಗೆ, ಹೊಗೆಯಾನೆ, ಜ್ವಾಲಾಕಠಾರಿಗಳ್) ಬಲಗೊಂಡಿದೆ.

೩. ಇದು ಇನ್ನೊಂದು ಸುದೀರ್ಘಮಹೋಪಮೆ. ('ಚಿತ್ರಾಂಗದಾ' ಕಾವ್ಯದ

ಅತ್ಯಂತ ದೀರ್ಘಮಹೋಪಮೆಗಿಂತ ೧೦ ಪಂಕ್ತಿ ಕಡಮೆಯಾಗಿದೆ.)

ಪರ್ಣಶಾಲೆಯಲ್ಲಿ ಸೀತೆಯಿಲ್ಲದ್ದನ್ನು ಕಂಡು ರಾಮಲಕ್ಷ್ಮಣರು ಅವಳನ್ನರಸಿಕೊಂಡು ಹೊರಡುವರು. ಸೀತಾಪಹರಣ ವಿಪತ್ತಿಗೆ ಜಟಾಯುವೇ ಕಾರಣವೆಂದು ರಾಮನ ಊಹೆ. ದಾರಿಯಲ್ಲಿ, ಬೈಗಿನಕೆಂಪಿನಲ್ಲಿ, ಜಟಾಯುವಿನ ನಖಘಾತಕ್ಕೆ ಕೆದರಿ ಚೆಲ್ಲಿದ ರಾವಣ ವಿಮಾನದ ಮಣಿಯಲಂಕೃತಿ ಗೋಚರಿಸುತ್ತದೆ. ಈ ಮೊದಲ ಸಾಕ್ಷಿಯ ಗುರುತುಹಿಡಿದು ಮುಂದುವರಿಯುತ್ತಿರಲು, ಜಟಾಯು ಪದಗದೆಯ ಘಾತಕ್ಕೆ ಕೆಡೆದುಬಿದ್ದಿದ್ದ ಲಘುಘಂಟಿಕಾಸ್ತಬಕದೊಂದಿಗೆ ಗುರುಗಾತ್ರದ ಐದಾರು ಗರಿಗಳನ್ನು ಕಾಣುತ್ತಾರೆ. ತಾನು ಜಟಾಯುವನ್ನು ನಿಂದಿಸಿದುದು ಅನ್ಯಾಯವೆಂದು ರಾಮನು ಪರಿತಪಿಸುತ್ತ ಮುಂದುವರಿಯುತ್ತಿರಲು, "ಮಡುಗಟ್ಟಿನಿಂದ ಕೆನ್ನೀರ ಕೆಸರೋಳ್ ಮಿಂದ ಕಪಿದೆರಂಕೆಯ ಪರಿದ ತಿಪ್ಪುಳ ಗತಾಯು ಜಟಾಯು"ವನ್ನೇ ಕಾಣುತ್ತಾರೆ. "ಕರುಳಿರಿದುದಾ ಘೋರದರ್ಶನಂ." ರೆಕ್ಕೆತಿಪ್ಪುಳು ಕಡಿದು ಕೆಡೆದುಬಿದ್ದಿದ್ದ ಬೃಹದ್ರೂಪಿ ಖಗವರನ ಚಿತ್ರವನ್ನು ಸಾಮಾನ್ಯಮತಿ ಕಲ್ಪಿಸಿಕೊಳ್ಳಲಾರದು. ಕವಿಯ ಸಂಪದ್ಯುಕ್ತವಾದ ಪ್ರತಿಭೆ ಓದುಗರನ್ನು ಸಹ್ಯಾದ್ರಿಸಾನುವಿನ ಅರಣ್ಯಪ್ರಪಂಚಕ್ಕೆ ಕರೆದೊಯ್ದು, ನೂರುವರ್ಷ ಬಾಳುತ್ತ ಋತುಸಾಮಂತರಿಂದ ಓಲೈಸಿಕೊಳ್ಳುತ್ತಿರುವ ತರುಮಹಾರಾಜನ ದರ್ಶನಮಾಡಿಸುತ್ತದೆ. ಇದ್ದಕಿದ್ದಂತೆಯೆ ಈ ಮಹದ್ ವೃಕ್ಷವು "ದುರ್ಗದರಮನೆಯ ಪೆರ್ಗಡೆಯ ನೇಮಿಸಿದ ಪರಶುಧರರ" ಕೊಡಲಿಯೇಟುಗಳಿಗೆ ಈಡಾಗಿ, "ವನವೈಭವದ ಕಲಶಗೋಪುರಂ ಕೆಡೆದುಬೀಳುವ ವೈಭವದ ಭೀಮರಮಣೀಯದೃಶ್ಯಮಂ" ಅವರು ಕಾಣುವರು. "ಖರಸೂದನಂ ಕಂಡನಾ ಕಡಿದ ಪೆರ್ಮರನ ತೆರನ ಜಟಾಯು ಖಗವರನ." ಈ ಮಹೋಪಮೆಯನ್ನು ಇಡಿಯಾಗಿ ಎತ್ತಿಕೊಟ್ಟಲ್ಲದೆ ಅದರ ವಿವರವೈಖರಿಯ ಸೊಬಗನ್ನು ಮನಗಾಣಿಸಲು ಸಾಧ್ಯವಿಲ್ಲ. ಕಾಡಿಸ ಹೆಮ್ಮರವೊಂದಕ್ಕೆ ಕವಿಪ್ರತಿಭೆ ವ್ಯಕ್ತಿತ್ವದ ಘನತೆಯನ್ನು ಪ್ರದಾನಮಾಡಿ, ಜಟಾಯುವಿನ ಭವ್ಯವ್ಯಕ್ತಿತ್ವವನ್ನು ಮನಗಾಣಿಸಿದೆ. ಆ ವೃಕ್ಷರಾಜನಿಗೆ ಸಮನಿಸಿದ ಪತನದುರ್ಗತಿ ಜಟಾಯುವಿನ ಪತನದುರಂತತೆಯನ್ನು ಎತ್ತಿಕಾಣಿಸುತ್ತದೆ. ಇದೇ, ಮಹೋಪಮೆಮಾಡುವ ಭಾವಕೋಶಪೂರಣ ಕಾರ್ಯ.

[ಮಹಾಸಂ. ೧ : ಪು. ೨೫೭-೨೫೯ ; ಪಂ. ೭೭೮-೮೮೮]

೪. ವಾಲಿಯ ವಧೆಯ ಸಂದರ್ಭದ ಮಹೋಪಮೆಯನ್ನು ಈ ಹಿಂದೆಯೇ ಉದಾಹರಿಸಿ, ವಿವರಿಸಲಾಗಿದೆ.

೫. ಸುಗ್ರೀವಾಜ್ಞೆಗೆ "ಕಿಕ್ಕಿರಿದುದತ್ಯತಿ ಅಸಂಖ್ಯ ವಾನರ ಸೇನೆಗಳ್ ಕಿಷ್ಕಿಂಧೆಯಂ ತುಂಬಿ, ಸುತ್ತಿ." ಫಾಕ್‌ಲೆಂಡ್ ದ್ವೀಪ ವಿಸ್ತೀರ್ಣವನ್ನು ಶತಕೋಟಿ ಸಾಂದ್ರವಾಗಿ ತುಂಬಿರುವ ಪೆಂಗುಯಿನ್ ಪಕ್ಷಿವೃಂದವನ್ನು "ನವೀನ ಭೂ ಅನ್ವೇಷಿ ನಾವಿಕರ್" ದೂರದಿಂದ ಕಾಣುವ ದೃಶ್ಯವು ವಾನರ ಸೇನೆಯ 'ಅಸಂಖ್ಯ'ತೆಯನ್ನು ಸೂಚ್ಯಮಾರ್ಗದಲ್ಲಿ ಪರಿಣಾಮಕಾರಿಯಾಗಿ ಉಪಮಿಸಿದೆ. ಪ್ರಾಚೀನದ ಅಪರಿಚಿತ್ತದ

ಪರಿಚಯಕ್ಕೆ ಅರ್ವಾಚೀನದ ಪರಿಚಿತವನ್ನು ಉಪಯೋಗಿಸಿಕೊಂಡಿದೆ ಕವಿಯ ಜ್ಞಾನಭಂಡಾರ.

[ಮಹಾಸಂ. ೧; ಪು. ೩೮೮, ಪಂ. ೨೧೭-೨೨೯]

೬. ವಾನರ ಸೇನಾನಿ ನೀಲನು ರಾಮಲಕ್ಷ್ಮಣರನ್ನು ಗಿರಿನೆತ್ತಿಗೆ ಕರೆದೊಯ್ದು 'ಕಪಿಸೈನ್ಯವಾರ್ಧಿ'ಯನ್ನು ತೋರಿಸುತ್ತಾನೆ. ಅದನ್ನು ಕಂಡು, "ಬ್ರಹ್ಮಗಿರಿ ಶೃಂಗ ಕೇರಿದ ಕಬ್ಬಿಗನ ಮನಂ ಎತ್ತರದ ಮೇಣ್ ಬಿತ್ತರದ ನೋಟಕ್ಕೆ ಧುಮುಕಿ" ತತ್ತರಿಸು ವಂತೆ "ತತ್ತರಿಸಿತ್ತು ದಶರಥನ ಸುತನ ಮನಂ." ಕೆಲವು ಮಹೋಪಮೆಗಳಲ್ಲಿ ಒಳ ಉಪಮೆಗಳೂ ರೂಪಕಗಳೂ ಅಡಕವಾಗಿರುವ ಅಂಶವನ್ನು ಈ ಹಿಂದೆಯೇ ಸೂಚಿಸಿದೆ. ಈ ಮಹೋಪಮೆ ಸುಂದರ ಉತ್ಪ್ರೇಕ್ಷಾಮಾಲಿಕೆಯನ್ನು ಧರಿಸಿ ಮನೋಹರವಾಗಿದೆ.

[ಮಹಾಸಂ. ಪು. ೩೫೩; ಪಂ. ೩೪೫-೩೬೭]

೭. ಯೋಗಾವತಾರನಾದ ಆಂಜನೇಯನು ತನ್ನ ಯೋಗಬಲದಿಂದ ಕಡಲು ದಾಟಿ ಲಂಕೆಯನ್ನು ಸಮೀಪಿಸುತ್ತಿರುವಾಗ, ಕಡಲ ಕಾವಲುಗಾರ್ತಿಯಾದ ಸಿಂಹಿಕಾ ಚಂಡಿ ಮಾರ್ಗಮಧ್ಯದಲ್ಲಿ ಅವನನ್ನು ಅಡ್ಡಗಟ್ಟುತ್ತಾಳೆ. ಅವಳದ್ದು ರಾಕ್ಷಸಾದ್ಭುತ ಶಕ್ತಿ ; ಆಂಜನೇಯನದು ದೈವಿಕಬಲ. ಈ ಎರಡು ಲೋಕಾತೀತ ಶಕ್ತಿಗಳ ಹೊಣರ್ಕೆ ಯನ್ನು ಉಪಮಿಸಲು ಕವಿ ತನ್ನ ಆಧುನಿಕ ಜ್ಯೋತಿರ್ವಿಜ್ಞಾನ ಜ್ಞಾನಕೋಶಕ್ಕೆ ಕೈ ಯಿಕ್ಕಿ ಮಹೋಪಮಾ ಮೌಕ್ತಿಕವೊಂದನ್ನು ಮುಂದಿರಿಸಿದ್ದಾನೆ.

[ಮಹಾಸಂ. ಪು. ೪೧೩; ಪಂ. ೨೮೨-೨೯೦]

೮. "ಏರಿ ಕವಿಕಲ್ಪನಾ ಸುರಧನುರ್ಯಾನಮಂ, ಸಚ್ಚಿದಾನಂದಮಂ ಸಾಧಿಸೆ, ಋಷಿಪ್ರತಿಭೆ ಅಟನಗೈವುದು ದಿವ್ಯವೈವಿಧ್ಯಮಯ ವಿರಾಡ್ ವಿಶ್ವವೈಶಾಲ್ಯಮಂ." ಇಂದ್ರಿಯಾನುಭವ, ರುಚಿಭಾವನೆ, ತರ್ಕವಿದ್ಯೆ–ಈ ಪ್ರಪಂಚಗಳಲ್ಲಿ ಎಷ್ಟು ಅರಸಿದರೂ ಋಷಿಪ್ರತಿಭೆಗೆ "ತಾತ್ಕಾಲಿಕದ ತೃಪ್ತಿಯಲ್ಲದೆ ಬೇರೆ ಚಿರಂತನಾನಂದಮಂ" ಕಾಣದು. ಬಳಿಕ ಅದು ಯೋಗಪಥವನ್ನು ಹಿಡಿಯುವುದು : "ಪ್ರಕೃತಿಯ ಬೃಹಚ್ಚಿತ್ರ ಸೃಷ್ಟಿಯ ಸಮಸ್ತಮಂ" ಸಾಧಿಸಿ ಅಧ್ಯಾತ್ಮಿಸಿದರೂ ಆ ಪ್ರಯತ್ನಕಾರಣಕ್ಕೆ ಕಾರಣಾ ತೀತವಾದ ಬ್ರಹ್ಮತತ್ತ್ವ ಗೋಚರವಾಗದು. ಬುದ್ಧಿ ಸ್ಥಿರತೆಗೆಟ್ಟು ಶಂಕೆಯಲ್ಲಿ ಸಿಲುಕಿ, ಶ್ರದ್ಧೆ ತೂಗುಯ್ಯಾಲೆಯಾಡುತ್ತಿರಲು, ಸಾಧನದ ಶಿಖರದಲಿ ಅಹಂಕೃತಿಯಳಿದ ಕೂಡಲೆ, ಬ್ರಹ್ಮತತ್ತ್ವದ ಅನುಭೂತಿ ತನಗೆ ತಾನು ಮೈದೋರುವುದು. "ಅರಸಿದನೊ ಆಂಜನೇಯಂ, ಆ ಋಷಿಪ್ರತಿಭೆಯೋಲ್, ರಾಮನರ್ಧಾಂಗಿಯಂ ಲಂಕಾಜಟಿಲ ಕುಟಿಲ ವಿಸ್ತೀರ್ಣದೊಳ್."

[ಮಹಾಸಂ. ೨; ಪು. ೪೪೫-೪೪೬; ಪಂ. ೧೩-೪೬]

'ರಾಮಾಯಣ ದರ್ಶನ'ದಲ್ಲಿ ಸೀತೆ ಭೂಜಾತೆಯಷ್ಟೆ ಅಲ್ಲ; ಆದಿಶಕ್ತಿಯ, ಲೋಕಮಾತೆಯ ಅಂಶ; ಸಾಕ್ಷಾತ್ ಲಕ್ಷ್ಮಿ. ಆಂಜನೇಯ ಯೋಗಿಪ್ರವರ, ಯೋಗ

ಸಾಧನೆಯಲ್ಲಿ ಅನೇಕ ಸಿದ್ಧಿಗಳನ್ನು ಪಡೆದವನು; ಸಮುದ್ರಲಂಘನಕ್ಕೆ ಸಾಧಕವಾದ ಆಕಾಶಗಮನ ವಿದ್ಯೆ ಅವನ ಯೋಗಸಿದ್ಧಿಗಳಲ್ಲಿ ಒಂದು. ಆದರೂ, ಅವನಲ್ಲಿ ಇನ್ನೂ ಕೊಂಚ ಅಹಂಕೃತಿಯುಳಿದಿದೆ. ಅವನಿಗೆ ಸೀತಾರಾಮ ಪರಬ್ರಹ್ಮ ತತ್ತ್ವದರ್ಶನ ವಾಗುವುದು ಕಟ್ಟಕಡೆಯಲ್ಲಿ. ಇಂಥ ಯೋಗಿಪ್ರವರನ ಸೀತಾನ್ವೇಷಣ ಕಾರ್ಯವನ್ನು ಪ್ರತಿಮಿಸಲು ಆಧ್ಯಾತ್ಮಿಕ ಮಹೋಪಮೆಯನ್ನು ಯೋಜಿಸಿರುವುದು ಅತ್ಯುಚಿತವಾಗಿದೆ. ಆಧ್ಯಾತ್ಮಿಕ ಸಾಧನೆಯ ಊಹಾತೀತವಾದ ಕ್ಲಿಷ್ಟತೆಯ ವಿವರವಿನ್ಯಾಸವು ಆಂಜನೇಯನ ಅನ್ವೇಷಣಕಾರ್ಯದ ಅಪ್ರತಿಮಪ್ರಯತ್ನ ಶೀಲವನ್ನು ಪರಿಣಾಮಕಾರಿಯಾಗಿ ಧ್ವನಿಸುತ್ತದೆ.

೯. ಮೇಲಿನ ಮಹೋಪಮೆಗೆ ಹೊಂದಿಕೊಂಡತೆಯೇ ಇನ್ನೊಂದು ಲಘು ಮಹೋಪಮೆ ಕಾವ್ಯದ ಈ ಭಾಗವನ್ನು ಅಧ್ಯಾತ್ಮ ಪ್ರಕಾಶದಿಂದ ಬೆಳಗಿದೆ:

ಆಂಜನೇಯನು ಸೀತೆಗಾಗಿ ಎಲ್ಲೆಲ್ಲೂ ಹುಡುಕುತ್ತ—
"....ತರ್ಕಜಿಜ್ಞಾಸೆಯೋಲೇನೊಂದುಮಂ
ಬಿಡದೆ, ಸೋದಿಸುತೆ, ಪಾಪಿಯ ಹೃದಯ ಕೂಪದೊಳ್
ಪ್ರಾರಬ್ಧದಿಂ ನಿದ್ರಿಸಿಹ ಧರ್ಮಬುದ್ಧಿಯಂ
ಜಾಗ್ರತಂಗೊಳಿಸಲೆಳಸುತ್ತದಂ ಅರಸುವ
ಕೃಪಾಕೃಪಾಣದ ಕಿರಣದೋಲಾಂಜನೇಯಂ
ಪ್ರವೇಶಿಸಿದನಯ್ ಶಿಖರತ್ರಯವ್ಯಾಪಿಯಾ
ದಶಗ್ರೀವಪುರದ ಪಾಪದ ಸಾಂದ್ರಕೇಂದ್ರಮಂ!"

'ಕೃಪಾಕೃಪಾಣದ ಕಿರಣ'—ಈ ಉಪಮಾ ಉಕ್ತಿಯ ಸೌಂದರ್ಯ ಸೌಭಾಗ್ಯ ವನ್ನು ಊಹೆಗೆ ಬಿಡುವುದೇ ಮೇಲು.

[ಮಹಾಸಂ. ೨; ಪು. ೪೪೭, ಪಂ. ೫೭-೬೨]

೧೦. ಸೀತೆ ಲಂಕೆಯಲ್ಲಿ ರಾವಣನ ಬಂದಿಯಾದ ಎರಡನೆಯ ದಿನದ ಪ್ರಾತಃಕಾಲ. ಒಂದು ನಿಡುರಾತ್ರಿಯ ಕ್ಲೇಶವನ್ನು ಕಳೆದು ಇನ್ನೊಂದು "ದೀರ್ಘತರ ಸಂಕಟದ ದೀರ್ಘದಿನದವತಾರವನ್ನು ನಿರೀಕ್ಷಿಸುತ್ತಿದ್ದಾಳೆ. ಈ ಸ್ಥಿತಿಯಲ್ಲಿ, "ಪ್ರವೇಶಿಸಿತು ಪ್ರಥಮಕಿರಣಂ, ಪೃಥಿವಿಜಾತೆಯ ಪರ್ಣಕುಟಿಯಂ." ಎಳಬಿಸಿಲು ಅವಳ ಚರಣಾರವಿಂದಗಳನ್ನು ಸೋಂಕಿ ಸಂತೈಸುತ್ತದೆ. ತಪಸ್ವಿನಿಯಾದ ಸೀತೆ ವಂಶ ದೇವನಾದ ಸೂರ್ಯನ ಕಿರಣಶುಶ್ರೂಷೆಯಿಂದ ಮೈತಿಳಿದು ಎಚ್ಚರಗೊಂಡುದನ್ನು, ಹಿಮಶೈಲದ ಕತ್ತಲ ಗುಹೆಯಲ್ಲಿ ಹೆಪ್ಪುಗಟ್ಟಿದ ನೀರು ಉತ್ತರಾಯಣ ರವಿಯ ಕಿರಣಸ್ಪರ್ಶಕ್ಕೆರಗಿ ಹರಿಯತೊಡಗುವ ಚೆಲುವು ನೋಟಕ್ಕೆ ಹೋಲಿಸಿದೆ.

[ಮಹಾಸಂ. ೨; ಪು. ೪೪೬; ಪಂ. ೧೦-೨೦]

೧೧. ವಾನರ ಸೇನಾಪ ನೀಲನ ಆಜ್ಞೆಯಂತೆ ಕಡಲತೀರದಲ್ಲಿ ಕಿಕ್ಕಿರಿದು

ಬೀಡುಗೊಂಡ ವಾನರ ಸೇನೆಯ ಪರ್ಣಗೃಹಗಳನ್ನು ಸೀಮೆಯಿಂದ ಸೀಮಾಂತರಕ್ಕೆ ವಲಸೆಹೋಗುತ್ತ ದಾರಿಯಲ್ಲಿ ದಣಿದು ಸಿಕ್ಕಿದ ಮೊದಲ ನೆಲದಲ್ಲಿ ತಂಗುವ ಹಕ್ಕಿಯ ಹಿಂಡಿಗೆ ಹೋಲಿಸಿರುವ ಲಘುಮಹೋಪಮೆ.

[ಮಹಾಸಂ. ೨; ಪು. ೫೪೪; ಪಂ. ೧೧೧-೧೧೬]

೧೨. ಲಂಕೆಯಲ್ಲಿ, ದೈತ್ಯಸಭೆಯಲ್ಲಿ, ರಾವಣೇಶ್ವರನು "ಮುಂದಣ ಮಂತಣ ವಟ್ಟೆ" ಯನ್ನು ತನ್ನವರಿಂದ ತಿಳಿಯ ಬಯಸಿದ ಸಂದರ್ಭ. ಇಂದ್ರಜಿತು "ಬೆಸನೆ ಸಗುವುದೆ ನನಗುಸಿರ್ವಟ್ಟೆ" ಎಂದು ತನ್ನ ಪ್ರಜಾನಿಷ್ಠೆಯನ್ನು ನುಡಿಯುತ್ತಾನೆ. ಆಗ, ಸಭೆಯ ಜನರು ಹರ್ಷೋದ್ಗಾರ ಮಾಡುವುದನ್ನು ಕೂಡ ಮರೆತು ಬಿನ್ನಸಿರುವುದನ್ನು- "ಕರ್ನಿಶಿಯ ನಕ್ಷತ್ರದೋಲಗ"ದಲ್ಲಿ ಒಂದು ನಕ್ಷತ್ರ ಮುಂಧಾವಿಸಿ ಕಣ್ಮರೆಯಾದರೂ ಹಿಂದುಳಿಯುವ ಅದರ ಪ್ರಕಾಶ ಪಥರೇಖೆಯನ್ನು ನೋಡುವ ವಿಸ್ಮಿತರ ಬೆರಗು ಮೌನಕ್ಕೆ ಹೋಲಿಸಿರುವ ಮತ್ತೊಂದು ಲಘುಮಹೋಪಮೆ.

[ಮಹಾಸಂ. ೨. ಪು. ೫೭೧; ಪಂ. ೫೨೭-೫೩೨]

೧೩. ವಾನರಸೇನೆ ಕಡಲುದಾಟಿ ಲಂಕೆಯ ನೆಲವನ್ನು ಮುಟ್ಟುತ್ತದೆ. ಕಪಿ ನೃಪನ ದಂಡಯಾತ್ರೆಯ ಪ್ರಚಂಡ ಸನ್ನಾಹವನ್ನು ರಾವಣನು ಗುಪ್ತಚರರಿಂದ ತಿಳಿದು, ಪ್ರಧಾನ ಸೇನಾನಿ ಪ್ರಹಸ್ತನನ್ನು ಬರಮಾಡಿಕೊಂಡು ಸಮರ ಸಂವಿಧಾನವನ್ನು ಬೆಸಸುತ್ತಾನೆ. ಇತ್ತ ವಾನರೇಂದ್ರನು ತನ್ನ ಗುಪ್ತಚರರಿಂದ ರಾಕ್ಷಸರ ಸನ್ನಾಹವನ್ನರಿತು, ಅದಕ್ಕೆ ಪ್ರತಿಯಾಗಿ ವಾನರಸೇನೆ ಎದುರೊಡ್ಡಿ ನಿಲ್ಲಬೇಕಾದ ಕ್ರಮವನ್ನು ವಿವರಿಸುವನು. ಸುಗ್ರೀವಾಜ್ಞೆಯನ್ನು ಕೇಳಿ ವಾನರರ ಉತ್ಸಾಹ ಮೇರೆದಪ್ಪಿ, ಸೈನ್ಯವೆಲ್ಲ ಕಡಲ ತೀರದ ಶಿಬಿರವನ್ನುಳಿದು ಸುವೇಲಾದ್ರಿಯನ್ನು ಏರಿ ನಿಲ್ಲುವುದು. ಅಲ್ಲಿಂದ, ತ್ರಿಕೂಟಶಿಖರದ ಮೇಲೆ ಗಗನ ನಗರಿಯೋ ಎನ್ನುವಂತೆ "ಬೃಹದ್ ರಮಣೀಯ, ಮಾರೀಚಮಾಯಾಮೃಗೋಪಮದ ಕನತ್‌ಕನಕಗೋ ಶ್ರೀ ರುಚಿರಮಾಲಂಕೆ" ಗೋಚರಿಸುವುದು. ವಿಭೀಷಣನು ವಿವರವಾಗಿ ವರ್ಣಿಸಲು, ಕುಬೇರನ ಸಂಪತ್ತನ್ನು ಸೂರೆಗೊಂಡು ನಿರ್ಮಿತವಾದ ಆ ದೈತ್ಯದುರ್ಗವನ್ನು, "ಕಿಡಿಯಿಡುವ ಕಣ್ಗಳಿಂ ನೋಡಿದನು ದಾಶರಥಿ." ಆ ಕ್ಷಣದ ಅವನ ಉಗ್ರಕೋಪವೆಷ್ಟು! "ಮುಯ್‌ಮುಯ್ಯ್, ಪಲ್ ಗಚ್ಚಿ, ಕೋದಂಡದಂಡದಿಂದುಗ್ರಮತಿ ದಾಶರಥಿ ಮಲೆಯ ನೆತ್ತಿಯನ್ ಒತ್ತಿದನ್, ತನ್ನನಾ ಆಂತಿರ್ದ ಪಾಸರೆಯ ಬಲ್‌ಬಂಡೆಯುಂ. ಒತ್ತಲ್ ಅವನಿ ಕಂಪಿಸಿತೊಂದು ಭೀತಿ ವೀಚೀ ತಟತ್‌ತಾಡನಿಯ ಪ್ರೇಯಿಸ್ಲಗೆಂಬಂತೆ!" ರಾವಣಾರಿಯ ಸಾತ್ತ್ವಿಕ ಕೋಪದ ಉಗ್ರತೆ, ಈ ಮುನ್ನ ವಿನ್ಯಸ್ತವಾದ ಮಹೋಪಮೆಯಿಂದ ಪರಿಸ್ಫುಟಗೊಳ್ಳುತ್ತದೆ:

ಮಲೆಯ ತಲೆಯ ಮೇಲಿನ ಗವಿಯಲ್ಲಿನ ಮೃಗರಾಜನನ್ನು ಬೇಡರೊಡೆಯನು ಧೀವದೆರೆಯನು ತೋರಿಸಿ ಸಮೀಪಕ್ಕೆ ಸೆಳೆಯುತ್ತಾನೆ. ಇತ್ತ ಮರೆಯಲ್ಲಿದ್ದ ಬೇಡರು

ಬಲೆಯೊಡ್ಡಿ ಸಿಂಹಿಣಿಯನ್ನು ಸೆರೆಹಿಡಿದು ಅರಸನ ಬೇಟೆಯ ಬೀಡಿನ ಬಳಿಯ ಕಂದರಕ್ಕೆ ಒಯ್ಯುತ್ತಾರೆ. ಅದರ ಸುತ್ತ ಹೊನ್ನಿನ ಹಲ್ಲಿನ ಹೇರಾನೆಗಳ ಕಾವಲು. ಸೆರೆಯಾದ ಸಿಂಗಹೆಣ್ಣು ಪ್ರಿಯನನ್ನು ನೆನೆದು ಚೀರಿಡುತ್ತದೆ. ಬೇಡರ ಮೋಸದ ಸುಳಿವು ಹಿಡಿದು ಹಿಂತಿರುಗಿದ ರೋಷಗೊಂಡ ಸಿಂಹವು ತನ್ನ ಹೆಣ್ಣಿನ ಹಾಡನ್ನರಿತು, ಕೋಡುಗಲ್ಲನ್ನು ಹತ್ತಿ "ಕಾಣ್ಬುದಾ ಸಿಂಹಿಣಿಯ ಸುತ್ತಲುಂ ಕಾಪಿರ್ಪ ಸಾಲಂಕೃತಿಯ ದಂತಿ ಪಂಕ್ತಿಯಂ." ಅದಕ್ಕೆ ರೋಷವುಕ್ಕಿ, "ತಾಂ ನಿಂತ ಬಂಡೆಯನಾನೆಯೊರ್ ಮಂಡೆಯಂ ಗೆತ್ತು, ನಖವಜ್ರದಿಂದಪ್ಪಳಿಸೆ ಬಿರಿವುದಾ ಕಲ್, ಗರ್ಜನೆಗೆ ದಿಗಿಲ್ ತತ್ತರಿಸಿ ಬೆಟ್ಟ ಮೊರ್ದೆಯೊಡೆವವೋಲ್!"

[ಮಹಾಸಂ. ೨ ; ಪು. ೬೮೨ ; ಪಂ. ೧೧೪-೧೨೪]

ಮಹೋಪಮೆಯಿಂದ ಪ್ರಸ್ತುತದ ಭಾವಪ್ರೋಷಣೆಯೂ ವೀರರಸೋತ್ಕರ್ಷವೂ ಹೇಗೆ ಉಂಟಾಗಿವೆಯೆಂಬುದು ಸ್ವಯಂ ವೇದ್ಯವಾಗಿದೆ. ಭಾವಸಾದೃಶ್ಯಮಾತ್ರವಲ್ಲದೆ ಕೆಲವು ಮುಖ್ಯಾಂಶಗಳಲ್ಲಿ ಅವಯವಸಾದೃಶ್ಯವೂ ಸಮನಿಸಿ, ಮಹೋಪಮೆಯ ಸೌಂದರ್ಯದ ಬೆಲೆ ಹೆಚ್ಚಿರುವುದನ್ನು ನಾವು ಇಲ್ಲಿ ಗಮನಿಸಬೇಕು. ಮೃಗರಾಜನ ಪ್ರಸಕ್ತಿಯಿಂದ ರಾಮನ ಧೀರೋದಾತ್ತತೆ ಸೂಚಿತವಾಗಿದೆ. ಅದು ಕೋಡುಗಲ್ಲನ್ನು ಏರಿ ನಿಂತು ನೋಡುವಂತೆಯೇ ಇವನು ಸುವೇಲಾದ್ರಿಯ ಶಿರದಮೇಲೆ ನಿಂತು ಲಂಕೆಯನ್ನು ನೋಡುತ್ತಾನೆ. ಮೃಗರಾಜನ ಹೆಂಡತಿಯನ್ನು ಬೇಡರು ಮೋಸದಿಂದ ಹಿಡಿದಿದ್ದಾರೆ; ಸೀತೆಯನ್ನಾದರೂ ರಾವಣನು ಕೈತವದಿಂದಲೇ ಕಳ್ದುಯ್ದಿರುವುದು. ಮೇಲಿನಿಂದ ನೋಡಿದಾಗ, ರಾಮನಿಗೆ ಕಂಡದ್ದು ವೈರಿವೈಭವದ ಕನತ್‌ಕನಕ ರುಚಿರದ ಲಂಕೆ; ಮೃಗರಾಜನಿಗೆ ಕಂಡದ್ದು, ಜಾತಿವೈರಿಗಳಾದ "ಹೊನ್ನ ಹಲ್ಲಣದ ಹೇರಾನೆಗಳ ಬೇಲಿಕಾಪು." ಇದಕ್ಕೂ ಹೆಣ್ಣು ಕಾಣದು; ರಾಮನಿಗೂ ಸೀತೆ ಕಾಣಳು. ಮೃಗರಾಜನ ಪಂಜದ ಹೊಡೆತಕ್ಕೆ ಕಲ್ಲು ಬಿರಿದರೆ, ರಾಮನ ಪದಘಾತಕ್ಕೆ "ಅವನಿ ಕಂಪಿಸಿ," ರಾಕ್ಷಸ ನಾಶಸೂಚಕ ದುಶ್ಶಕುನಗಳು ಲಂಕೆಯಲ್ಲಿ ಬೀಸಿದ್ದು ಅಚ್ಚರಿಯೆ?

ಕವಿಯ ಇಂತಹ ಕೆಲವು ವಿವರರಂಜಿತ ಪರಿಣಾಮರಮಣೀಯ ಮಹೋಪಮೆಗಳನ್ನು ಪರಿಶೀಲಿಸಿದಾಗ, ಮಹೋಪಮಾಲಂಕಾರ ನ್ಯಾಸವು ಕೇವಲ ಅಲಂಕರಣ ಕಲೆಯಲ್ಲಿಯೇ ವಿರಮಿಸದೆ ಕಾವ್ಯಪ್ರತಿಮಾ ನಿರ್ಮಾಣದ ಒಂದು ಮುಖ್ಯ ಅಂಗವಾಗಿಯೇ ಪರಿಣಮಿಸಿರುವುದನ್ನು ಮನಗಾಣಬಹುದು.

೧೪. ಕುಂಭಕರ್ಣನು ರಣಭೂಮಿಗೆ ಅವತರಿಸಿದ ರೌದ್ರಸನ್ನಿವೇಶ; "ಕಾಲಾಂತಕನ ತೆರದಿ ಕಾಲಿಕ್ಕಿದ್ದಾನೆ." ಕ್ಷಣಮಾತ್ರದಲ್ಲಿ "ಕೊಂದನರೆದನು ಕೋಟಿ ಕಪಿ ಕುಲರಾ." ಹೀಗೆ, ಕುಂಭಕರ್ಣನು ದಶಾನನನ ಮಹಾಸಮರ ಯಂತ್ರಸ್ವರೂಪನಾಗಿ ಮುಂಬರಿಯುವುದನ್ನು–"ಮಿಳ್ತುವಿನ ಮುನ್ನಡೆಗೆ ನೆತ್ತರೋಕುಳಿಯೊಯ್ದು, ಕಂಬನಿಯ ಕಾಲುವೆಗೆ ರಕ್ತವರ್ತ್ಮಗಳಾಗುತಿಪ್ಪ," "ಐರೋಪ್ಯದೌಷ್ಟ್ಯಂ ಪ್ರಯೋಗಿಸುವ ದೈತ್ಯ

ಯಂತ್ರ"ಗಳ ಮೊತ್ತಕ್ಕೆ ಹೋಲಿಸಿರುವ ಮಹೋಪಮೆ.

[ಮಹಾಸಂ. ೨; ಪು. ೬೮೨; ಪಂ. ೧೧೪-೧೨೪]

೧೫. ಕುಂಭಕರ್ಣನ ಮುದ್ಗರದ ಒಂದೆರಡೇಟಿಗೆ ಕಪಿಸೈನ್ಯ ಸಾವಿರಾರು ಮಂದಿ ನಾಮಾವಶೇಷರಾಗುತ್ತಾರೆ. "ಪೆಸರೆ ಬಿರುದಾದುದಾ ಕಾಲಾಳ್ಗಳಿಗೆ!" ಹೀಗೆ ವಾನರ ಸೇನೆ ಕಿತ್ತೋಡುವುದನ್ನು-ಬಹುಕಾಲದಿಂದ ಅದುಮಿಟ್ಟ ಸಹಜಕಾಮನೆಯ ಬಿರಿಯು ಬ್ಬರದ ಎದುರಿನಲ್ಲಿ ಬುದ್ಧಿಯ ಬೆಂಬಲವಿದ್ದರೂ ಅಂತರಾತ್ಮಪ್ರಚೋದನೆಯಿಲ್ಲದ 'ಸದ್‌ವಾಸನಾಸಭ್ಯ'ರ್ಕಳು ದಿಕ್ಕುಗೆಟ್ಟೋಡುವುದಕ್ಕೆ ಹೋಲಿಸಿರುವ ಲಘುಮಹೋ ಪಮೆ.

[ಮಹಾ ಸಂ.೨; ಪು. ೬೮೩;ಪಂ. ೧೩೬-೧೪೬]

೧೬. ಲಕ್ಷ್ಮಣಪ್ರೇರಿತನಾದ ಅಂಗದನ ಕರೆಕೂಗಿಗೆ, ಕೆಚ್ಚುನುಡಿಗಳಿಗೆ, ಕಿವಿ ಗೊಟ್ಟು ಮತ್ತೆ ಕುಂಭಕರ್ಣನನ್ನೆದುರಿಸಲು ಕಪಿಸೈನ್ಯ ಹಿಂದಿರುಗುತ್ತದೆ. ಅಂಗದನನ್ನು ಮುಂದುಮಾಡಿಕೊಂಡು ಎಲ್ಲರೂ ಮಹಾಸುರನ ಮೇಲೆ ನುಗ್ಗಿಬೀಳುತ್ತಾರೆ. ಕುಂಭ ಕರ್ಣನ ಮುದ್ಗರದ ಮೊದಲೇಟು ಅಂಗದನಿಗೆ ಬಿದ್ದು, ಅವನು ನೆತ್ತರು ಕಾರುತ್ತ ನೆಲಕ್ಕುರುಳಿದುದನ್ನು, ಇತರರು ಒಬ್ಬೊಬ್ಬರಾಗಿ ಕೆಳಕ್ಕೆ ಬಿದ್ದುದನ್ನು—ಒಂಟಿ ಎಕ್ಕಲ ನನ್ನು ಬೇಟೆಯ ನಾಯ್ಗಳು ಎದುರಿಸಿದಾಗ, ಮೊದಲು ನುಗ್ಗಿದ ನಾಯಿ ಅದರ ಮಸೆದ ಕೋರೆದಾಡೆಗೆ ಬಲಿಯಾಗಿ, ಕಡೆಗೆ "ಒಡೆಯನೆಯೆ ಐತಂದು ಗುರಿಯಿಟ್ಟು ಬಿಲ್ಲೆತ್ತಿ ಕುದುರೆಯನೆಳೆದು ಕೋವಿಗುಂಡಿಡುವಲ್ಲಿ ಪರಿಯಂತಾ" ಅದಕ್ಕೆ ಬಲಿಬೀಳುವ ಹಲವಾರು ನಾಯ್ಗಳ ನಿರರ್ಥಕ ಪ್ರತಿಭಟನೆಗೆ ಹೋಲಿಸಿರುವ, ಬೇಟೆಯ ಬಾಳಿನ ಅನುಭವವನ್ನು ಚಿತ್ರಿಸುವ ಮಹೋಪಮೆ. ಕುಂಭಕರ್ಣನ ಮುಂದೊದಗುವ ಮರ ಣವೂ ಈ ಮಹೋಪಮೆಯಲ್ಲಿ ಧ್ವನಿತವಾಗಿದೆ.

[ಮಹಾಸಂ. ೨; ಪು. ೬೮೫; ಪಂ. ೨೦೭-೨೧೪]

೧೭. ಕುಂಭಕರ್ಣನು ಮಡಿದಮೇಲೆ, ಇಂದ್ರಜಿತುನಿಕುಂಭಿಲಾಯಾಗದಲ್ಲಿ ತೊಡಗಿದ್ದಾನೆ. ಈ ಸಮಯವನ್ನರಿತು, ವಾನರಸೇನೆ ಇರುಳಿನಲ್ಲಿ ದುರ್ಗಕ್ಕೆ ಲಗ್ಗೆ ನುಗ್ಗಿ ಬೆಂಕಿಯಿಡಲು, ಅಕಾಶವೆಲ್ಲ ಅಗ್ನಿಚಿತ್ರಿತವಾಗಿ "ಪರಿದುದು ಬೆಂಕೆ ಪೊನಲವೋಲುರಿ ತೆರೆಗಳಲೆಯೆ." ಆಗ, ರಾವಣೇಶ್ವರನು ತನ್ನ ಮಗನಾದ ಅತಿಕಾಯನನ್ನು ಇರುಳು ಕಾಳೆಗಕ್ಕೆ ನಿಯೋಜಿಸುತ್ತಾನೆ. ತಂದೆಯ ಆಜ್ಞೆಯಿಂದ ತನಗೂ ತನ್ನ ತಾಯಿಗೂ ಶಾಂತಿ ದೊರಕುವ "ರಣದ ಮರಣದ ಸುಯೋಗ"ವನ್ನು ಅತಿಕಾಯನು ಕಳೆದು ಕೊಂಡಾನೆ? (ಈ ಕರುಣಾಜನಕ ಪ್ರಕರಣದ ವಿವರಣೆಗೆ ಇಲ್ಲಿ ಅವಕಾಶವಿಲ್ಲ.) "ಮಲೆಯನಾಡಿನ ಕಾಡಿನಂತರದಿ" ಬಿದಿರಮೆಳೆಯಲ್ಲಿ ಹುಟ್ಟಿದ ಕಾಳ್ಗಿಚ್ಚು ಮಲೆ ಯಿಳಿದು ಕಣಿವೆಯ ಹಳ್ಳಿಯ ಕಡೆಗೆ ಧಾವಿಸುತ್ತದೆ. ಅದನ್ನು ಪ್ರತ್ಯಗ್ನಿಯಿಂದ ತಡೆ ಗಟ್ಟಲು ಮಾಡಿದ ಹಳ್ಳಿಗರ ಪ್ರಯತ್ನವೆಲ್ಲಾ ನಿರರ್ಥಕವಾಗುತ್ತಿದೆ. 'ಕೆಟ್ಟೆವೋ'

ಎಂದು ದಿಕ್ಕುಪಾಲಾಗಿ ಓಡತೊಡಗುತ್ತಾರೆ ಹಳ್ಳಿಯ ಹೆಣ್ಣುಮಕ್ಕಳು. ಇದ್ದಕ್ಕಿದ್ದಂತೆಯೆ ದೈವಕೃಪೆಯಿಂದೆಂಬಂತೆ "ಕಾರ್ಗಾಳಿ ಕರ್ಮುಗಿಲುಗಳಂ ಪೊತ್ತು ಬೀಸಿತ್ತು, ಸೋರ್ವುದು ಮಹಾವೃಷ್ಟಿ; ನಂದುವುದು ಕಾಳ್ಗಿಚ್ಚು ನಿಶ್ಶೇಷವಾಗಿ."—"ಅಂತೆವೋಲ್, ಮುಂಗಾರ್ ಗಾಳಿಮುಗಿಲಂತೆವೋಲ್, ಅತಿಕಾಯಸುರಿಯಿಕ್ಕುವಿದಳಕೆ ನಡೆದನಿದಿರಾಗಿ."

[ಮಹಾಸಂ. ೨; ಪು. ೭೧೨-೭೧೪; ಪಂ. ೯೬-೧೪೦]

ಶ್ರೀ 'ಕುವೆಂಪು' ಕಾವ್ಯದ್ವಯದ ಕಟ್ಟಕಡೆಯ ಮಹೋಪಮೆಯಿದು. ತಕ್ಕಮಟ್ಟಿಗೆ ದೀರ್ಘವಾದುದೆ. ಕಾಳ್ಗಿಚ್ಚಿನ ಚಿತ್ರದ ಜೀವಂತಲಕ್ಷಣವನ್ನು ಇಡಿಯ ಮಹೋಪಮೆಯನ್ನು ಓದಿಯೇ ಅರಿಯಬೇಕು.

೬

ಶ್ರೀ ಕುವೆಂಪು ಸೃಷ್ಟಿಯ ಮಹೋಪಮಾ ಮಾಲೆಯಲ್ಲಿ ಒಂದೊಂದನ್ನೂ ಪ್ರತ್ಯೇಕವಾಗಿ ಪರಿಶೀಲಿಸಿದಂತಾಯಿತು; ಇಲ್ಲಿನ ನಿರೂಪಣೆಯಿಂದ ತೃಪ್ತಿಯಾಗದೆ ಮೂಲಕಾವ್ಯಗಳಲ್ಲಿಯೇ ಆ ಉಪಮೆಗಳ ಸೊಬಗನ್ನು ಸವಿಯಬೇಕೆಂದು ಓದುಗರಿಗನ್ನಿಸಿದರೆ, ಈ ಲೇಖನದ ಉದ್ದೇಶವೂ ನೆರವೇರಿದಂತೆಯೇ ಸರಿ. ಅಲ್ಲದೆ, ಎಲ್ಲ ಅಲಂಕಾರಗಳಂತೆ, ಮಹೋಪಮಾಲಂಕಾರದ ಸೊಬಗನ್ನಾದರೂ ಕಾವ್ಯದ ಒಡಲಿನಮೇಲೆಯೇ ಕಂಡು ಸವಿಯಬೇಕು.

ಇನ್ನು, ನಮ್ಮ ದೃಷ್ಟಿಯನ್ನು ತುಸ ಹಿಂದಕ್ಕೆ ಹೊರಳಿಸಿ, ಆ ಮಹೋಪಮಾ ಪ್ರಪಂಚದ ಸಮ್ಯಕ್ ದರ್ಶನವನ್ನು ಪಡೆದುದಾದರೆ ಕವಿಯ ಮನೋಭೂಮಿಕೆಯ, ಅನುಭವದ ನೆಲೆಗಟ್ಟಿನ, ಪರಿಚಯವಾಗುವುದು. ಬಹು ಸಂಖ್ಯೆಯ ಮಹೋಪಮೆಗಳಲ್ಲಿ ಕವಿಯ ಪ್ರಕೃತಿಪ್ರೇಮ ತಾನೇ ತಾನಾಗಿ ಚಿಲುಮೆಚಿಮ್ಮಿದೆ. ಈ ಪ್ರಕೃತಿದೃಶ್ಯ ಪ್ರಪಂಚ ನಗರೋದ್ಯಾನಗಳ ಕೃತಕ ಸೌಂದರ್ಯದ ನಿಸರ್ಗವಲ್ಲ; ಬಹುಮಟ್ಟಿಗೆ ಕವಿಯ ಬಳವಿಯ ತೂಗುತೊಟ್ಟಿಲಾದ ಮಲೆನಾಡಿನ-ಸಹ್ಯಾದ್ರಿಯರುದ್ರರಮಣೀಯ ಆರಣ್ಯಕ ಪ್ರಪಂಚ. ಇನ್ನುಳಿದ ಹೆಚ್ಚಿನ ಸಂಖ್ಯೆಯ ಮಹೋಪಮೆಗಳು ಬೇಟೆಯ ಬಾಳಿನ ಅನುಭವದಿಂದ ರೂಪಗೊಂಡವು; ಇವೂ ಆರಣ್ಯಕಪ್ರಪಂಚಕ್ಕೇ ಸೇರಿದವು. ಈ ಎಲ್ಲ ಮಹೋಪಮೆಗಳೂ ಸ್ವಾನುಭವದಿಂದ ಹೊರಹೊಮ್ಮಿರುವುದರಿಂದ ಅವು ನಿಸರ್ಗದಂತೆಯೇ ಜೀವಂತವಾಗಿವೆ, ವರ್ಣರಂಜಿತವಾಗಿವೆ, ಉಲ್ಲಾಸದಾಯಕವಾಗಿವೆ; ಬಹು ಮಂದಿ ಓದುಗರಿಗೆ ಪ್ರಾಯಶಃ ಅಪರಿಚಿತವಾದ ಪ್ರಪಂಚಕ್ಕೆ ಕರೆದೊಯ್ದು ನೂತನ ಅನುಭವಸಂಸ್ಕಾರವನ್ನೂ ಕೊಡುವುವಾಗಿವೆ. ಇನ್ನೂ ಕೆಲವು ಮಹೋಪಮೆಗಳು ಕವಿಯ ವಿಶಾಲಲೋಕದ ಜ್ಞಾನಾನುಭವಗಳಿಂದ ಹುಟ್ಟುಪಡೆದಿವೆ. ಆಧ್ಯಾತ್ಮಿಕ ಪ್ರಪಂಚಕ್ಕೆ ಕರೆದೊಯ್ಯುವ ಮಹೋಪಮೆಗಳೂ ಉಂಟು, ಕಲ್ಪನಾವಿಲಾಸದ ಕುಸು

ರಿಗಳೂ ಉಂಟು.

ಈ ಪುನಃಪರಿಶೀಲನೆಯಿಂದ ಒಂದು ಮುಖ್ಯಾಂಶ ಹೊರಪಡುತ್ತದೆ: ಕವಿಯ ಅನುಭವಭಂಡಾರ ಸಂಪದ್ಯುಕ್ತವಾಗಿದ್ದರೆ ಮಾತ್ರ ಮಹೋಪಮಾ ನಿರ್ಮಿತಿ ಸಾಧ್ಯ; ಮಹೋಪಮೆ ಶೋಭಿಸುವುದು ಮಹಾಕಾವ್ಯದಲ್ಲಿ ಮಾತ್ರ–ಕಡಿಮೆಯೆಂದರೆ, 'ಚಿತ್ರಾಂಗದೆ'ಯಂಥ ದೀರ್ಘಕಾವ್ಯದಲ್ಲಿ.

ಆಧುನಿಕ ಕನ್ನಡ ಕವಿ ಕುಲೋತ್ತುಂಗರಾದ ಶ್ರೀ ಕುವೆಂಪು ಅವರು ತಮ್ಮ ಸಂಪದ್ಯುಕ್ತವಾದ ಅನುಭವಭಂಡಾರದ ನೆರವಿನಿಂದ ಹಲವಾರು ಶ್ರೇಷ್ಠ ಮಹೋಪಮೆಗಳನ್ನು ನಿರ್ಮಾಣ ಮಾಡಿದ್ದಾರೆ. ಈ ಮಹೊಪಮೆಗಳ ಮಾದರಿ ಪಾಶ್ಚಾತ್ಯವೇ ಹೊರತು ಭಾವಸಾಮಗ್ರಿಯೆಲ್ಲ ಕವಿಯದೇ. ಅಪರಿಚಿತ ಪರಕೀಯ ಸುಪರಿಚಿತ ಸ್ವಕೀಯವಾಗಿದೆ. ಅವರ ಮಹೋಪಮೆಗಳಿಂದ ಅವರ ಕೃತಿರತ್ನ ಹೆಚ್ಚು ಉಪಾದೇಯವಾಗುವುದರಲ್ಲಿ ಸಂದೇಹವಿಲ್ಲ. ಕವಿಯ ಈ ಹಿರಿಯ ಕಾಣಿಕೆಗಾಗಿ ಕನ್ನಡ ಲೋಕದ ಕೃತಜ್ಞತೆ ಅವರಿಗೆ ಸಲ್ಲುತ್ತದೆ.



# ಮಲೆನಾಡಿನ ಸ್ಮೃತಿ ತರಂಗದಲ್ಲಿ

ಜಿ. ಎಸ್. ಶಿವರುದ್ರಪ್ಪ

ಎಲ್ಲಿತ್ತು ಈ ಮಲೆನಾಡು? ಕವಿ ಕುವೆಂಪು ಅವರು ಬಂದು ತಮ್ಮ ಕಾವ್ಯದ ರಸಗವಾಕ್ಷಗಳನ್ನು ತೆರೆದು ಈ ಸುಂದರ 'ನಿಸರ್ಗ ವಿಭೂತಿಯನ್ನು' ನಮಗೆ ತೋರುವ ಮುನ್ನ ಎಲ್ಲಿತ್ತು ಈ ಮಲೆನಾಡು? ಇತ್ತು, ನಿಜ: ಒಂದು ರೀತಿಯಲ್ಲಿ ಇದು ಇಷ್ಟೇ ಇತ್ತು; ಈಗಲೂ ಇದೆ. ಆದರೆ ಯಾವ ದಿಗಂತಗಾಮಿಯಾಗಿರುವ ಸಹ್ಯಾದ್ರಿಯ ಧೀರ ಪರ್ವತ ಶ್ರೇಣಿಗಳ, ನಿಬಿಡ ನಿರ್ಜನ ಕಾನನಾಂತರದ ಈ ಮಲೆನಾಡು, ಸಾಮಾನ್ಯದೃಷ್ಟಿಗೆ "ಮಲೆ ಕಾಡು ಸೊಳ್ಳೆ ಮಲೇರಿಯಾ ಹುಲಿ ಹಾವು ರೋಗ ಸಾವು!" * ಮಾತ್ರವಾಗಿ "ಭೂಮಿಯಲ್ಲಿ ಹುಟ್ಟಿದುದಕ್ಕೆ ಹೇಗಾದರೂ ಮಾಡಿ ನಿವಾರಿಸಿಕೊಳ್ಳಬೇಕಾಗಿರುವ ಒಂದು ದುರ್ಗಮ ದುರಂತ ಭೂಭಾಗ"* ವಾಗಿ ಪರಿಣಮಿಸಿದ್ದ ಮಲೆನಾಡು, ತನ್ನ ಸಮಸ್ತ ಚೇತನವನ್ನೂ ಅಭಿವ್ಯಕ್ತಗೊಳಿಸಲು ರಸ ಮಾಧ್ಯಮವೊಂದನ್ನು ಕುವೆಂಪು ವನ್ನಾಗಿ ಪಡೆದು, ಅವರ ಮೂಲಕ ತನ್ನ ಚೆಲುವಿನ ಚೈತನ್ಯವನ್ನು ಬಹುಮುಖವಾಗಿ ವ್ಯಕ್ತಪಡಿಸಿ ಕನ್ನಡ ಕಾವ್ಯಲೋಕದಲ್ಲಿ ಚಿರಂತನತೆಯನ್ನು ಪಡೆಯಿತು!

ಕುವೆಂಪು ಅವರ ಕಾವ್ಯಶಿಶು ಸಹ್ಯಾದ್ರಿಯ ಮಹೋತ್ತುಂಗ ಸ್ತನದಿಂದ ಸೌಂದರ್ಯ ಪೀಯೂಷವನ್ನು ಹೀರಿ ಪುಷ್ಟವಾದುದು. ಮಲೆನಾಡು ಅವರ ಕಾವ್ಯ ವೈನತೇಯ ಗರಿಗೆದರಿ ಅತೀತದೆಡೆ ಹಾರಲು ಅನುವು ಮಾಡಿಕೊಟ್ಟ ಮೊದಲ ಮಲ್ಲಸಾಲೆ; ಅವರ ಬಾಳನ್ನು ಪರಿವರ್ತಿಸಿ, ಕವಿಯನ್ನಾಗಿ ಮಾಡಿ ಲೋಕಕ್ಕೆ ನೀಡಿದ ಪವಾಡ ಚೇತನ.

ಒಮ್ಮೆ ಕುವೆಂಪು ಹೇಳಿದರು: "ಮಲೆನಾಡಿಗೆ ನಾನೆಷ್ಟು ಋಣಿ?" ಎಂದು. ನಿಜ, ಅವರು ಮಲೆನಾಡಿಗೆ ಋಣಿಯಾದಂತೆ, ನಾವೂ ಇಂತಹ ಮಲೆನಾಡನ್ನು ತೆರೆದು ತೋರಿದ ಕವಿವಾಣಿಗೆ ಋಣಿ. ಮಲೆನಾಡು ಅವರ ಪಾಲಿಗೆ ಶ್ರೀಮಂತ ಋಣದಗಣಿ. ಅಲ್ಲಿ ಅವರ ಚೇತನ ಪಡೆದ ವಿವಿಧ ಅನುಭವಗಳು, ಕಂಡು ಉಂಡ ಸಾವಿರ ನೋಟಗಳು, ಎಲ್ಲವೂ ಒಂದು ವಿಶಿಷ್ಟವಾದ ರೀತಿಯಲ್ಲಿ ಪ್ರೈದೋರಿವೆ ಅವರ ಕೃತಿಗಳಲ್ಲಿ. ಋಷಿಕವಿಯಾದ ವಾಲ್ಮೀಕಿ, ಕವಿಯಾಗುವ ಮುನ್ನ ವ್ಯಾಧವೃತ್ತಿಯಲ್ಲಿದ್ದಾಗ ಅಂದಿನ ಪರ್ವತಾರಣ್ಯಗಳಲ್ಲಿ ಕಂಡು ಉಂಡ ಅನುಭವಗಳೆಲ್ಲವೂ ಆತ ಕವಿಯಾದಾಗ ಯಾವ ರೀತಿ ಅವನ ಕಾವ್ಯದ ಸೌಂದರ್ಯಾನುಭವದ ಸಾಮಗ್ರಿಯಾಗಿ ಪರಿಣಮಿಸಿತೋ, ಅಂತೆಯೇ, ಕುವೆಂಪು ಅವರ ವಿಚಾರದಲ್ಲಿ ಅವರು ಪಡೆದ ಮಲೆನಾಡಿನ ಅನುಭವಗಳು ಅವರ ಕಾವ್ಯದ ಜೀವನಾಡಿಗಳಾಗಿ ಪರಿಣಮಿಸಿವೆ. ಅವರ ಕೃತಿಗಳಲ್ಲಿ ಓದುಗರು ದರ್ಶಿ

---

*ಮಲೆನಾಡಿನ ನಿಸರ್ಗ ವಿಭೂತಿ—ವಿಭೂತಿಪೂಜೆ: ಕುವೆಂಪು. ಪು. ೩೩

ಸುವ, ಆ ಪರ್ವತಗಳ ಧೀರ ವೈಖರಿ ; ನಿಬಿಡ ನೀರವ ಕಾನನಾಂತರದ ವನ್ಯಶಾಂತಿ ; ತಾನೇ ತಾನಾಗಿ ನೋಡುವ ಕಣ್ಣೋಡುವವರೆಗೂ ಅಲೆಅಲೆಯಾಗಿ ಹರಹಿರುವ "ಶ್ಯಾಮಲವನಧಿ"; ಬಗೆಬಗೆಯ ಇಂಚರಗಳಿಂದ ಮಾಲೆಮಾಲೆಯಾಗಿ ಹಾರುವ ಕಾಜಾಣ, ಕಾಮಳ್ಳಿ, ಪಿಕಳಾರ, ತೇನೆ, ಗಿಳಿ, ಇತ್ಯಾದಿ ಪಕ್ಷಿವೃಂದ ; ಮಂಜುಳ ರಾಗಿಣಿಯಾದ ಜಲಸುಂದರಿ ತುಂಗೆ ; "ಪಥರಹಿತ ವನರಾಜಿ"ಯ "ಸುಂದರ ಅಶೋಕವನಧಾಮ" ; ತೊರೆಯ ಮಂಜುಳ "ಜಲಶಿಲಾಕಲಲೀಲೆ"ಯ ಅಂಚಿ ಮನೆಯ ಅರೆಕಲ್ಲು ; ಸುಂದರ ಉದಯಾಸ್ತಗಳ ಸೊಬಗನ್ನೀಂಟಲು ತಕ್ಕ, ಸಂಜೆಗಿರಿ, ಕವಿಶೈಲ, ನವಿಲುಕಲ್ಲು ಇತ್ಯಾದಿ ರಸಸ್ಥಾನಗಳು ; ಋತು ಋತುಗಳ ಮನೋಹರ ರಾಸಲೀಲಾರಂಗವಾದ ಮಲೆನಾಡಿನ ವಿವಿಧ ನೋಟಗಳೂ—ಹೀಗೆ ಮಲೆನಾಡಿನ ಪ್ರಕೃತಿರಂಗದಲ್ಲಿ ನಗುವ, ನಲಿಯುವ, ಲಾಸ್ಯವಾಡುವ, ತಾಂಡವಗೈಯ್ಯುವ ವೈವಿಧ್ಯಗಳೆಲ್ಲವೂ ಕವಿಯ ಅಂತರಂಗದಲ್ಲಿ ರಸಸಮ್ಮೇಲನಗೊಂಡು ವೈವಿಧ್ಯಮಯ ವಾದ ಧೀರವಾದ ಅವರ 'ಶೈಲಿ'ಯನ್ನು ಸೃಷ್ಟಿಸಿವೆ. ಅವರೇ ಒಂದು ಕಡೆ ತಮ್ಮದು "ದೈತ್ಯಶೈಲಿ" ಎಂದು ಹೇಳಿಕೊಂಡಿದ್ದಾರೆ. ಆದರೆ ಅದು "ದೈತ್ಯಶೈಲಿ" ಎನ್ನುವು ದಕ್ಕಿಂತ ಪರ್ವತಾರಣ್ಯಶೈಲಿ ಎಂದರೆ ಹೆಚ್ಚು ಸಮರ್ಪಕವಾಗಬಹುದು. ಒಮ್ಮೆ ಮಲೆ ನಾಡಿನ ಪರ್ವತಾರಣ್ಯಗಳ ವಿನ್ಯಾಸಗಳನ್ನು ಗಮನಿಸಿದವರಿಗೆ ಗೊತ್ತಾಗುತ್ತದೆ 'ಪರ್ವತಾರಣ್ಯಶೈಲಿ' ಎಂದರೆ ಏನು ಎನ್ನುವುದು. ಪರ್ವತಾರಣ್ಯ ಚೇತನ, ಪರ್ವ ತಾರಣ್ಯ ಶೈಲಿಯಲ್ಲೇ ವ್ಯಕ್ತವಾಗಿದೆ ಕುವೆಂಪು ಅವರ ಕಾವ್ಯದಲ್ಲಿ !

"ಶ್ರೀ ರಾಮಾಯಣ ದರ್ಶನ"ದಲ್ಲಿ ಒಂದು ಪ್ರಸಂಗ : ಶ್ರೀ ರಾಮನನ್ನು ನಗರ ನಾಗರಿಕತೆಯ, ಅರಮನೆಯ ಭೋಗ ವೈಭವದ ಆವರಣದಿಂದ ಮೊತ್ತಮೊದಲು ಋಷಿ ವಿಶ್ವಾಮಿತ್ರರು ಕರೆದುಕೊಂಡು ನಿಸರ್ಗ ವೈಭವವನ್ನು ಪರಿಚಯ ಮಾಡಿಕೊಡು ತ್ತಾರೆ. ಆಗ ಸರೆಯೂತೀರದ ವನಸಿರಿಯನ್ನು ಕಂಡ ಶ್ರೀ ರಾಮ ವಿಶ್ವಾಮಿತ್ರರನ್ನು ಕುರಿತು ಹೇಳುತ್ತಾನೆ :

"ಗುರುದೇವ
ನಿಮ್ಮ ಕರುಣೆಯಿನೆಮಗೆ ಲಭಿಸಿತೀ ವನಸುಖಂ.
ದಾರಿದ್ರ್ಯಮಲ್ತೆ ಆ ನಾಗರಿಕ ಜೀವನಂ
ಈ ವನ್ಯ ಸಂಸ್ಕೃತಿಯ ಮುಂದೆ ?*

—ಎಂದು. ಆಗ ಋಷಿ ವಿಶ್ವಾಮಿತ್ರರು,

"ದಿಟಮೊರೆದೆ,
ಹೇ ವತ್ಸ, ಗಿರಿವನ ಪ್ರೀತಿತಾಂ ದೈವ ಕೃಪೆದಲ್.
ಜಗದೀಶ್ವರನ ಮಹಿಮೆ ಸಂವೇದ್ಯವಹುದಿಲ್ಲಿ

---

*ರಾಮಾಯಣ ದರ್ಶನಂ : ಕುವೆಂಪು. ಪು. ೩೨

ಭವ್ಯ ಸೌಂದರ್ಯ ಶೀಲದ ಸಸ್ಯ ಶಾಂತಿಯಲಿ.
ಉಪನಿಷತ್ತಿನ ಮಹಾಮಂತ್ರಾನುಭವಗಳಂ
ಹೃದ್ಗವ್ಯವಿಲ್ಲಿ........" [1]

—ಎಂದು ಹೇಳುತ್ತಾರೆ. ನಿಜ; ಕುವೆಂಪು ಅವರಲ್ಲಿ ಕಂಡುಬರುವ ಈ ಗಿರಿವನ ಪ್ರೀತಿ ದೈವಕೃಪೆಯಿಂದಲೇ ದತ್ತವಾದುದು. ಈ ಒಂದು ನಿಸರ್ಗ ಭವ್ಯತೆಯ ದಿವ್ಯಾನುಭವವನ್ನು ಕುವೆಂಪು ಅವರು ಪಡೆದರು. ಆ ಪ್ರಕೃತಿಯ ತಪ್ಪೋರಂಗದಲ್ಲಿಯೇ ಅವರು, "ಸಕಲಾರಾಧನ ಸಾಧನ ಬೋಧನದನುಭವರಸ"[2]ವನ್ನು ಅನುಭವಿಸಿ ರಸಋಷಿಯಾಗಿ "ಇಂದ್ರಿಯ ನಂದನವನು ದಾಂಟುತ ದರ್ಶನ ಮುಕ್ತಿಯ ಸೇರಿ"[2] "ಸೌಂದರ್ಯ ಸಮಾಧಿಯೊಳಾನಂದವ ಹೀರಿ"[2] ಸುಖಿಸಿದರು.

ಎಲ್ಲೆಲ್ಲಿಯೂ ಎಲ್ಲವೂ ಮಹತ್ತೆ ಆದ ಆ "ಸತ್ಯ ಮಹಾಬೃಹತ್ತಿನಲ್ಲಿ" ಈ ಬಗೆಯ ಸೌಂದರ್ಯಾರಾಧನೆಗೆ ತಕ್ಕ ಗಂಡುಗಲಿತನ ಅವರಲ್ಲಿದ್ದುದರಿಂದಲೇ ಅವರು ನಿರ್ಭೀತರಾಗಿ ತಾಯ ಮಡಿಲಿನಲ್ಲಿ ಆಡುವ ಮಗುವಿನಂತೆ ಅವರು ಸಂಚರಿಸಿದರು. ಏಕೆಂದರೆ ಮಲೆನಾಡಿನ ಭೀಷ್ಮ ಸೌಂದರ್ಯ "ಭೀರುಗೆ ಭಯಂಕರಂ, ರಸಿಕಧೀರಗೆ ಕಲಾಶಂಕರಂ"[3] ಕುವೆಂಪು ಅವರು "ರಸಿಕಧೀರ" ರಾದುದರಿಂದಲೇ ಈ ರುಂದ್ರಾಟವಿಯ ವಿಶ್ವರೂಪವನ್ನು ತಮ್ಮ ಕಾವ್ಯದಲ್ಲಿ ಮೂಡಿಸಿಕೊಡಲು ಸಾಧ್ಯವಾಯಿತು. ಅವರ ಪಾಲಿಗೆ, ಆ ಅರಣ್ಯದ ಪ್ರತಿಯೊಂದು ಗಿಡ, ಬಳ್ಳಿ, ಹೊದರು, ಹೂವು, ಹಕ್ಕಿ ಇತ್ಯಾದಿಗಳೆಲ್ಲವೂ ಕೇವಲ ಬರಿಯ ಹೆಸರುಗಳಾಗಿ ಉಳಿಯಲಿಲ್ಲ. ಅವರೇ ಒಂದೆಡೆ ಹೇಳುತ್ತಾರೆ.

ಬರಿಯ ಹೆಸರುಗಳಲ್ಲ ನನಗಿವು ಸಾಹಸಂಗಳ ಕಿಡಿಗಳು
ಕಂಡು ಕೇಳಿದ ಕಥೆಯ ನೊಡಲೊಳಗಾಂತ ಮಂತ್ರದ ನುಡಿಗಳು †[2]

—ಎಂದು. ಅಷ್ಟೇ ಅಲ್ಲ, ಅವು—

"ಜಡವಲ್ಲ; ಸ್ಥೂಲವಸ್ತುಗಳಲ್ಲ;
ಮೃತನಿಸರ್ಗದ ಚೇತನ ವಿಹೀನ ಶವವಲ್ಲ!
ಈಶ್ವರ ಶರೀರದಲಿ ಚಿನ್ಮಯಮಹಾಂಗಗಳು;
ಬ್ರಹ್ಮದ ಮಹಾಚಿತ್ತ ಶರಧಿಯ ತರಂಗಗಳು;
ಚಿಂತೆಗಳು ನನ್ನ ಮನದಲಿ, ನನ್ನ ನಾಡಿಯಲಿ
ರಕ್ತ ಬಿಂದುಗಳು! [4]

ಈ ಮಲೆನಾಡಿನ ನಿಸರ್ಗಾನುಭೂತಿ ಅವರ ವ್ಯಕ್ತಿನಿಷ್ಠ ಎನ್ನಬಹುದಾದ ಭಾವಗೀತೆಗಳಲ್ಲಿ ಮಾತ್ರವಲ್ಲ, ಅವರು ಸೃಜಿಸಿರುವ ನಾಟಕ, ಕಥೆ, ಕಾದಂಬರಿಗಳ ಪಾತ್ರಗಳಲ್ಲೂ ಮಿಂಚುತ್ತದೆ. 'ಬೆರಳ್-ಗೆ-ಕೊರಳ್' ನಲ್ಲಿ ನಾವು ಕಾಣುವ ಏಕಲವ್ಯನಾಗಲೀ, 'ರಕ್ತಾಕ್ಷಿ'ಯ ಬಸವಯ್ಯನಾಗಲೀ, 'ಕಾನೂರು ಸುಬ್ಬಮ್ಮ ಹೆಗ್ಗಡಿತಿ' ಯ

1 ರಾಮಾಯಣ ದರ್ಶನಂ : ಕುವೆಂಪು. ಪು. ೩೨ 2 ಪಕ್ಷಿಕಾಶಿ : ಕುವೆಂಪು ಪು. ೨೪
3 ರಾಮಾಯಣ ದರ್ಶನಂ: ಪು. ೧೮೨ †2 ಪಕ್ಷಿಕಾಶಿ: ಪು.೪೮ 4 ಕಲಾಸುಂದರಿ : ಕುವೆಂಪು. ಪು.೭೦

ಹೂವಯ್ಯನಾಗಲೀ, 'ರಾಮಾಯಣ ದರ್ಶನ'ದ "ಗಿರಿವನಪ್ರಿಯರಾಮ"ನಾಗಲೀ– ಎಲ್ಲರೂ ಚೆಲುವಿನ ಆರಾಧಕರು. ಕುವೆಂಪು ಅವರು ಆದಿಶೇಷನಂತೆ ಸಾವಿರ ನಾಲಗೆಯನ್ನು ಚಾಚಿ, ಸಹಸ್ರಾಕ್ಷನಂತೆ ಸಾವಿರ ಕಣ್ಣು ತೆರೆದು ಈ ಮಲೆನಾಡಿನ ರುದ್ರ ಸೌಂದರ್ಯವನ್ನು ಅಗಸ್ತ್ಯನಂತೆ ಹೀರಿ ಬೆಳೆದಿದ್ದಾರೆ.

ಈ ಚೈತನ್ಯದ ಅನುಭವವನ್ನು ಕವಿ ಪಡೆದ ಮೊದಲು ಆ ಅನುಭವಕ್ಕೆ ವಾಣಿಯನ್ನು ನೀಡುವ ಕಾವ್ಯಕೃಪೆ ಅವರ ಕೈ ಹಿಡಿಯುತ್ತದೆ. ಈ ಚೆಲುವಿನ ಚಿರಂತನೆಯಾದ ಕಲಾಸುಂದರಿ, ಈ "ರಸಿಕಧೀರ"ನನ್ನು ಒಲಿದು, ಶ್ರೇಯಸಿಯಾಗಿ, ತಾಯಾಗಿ ಕೈಹಿಡಿದು ನಡೆಸುತ್ತಿದ್ದಾಳೆ. ಈಕೆಯ ಪರಿಚಯವನ್ನ ಕುರಿತು ಕವಿ ಹೀಗೆ ಹಾಡಿದ್ದಾರೆ:

ನನ್ನನಂದುಮಲೆಯಲಿ ನಿನ್ನಕಲೆಯಬಲೆಯಲಿ,
ಓ ಇಂದ್ರಜಾಲಕಾರಿಣಿ!
ಮೋಹದಿಂದೆಮುತ್ತಿದೆ; ಮುತ್ತಗಳಲಿಸುತ್ತಿದೆ;
ಹೇ ಇಂದ್ರ ಧನುರ್ಧಾರಿಣಿ;
ಅಂದಿನಿಂದ ಇಂದುವರೆಗೆ
ಸಿಲುಕಿ ನಿನ್ನ ಹೊನ್ನಸೆರೆಗೆ
ಚಿನ್ನನಾದೆ ನಾನು ತಿರೆಗೆ
ಆದಿಮ ರಸಮೂರ್ತಿಯೆ !
ಹಣತೆ ಸೊಡರು ಹಿಡಿದು ಮುಂದೆ
ನಡೆಯೆ ನೀನು ಬಹೆನು ಹಿಂದೆ.
ಕನಿಯು ಕಣ್ಗೆ ಬೆಳಕುತಂದೆ,
ಹೇ ಅಸೀಮ ಸ್ಫೂರ್ತಿಯೇ !*

ಹೀಗೆ ಪರಿಚಯವಾದ ಈ "ಇಂದ್ರ ಧನುರ್ಧಾರಿಣಿ" ಮಲೆನಾಡಿನ ಮಣ್ಣಿನಲ್ಲಿ ದೂಳಾಡುತ್ತಿದ್ದ ಮಲೆನಾಡಿನ ಮಗುವನ್ನು, ತನ್ನ ತಾವರೆಯ ತೇರಿನಲ್ಲಿ ಕೂರಿಸಿಕೊಂಡು, ಭಾವನೆಯ ಬಾನಿನಲ್ಲಿ ಊರ್ಧ್ವಯಾತ್ರಿಯಾಯಿತು.

ಕುವೆಂಪು ಅವರ ಯಾನಕೃತಿಯನ್ನೋದಿದರೂ ಅದರಲ್ಲಿ ಮಲೆನಾಡಿನ ನಿಸರ್ಗ ಶ್ರೀಯೇ ಉಸಿರಾಡುತ್ತದೆ. ಸಹ್ಯಾದ್ರಿಯ ಚೇತನ ಅಲ್ಲಿನ ಗಿಡಮರಬಳ್ಳಿಗಳಲ್ಲಿ ಉಸಿರಾಡುವಷ್ಟೇ ಸತ್ಯವಾಗಿ, ಇಲ್ಲಿ, ಇವರ ಕೃತಿಗಳಲ್ಲಿ ಸೌಂದರ್ಯವಾಗಿ ಮೈದೋರಿದೆ. ಈ ನಿಸರ್ಗ ಸೌಂದರ್ಯಾನುಭವ ಭಾವಗೀತಗಳಲ್ಲಿ ಮಡುವಾಗಿ ನಿಂತದ್ದು, ರಾಮಾಯಣ ದರ್ಶನದ ತುಂಬ ಕಡಲಾಗಿ ಮೊರೆದಿದೆ!

ಇಂತಹ ಮಲೆನಾಡನ್ನು ಕುರಿತ ಹುಚ್ಚು ಕುವೆಂಪು ಅವರಿಗೆ ಎಲ್ಲಿದ್ದರೂ ತಪ್ಪಿ

---

*ಕಲಾಸುಂದರಿ : ಕುವೆಂಪು ಪು. ೬

ಪ್ಪಲ್ಲ. ಅವರ ಪಾಲಿಗೆ ಅದು ಎಂದೋ ಒಮ್ಮೆ ಕಣ್ಣಮುಂದೆ ಕಂಡ, ನೆನಹಿನಲ್ಲಿ ನಿಂದ, ಹಾಡಾಗಿ ಹೊಮ್ಮಿ ಬಿಡುಗಡೆಯನ್ನು ಪಡೆದ ಆಕಸ್ಮಿಕ ಅನುಭವದ ನೋಟವಲ್ಲ; ಅವು ಎಂದಿಗೂ ಮನದಲ್ಲಿ ತುಂಬಿದ, ಹೃದಯ ರಸವಾದ ಸೌಂದರ್ಯದ ಹಂಬಲಾಗಿ ಪರಿಣಮಿಸಿದೆ. ಮಲೆನಾಡಿನಲ್ಲಿ ಕವಿ ಕಂಡು ಉಂಡ ಅನುಭವಗಳೆಲ್ಲವೂ ನೆನಪಿನ ಚಿರಂತನ ಚಿಲುಮೆಯಾಗಿ ಪುಟಿಯುತ್ತವೆ. ಕವಿ ಎಲ್ಲಿದ್ದರೂ, ಆ ಮಲೆನಾಡಿನ ನಿಸರ್ಗ ಪ್ರಿಯತೆಯಿಂದ, ಅವರ ದೀಪ್ತ ಅನುಭವದಿಂದ ಅನ್ಯವಾಗಿಲ್ಲ. ಮಲೆನಾಡು, ಕುವೆಂಪು ಇವೆರಡೂ ಬೇರೆ ಬೇರೆಯಲ್ಲ; ಅವೆರಡೂ ಒಂದೇ ಎನ್ನಬಹುದು.

ಈ ಜಗತ್ತಿನ ಲೌಕಿಕವಾದ ಕರ್ತವ್ಯಕ್ಕೆ ಕಟ್ಟುಬಿದ್ದು, ಮಲೆನಾಡಿನಿಂದ ದೂರವಾಗಿರುವ ಕವಿ, ದೈಹಿಕವಾಗಿ ದೂರವಾಗಿದ್ದರೂ ಆಂತರಿಕವಾಗಿ ಸದಾ ಮಲೆನಾಡಿನ ರಸ ಸ್ಮೃತಿ ತರಂಗದಲ್ಲಿ ವಿಹಾರಿಯಾಗಿರುತ್ತಾರೆ. ವಿರಹಿಣಿಯಾದ ಸತಿ ತನ್ನ ನಲ್ಲನಿಗಾಗಿ ಕಾತರಿಸುವಂತೆ, ಪರಮ ಭಕ್ತನಾದವನು ಭಗವಂತನನ್ನೇ ಸದಾ ನೆನೆದು ಹಂಬಲಿಸುವಂತೆ ಕುವೆಂಪು ಅವರು ಮಲೆನಾಡಿನ ಬಗ್ಗೆ ಕಾತರರಾಗಿರುತ್ತಾರೆ; ನೆನೆದು ಹಂಬಲಿಸುತ್ತಾರೆ. ಆ ಮಲೆನಾಡಿನ ನೆನಹನ್ನು ತರುವ ಒಂದು ಹಕ್ಕಿ, ಒಂದು ಹೂ, ಒಂದು ನೋಟ, ಒಂದು ಘಟನೆ, ಕೂಡಲೇ ಅವರನ್ನು ಮಲೆನಾಡಿನ ನಿಸರ್ಗದ ಮಡಿಲಿಗೆ ಮಾನಸಿಕವಾಗಿ ಒಯ್ಯನೆ ಬೀಸಿ ಎಸೆಯುತ್ತವೆ. ಒಮ್ಮೆ ಅವರು ಈ ಬಯಲು ನಾಡಿನ ತಂತಿಯ ಕಂಬವೊಂದರ ಬುಡದಲ್ಲಿ ನಿಂತಾಗ, ಅದರ ಝೇಂಕಾರವನ್ನಾಲಿಸಿ "ಕೈಮುಗಿ ಈ ತಂತಿಯ ಕಂಬಕ್ಕೆ!" ಎನ್ನುತ್ತಾರೆ. ಏಕೆಂದರೆ ಆ ತಂತಿಯ ಕಂಬದ ಝೇಂಕಾರ, ದೂರದ ಮಲೆನಾಡಿನ ಕಾಡಿನ ನಡುವೆ ಚೈತ್ರಮಾಸದಲ್ಲಿ ಹೂ ತುಂಬಿ ಹುಚ್ಚಾದ ನಂದಿಯ ಮರದಲ್ಲಿ ಮೊರೆಯುವ ಜೇನ್ ದುಂಬಿಗಳ ಗುಂಜಾರವವನ್ನು ನೆನಪಿಗೆ ತಂದು ಮಲೆನಾಡಿನ ರಸಾನುಭವವನ್ನು ಉಂಟುಮಾಡುತ್ತದೆ. ಮತ್ತೊಮ್ಮೆ ಪಟ್ಟಣದಲ್ಲಿ ಒಂದು ಹೊರಸು ಹಕ್ಕಿಯನ್ನು ಕಂಡಾಗ, ಅದರ ಗುಬ್ಬಳಿಸುವ ದನಿಯನ್ನು ಆಲಿಸಿದಾಗ—

ದೂರ ಇರುವ ಹೃದಯ ಬಂಧು
ಹಠಾತ್ತಾಗಿ ಬಳಿಗೆ ಬಂದು
ಕರೆದು ನುಡಿವ ತೆರದಲಿ.*

ಅವರಿಗೆ ಅನುಭವವಾಗುತ್ತದೆ. ಕೂಡಲೇ—

ನಮ್ಮ ಹಳ್ಳಿ, ಗದ್ದೆ ತೋಟ,
ಬೈಲು ಬೆಟ್ಟ, ಬನದ ನೋಟ,
ತೇಲಿ ಬಹವು ಮನದಲಿ—*

ಹೀಗೆ ಮಲೆನಾಡಿನ ಸ್ಮೃತಿಯನ್ನು ತೆರೆಯುವ ಈ ಪುಟ್ಟ ಹಕ್ಕಿಯನ್ನು ಕಂಡು—

*ಪಕ್ಷಿಕಾಶಿ : ಕುವೆಂಪು ಪು. ೪೬

ಇಷ್ಟು ಪುಟ್ಟ ಪ್ರಾಣಿಯಲ್ಲಿ
ಅಷ್ಟು ದೊಡ್ಡ ಮಲೆಯಹಳ್ಳಿ
ಕಷ್ಟವಿಲ್ಲದಡಗಿದೆ !*

—ಎಂದು ಸೋಜಿಗಪಡುತ್ತಾರೆ! ಹೀಗೆ ಅವರು ಎಲ್ಲಾದರೂ ಇರಲಿ, ಎಂತಾದರೂ ಇರಲಿ ಸಹ್ಯಾದ್ರಿಯ ಪ್ರೇಮಸೂತ್ರ ಸದಾ ಅವರನ್ನು ಬಂಧಿಸಿರುತ್ತದೆ. ಯಾವ ಹೊತ್ತಿನಲ್ಲೇ ಆಗಲಿ ಮಲೆನಾಡಿನ ಸವಿನೆನಪಿನ ದೂತರಂತೆ ಬರುವ ಯಾವುದೋ ಒಂದು ಹಕ್ಕಿಯೋ, ಹೂವೋ, ನೋಟವೋ, ಸಾಕು ಅವರ ಹೃದಯದಲ್ಲಿ ಮಲೆನಾಡಿನ ಸೌಂದರ್ಯಾಗ್ನಿಯ ತೃಷೆಯನ್ನು ಉದ್ದೀಪಿಸುತ್ತದೆ. ಸೃಷ್ಟಿ ಸಮಸ್ತದಲ್ಲೂ ಚೆಲುವನ್ನು ಸವಿಯುವ ಈ ಕವಿಗೆ, ತನ್ನ ಮಲೆನಾಡೆಂದರೆ ಏನೋ ಒಂದು ಬಗೆಯ ಹುಚ್ಚು. ಬಯಲುನಾಡಿನಲ್ಲಿ ಸಂಚರಿಸುತ್ತ ಒಮ್ಮೆ ಈ ಕವಿ—

ಮಲೆಯ ನೆಲವೊ, ಬಯಲ ಹೊಲವೊ ?
ಬೇರೆ ಥೇನು ;—ಆದರೇನು
ಅಮೃತವಿರದೆ ಸೊದೆಯಲಿ ? †

—ಎಂದು ಬಯಲುನಾಡಿನ ಸಂಯಮಪೂರ್ಣವಾದ ರಮ್ಯತೆಯನ್ನು ಮೆಚ್ಚಿಕೊಂಡರೂ, ಮತ್ತೆ ಮಲೆನಾಡಿನ ತೃಷೆಯುರಿ ಕೆರಳಿದಾಗ—

ಬೇಸರಾಗಿದೆ ಬಯಲು ಸೀಮೆಯ ಬೋಳುಬಯಲಿನ ಬಾಳಿದು
ಬಿಸಿಲು ; ಬೇಸಗೆ, ಬೀಸುವುರಿಸೆಕೆ ; ತಾಳಲಾರದ ಗೋಳಿದು [1]*

*       *       *       *

ಅಲ್ಲಿಗೈದುವೆನಲ್ಲಿಗೈದುವೆನಿಲ್ಲಿ ಬೇಸರವಾಗಿದೆ
ಕಾಡುಮಲೆಗಳನಲೆವ ಹುಚ್ಚಿನ ಕಿಚ್ಚು ಹೃದಯದಿ ರೇಗಿದೆ*.

—ಎಂದು ಉದ್ಗಾರವೆತ್ತುವುದು ಆಶ್ಚರ್ಯವೇನಲ್ಲ, ಏಕೆಂದರೆ, ಅವರೇ ಹೇಳಿಕೊಂಡಿರುವಂತೆ—

ಮಲೆಯನಾಡೆನಗೆ
ತಾಯಿಮನೆ. ಕಾಡು ದೇವರ ಬೀಡು. ಗಿರಿಯ ಮುಡಿ
ಶಿವನ ಗುಡಿ. ಬನವೆಣ್ಣೆ ಮೊದಲಿನಾ ಮನದನ್ನೆ. ‡

---

*ಪಕ್ಷಿಕಾಶಿ : ಕುವೆಂಪು ಪು. ೪೬ †ಪಕ್ಷಿಕಾಶಿ : ಪು. ೪೧ 1*ಪಕ್ಷಿಕಾಶಿ ಪು. ೫೦
‡ರಾಮಾಯಣ ದರ್ಶನಂ ಕುವೆಂಪು ಪು. ೧೨೫



# 'ಕುವೆಂಪು'ರವರ ಸೌಂದರ್ಯೋಪಾಸನೆ

ಹೆಚ್. ತಿಪ್ಪೇರುದ್ರಸ್ವಾಮಿ

ಕವಿ ಸೌಂದರ್ಯೋಪಾಸಕ. ಇಲ್ಲಿ 'ಸೌಂದರ್ಯ'ವೆನ್ನುವುದು ಕೇವಲ ಅದರ ಪರಿಮಿತವಾದ ಅರ್ಥದಲ್ಲಲ್ಲ; ವಿಶ್ವವನ್ನೇ ಒಳಗೊಳ್ಳಬಲ್ಲ ವಿಸ್ತಾರವಾದ ಅರ್ಥದಲ್ಲಿ. ಸೃಷ್ಟಿಸೌಂದರ್ಯ ಬಹುಮುಖವಾದುದು, ಬಹುರೂಪಿಯಾದುದು. ಒಮ್ಮೆ, ತನ್ನ ಬಣ್ಣಬಣ್ಣದ ಗರಿಗಳನ್ನು ಹರಡಿ ಸುಂದರವಾದ ಮಂದಹಾಸವನ್ನು ಬೀರುವ ಶಂಕರ-ಮನೋಹರಿ ಆಕೆ. ಇನ್ನೊಮ್ಮೆ ತನ್ನ ಉಗ್ರನಖಗಳನ್ನು ಹೊರಚಾಚಿ ಕೇಶರಾಶಿಗಳನ್ನು ಕೆದರಿ ಘರ್ಜಿಸುತ್ತಿರುವ ರುದ್ರಭಯಂಕರಿ. ಆಕೆ ಬಾಹ್ಯಪ್ರಕೃತಿ ಸೌಂದರ್ಯರೂಪಿಣಿಯೂ ಹೌದು; ಸತತ ಹೋರಾಟದ ಬಾಳಿನ ಆಳದಲ್ಲಿ ಸೆಲೆಯೊಡೆಯುವ ಅಂತರ್ವಾಹಿನಿಯೂ ಹೌದು. ಆದುದರಿಂದ ಬಾಹ್ಯಪ್ರಕೃತಿಯಲ್ಲಿ ಸೌಂದರ್ಯವನ್ನು ಕಾಣುವಂತೆಯೇ ಮಾನವನ ಜೀವನದ ಹೋರಾಟದಲ್ಲಿಯೂ ಬೇಸರಗೊಳ್ಳದೆ, ನಿರಾಶರಾಗದೆ, ಸೌಂದರ್ಯವನ್ನು ಗುರುತಿಸುವುದು ಪೂರ್ಣದೃಷ್ಟಿಯ ಸೌಂದರ್ಯೋಪಾಸನೆ ಎನ್ನಿಸುತ್ತದೆ.

ಆಧುನಿಕ ಯುಗದ ಮಹಾಕವಿ 'ಕುವೆಂಪು'ರವರು ಮುಖ್ಯವಾಗಿ 'ಪ್ರಕೃತಿ ಕವಿ' ಆಂಗ್ಲಕವಿ ವರ್ಡ್ಸ್‌ವರ್ತ್‌ನನ್ನು 'Nature poet' ಎನ್ನುವಂತೆ. ವರ್ಡ್ಸ್‌ವರ್ತ್‌ನಂತೆಯೇ ಕುವೆಂಪುರವರೂ ನಿಸರ್ಗದ ಮಡಲಿನಲ್ಲಿ ಹುಟ್ಟಿಬೆಳೆದವರು, ನಿಸರ್ಗದ ಅನಂತಮುಖಗಳನ್ನು ಕಂಡು ಅನುಭವಿಸಿ ತಮ್ಮ ಬಹುಮುಖಪ್ರತಿಭೆಯನ್ನು ದೀಪ್ತಗೊಳಿಸಿಕೊಂಡವರು. ತಾವೂ ಪ್ರಕೃತಿಯ ಒಂದಂಗವಾಗಿ ಅರಳಿದವರು.

ಮಾನವನ ಜೀವನಕ್ಕೆ ಪ್ರಕೃತಿ ಕೇವಲ ಹಿನ್ನೆಲೆಯಲ್ಲ. ಮದುವೆಯ ಚಪ್ಪರವನ್ನು ಮಾವಿನತೋರಣ ಅಲಂಕರಿಸುವಂತೆ ಪ್ರಕೃತಿಯು ಜೀವನಕ್ಕೆ ಹೊರಗಿನ ಅಲಂಕಾರವಲ್ಲ. ಅದು ಮಾನವನ ಉಸಿರು; ಮುನ್ನಡೆಸುವ ದೈವಶಕ್ತಿ; ನೊಗ್ಗನ್ನು ಅರಳಿಸುವ ದೈವಕೃಪೆ.

"ಸೂರ್ಯೋದಯ ಚಂದ್ರೋದಯ
ದೇವರ ಕೃಪೆ ಕಾಣೊ!"

—ಎಂದು ಹೇಳುತ್ತಾರೆ ಕವಿ. ಅಲ್ಲದೆ:

"ಬಿಸಿಲಿದು ಬರಿ ಬಿಸಿಲಲ್ಲವೊ
ಸೂರ್ಯನ ಕೃಪೆ ಕಾಣೊ!
ಸೂರ್ಯನು ಬರಿ ರವಿಯಲ್ಲವೊ
ಆ ಭ್ರಾಂತಿಯ ಮಾಣೋ!

ರವಿ ವದನವೆ ಶಿವ ಸದನವೊ
ಬರಿ ಕಣ್ಣದು ಮಣ್ಣೊ !
ಶಿವನಿಲ್ಲದ ಸೌಂದರ್ಯವೆ
ಶವ ಮುಖದ ಕಣ್ಣೊ !"

ಶಿವ ಸಂಯುಕ್ತವಾದ ಸೌಂದರ್ಯವೇ ತಾರಕಶಕ್ತಿ. ಅದೇ "ಅಮೃತದ ಹಣ್ಣು," "ಕಾವ್ಯದ ಕಣ್ಣು" ಎನ್ನುತ್ತಾರೆ. ಇದು ಕುವೆಂಪುರವರ ಸೌಂದರ್ಯೋಪಾಸನೆಯ ಅಂತರಂಗದಲ್ಲಿ ಅಡಗಿರುವ ವ್ಯಾಪಕವಾದ ತತ್ತ್ವ.

ಅವರ "ಕಲಾಸುಂದರಿ" ಎಂಬ ಕವನದಲ್ಲಿ ಪ್ರಕೃತಿ ಮಾತೆಯ ವಿರಾಟ್ ಸ್ವರೂಪವನ್ನು ಕಾಣುತ್ತೇವೆ. ಸೌಂದರ್ಯದ ಹೆಜ್ಜೆ ಎಲ್ಲಿ ಎಲ್ಲಿ ಹೇಗೆ ಹೇಗೆ ಪ್ರಕಾಶ ಗೊಂಡರೂ ಎಲ್ಲವೂ ನಿನ್ನ ಕರುಣೆಯ ಪ್ರಸಾದ–ಎಂದು ಆ ಕಲಾಸುಂದರಿಯ ಮರೆ ಹೊಗುತ್ತಾರೆ.

"ಹಣತೆ ಸೊಡರು ಹಿಡಿದು ಮುಂದೆ
ನಡೆಯೆ ನೀನು, ಬಹೆನು ಹಿಂದೆ,
ಕವಿಯ ಕಣ್ಗೆ ಬೆಳಕು ತಂದೆ...."

—ಎಂದು ತಮ್ಮೆಲ್ಲವನ್ನೂ ಆ "ರಸಮೂರ್ತಿ" ಪಾದದಲ್ಲಿ ಅರ್ಪಿಸುತ್ತಾರೆ.

"ನಿನ್ನ ತೋಳಮರೆಯಲಿ
ನನ್ನ ಬಾಳು ಹೊರೆಯಲಿ."
"ನಿನ್ನ ಎದೆಯ ಸೆರೆಯಲಿ
ನನಗೆ ಮುಕುತಿ ದೊರೆಯಲಿ"—

—ಎಂದು "ತಮ್ಮತನ"ವನ್ನೇ ಇಲ್ಲಗೈದು "ವಿಶ್ವತನ"ವನ್ನು ಅಳವಡಿಸಿ ಕೊಳ್ಳುತ್ತಾರೆ.

"ತುಂಗೆ" ಎಂಬ ಕವನದಲ್ಲಿ ಈ ದೃಷ್ಟಿ ಇನ್ನೂ ಸುಸ್ಪಷ್ಟವಾಗಿ ವಿಕಾಸಗೊಂಡಿ ರುವುದನ್ನು ಕಾಣುತ್ತೇವೆ. ನಾವು ಎಷ್ಟೇ ದೊಡ್ಡವರಾಗಿ ಬೆಳೆದರೂ ಮಾತೆಯ ಎದು ರಿನಲ್ಲಿ ಏನೂ ಅರಿಯದ ಹಸುಳೆಗಳೇ. ಅಂತೆಯೇ ಪ್ರಕೃತಿಮಾತೆಯ ಎದೆಯ ತೊಟ್ಟಿ ಲಿನಲ್ಲಿ ನಾವೆಲ್ಲಾ ಬರಿ ಹಸುಳೆಗಳು. ಮಕ್ಕಳ ಮುಗ್ಧ ಕುತೂಹಲದಿಂದ ಪ್ರಕೃತಿಯನ್ನು ವೀಕ್ಷಿಸಬೇಕಾಗುತ್ತದೆ. ಹಾಗೆ ಜೀವನವನ್ನು "ನವ ನವೋನ್ಮೇಷನ" ಗೊಳಿಸುವುದೇ ಪ್ರಕೃತಿಯ ಆರಾಧನೆಯಿಂದ ಲಭಿಸುವ ವರ.

ಪ್ರಕೃತಿಯ ಬಾಹ್ಯರೂಪಗಳು ವಿಶ್ವಶಕ್ತಿಯ ಒಂದೊಂದು ತರಂಗಗಳಂತೆ ಕವಿಗೆ ಕಾಣಿಸುತ್ತವೆ:

"ಈ ಬಿಳಿ ಮುಗಿಲರಾಶಿ ವನ ಪರ್ಣವಾರಾಶಿ,
ನರ್ತಿಸುತ ಪ್ರವಹಿಸುವ ನೀಲಾಭ ಜಲರಾಶಿ,
ನೀಲ ನೀರವ ಶಕುನದಂತಿರುವ ಆಕಾಶ

ಎಲ್ಲವೂ ನನ್ನ ದೃಷ್ಟಿಗೆ ಆತ್ಮದಾವೇಶ
ಭಾವಗಳು ; ಜಡವಲ್ಲ; ಸ್ಥೂಲವಸ್ತುಗಳಲ್ಲ;
ಮೃತ ನಿಸರ್ಗದ ಚೇತನ ಹೀನ ಶವವಲ್ಲ!
ಈಶ್ವರಶರೀರದಲಿ ಚಿನ್ಮಯ ಮಹಾಂಗಗಳು.
ಬ್ರಹ್ಮದ ಮಹಾಚಿತ್ತ ಶರಧಿಯ ತರಂಗಗಳು."

ಈ ದೃಷ್ಟಿಯಿಂದ ನೋಡಿದಾಗ: "ಪ್ರಕೃತಿಯಾರಾಧನೆಯೆ ಪರಮಾರಾಧನೆ; ಪ್ರಕೃತಿಯೊಲ್ಮೆಯೇ ಮುಕ್ತಿಯಾನಂದ ಸಾಧನೆ"ಯಾಗಿ ಪರಿಣಮಿಸುತ್ತದೆ. ಇದನ್ನು ಅರಿತು—

"....ಉದಯಾಸ್ತಗಳಲಿ, ವನಗಿರಿಗಳಲಿ,
ತೆಂಗಾಳಿಯಲಿ, ರುದ್ರವರ್ಷದಲಿ, ತಿಂಗಳಲಿ,
ಎಳೆ ಹಸುರಮೇಲೆ ಮಿರುಗುವ ಹಿಮದ ಮಣಿಗಳಲಿ,
ಕಾಜಾಣ, ಕಾಮಳ್ಳಿ, ಕೋಗಿಲೆಯೆ ಗಿಳಿಗಳಲಿ,
ಮಾನವರ ಸೌಂದರ್ಯ ಒಲುಮೆ ನೇಹಂಗಳಲಿ,
ನನ್ನಿಷ್ಟದೇವತೆಯ ಗರ್ಭಗುಡಿಯನು ಕಟ್ಟಿ
ತಲ್ಲೀನನಾಗಿಹೆನು ಪೂಜೆಯಲಿ!"

ಎನ್ನುತ್ತಾರೆ ಕುವೆಂಪುರವರು. ಇಲ್ಲಿ "ಮಾನವರ ಸೌಂದರ್ಯ ಒಲುಮೆ ನೇಹಂಗಳಲಿ" ಎಂಬ ಮಾತು ಸೌಂದರ್ಯೋಪಾಸನೆಯ ಪೂರ್ಣ ದೃಷ್ಟಿಯನ್ನು ತಂದು ಕೊಡುತ್ತದೆ. ಪ್ರಕೃತಿವ್ಯಾಪಿಯ ವಲಯವನ್ನು ವಿಸ್ತರಿಸುತ್ತದೆ. ಹೀಗೆ:

" ಪ್ರಕೃತಿಯನು ಬ್ರಹ್ಮಮಯಿ ಎಂದರಿತು ಒಲಿದವಗೆ,
ಮೇಣು, ಆನಂದಮಯಿ ಎಂದೊಲಿದು ಅರಿತವಗೆ,
ದುಗುಡ ವೆತ್ತಣದು? ಶರದಾಗಸದ ನೀಲಿನಗೆ
ನಮ್ಮೆದೆಯ ನೂರ, ತಾಪವನಳಿಸಿ ಚಿರಶಾಂತಿ
ಔದಾರ್ಯಗಳ ನೀಡುವುದು; ಮಾನಸಿಕ ಕ್ರಾಂತಿ
ತೊಲಗುವುದು ಕಂಪಿಸುತ ಕರಗುವ ಜಗತ್ತಿನಲಿ
ಧುಮುಕಿ ನಾನೊಂದು ಕಂಪನವಹೆನು ಸತ್ತಿನಲಿ"

ಈ ಮಾತುಗಳನ್ನು ನಾವು ಓದುತ್ತಿದ್ದರೆ ಋಷಿ ಕವಿ ವರ್ಡ್ಸ್‌ವರ್ತ್ ಹೇಳಿದ—

"....Nature never did betray
The heart that loved her ; it's her privilege,
Through all the years of this our life, to lead
From joy to joy : for she can so inform
The mind that is within us, so impress
With quietness and beauty, and so feed

With lofty thoughts, that neither evil tongues
Rash judgements, nor the sneers of selfish men
Nor greetings where no kindness is, nor all
The dreary intercourse of daily life,
Shall e'er prevail against us ; or disturb
Our cheerful faith, that all which we behold
Is full of blessings...."

—ಎಂಬ ಮಾತು ನಮ್ಮೆದುರು ಸುಳಿಯುತ್ತದೆ. ಪ್ರಕೃತಿಪ್ರೀತಿ ಜೀವನದಲ್ಲಿ ಒಂದು ಹೊಸ ಶ್ರದ್ಧೆಯನ್ನುಂಟುಮಾಡುತ್ತದೆಂಬುದನ್ನು ಇಲ್ಲಿ ಕವಿ ಸುಂದರವಾಗಿ ಹೇಳಿದ್ದಾನೆ. ಯಾವ ಕಾಲದೇಶಗಳಾದರೇನು ? ಸತ್ಯ ಒಂದೇ ; ಸೌಂದರ್ಯ ಒಂದೇ. ಅಂದು ಅಲ್ಲಿ ವರ್ಡ್ಸ್‌ವರ್ತ್‌ನ ಮೂಲಕ ತನ್ನ ಸಂದೇಶವನ್ನು ಸಾರಿದ ಪ್ರಕೃತಿ, ಇಂದು ಇಲ್ಲಿ ಕುವೆಂಪುರವರನ್ನು ತನ್ನ ' ರಸಪ್ರಣಾಲಿಕೆ 'ಯನ್ನಾಗಿ ಆರಿಸಿಕೊಂಡಿದೆ.

ಇಂತಹ ಒಂದು ಉದಾತ್ತವಾದ ದರ್ಶನದಿಂದ ಪ್ರಕಾಶಗೊಂಡ ಕವಿ ಪ್ರತಿಭೆ ಪ್ರಕೃತಿಯನ್ನು ಹೊಸ ದೃಷ್ಟಿಯಿಂದ ನೋಡಬಲ್ಲದು ; ಹೊಸ ಸಂದೇಶವನ್ನು ಜಗತ್ತಿಗೆ ಸಾರಬಲ್ಲದು. ಕುವೆಂಪುರವರ ಉತ್ಕೃಷ್ಟ ಪ್ರಕೃತಿಗೀತೆಗಳೆಲ್ಲಾ ಅಂತಹ ಒಂದೊಂದು ಸಂದೇಶದ ಕಿಡಿಗಳು—ಎಂದು ಹೇಳಬಹುದು. ಒಂದು " ಚಂದ್ರೋದಯ " ವನ್ನು ಕಂಡಾಗ ; "ಶರತ್‌ಕಾಲದ ಸೂರ್ಯೋದಯ"ವನ್ನು ದರ್ಶಿಸಿದಾಗ; "ಫಾಲ್ಗುಣ ರವಿ ದರ್ಶನಕ್ಕೆ" ಬಂದಾಗ ; "ಹುಣ್ಣಿಮೆ ರಾತ್ರಿ"ಯಲ್ಲಿ ನಿಂತಾಗ—ಎಲ್ಲೆಲ್ಲಿಯೂ ಮತ್ತು ಯಾವಾಗಲೂ ಪ್ರಕೃತಿಯ ಆ ನಿರಂತರ ಎಚ್ಚರಿಕೆಯ ನುಡಿಯನ್ನು ಬಿಚ್ಚಿ ಹೇಳುವುದನ್ನು ಕುವೆಂಪುರವರು ಕೈಕೊಂಡಿದ್ದಾರೆ. ಅದು ಎಷ್ಟು ಹೇಳಿದರೂ ಮುಗಿಯದಿರುವ ಅನಂತ ಸತ್ಯವೆಂಬಂತೆ ಅವರ ಕಾವ್ಯಗಳಲ್ಲೆಲ್ಲಾ ಓತಪ್ರೋತವಾಗಿದೆ. ಒಂದು ಪ್ರಾತಃಕಾಲವನ್ನು ಕವಿ ಕಂಡಾಗಲೂ, " ಇಂತಹ ಸುಂದರ ಪ್ರಾತಃಕಾಲದಿ ಜೀವಿಸುವುದಕ್ಕಿಂತಲೂ ಬೇರೆಯ ಗುರಿ ಜೀವಕೆ ಬೇಕಿಲ್ಲ ; ಚಿರಸೌಂದರ್ಯದ ಸಂಪದವಿದ್ದರೆ ಧರ್ಮಕೆ ಚ್ಯುತಿ ಇಲ್ಲ ;"—ಎನ್ನುತ್ತಾರೆ. ಸೌಂದರ್ಯದ ಸಂಪತ್ತು ನಮ್ಮಲ್ಲಿದ್ದರೆ ಅದೇ ನಮ್ಮನ್ನು ಧರ್ಮದ ಮಾರ್ಗದಲ್ಲಿ ಮುನ್ನಡೆಸುತ್ತದೆ. ಪ್ರಕೃತಿ ಸೌಂದರ್ಯದಲ್ಲಿಯೇ ಆ ಅನಂತಶಕ್ತಿಯ ಆವಿರ್ಭಾವವನ್ನು ಕಾಣಬಲ್ಲವರಾಗುತ್ತೇವೆ. ಕೊನೆಗೆ ಹಾರಿ ಹೋಗುತ್ತಿರುವ ಬೆಳ್ಳಕ್ಕಿಯ ಸಾಲನ್ನು ಕಂಡಾಗ ಅದು ದೇವರು ಮಾಡಿದ ರುಜುವಿನಂತೆ ತೋರುತ್ತದೆ. ದೇವರಿರುವುದಕ್ಕೆ ಬೇರೆ ಸಾಕ್ಷಿ ಬೇಕಿಲ್ಲ. ಆನಂದಮಯವಾದ ಈ ಜಗತ್ತೇ ದೇವನ ಸಂಕೇತವಲ್ಲವೇ ! ಅವನ ಅಸ್ತಿತ್ವಕ್ಕೆ ಪವಾಡವೇಕೆ ! " ಕಲ್ಲು ರೊಟ್ಟಿಯಾದರೆ ಪವಾಡವೇ ! ಕಲ್ಲು ಕಲ್ಲಾಗಿರುವುದೇ ಪವಾಡವಲ್ಲ" ಎಂದು " ಕಿಂಕಿಣಿ "ಯಲ್ಲಿ ಕೇಳಿದ ಕುವೆಂಪುರವರು ಒಂದು ಕಲ್ಲುಬಂಡೆಯಲ್ಲಿಯೂ ಶಿಲಾತಪಸ್ವಿಯನ್ನೂ ಕಾಣುವ ಮಟ್ಟಕ್ಕೆ ಏರಿರುವುದನ್ನು ಕಾಣುತ್ತೇವೆ.

ಕವಿಯ ಪ್ರತಿಭಾಲೋಕಕ್ಕೆ ಒಳಗಾದ ವಸ್ತುಗಳು ಕೇವಲ ಲೋಕವಸ್ತುಗಳಾಗಿ ಉಳಿಯುವುದಿಲ್ಲ. ಕವಿಯ ಅನುಭವ ರಸದಿಂದ ಅಲಂಕೃತವಾಗಿ ಪರಿವರ್ತಿತ ರಸವಸ್ತುಗಳಾಗಿ ಪರಿಣಮಿಸುತ್ತವೆ. ಸಾಮಾನ್ಯದೃಷ್ಟಿಗೆ ಅಗೋಚರವಾದ ಅನಂತ ಭಾವಗಳನ್ನು ಕಾಣಲು ಕವಿ ಸಮರ್ಥನಾಗುತ್ತಾನೆ. ಕೇವಲ ಬುದ್ಧಿಗೆ ಸಿಲುಕದ, ಶುಷ್ಕ ಪಾಂಡಿತ್ಯಕ್ಕೆ ಒಳಪಡದ, ಅನುಭವದ ತೆರೆಗಳನ್ನು ಲೋಕವಸ್ತುಗಳು ಕವಿಯ ಅಂತರಂಗದಲ್ಲಿ ಎಬ್ಬಿಸುತ್ತವೆ. ತರ್ಕಕ್ಕೆ ಅತೀತವಾದ ಮನಸ್ಸಿನ ಈ ಶಕ್ತಿಯನ್ನೇ ಶೆಲ್ಲಿ Imagination ಎಂದು ಕರೆಯುತ್ತಾನೆ. ತರ್ಕವು (Reason) ಒಂದು ವಸ್ತುವಿಗೂ, ಇನ್ನೊಂದು ವಸ್ತುವಿಗೂ ಇರುವ ಸಂಬಂಧವನ್ನು ಹುಡುಕುತ್ತದೆ; ವಿಭಜಿಸುತ್ತದೆ; ಎಣಿಸುತ್ತದೆ. ಆದರೆ ಈ ವಸ್ತುಗಳನ್ನು ತನ್ನ ಹೃದ್ಗತವಮಾಡಿಕೊಂಡು, ಅವುಗಳನ್ನು ತನ್ನ ಅನುಭವದ ಬಣ್ಣದಿಂದ ಅಲಂಕರಿಸುವ ಮತ್ತು ಅದರಿಂದ ಸ್ಫೂರ್ತವಾದ ಮತ್ತು ಸ್ವಯಂಪೂರ್ಣವಾದ ಇತರ ಅನುಭವಗಳನ್ನು ಹೊಮ್ಮಿಸುವ ಶಕ್ತಿಯೇ Imagination. ಬಹುಶಃ ಇದನ್ನು ನಮ್ಮ ಮಾತಿನಲ್ಲಿ "ಪ್ರತಿಭಾಶಕ್ತಿ" ಎನ್ನಬಹುದೆಂದು ತೋರುತ್ತದೆ.

"Reason is to the imagination as the instrument to the agent, as the body to the spirit, as the shadow to the substance"

—ಎಂದು ಶೆಲ್ಲಿ ತರ್ಕ ಮತ್ತು ಪ್ರತಿಭೆ ಈ ಎರಡರ ಸಂಬಂಧವನ್ನು ನಿರ್ದೇಶಿಸಿಗೊಳಿಸಿದ್ದಾನೆ. ಪ್ರತಿಭಾ ಶಕ್ತಿಯೇ ಕಾವ್ಯದ ಕಣ್ಣು; ಕಾವ್ಯದ ಆತ್ಮ.

ವೈಜ್ಞಾನಿಕ ಬಾಹ್ಯ ಸತ್ಯಗಳಿಗೆ ಜೀವತುಂಬುವ ಆತ್ಮಶಕ್ತಿ ಈ ಪ್ರತಿಭೆ. ಕಾವ್ಯದಲ್ಲಿ ನಾವು ಕಾಣುವುದು ಕೇವಲ ಬಾಹ್ಯಸತ್ಯವನ್ನಲ್ಲ; ಕಾವ್ಯಸತ್ಯವನ್ನು. "My heart leaps up when I behold a single rain-bow in the sky"–ಎಂದು ವರ್ಡ್ಸ್‌ವರ್ತ್ ಹೇಳುತ್ತಾನೆ. ಆತನಿಗೆ ಕಾಮನಬಿಲ್ಲು ಹೇಗೆ ಉಂಟಾಗುತ್ತದೆನ್ನುವ ಕಾರಣದ ವೈಜ್ಞಾನಿಕ ವಿವರಣೆ ಪೂರ್ಣ ಸತ್ಯವಲ್ಲ. ಆದರೆ ಆ ಕಾಮನಬಿಲ್ಲು ಪ್ರಚೋದಿಸುವ ಸೃಷ್ಟಿ ಸೌಂದರ್ಯದ ಚಿತ್ರ, ಅದರಿಂದ ದೊರೆತ ಆನಂದ, ಇವು ಮುಖ್ಯ. ಆ ಕಾಮನಬಿಲ್ಲನ್ನು ಪ್ರೀತಿಸುವ ಶಕ್ತಿ ನಾಶವಾದಂದೇ ಮರಣ ಬರಲಿ ಎಂದು ಬೇಡಿಕೊಳ್ಳುತ್ತಾನೆ. ಒಂದು ಕ್ಷುದ್ರವಾದ ಹೂವಿನ ಅರಳುವಿಕೆಯನ್ನು ಕಂಡಾಗಲೂ ಆತನಿಗೆ ಕಣ್ಣೀರು ಸುರಿಯುತ್ತದೆ:

"To me the meanest flower that blows can give
Thoughts that do often lie too deep for tears."

—ಎನ್ನುತ್ತಾನೆ. ಅರಳುತ್ತಿರುವ ಆ ಸಣ್ಣ ಹೂವು ಕೂಡ ವಿಶ್ವದ ರಹಸ್ಯದಿಂದ ಹೊರಹೊಮ್ಮುವ ಬೆಳಕಿಗೆ ಒಂದು ಕಿಟಕಿಯಂತೆ ಕಾಣುತ್ತದೆ ಆತನಿಗೆ.

ಇದು ಸ್ಥೂಲ ದೃಷ್ಟಿಯ ಲೋಕಸತ್ಯವಲ್ಲದಿರಬಹುದು; ಆದರೆ ಇದು ಅನುಭವ

ಸತ್ಯ ; ಕಾವ್ಯಸತ್ಯ. ಈ ಕಾವ್ಯಸತ್ಯವು ಬಾಹ್ಯಸತ್ಯದಿಂದ ಹೊರತಾದುದಲ್ಲ. ಅದನ್ನು ಒಳಗೊಳ್ಳುತ್ತದೆ; ಅದನ್ನು ಅರಗಿಸಿಕೊಳ್ಳುತ್ತದೆ; ಆದರೆ ಅದನ್ನೂ ಮೀರಿ ಮೇಲೇರುತ್ತದೆ. ಹುಲ್ಲನ್ನೇ ತಿಂದರು ಹಾಲನ್ನು ಕೊಡುವ ಹಸುವಿನಂತೆ ಈ ಪ್ರತಿಭಾಶಕ್ತಿ ಲೋಕದ ಅನುಭವದ ಆಧಾರದಿಂದ, ಅನಂತಸತ್ಯ ಪ್ರಕಾಶನದ ಅಮೃತವನ್ನು ನೀಡಲು ಹವಣಿಸುತ್ತದೆ.

ಕುವೆಂಪುರವರು "ರೋರಿಕ್ ಚಿತ್ರಶಾಲಾಸ್ಮೃತಿ" ಎಂಬ ತಮ್ಮ ಕವನದಲ್ಲಿ ಮೋಡಗಳನ್ನು, ಕುರಿತು ಹೇಳುವ ಈ ಮಾತುಗಳನ್ನು ನೋಡಿ—

"ಮುಗಿಲ್‌ಗಳ್-ಬರಿಯ ನೀರಾವಿಗಳ್ ಜಡಮತಿಯ
ವಿಜ್ಞಾನಿಯಜ್ಞತೆಗೆ; ಗಗನಕವಿ ಕಲ್ಪನೆಯ
ಸಂಜೀವ ಭಾವಗಳ್ ಋಷಿಯ ರಸವಿಜ್ಞಾನ
ದರ್ಶನಕ್ಕೆ: ಸಾಕ್ಷಿಗಳತೀತದಸ್ತಿತ್ವಕ್ಕೆ;
ಅನ್ಯಲೋಕಗಳನ್ಯರೀತಿಗೆ ಗವಾಕ್ಷಗಳ್;
ಭೂ ನಿಸರ್ಗದ ಪ್ರಾಕ್ತನಾದ್ಭುತ ಪಿಡಂಭೂತ
ಸೃಷ್ಟಿಯ ಪುನಃಸ್ಮೃತಿಯ ಬಾನ್‌ಬಗೆಯ ವಿಕೃತಿಗಳ್;
ಅಧ್ಯಾತ್ಮದರ್ಥ ಪ್ರತೀಕಗಳ್ : ಆವೇಶ
ಚಿಹ್ನೆಗಳ್ ; ತಿರೆಗೆ ಸಗ್ಗದ ಸೆರಗುಸನ್ನೆಗಳ್ ;
ಆಕಾಶಪುಸ್ತಕದ ಅತ್ಯನಿರ್ವಚನೀಯ
ದೇವಭಾಷಾದೃಶ್ಯಕಾವ್ಯಗಳ್."

ಪ್ರಕೃತಿಯ ಒಂದೊಂದು ಅಂಶವನ್ನೂ ಈ ವಿರಾಟ್‌ದೃಷ್ಟಿಯಿಂದ ನೋಡಬಲ್ಲ ಕವಿಶಕ್ತಿಗೆ ಸೌಂದರ್ಯೋಪಾಸನೆಯೇ ಸೃಷ್ಟಿಯ ಕರ್ತನ ಉಪಾಸನೆಯಾಗಿ, ಕಾವ್ಯೋಪಾಸನೆಯೇ ವಿಶ್ವಕವಿಯ ಉಪಾಸನೆಯಾಗಿ ಪರಿಣಮಿಸಿದರೆ ಆಶ್ಚರ್ಯವೇನು?

ಕಾವ್ಯವೆಂದರೇನೆಂಬುದನ್ನು ಹೇಳುತ್ತಾ ಆಂಗ್ಲ ವಿಮರ್ಶಕ 'ಲಿ ಹಂಟ್' (Leigh Hunt) ಹೀಗೆ ಹೇಳುತ್ತಾನೆ:

"Poetry is the utterance of a passion for truth, beauty, and power, embodying and illustrating its conceptions by imagination and fancy, and modulating its language on the principle of Variety in Uniformity."

ಕಾವ್ಯದ ಸ್ವರೂಪ ಮತ್ತು ರೂಪಗಳನ್ನು ಕುರಿತು ಹೇಳುವ ಈ ಸೂತ್ರ ಬಹಳ ವ್ಯಾಪಕವಾದುದು. ಇಲ್ಲಿ ನಮಗೆ ಮುಖ್ಯವಾಗಿ ಬೇಕಾದ ಮಾತೆಂದರೆ "Poetry is the utterance of a passion for truth, beauty, and power." ಸತ್ಯ, ಸೌಂದರ್ಯ ಮತ್ತು ಶಕ್ತಿ ಈ ಮೂರು ಮಾತುಗಳನ್ನು ಉಪ

ಯೋಗಿಸುತ್ತಾನೆ. ಕಾವ್ಯದಲ್ಲಿ ಸತ್ಯ ಪ್ರಕಾಶಗೊಳ್ಳುತ್ತದೆ, ಆ ಸತ್ಯವು ಸೌಂದರ್ಯ ರೂಪದಿಂದ ಪ್ರಕಟಗೊಳ್ಳಬೇಕು, ಶಕ್ತಿ ಪೂರ್ಣವಾದಾಗ ಆ ಸೃಷ್ಟಿ ಸಾಧ್ಯವಾಗುತ್ತದೆ. ಅಂದರೆ ಕಾವ್ಯದಲ್ಲಿ ಸತ್ಯವು ಸೌಂದರ್ಯ ರೂಪದಿಂದ ಕ್ರಿಯಾತ್ಮಕ ಶಕ್ತಿಯೊಡಗೂಡಿ ಹೊರಹೊಮ್ಮಬೇಕು—ಎನ್ನುತ್ತಾನೆ.

ಹೀಗೆ ಸೌಂದರ್ಯರೂಪದಿಂದ ಸತ್ಯದ ಅನುಭವವನ್ನು ಉಂಟುಮಾಡಿಕೊಡುವುದೇ ಕಾವ್ಯ ಮಾಡುವ ಮಹತ್ತರವಾದ ಕಾರ್ಯ. ಕವಿ ಸೃಷ್ಟಿ ತತ್ತ್ವದ ಮೂಲ ರಹಸ್ಯಗಳನ್ನೂ, ಸಮಸ್ಯೆಗಳನ್ನೂ, ಗುರಿಯನ್ನೂ, ಸತತ ಸಾಧನೆಯಿಂದ ಅರಸಿ, ಅವುಗಳನ್ನು ತನ್ನ ಧ್ಯಾನ ಮೂಸೆಯಲ್ಲಿಟ್ಟು ಕರಗಿಸಿ, ಸೌಂದರ್ಯರೂಪದಿಂದ ಹೊರಹೊಮ್ಮಿಸುತ್ತಾನೆ. ಇಂತಹ ಕಾವ್ಯಗಳಿಂದ ದೊರೆಯುವ ಸೌಂದರ್ಯಾನುಭವ ಸಹೃದಯನ ಉದ್ಧಾರಕ್ಕೆ, ಉತ್ಥಾನಕ್ಕೆ, ಪೂರ್ಣಪ್ರಜ್ಞಾವಿಕಾಸಕ್ಕೆ ನೆರವಾಗುತ್ತದೆ.

ಕೆಲವು ವೇಳೆ ಮಗುವಿಗೆ ಕಾಯಿಲೆಯಾದರೆ, ತಾಯಿ ಔಷಧಿ ತೆಗೆದುಕೊಳ್ಳುವುದನ್ನು ನೋಡಿದ್ದೇವೆ. ಹಾಗೆಯೇ ಇಲ್ಲಿ ಸಮಾಜಶಿಶುವಿನ ಅಭ್ಯುದಯಕ್ಕಾಗಿ ಕವಿ ತಾನು ದೊಡ್ಡ ದೊಡ್ಡ ಆದರ್ಶಗಳನ್ನು ಕಂಡು ಅರಗಿಸಿಕೊಳ್ಳುತ್ತಾನೆ; ಹಿರಿಯ ಜೀವನವನ್ನು ಬಾಳುತ್ತಾನೆ. ಶಿವಪರವಾದ ಸೌಂದರ್ಯವಾವುದೆಂಬುದನ್ನು ಗುರುತಿಸಿ ಅದನ್ನು ತನ್ನ ಕೃತಿಗಳಲ್ಲಿ ಪ್ರಕಟಗೊಳಿಸುತ್ತಾನೆ. ಆ ಸೌಂದರ್ಯದ ಚಿರಂತನವಾದ ಸಂದೇಶವನ್ನು ತ್ರಿಕಾಲಾಬಾಧಿತವಾದ ಸತ್ಯರೂಪದಿಂದ ಸಾರುತ್ತಾನೆ. ಇದರ ಸತ್ಯತೆಯನ್ನು ಕವಿ ಕುವೆಂಪುರವರ ಕವನಗಳಲ್ಲೆಲ್ಲಾ ನಾವು ಕಾಣುತ್ತೇವೆ. ಅವರ ಕವನಗಳೆಲ್ಲಾ ಈ ಲೋಕೋತ್ತರವಾದ ಅನುಭವವನ್ನು " ಶರೀರೀಕರಣ " ಗೈಯ್ಯುವ ಸಾಹಸದ ಪ್ರತಿಫಲಗಳು.

ಕುವೆಂಪುರವರ ಸೌಂದರೋಪಾಸನೆಯ ಈ ಪೂರ್ಣ ರೂಪವು, ಪೂರ್ಣ ವಿಕಾಸವು, ಅವರ ಮಹಾಕಾವ್ಯವಾದ " ಶ್ರೀ ರಾಮಾಯಣ ದರ್ಶನಂ " ಮಹಾಕಾವ್ಯದಲ್ಲಿ ಪರಿಪೂರ್ಣತೆಗೇರಿರುವುದನ್ನು ಕಾಣಬಹುದು. ಲೋಕೋತ್ತರ ಸೌಂದರ್ಯದ ಅಭಿವ್ಯಕ್ತಿಗೆ ಮಹದವಕಾಶಗಳು ಮಹಾಕಾವ್ಯದಲ್ಲಿರುತ್ತವೆ. ವರ್ಣನೆಗಳಲ್ಲಿ ಪಾತ್ರ ಚಿತ್ರಣದಲ್ಲಿ, ಸನ್ನಿವೇಶ ನಿರ್ಮಾಣಗಳಲ್ಲಿ, ಕಥನ ಕೌಶಲ್ಯದಲ್ಲಿ, ಎಲ್ಲೆಲ್ಲಿಯೂ ಸರ್ವ ವ್ಯಾಪಕವಾದ ಸೌಂದರ್ಯದ ಪೂರ್ಣದೃಷ್ಟಿ 'ಶ್ರೀ ರಾಮಾಯಣ ದರ್ಶನಂ' ನಲ್ಲಿ ಅಭಿವ್ಯಕ್ತಿಗೊಂಡಿರುವುದನ್ನು ಕಾಣುತ್ತೇವೆ. ಆದರೆ ಇಲ್ಲಿ ಪ್ರಕೃತಿ ಸೌಂದರ್ಯದ ವಲಯಕ್ಕೆ ಮಾತ್ರಾ ನಮ್ಮ ವ್ಯಾಪ್ತಿಯನ್ನು ಮಿತಗೊಳಿಸಿಕೊಳ್ಳಬೇಕಾಗುತ್ತದೆ.

ಕಾವ್ಯ ಪ್ರಾರಂಭದಲ್ಲಿಯೇ ಕುವೆಂಪುರವರು " ಸಾವಧಾನದಿ ತೇಲ್ದು ಸಾಗುವೆ, ತೆರೆತೆರೆಯನೇರ್ದು ರಸಮಂಪೀರ್ದು ಸಾಗುವೆನ್ " ಎನ್ನುತ್ತಾರೆ. ರಾಮನ ಕಿರೀಟದ ರತ್ನದಂತೆ ಪಂಚವಟಿಯ ತೃಣಸುಂದರಿಯ ಮೂಗುತಿಯಂತಹ ಹಿಮಬಿಂದುವೂ ರಮ್ಯವಾದುದು. ಅದೆಲ್ಲವನ್ನೂ ಸವಿದು ಸಾಗುವ " ರಸಯಾತ್ರೆಯಂ ಕೈಕೊಂಡೆನಯ್ " ಎನ್ನುತ್ತಾರೆ. ರಾಮಾಯಣ ಒಂದು ರಸಯಾತ್ರೆ. ಇಲ್ಲಿಯ ರಾಮ "ಗಿರಿವನ

ಪ್ರಿಯರಾಮ." ಪ್ರಕೃತಿಯ ಆರಾಧನೆಯೇ ಪರಮನ ಆರಾಧನೆ ಆತನಿಗೆ. ಪ್ರಕೃತಿ ಸೌಂದರ್ಯದ ಮೂಲಕವಾಗಿ ವಿಶ್ವಾತ್ಮನನ್ನು ಸಂದರ್ಶಿಸಬಲ್ಲ ಸೌಂದರ್ಯಯೋಗಿ, 'ರಸಋಷಿ' ಆತ. ಒಂದು ಕಡೆ ಕುವೆಂಪುರವರು ವಿಶ್ವಾಮಿತ್ರನಿಂದ ರಾಮನಿಗೆ ಈ ಮಾತುಗಳನ್ನು ಹೇಳಿಸುತ್ತಾರೆ:

"....ಗಿರಿವನಪ್ರೀತಿ ತಾಂ ದೈವಕೃಪೆದಲ್.
ಜಗದೀಶ್ವರನ ಮಹಿಮೆ ಸಂವೇದ್ಯವಹುದಿಲ್ಲಿ
ಭವ್ಯಸೌಂದರ್ಯ ಶೀಲದ ವನ್ಯ ಶಾಂತಿಯಲಿ
ಉಪನಿಷತ್ತಿನ ಮಹಾಮಂತ್ರಾನುಭವಗಳುಂ
ಹೃದ್ಗಮ್ಯವಿಲ್ಲಿ. ಚಿತ್ತಕೆ ಸಮಾಧಿಯನಿತ್ತು
ಹರಿದಂತ ವಿಶ್ರಾಂತ ಹರಿತ ಕಾನನ ಮಯಂ ತಾಂ
ಪರ್ವತಶ್ರೇಣಿ ಪರ್ವಿದೆ ನೋಡು ಶಿವನಂತೆವೋಲ್,
ಧ್ಯಾನಮಾಳ್ಪಗೆ ಹೃಷ್ಟರೋಮತೆಯನಿತ್ತು. ಅದೊ,
ಬಣ್ಣದ ಮುಗಿಲ್ ಗಗನಪಟದಲ್ಲಿ ತೇಲುತಿದೆ
ದೇವರೆ ಪೆಸರ್ ಬರೆದ ಮುದ್ರೆಯೋಲ್, ಕರೆಯುತಿದೆ ಕಾಣ್
ನಮ್ಮಾತ್ಮಮಂ ಕಲೋಪಾಸನೆಗೆ. ರಾಮ, ಕೇಳ್,
ಸೃಷ್ಟಿ ಸೌಂದರ್ಯದೊಲ್ಮೆಯೆ ಸೃಷ್ಟಿ ಕರ್ತಂಗೆ
ಪೂಜೆಯಯ್. ರಸಜೀವನಕೆ ಮಿಗಿಲ್ ತಪಮಿಹುದೇ ?
ರಸಸಿದ್ಧಿಗಿಂ ಮಿಗಿಲೆಸಿದ್ಧಿ ? ಪೊಣ್ಮಿದೆ ಸೃಷ್ಟಿ
ರಸದಿಂದೆ; ಬಾಳುತಿದೆ ರಸದಲ್ಲಿ; ರಸದೆಡೆಗೆತಾಂ
ಪರಿಯುತಿದೆ; ಪೊಂದುವುದು ರಸದೊಳೈಕ್ಯತೆವೆತ್ತು
ತುದಿಗೆ. ರಸಸಾಧನಂಗೈಯ್ಯದಿರುವುದೆ ಮೃತ್ಯು.
ಆನಂದ ರೂಪಮಮೃತಂ ರಸಂ."

ವಿಶ್ವಾಮಿತ್ರನ ಈ ಮಾತುಗಳು ರಾಮನ ಅಂತರಂಗದಲ್ಲಿ ಲೀನವಾದುವು. ಪ್ರಕೃತಿ ಉಪಾಸನೆ ಆತನ ಉಸಿರಾಯಿತು. ಅದರಲ್ಲಿಯೇ ತನ್ನ ಜೀವಿತೋದ್ದೇಶದ ಮಹಾಗುರಿಯನ್ನು, ಅರಿತುಕೊಂಡನು. ಕಾಡಿನವಾಸ ಆತನಿಗೆ ಕಷ್ಟಕರವಾಗಿ ಕಾಣ ಲಿಲ್ಲ. ಸ್ವರ್ಗಕ್ಕಿಂತ ಮಿಗಿಲಾಯಿತು. ಏಕೆಂದರೆ:

" ಅರಸುತನಮೆದೆಯೊಳಿರೆ ಕಾಡರಮನೆಗೆ ಕೀಳೆ ?
ರಸವಿಲ್ಲದಿಹ ಬಾಳಿಗರಮನೆಯೆ ಮರುಭೂಮಿ
ರಸಿಕಂಗಡವಿ ಸಗ್ಗಕಿಂ ಮಿಗಿಲ್ ಸೊಗಸಲ್ತೆ."

—ಎನ್ನುತ್ತಾರೆ. ರಾಮ ನಿಜವಾದ " ರಾಮ"ನಾದುದು ರಾವಣನನ್ನು ಕೊಂದುದರಿಂದ ಮಾತ್ರವಲ್ಲ. ಅವನಿಗೆ ಪೂಜ್ಯತೆ ಲಭಿಸಿರುವುದು ಕೊಲೆಗೈದುದರಿಂದಲ್ಲ. ಹಾಗಾದರೆ ಏಕೆ? ಹೇಳುತ್ತಾರೆ ಕವಿ ;

"........ಮಣಿಯುವೆನು ರಾಮನವಿದಾವರೆಗೆ;
ದಶಶಿರನವಧೆಯಾದಿಯಲ್ತು, ಮಂದಾಕಿನಿಯ
ತಿಳಿವೊನಲ ಮೀಯುತಿರಲೊರ್ದಿಸಂ ತಾಂ ಕಂಡ
ದೃಶ್ಯಸೌಂದರ್ಯದಿಂದಾತ್ಮದರ್ಶನಕೇರ್ದ
ರಸಸಮಾಧಿಯ ಮಹಿಮೆಗಾಗಿ!"

ಮಂದಾಕಿನಿಯಲ್ಲಿ ಸ್ನಾನಮಾಡುತ್ತಿರುವಾಗ ತಾನು ಕಂಡ ದೃಶ್ಯಸೌಂದರ್ಯದಿಂದ ಆತ್ಮದರ್ಶನವನ್ನು ಪಡೆದ "ರಸಸಿದ್ಧ" ರಾಮ. ಅದರಿಂದ ಆತನಿಗೆ ಪೂಜ್ಯತೆ ಎನ್ನುತ್ತಾರೆ. ಇದು ಪ್ರಕೃತಿಸೌಂದರ್ಯ ಮಾನವನಿಗೆ ಕೊಡಬಹುದಾದ ಅತ್ಯುನ್ನತವಾದ ಅನುಭವವನ್ನೂ, ಪ್ರಕೃತಿಸೌಂದರ್ಯದ ಸನ್ನಿಧಿಯಲ್ಲಿ ಮಾನವನು ಏರಬಹುದಾದ ಎತ್ತರವನ್ನು ಸೂಚಿಸುತ್ತದೆ. "ನಿನ್ನ ಸೌಂದರ್ಯಸಾನ್ನಿಧ್ಯಮಿದೆ, ಓ ಪ್ರಕೃತಿ, ಮಿಂಚಿದ ಪುದಿಂದ್ರಿಯಮತೀಂದ್ರಿಯಕೆ" ಎಂದು ಕುವೆಂಪು ಹೇಳಬಲ್ಲರು. ಪ್ರಕೃತಿಮಾತೆಗೆ ಆತ್ಮನೈವೇದ್ಯವನ್ನರ್ಪಿಸಿ ಲೋಕಾತಿಕ್ರಾಂತವಾದ ಸತ್ಯದರ್ಶನದ ಪ್ರಸಾದವನ್ನು ತಂದು ಕೊಡಬಲ್ಲರು—ಎಂಬುದನ್ನು 'ರಾಮಾಯಣದರ್ಶನ'ದಲ್ಲಿ ಹೆಜ್ಜೆ ಹೆಜ್ಜೆಗೂ ಕಾಣುತ್ತೇವೆ.

ಪ್ರಕೃತಿಸೌಂದರ್ಯದರ್ಶನದಿಂದ ಆ ಸೌಂದರ್ಯಕ್ಕೆ ಅತೀತವಾದ ಶಕ್ತಿಯ ಅನುಭವವನ್ನು ಪಡೆಯುವುದಲ್ಲದೆ, ಆ ಸೌಂದರ್ಯದ ಬಾಹ್ಯ ಚಿತ್ರವನ್ನು ಯಥಾರ್ಥವಾಗಿ ಚಿತ್ರಿಸುವುದೂ ಒಂದು ಅಪೂರ್ವಶಕ್ತಿ. ಈ ಎರಡು ಶಕ್ತಿಗಳ ಸಮ್ಮೇಳನವನ್ನು ಕುವೆಂಪುರವರಲ್ಲಿ ಕಾಣುತ್ತೇವೆ. ಇಡೀ ರಾಮಾಯಣ ದರ್ಶನವೆಲ್ಲವೂ ಪ್ರಕೃತಿ ಸೌಂದರ್ಯದ ಶಬ್ದಚಿತ್ರಶಾಲೆ ಎನ್ನಬಹುದು. ಆ ದಂಡಕಾರಣ್ಯ, ಅಲ್ಲಿ ಹರಿವ ನದಿಗಳು, ತರಂಗಿಣಿಗಳು, ಬೆಟ್ಟಗಳು, ಋಷ್ಯಾಶ್ರಮಗಳು, ಎಲ್ಲವೂ ನಮ್ಮ ಕಣ್ಣೆದುರು ಬಂದು ನಿಲ್ಲುತ್ತವೆ. ನಮಗೆ ತುಂಬಾ ಪರಿಚಿತವಾಗುತ್ತವೆ, ಪ್ರಿಯವಾಗುತ್ತವೆ.

ಉದಾಹರಣೆಗಾಗಿ ಒಂದೆರಡು ಚಿತ್ರಗಳನ್ನು ನೋಡಬಹುದು; ಪಂಚವಟಿಯ ತಮ್ಮ ಪರ್ಣಕುಟಿಯಲ್ಲಿ ನಿಂತು ರಾಮ ಸೀತೆಯರು ದಟ್ಟವಾಗಿ ಮಂಜು ಸುರಿಯುತ್ತಿರುವ ಒಂದು ಮುಂಜಾವಿನ ಸೌಂದರ್ಯವನ್ನು ನೋಡುತ್ತಿದ್ದಾರೆ. ಹೇಮಂತ ರಚಿತ ಮಂಜುಕಲೆ ಹೀಗೆ ಹಬ್ಬಿಹರಡಿದ್ದಿತಂತೆ!

"ಗಿಡವಿಲ್ಲ, ಮರವಿಲ್ಲ; ಮಲೆಯಿಲ್ಲ; ಕಾಡಿಲ್ಲ,
ನೆಲವಿಲ್ಲ; ಬಾನಿಲ್ಲ; ಬಿಳಿಯ ಬಣ್ಣವನುಳಿದು
ನೋಟಕೇನೊಂದಿಲ್ಲ. ಬೆಳ್ಪೊಂದೆ ಜಗವೆಲ್ಲಮುಂ.
ಕಡಲಕಡೆಹದೊಳುದಿಸಿ, ಮಂಥನದ ರಭಸಕ್ಕೆ
ಸಿಡಿದು, ತುಂತುರು ತುಂತುರಾಗಿ, ನಾನಾದೆಸೆಗೆ
ಪರ್ವಿದಾ ಕೇಂದ್ರಾತಿಗಾಮೃತಂ ಪರ್ವತದ, ಮೇಣ್
ಫಣಿಯ, ಮೇಣಸುರಾಮರಾಕಾರದಿಂ ಪ್ರವಹಿಸಿತೊ

ಶೀಕರ ತುಷಾರದೋಲೆಂಬಂತೆ ಬಿಳಿಮಂಜು ತಾಂ
ರೌಪ್ಯಧೂಳಿಯ ಸಾಂದ್ರ ಧೌತಧವಳವನೆರಚಿ
ಮುಚ್ಚಿಮುಸುಕಿದುದು ಗಿರಿವನಭುವನಮುಂ ಮೇಣ್ ಮಳಲಿ
ಹೊಗೆಯಾಯ್ತೊ, ನೊರೆಯೆ ಇಬ್ಬನಿಯಾಯ್ತೊ ತಾನೆಂಬ
ಕಡಲಾಗೆ ದಟ್ಟೈಸೈಕಿಲ್ ಸೋನೆ, ಬಳಿಯಿರ್ದುಮಾ
ಬಳಸಿರ್ದ ಮುಳ್ಳಿನೊಡ್ಡುಂ ಮಂಜಿನೊಳ್ ಮುಸುಳೆ,
ತೆಪ್ಪವಾದುದು ತೇಲ್ದುದವರಾಶ್ರಮುಂ!"

ಪ್ರಕೃತಿಯೆಲ್ಲವೂ ಮಂಜಿನ ಮುಸುಕಿನಲ್ಲಿ ಮುಳುಗಿಹೋಗಿ, ಅವರು ನಿಂತ ಆಶ್ರಮ ಪ್ರದೇಶವೇ ಒಂದು ತೆಪ್ಪವಾಗಿ ಮಂಜಿನ ಸಮುದ್ರದಲ್ಲಿ ತೇಲುತ್ತಿರುವಂತೆ ಕಾಣಿಸಿತು ಎನ್ನುತ್ತಾರೆ.

ಇನ್ನೊಂದು ವರ್ಣನೆ: ರಾಮಲಕ್ಷ್ಮಣಸೀತೆಯರು ಕಾಡಿನಲ್ಲಿ ನಡೆದುಬರುತ್ತಿರುವಾಗ ದೂರದಲ್ಲಿ ಚಿತ್ರಕೂಟಗಿರಿ ಶಿಖರವನ್ನು ಕಾಣುತ್ತಾರೆ. ಆ "ಸೊಗಸು ನೋಟ"ವನ್ನು ಕಂಡು "ಮೈಯಲ್ಲಾ ಕಣ್ಣಾಗಿ, ಕಣ್ಣಾರುಮೊಂದಾಗಿ, ಕಣ್ಣೊಂದುಮಿಲ್ಲದಾತ್ಮಾನಂದ ರಸವಾಗಿ" ಆ "ದೃಶ್ಯದೇವೇಂದ್ರ"ನನ್ನು ನೋಡುತ್ತಾರೆ. ಅದರ ಚಿತ್ರವಿದು:

"ಅಂತಹೀನ ಮಹಾಂತ ಸಂತತಮವಿಶ್ರಾಂತ
ಜಲನಿಧಿಯ ಬೃಹನ್ನೀಲಿಮಾ ವಿರಾಡ್‌ರಂಗದೊಳ್
ತೆರೆಯನಟ್ಟುವ ತೆರೆಯನಟ್ಟುವ ತೆರೆಯ ತೆರದಿಂ
ಗಿರಿಯನಟ್ಟುವ ಗಿರಿಯನಟ್ಟುವ ಗಿರಿಯ ಪಂಕ್ತಿಗಳ್
ಪರ್ವಿದವು ದಿಟ್ಟಿ ಹೋಹನ್ನೆಗಂ ಮೇಣ್ ಕಣ್ಣಲೆದು
ಸೋಲ್ವನ್ನೆಗಂ. ಸಾಂದ್ರ ರೋಮರಾಜಿಯ ರುಂದ್ರ
ಚರ್ಮದೊಂದತಿಪೂರ್ವ ಭೂ ಬೃಹಜ್ಜಂತುವೆನೆ
ಹಬ್ಬಿ ಹಸರಿಸಿತುಬ್ಬಿತಡವಿ ದಟ್ಟೈಸಿದಾ
ದಿಟ್ಟ ಮಲೆಪೊಡವಿ. ಮಂದಾಕಿನಿಯ ಪೆರ್ಪೊನಲ್
ಗಿರಿಯ ಮೇಖಲೆಯಾಗಿ ಕಂದರದ ಸೀಮೆಯುಂ
ಸಿಂಗರಿಸಿದತ್ತು. ಕಿರುಪೊನಲ ತೊರೆ ಮಾಲ್ಯವತಿ
ತಾನದ್ರಿಶಿರದಿಂ ರಜತರೇಖೆಯೋಲಿಳಿದು
ಕಂಗೊಳಿಸಿದತ್ತು, ಚಿನ್ನದ ಜನ್ನಿವಾರಮೆನೆ
ತಳತಳಿಸಿ, ಸಾಯಂ ಸಮೀಪ ದಿವಸೇಶ್ವರನ
ಕನಕಕಾಂತಿಯಲಿ. ಆ ಶೈಲಭೈರವ ಋಷಿಗೆ
ದರ್ಶನದಿನಾವೇಶವಶರಾದ ಮೂವರುಂ
ಕೈಮುಗಿದರರ್ಪಿಸಿದರಾತ್ಮ ನೈವೇದ್ಯಮುಂ!"

ನೃಶ್ಯಸೌಂದರ್ಯ, ಅನುಭವದಸೌಂದರ್ಯ, ಉಕ್ತಿಸೌಂದರ್ಯ ಈ ಮೂರೂ ಮುಪ್ಪುರಿಗೊಂಡು ಜೀವಂತ ಚಿತ್ರವಾಗಿರುವುದನ್ನು ಇಂತಹ ವರ್ಣನೆಗಳಲ್ಲಿ ಕಾಣುತ್ತೇವೆ. ಇಂತಹ ಸನ್ನಿವೇಶಗಳು 'ಶ್ರೀ ರಾಮಾಯಣ ದರ್ಶನಂ' ನಲ್ಲಿ ಅನೇಕವಾಗಿವೆ.

ಬೆಳಕು ಕತ್ತಲಲ್ಲಿ ಮಾರ್ಗದರ್ಶಕವಾಗುತ್ತದೆ, ನಿಜ. ಆದರೆ ಅದೇ ಬೆಳಕು ಅತ್ಯಧಿಕ ಪ್ರಮಾಣದಲ್ಲಿ ಮಿಂಚಿನ ಪ್ರಕಾಶದಲ್ಲಿ ಮೈದೋರಿದಾಗ ಕಣ್ಣು ಕೋರೈಸುತ್ತದೆ. ದಿಟ್ಟಿ ತಬ್ಬಿಬ್ಬಾಗುತ್ತದೆ. ಹಾಗೆಯೇ ಸೌಂದರ್ಯವೂ ಬೃಹತ್‌ಪ್ರಮಾಣದಲ್ಲಿ ಮೈದೋರಿದಾಗ ಮನಸ್ಸನ್ನು ಬಂದು ಅಪ್ಪಳಿಸುತ್ತದೆ. ಬುದ್ಧಿಯನ್ನು ದಿಗ್ಭ್ರಮೆಗೊಳಿಸುತ್ತದೆ. ಬೇಲೂರಿನ ಶಿಲಾಬಾಲಿಕೆಯರನ್ನು ನೋಡುವಾಗ ಈ ಅನುಭವವಾಗದಿರಬಹುದು, ಆದರೆ ಶ್ರವಣಬೆಳಗೊಳದ ಗೊಮ್ಮಟೇಶ್ವರನ ಬೃಹತ್‌ವಿಗ್ರಹದ ಎದುರು ನಿಂತಾಗ ವಿಸ್ಮಯಮೂಕರಾಗುತ್ತೇವೆ. ಅದರ ಹಿರಿಯತನದ ಎದುರಿನಲ್ಲಿ ನಮ್ಮ ಅಲ್ಪತನದ ಅಹಂಕಾರವನ್ನು ಸಮರ್ಪಿಸಿ ವಿನೀತರಾಗುತ್ತೇವೆ. ಇಂತಹ ಭವ್ಯತೆಯ ಅನುಭವ ಶ್ರೀ ರಾಮಾಯಣ ದರ್ಶನಂನಲ್ಲಿ ಅಲ್ಲಲ್ಲಿ ನಮಗೆ ಉಂಟಾಗುತ್ತದೆ.

ಇಲ್ಲಿ ಆಂಜನೇಯನ ಸಾಗರೋಲ್ಲಂಘನದ ದೃಶ್ಯವನ್ನು ನೋಡಬಹುದು. ಇದಕ್ಕೆ ಸ್ವಲ್ಪ ಹಿಂದೆಯೇ ಕವಿ "ಓ ಏಳ್, ವಿಪಂಚಿಯೆ, ಕಲಾಲತಾಂಗಿಯ ಬೆರಳ್ ತಳಿರ ಸೋಂಕಿನ ಸೊಂಪು ಸಾಲ್ವುದೇನಿನ್ ನಿನಗೆ? ಪ್ರಳಯ ಭೈರವ ಡಮರು ರೌರವಾವೇಶಮಂ ಆಹ್ವಾನಗೆಯ್" ಎಂದು ಭವ್ಯತಾ ದರ್ಶನಕ್ಕೆ ಬೇಕಾದ ಆವೇಶವನ್ನು ಆಹ್ವಾನಗೈದಿದ್ದಾರೆ. ಆ ಆವೇಶ ಪೂರ್ಣವಾಗಿ ತುಂಬಿ ಬಂದಿರುವುದನ್ನು ಸಾಗರೋಲ್ಲಂಘನದ ಪ್ರಸಂಗದಲ್ಲಿ ಕಾಣುತ್ತೇವೆ. ಮಾನವಾತ್ಮವು ಸಾಧಿಸಬಹುದಾದ ಮಹತ್ ಸಾಧನೆಗೆ; ಮಹಾಕವಿ ತನ್ನ ಕಾವ್ಯಯಾನದಲ್ಲಿ ಏರಬಲ್ಲ ಉತ್ತುಂಗ ಶಿಖರಕ್ಕೆ ದೈತ್ಯ ಸಾಹಸಕ್ಕೆ, ಸಾಕ್ಷಿಯಾಗಿ, ಚಿರಂತನವಾಗಿ ಉಳಿಯಬಲ್ಲ ಪ್ರತಿಮೆ ಈ ಸಾಗರೋಲ್ಲಂಘನ.

ಆಜನ್ಮಬ್ರಹ್ಮಚಾರಿಯಾದ ಆಂಜನೇಯ ತನ್ನ ಮುಂದಿರುವ ಮಹತ್ಕಾರ್ಯ ಸಾಧನೆಗೋಸ್ಕರವಾಗಿ, ಯೋಗಾಭ್ಯಾಸದಿಂದ ಕುಂಡಲಿನಿಯನ್ನೆಚ್ಚರಿಸಿ ಸಹಸ್ರಾರಕ್ಕೇರಿ, "ಇಂದ್ರಿಯ ಮಾನ್ಯ ಜಡಜಗನ್ಮಾಯೆ"ಯನ್ನೂ "ಭೌತಸೃಷ್ಟಿಯ ಮಹನ್ನಿಯತಿ"ಯನ್ನೂ ಮೀರಿ ತನ್ನ ಇಚ್ಛಾಸೂತ್ರದಿಂದ ಕಪಿಯ ಆಕಾರವನ್ನು ತಳೆದಿದ್ದಾನೆ. ಜಂಗಮಪರ್ವತ, ಸ್ಥಾವರ ಪರ್ವತವನ್ನು ಹತ್ತುವಂತೆ ಮಹೇಂದ್ರಮಸ್ತಕದ "ಶಕುನಿಶಿಲೆಗೆ" ಏರುತ್ತಿದ್ದಾನೆ. ಆಗ :

"........ಪಳುವಾಯ್ತು ಪೆರ್ಗ್ಗಾಡು ;
ಕುಸಿಯಿತ್ತು ಬಾನ್ಮಾಡು ; ಹೆದರಿ ಹುದುಗುವ ತೆರದಿ
ಕುರ್ಗಿ ಕುಬ್ಜತೆವೆತ್ತು ಸೆಡೆದುದಾ ಪರ್ವತದ
ಪೆರ್ಮ್ಮೆಯುಂ. ಮೊಳಕಾಲನಾಳದಾ ಮಡುನಡುವೆ
ಪಾಯ್ವ ಪೇರಾನೆಯೊಲ್ ತೊತ್ತಳದುಳಿದು ಮೆಟ್ಟಿ

ಸಾಗುತಿರೆ, ಪೆರ್ಮರಂ ಪರಿಮುರಿದುರುಳ್ದುವಯ್,
ಕುರಿಚಲಿಸೊಣಗು ಕಡ್ಡಿಮುರಿವಂತೆ. ಗುರುಭಾರದಾ
ಪದಹತಿಗೆಕಾಣ್ ಓಕರಿಸಿದತ್ತದ್ರಿ ತನ್ನೊಡಲ
ಕೆಂಗಾವಿಮಣ್ಣೆರಸಿದೋಕುಳಿಯ ನೀರ್ಗಳಂ,
ವ್ಯಾಘ್ರನಖಮುವ್ವಳಿಸೆ ಗೂಳಿ ಹಿಣಿಲಿಂದುರ್ಕಿ
ಸೋನಲಿಡುವ ಬುಗ್ಗೆ ಕೆನ್ನೀರ್ಗಳೋಲ್. ಗಾಢದ
ಪಕ್ಷಿಲಕ್ಷದ ತುಮುಲ ಚೀತ್ಕಾರದಿಂ, ಕುಣಿವ
ಅಣುಗನಕಯ್ಯ ಗಿಲಿಗಿಚ್ಚಿಯಾದುದಾ ಶೈಲಿ
ವನಭೂಮಿ........"

ಆ ವನಭೂಮಿ ಎಲ್ಲವೂ ಅಣುಗನ ಕೈಯ್ಯಲ್ಲಿರುವ ಗಿಲಿಗಿಚ್ಚಿಯಾಯಿತಂತೆ! ಇಲ್ಲಿ ಮುಖ್ಯವಾಗಿ ನಾವು ಕಾಣುವುದು ಆಂಜನೇಯನು ತೊಡಗಿದ ಕಾರ್ಯಗೌರವದ ಭಾರಕ್ಕೆ ಪ್ರಕೃತಿಯೂ ತಲೆಬಾಗಿ ಸೇವಕನಂತೆ ವರ್ತಿಸಿತು, ಗೆಳೆಯನಂತೆ ಸಹಾಯಕ ವಾಯಿತು. ಭಕ್ತನಂತೆ ಪೂಜೆಗೈದಿದು ಎಂಬುದನ್ನು. ಆಂಜನೇಯನ ಕಾಲಿಗೆ ಸಿಕ್ಕ ಕಲ್ಲುಗಳು ಇನ್ನಿತರ ಕಲ್ಲುಗಳಿಗೆ ಘಟ್ಟಿಸಿ ಕಿಡಿಗಳು ಹುಟ್ಟಿ, ಕಾಡುಕಿಚ್ಚಾಗಿ ಪರಿಣಮಿಸಿತು. ಸುತ್ತಲೂ ಇದ್ದ ಬಿದಿರ ಮೆಳೆಗಳೆಲ್ಲಾ ಹತ್ತಿಕೊಂಡು ಉರಿಯತೊಡಗಿದುವು. ಮರದ ಮೈಯ್ಯಿಂದ ಸುರಿದ ಕಂಪಿನ ಅಂಟುಗಳು ಬೆಂಕಿಗೆ ಬಿದ್ದು, ಹನುಮನ ಆವೇಶಕ್ಕೆ ಗಂಧಧೂಮವನ್ನು ಧೂಪವಿಕ್ಕಿದಂತಾಯಿತು. ಹೀಗೆ ಸೃಷ್ಟಿಯ ವಿರಾಟ್ ಪೂಜೆಯನ್ನು ಕೈಕೊಳ್ಳುತ್ತಾ ಆಂಜನೇಯ :

" ಸುತ್ತಿಕೊಂಡನ್ ತಲೆಗೆ ಪೆರ್ಬಳ್ಳಿಯಂ ; ಮೈಗೆ
ಪೆಣೆದುಕೊಂಡನ್ ಕೇದಗೆಯ ಪೂದೆಗಳಂ ; ಮತ್ತೆ
ಕೌಂಕುಳೊಳಗಿರುಕಿಕೊಂಡನ್ ಪೂತ ತರತರದ
ತರುಗಳಂ :"

ಹೀಗೆ ಆವೇಶಗೊಂಡ ಆಂಜನೇಯ ಮೇಲಕ್ಕೇರಿದಂತೆಲ್ಲಾ ಆತನ ಲಂಘನಾಘಾತಕ್ಕೆ " ತಕ್ಕಡಿಯನೊಮ್ಮೆ ತೆಂಗಣ್ಗೊಮ್ಮೆ ಬಡಗಣ್ಗೆ ತೂಗಿದುವೆನಲ್ ತುಲಾಭಾರಮಂ, ತೊನೆದುದಯ್ ಬೃಹದ್‌ಪೃಥಿವಿ!"

ಅಣುವ ಮೂರ್ತಿಯ ಈ ಮಹದಾವೇಶವನ್ನು ಕಂಡು, ಕಾಣಲಾರದೆ ಕಣ್ ಮುಚ್ಚಿ ಕೈಮುಗಿಯದವರಾರು! ಸಮುದ್ರವನ್ನು ಲಂಘಿಸುವುದಕ್ಕೆ ಸಿದ್ಧವಾಗಿ ನಿಂತ ಆ ಕಪಿರೂಪದ ಆಂಜನೇಯನ ಮಹದ್ದರ್ಶನದ ಸೌಂದರ್ಯಾನುಭೂತಿ ಕೇವಲ ಅನುಭವವೇದ್ಯವಾದುದು, ಆದುದರಿಂದಲೇ ಕವಿ ಹೇಳುತ್ತಾರೆ :

"....ಕಲ್ಪನೆಗೆ ಕೆಚ್ಚಿರಲ್ ಕಟ್ಟಿಕಾಣಾ
ನೀಲ ಚುಂಬಿ ಮಹೇಂದ್ರ ಕುತ್ಕೀಲ ಮಸ್ತಕದ
ಶಕುನಿಶಿಲೆಗೇರ್ದು ನಿಂದಾ ವಿರಾಡ್ರೂಪದಾ

ಭವ್ಯಚಿತ್ರವನಾಂಜನೇಯನಾ ! ರಸನಿಧಿಗೆ
ಘುಮುಕುಮಾತ್ರಂ ತಾಂ ರಸಸ್ವರೂಪಂ ಜಿತ್ತು
ತುಂಬಿದಪ್ರದಂಬುಜಭವಾಂಡಮಂ, ಭಾವಿಸುತೆ
ಬ್ರಹ್ಮಾಸ್ಮಿಯನುಭೂತಿಯಂ : ಶರಧಿ ದರ್ಶನಂ ;
ತಾರಕಿತ ರಾತ್ರಿಯಾಕಾಶ ಸಂದರ್ಶನಂ ;
ತುಂಗಶೃಂಗದ ತುಹಿನಶೈಲಪನ ಶಿವ ಉಮಾ
ದರ್ಶನಂ ; ದಂತುರ ದಿಗಂತ ಚುಂಬಿತ ಉದಯ
ಶೋಣಸ್ತರವಿ ದರ್ಶನಂ ; ವರ್ಷ ಭೈರವನ
ಸಿಡಿಲು ಮಿಂಚಿನ ರುದ್ರ ನಟನಾಟನಾಟವಿಯ
ಸಹ್ಯಾದ್ರಿ ದರ್ಶನಂ ; ಬುದ್ಧದೇವನ ಮಹತ್
ತ್ಯಾಗದ ತಪಸ್ಸಿದ್ಧಿ ಸಂದರ್ಶನಂ ; ಜೇಸುವಿನ
ಜನನ ಜೀವನ ಮರಣ ದರ್ಶನಂ ; ಜನಜನದ
ದಿನದಿನದ ಸಂಸಾರ ಜೀವನದ ಸತ್ಕೃತಿಯು
ಕೀರ್ತಿಕಲುಷಿತವಾಗದಿಹ ಪುಣ್ಯದರ್ಶನಂ,
ಸರ್ವದರ್ಶನ ಜನ್ಯರಸಕೆ ತಾಂ ಪ್ರತಿಕಣಾ
ಹನುಮನ ವಿರಾಡ್ರೂಪ ಸಂದರ್ಶನಂ ! "

ಇಲ್ಲಿ ಕವಿಯ ಸೌಂದರ್ಯದೃಷ್ಟಿಯ ಪೂರ್ಣಕಲ್ಪನೆಯನ್ನು ಕಾಣುತ್ತೇವೆ. ಬ್ರಹ್ಮಾಸ್ಮಿಯ ಅನುಭಾವ, ಗಂಭೀರ ಗರ್ಜನೆಯಿಂದ ಮೊರೆಯುತ್ತಿರುವ ಸಮುದ್ರ ದರ್ಶನ, ನಕ್ಷತ್ರಗಳು ಕಿಕ್ಕಿರಿದು ತುಂಬಿದ ರಾತ್ರಿಯ ಆಕಾಶದ ದರ್ಶನ, ಸಿಡಿಲು ಮಿಂಚಿನ ರುದ್ರನಾಟಕದ ಸಹ್ಯಾದ್ರಿಯ ಸನ್ನಿಧಿ, ಇವುಗಳಿಗೆ ಸಮ ಆಂಜನೇಯನ ವಿರಾಡ್‌ರೂಪ ಸಂದರ್ಶನ. ಬುದ್ಧದೇವನ ತ್ಯಾಗ: ಏಸುವಿನ ಜನನ, ಜೀವನ, ಮರಣಗಳ ಪುಣ್ಯಚಾರಿತ್ರ, ಅಷ್ಟೇಅಲ್ಲದೆ ಕೀರ್ತಿಕಲುಷಿತವಾಗದಿಹ ಸಾಮಾನ್ಯ ಜನತೆಯ ದಿನದಿನದ ನಿಷ್ಕಲ್ಮಷ ಜೀವನದ ಸೌಂದರ್ಯ ಎಲ್ಲವುಗಳಲ್ಲಿಯೂ ಆ ವಿರಾಡ್‌ರೂಪ ಪ್ರದರ್ಶನದ ನಾನಾಮುಖಗಳನ್ನು ಕಾಣುತ್ತೇವೆ ಎಂದು ಸೂಚಿಸಿದ್ದಾರೆ.

ಆ ಒಂದೇ ಸೌಂದರ್ಯವಸ್ತು ನಾನಾಕಾಲಗಳಲ್ಲಿ, ನಾನಾ ರೂಪಗಳಲ್ಲಿ, ನಾನಾ ವ್ಯಕ್ತಿಗಳಲ್ಲಿ ಪ್ರಕಾಶಗೊಳ್ಳುತ್ತದೆ. ಆದುದರಿಂದ "ಯದ್ಯದ್ ವಿಭೂತಿಮತ್ಸತ್ವಂ ಶ್ರೀಮದೂರ್ಜಿತ ಮೇವವಾ" ಎಂಬಂತೆ ಅದೆಲ್ಲಾ ಆ ಶಕ್ತಿಯ ಒಂದಂಶವೆಂದು ಕಂಡು ಆರಾಧಿಸುವ ಶಕ್ತಿ ನಿಜವಾದ ಸೌಂದರ್ಯೋಪಾಸನೆ ಎನ್ನಿಸುತ್ತದೆ. ಈ ಪೂರ್ಣ ದೃಷ್ಟಿಯ ಸೌಂದರ್ಯೋಪಾಸನೆಯಿಂದ ಲಭಿಸುವ ತಪಸ್ಸಿದ್ಧಿಯ ದಿವ್ಯವ್ಯಕ್ತಿತ್ವವನ್ನು ಕುವೆಂಪುರವರ ಕಾವ್ಯಸೃಷ್ಟಿಯಲ್ಲೆಲ್ಲಾ ನಾವು ಕಾಣುತ್ತೇವೆ.



# ಶ್ರೀ ಕುವೆಂಪು ಅವರ ಪ್ರಣಯಗೀತೆಗಳು

## ಜಿ. ವರದರಾಜರಾವ್

ಆಧುನಿಕ ಕನ್ನಡಕಾವ್ಯ ಸಮುದಾಯದಲ್ಲಿ ಈಗ ಅಸಂಖ್ಯಾತವಾಗಿ ಪ್ರಣಯ ಗೀತಗಳು ರಚಿತವಾಗಿವೆ. ನಮ್ಮ ಪ್ರಾಚೀನ ಕಾವ್ಯಗಳಲ್ಲಿ ಶೃಂಗಾರ ರಸ ನಿರೂಪಣೆಗೆ ಅಭಾವವೇನೂ ಇಲ್ಲ. ಆದರೆ, ನಮ್ಮ ನಿತ್ಯ ಜೀವನದಲ್ಲಿ ಪ್ರಣಯವು ಹೇಗೆ ವಿಕಾಶವಾಗುತ್ತದೆಯೆಂಬ ಅಂಶವನ್ನು ಹಾಡಿ ತೋರಿಸಿರುವ ಕೀರ್ತಿ ನಮ್ಮ ಆಧುನಿಕ ಕವಿಗಳಿಗೆ ಸೇರಿದ್ದು. ಬಹಳ ಹಿಂದೆ, ಶ್ರೀ ಅ. ನ. ಕೃಷ್ಣರಾಯರು "ಪ್ರಣಯಗೀತೆಗಳು" ಎಂಬ ಸಣ್ಣ ಸಂಕಲನವೊಂದನ್ನು ಪ್ರಕಟಿಸಿದರು. ಆ ತರುವಾಯ ಶ್ರೀ ತೀ. ನಂ. ಶ್ರೀ. ಅವರ "ಒಲುಮೆ" ಎಂಬ ಕವನ ಸಂಗ್ರಹ ಈ ದೃಷ್ಟಿಯಿಂದ ಬಹಳ ಗಮನಾರ್ಹವಾದುದು. ಅನಂತರ ಶ್ರೀ ದ. ರಾ. ಬೇಂದ್ರೆ ಅವರ "ಕಾಮಕಸ್ತೂರಿ", ಶ್ರೀ ಆನಂದಕಂದರ "ಒಡನಾಡಿ", ಶ್ರೀ ಕೆ. ಎಸ್. ನರಸಿಂಹಸ್ವಾಮಿಯವರ ಕವನ ಸಂಕಲನಗಳು, ಶ್ರೀ ಎಸ್. ಅನಂತನಾರಾಯಣ ಅವರ "ಉಷಾ-ಸ್ವಪ್ನ", ಶ್ರೀ ಚನ್ನವೀರ ಕಣವಿ ಅವರ "ಮಧುಚಂದ್ರ" ಮುಂತಾದುವು ಪ್ರಣಯ ಗೀತಗಳನ್ನು ಒಳಗೊಂಡ ಮುಖ್ಯಮುಖ್ಯವಾದ ಸಂಕಲನಗಳು.

ಈ ಮಧ್ಯೆ ವರಕವಿಗಳಾದ ಶ್ರೀ ಕುವೆಂಪು ಅವರು ಈ ಕ್ಷೇತ್ರದಲ್ಲಿ ತಮ್ಮದೇ ಆದ ಒಂದು ವೈಶಿಷ್ಟ್ಯದಿಂದ ಕೂಡಿದ ನೂರಾರು ಪ್ರಣಯ ಗೀತಗಳನ್ನು ನೀಡಿರುತ್ತಾರೆ. ಅವರ ಮೊಟ್ಟಮೊದಲನೆಯ ಕವನ ಸಂಗ್ರಹವಾದ "ಕೊಳಲು"ನಲ್ಲಿಯೇ ಉತ್ತಮವಾದ ಅನೇಕ ಪ್ರಣಯಗೀತಗಳನ್ನು ಕಾಣಬಹುದು. ಆ ತರುವಾಯ "ನವಿಲು" ಎಂಬುದರಲ್ಲಿ ಕೆಲವು ಬಹು ಮನೋಹರವಾಗಿವೆ. ಕವಿಯ ಜೀವನವು ಮಾರ್ಪಾಟಾದಂತೆಲ್ಲ, ದಿನದಿನಕ್ಕೂ ಆತನ ಅನುಭವ ಹೆಚ್ಚು ಹೆಚ್ಚಾದಂತೆಲ್ಲ, ಆತನ ಭಾವನೆ ಮತ್ತು ದೃಷ್ಟಿಗಳು ಪುಷ್ಟಿಗೊಳ್ಳುವುದು ಸಾಧುವಷ್ಟೆ. ಆ ಮೇರೆಗೆ, ಈಗ, ಶ್ರೀಯುತರ ರಚನೆಗಳಲ್ಲಿ ಪ್ರಣಯದ ಬಗ್ಗೆ ಮಹೋನ್ನತವಾದ ಭಾವನೆಗಳು ಉದಿಸಿ, ಕನ್ನಡಕ್ಕೆ ಅತ್ಯಪೂರ್ವವಾದ ಕೃತಿಗಳು ಲಭಿಸಿವೆ. "ಪ್ರೇಮಕಾಶ್ಮೀರ", "ಜೇನಾಗುವಾ", "ಚಂದ್ರಮಂಚಕೆ ಬಾ ಚಕೋರಿ" ಎಂಬ ಒಂದೊಂದು ಕವನಸಂಗ್ರಹವೂ, ಶ್ರೀ ಕುವೆಂಪು ಅವರ ಪ್ರಣಯ ದೃಷ್ಟಿ ಹೇಗೆ ಹೂವಾಗಿ, ಹಣ್ಣಾಗಿ, ಸಾರ್ಥಕವಾಗಿದೆಯೆಂಬುದನ್ನು ವ್ಯಕ್ತಪಡಿಸುತ್ತದೆ. ಶ್ರೀಯುತರು ರಾಧಾ–ಕೃಷ್ಣರ, ಗೋಪ–ಗೋಪಿಯರ ಮಧುರಭಾವದ ಮೂಲಕವಾಗಿಯೂ, ನಲ್ಲನಲ್ಲೆಯರ ಪರಸ್ಪರ ಪ್ರೇಮ, ಕಾತರ, ಆಶೆ, ಆಕಾಂಕ್ಷೆ, ಅಗಲಿಕೆ, ಅನುಭವಗಳ ಮೂಲಕವಾಗಿಯೂ, ಪ್ರಣಯದ ವಿವಿಧ ಮುಖಗಳನ್ನು ಬಹು ಹೃದಯಂಗಮವಾಗಿ ನಿರೂಪಿಸಿರುತ್ತಾರೆ. ಇದೇ ಕವಿಗಳು ತಮ್ಮ "ಚಿತ್ರಾಂಗದಾ" ಕಾವ್ಯದಲ್ಲಿ ಪ್ರಣಯದ ಸನ್ನಿವೇಶವೊಂದನ್ನು ಚಿತ್ರಿಸಬೇಕಾಗಿ

ಬಂದಾಗ, "....ಪ್ರತಿಭಾ ಮನೋಹರಿಯೆ! ಹೇಳು ಮುಂದಣ ಕಥಾಭೋಗಮಂ, ಮಧುಮಯ ಪ್ರಣಯ ಪ್ರಸಂಗಮಂ. ಕವಿ ಸಿರಸುಭವಶಾಲಿ ಅದರಿಂದ ಬೇಡಿದಪೆ ನಿನ್ನನಾಂ" ಎಂದು ಕೋರಿರುತ್ತಾರೆ. ಅಂದಿನ ಆ ಸ್ಥಿತಿಯನ್ನು ಹಾಡು, ಇಂದು ಎಂಥ ಉತ್ತಮೋತ್ತಮವಾದ ಮಧುರ ಪ್ರಪಂಚವನ್ನು ಸೃಷ್ಟಿಸಿರುವುದೆಂಬುದನ್ನು ನೋಡಿದರೆ ಕವಿಗಳು ಎಷ್ಟು ಕೃತಾರ್ಥರಾಗಿದ್ದಾರೆಂದು ಸಂತೋಷವಾಗುವುದಲ್ಲದೆ, ಈ ಅಪೂರ್ವವಾದ ಕೃತಿಗಳನ್ನು ಪಡೆದ ಕನ್ನಡಿಗರಾದ ನಮಗೂ ಹೆಮ್ಮೆಯಾಗುತ್ತದೆ. ಶ್ರೀ ಕುವೆಂಪು ಅವರು ಸೃಷ್ಟಿಸಿರುವ ಈ ಪ್ರಣಯ ಪ್ರಪಂಚವನ್ನು ಸಂಕ್ಷಿಪ್ತವಾಗಿ ಪರಿಚಯಮಾಡಿಕೊಡುವುದೇ ಈ ಲೇಖನದ ಪ್ರಯತ್ನ.

ಯಾವ ಕವಿಗೇ ಆಗಲಿ, ರಾಧಾ-ಕೃಷ್ಣರ ಮಧುರಭಾವ ಅತ್ಯಂತ ಆನಂದ ದಾಯಕವಾದುದು. ನಮ್ಮ ಸಂಸ್ಕೃತಿಯಲ್ಲಿ ಪ್ರಣಯಕ್ಕೆ ಅಗ್ರಸ್ಥಾನ ದೊರೆತಿರುವ ಈ ಅಪೂರ್ವವಾದ ವಿಷಯವನ್ನು ಕುರಿತು ಶ್ರೀ ಕುವೆಂಪು ಅವರ "ಕೊಳಲು" ಎಂಬ ಸಂಕಲನದಲ್ಲಿಯೇ ಅನೇಕ ಕೃತಿಗಳನ್ನು ಕಾಣಬಹುದು. ಅಲ್ಲಿನ ಈ ಕವನಗಳನ್ನೆಲ್ಲ "ಷೋಡಶಿ" ಎಂಬ ಇತ್ತೀಚಿನ ಸಂಕಲನದಲ್ಲಿ ಒಟ್ಟುಗೂಡಿಸಿ ಪ್ರಕಟಿಸಿರುತ್ತಾರೆ. ಈ ಪ್ರಪಂಚದಲ್ಲಿ ನಾವು ರಾಧೆಯ ಕಾತರ, ಗೋಪಿಯ ಆಕಾಂಕ್ಷೆ, ಕೃಷ್ಣನ ಮಹಿಮೆ, ಭಗವಂತನ ಒಲುಮೆ ಮುಂತಾದುವುಗಳನ್ನು ಕಂಡು ಪುನೀತರಾಗಬಹುದು. ಗೋಪಿ ಯೊಬ್ಬಳು ಕೃಷ್ಣನಿಗಾಗಿ ಎದುರು ನೋಡಿ "ಕರೆಯೆಂದು ಬರುವುದೋ? ನಾನರಿಯೆ ಅರಿಯೆ, ಕಾಯುವೆನು ಕರೆಬರುವ ಪರಿಯಂತ ದೊರೆಯೆ!" ಎಂದು ಹಂಬಲಿಸಿ ಹಂಬ ಲಿಸಿ, ಬೃಂದಾವನದ ಒಂದೊಂದು ಚಲನವಲನದಲ್ಲಿಯೂ ಆತನು ಬಂದನೋ ಏನೋ ಎಂದು ಭ್ರಮಿಸಿ ಕಡೆಗೆ.

ನಿನಗಿಂತಲೂ ಹೆಚ್ಚು ಬಳಿಯಾದರಿಲ್ಲ!
ನಿನಗಿಂತಲೂ ದೂರವಾದವರು ಇಲ್ಲ!
ನಿನಗಿಂತಲೂ ಮಧುರವಾದವರ ಕಾಣೆ!
ನಿನ್ನ ಮೀರಿಹ ಮಾಯಗಾರನನು ಕಾಣೆ!
ಏತಕಣಕಿಪೆ ಎನ್ನ? ಬಾ, ಬೇಗ ಚೆನ್ನ! *

—ಎಂಬುದಾಗಿ ಆಸೆ–ನಿರಾಸೆಗಳ ತೂಗುಯ್ಯಾಲೆಯಲ್ಲಿ ಹೊಯ್ದಾಡುವಳು, ವಿಶ್ವದ ಒಂದೊಂದು ಅಣುವಿನಲ್ಲಿಯೂ ಭಗವಂತನ ಅನ್ವೇಷಣೆಯನ್ನು ಮಾಡತೊಡ ಗುವ ಗೋಪಿಗೆ, ಗಗನವನ್ನು ನೋಡಿದೊಡನೆಯೇ "ಸುಂದರ ಗಗನವೆ, ನೀಲಾವರ ಣದಿ ಜೀವೇಶನ ಮರೆಸಿಹೆಯೇನು? ಕ್ಷಣವೊಂದೆ ಸಾಕು, ತೆರೆಮರೆಯನು ತೆಗೆ. ಕಣ್ಣೆದೆಗಳು ತಣಿವಂದದಲಿ ಜೀವೇಶನ ನಾ ನೋಡುವೆನು! ಬಯಕೆಯ ಬೇಗೆಯ ದೂಡುವೆನು" ಎಂದು ಮೊರೆಯಿಡುವಳು, ಇಷ್ಟು ಹಂಬಲವುಳ್ಳ ಹೆಣ್ಣಿಗೆ ಕೃಷ್ಣನ

---

* ಕರೆಯೆಂದು ಬರುವುದೊ ?—ಷೋಡಶಿ ; ಪು. ೩

ಕರೆ ಕೇಳಿದಂತಾಗಲು, ಆ ಸುಖವನ್ನು ತಾನೊಬ್ಬಳೇ ಅನುಭವಿಸಲೊಲ್ಲದೆ, "ಕರೆಯುವನು ಬಾರೆ, ಸಖಿ, ಗೋಪ ಸುರುಚಿರ, ಹರುಷದಿ ನಲಿಯುತ ಒಲುಮೆಯು ತೋರುತ!" "ಎಲರು ಕುಸುಮಗಳಲಿ ನಲಿವ ತೆರದಿ ಎನ್ನ ಹೃದಯದಿ ನಲಿಯುತಿಹನು, ನಲಿಯುತಿಹನು, ನಲಿಯುತಿರುವನು!"[1] ಎಂದು ಹಿಗ್ಗಿ ಹಿಗ್ಗಿ ಹಾಡತೊಡಗುವಳು. ಇಲ್ಲಿ ಭಗವಂತನ ಸಾನ್ನಿಧ್ಯ ಹೇಗೆ ಹೃದಯಕ್ಕೆ ಅನುಭವವೇದ್ಯವಾದುದೆಂಬ ತತ್ತ್ವ ಬಹು ಅರ್ಥವತ್ತಾಗಿದೆ. ಹೃದಯವನ್ನೇ ಬೃಂದಾವನವೆಂದು ಬಗೆದು ಅಲ್ಲಿ ರಾಧಾ-ಕೃಷ್ಣರನ್ನು ಕಾಣುವ ಕಣ್ಣು ಅತ್ಯಂತ ಪವಿತ್ರವಾದದ್ದೇ ಸರಿ. ಒಡೆಯನನ್ನು ಕಾಣದ ಹೃದಯದ ತಲ್ಲಣವನ್ನು ಕಂಡು "ಪ್ರಿಯನ ನೆನೆ ಮನವೆ ನೀ ಅನವರತ ಪ್ರಿಯನ ನೆನೆ" ಎಂಬ ನುಡಿ ಭರವಸೆಯನ್ನು ಊಡಿ "ನಂಬಿದಾಭಕ್ತರಿಗೆ ಕಂಬದೊಳೂ ತೋರುವನು" "ಪ್ರಿಯನ ನೆನೆಯುವ ಹೃದಯದೊಳು ಬಹುದು ನವ ಉದಯ; ಆಗ ಮೈದೋರುವನು! ನಿನ್ನನೇ ಸೇರುವನು"[2] ಎಂದು ಆಶ್ವಾಸನೆಯನ್ನು ನೀಡುವುದು ಅರ್ಥಪೂರ್ಣವಾಗಿದೆ. ಪ್ರಪಂಚವನ್ನೇ ಮರುಳುಗೊಳಿಸುವ ಕೊಳಲನ್ನು ಕೇಳಿ, ಅದನ್ನು ಊದುವುದನ್ನು ತನಗೂ ಕಲಿಸಿಕೊಡು ಎಂದು ಬೇಡುವ ಗೋಪಿಯ ಬಯಕೆ ಆಕೆಯ ಮಧುರ ಹೃದಯದ ಸಂಕೇತವೆಂಬಂತಿದೆ. ಶ್ರೀಕೃಷ್ಣನ ಕೊಳಲಿನ ಗಾನಕ್ಕೆ ಚರಾಚರಗಳೆಲ್ಲ ಚಕಿತವಾಗುವುವು, ಗೋಪಿಯರು "ಕುಣಿಯುವರು ಕುಣಿಯುವರು ಮನವ ಮರೆಯುತ." ಆ ಗಾನಸಲಿಲದಲ್ಲಿ ಮಿಂದು ನಿಂದ ವಿಶ್ವವೇ ವಿನೂತನವಾಗುವುದು. "ಯುಗಯುಗಗಳು ನೆಗೆನೆಗೆವುವು! ಕಲ್ಪಗಳು ಜಾರುವುವು! ಕಮಲಜರು ಸವೆಯುವರು! ಪ್ರಳಯಗಳು ಕಳೆಯುವುವು!"[3] ಹೀಗಿರಬೇಕಾದರೆ ಸಾಮಾನ್ಯ ಗೋಪಿಯೂ ಸಹ ಗೋವಿಂದನು ಇಹನೆ ಇಲ್ಲವೆ ಎಂಬ ಜಿಜ್ಞಾಸೆಗೆ ತೊಡಗುವಳಲ್ಲ. ಹಾಗೇನಾದರೂ, ಯಾರಾದರೂ, ಶಂಕಿಸಿದರೆ ಕೂಡಲೆ "ಇನಿಯನಿಹನು ಎಂಬುವುದನು ಬಲ್ಲೆ ನಾನು, ಹೇ ಸಖಿ. ಕನಸಿನೊಡವೆಯ ಒಲಿಯೆ ನಾನು ಮೂಢೆಯಲ್ಲ, ಸೋದರಿ"[4] ಎಂದು ಆಪ್ತವಾಕ್ಯವನ್ನು ಆಡುವಳು. ರಾಧೆಗಂತೂ ಹೇಳಲೇಬೇಕಾಗಿಲ್ಲ. ಆಕೆ ಅಗಲಿಕೆಯನ್ನು ಕ್ಷಣಕಾಲವೂ ಸಹಿಸುವವಳಲ್ಲ. "ಎದೆಯ ಬನಕೆ ಬಾರೊ ನೀ ಗೋಪ ಬಾಲನೆ"[5] ಎಂದು ಹಾತೊರೆದು, ಒಟ್ಟು ಪ್ರಪಂಚವೇ ಆತನಿಗಾಗಿ ಕಾತರಿಸಿ ಕಾಯುತ್ತಿದೆ ಎಂದು ಬಿನ್ನವಿಸಿಕೊಳ್ಳುತ್ತಾಳೆ. ಕೃಷ್ಣನಿಗಾದರೂ ಸಹ ಈ ವಿರಹ ತಾಪ ತಟ್ಟದೆ ಇರುವುದಿಲ್ಲ. ಆತನು ನಿರೀಕ್ಷಿಸಿದ ಸಮಯಕ್ಕೆ ರಾಧೆಯು ಬಾರದೆ ಹೋದರೆ, "ಕಾದೆ ಕಾದೆ ಕಾದೆ ಕಾದೆ, ನೀನು ಮಾತ್ರ ಬರದೆಹೋದೆ ಓ ಎನ್ನ ರಾಧೆ" ಎಂದು ಕೊರಗುವನು. ಪ್ರಕೃತಿಯ ರಮಣೀಯತೆಯನ್ನು ವರ್ಣಿಸಿ,

---

1 ಕರಿಯುವನು ಬಾರೆ ಸಖಿ!—ಷೋಡಶಿ; ಪು. ೬ 2 ಪ್ರಿಯನ ನೆನೆ—ಷೋಡಶಿ; ಪು. ೯
3 ಗಾನದರ್ಶನ—ಷೋಡಶಿ; ಪು. ೩೨ 4 ಆಪ್ತವಾಕ್ಯ—ಷೋಡಶಿ; ಪು. ೪೨
5 ರಾಧೆಯು ಕರೆ—ಷೋಡಶಿ; ಪು ೩೪

ಪರ್ವತ ವನ ಕಂದರದಲಿ
ಸರೋವರದ ತೀರಗಳಲಿ
  ನಿನ್ನನರಸಿದೆ.
ಒಮ್ಮೆ ಮೊರೆದು, ಒಮ್ಮೆ ಜರೆದು
ಒಮ್ಮೆ ನಿನ್ನ ಕೂಗಿ ಕರೆದು
  ಬರಿದೆ ಚರಿಸಿದೆ.

ಯಾವ ಯಮುನೆಯುರೆಯ ಮೇಲೆ
ಕುಳಿತು ಹಾಡುತಿರುವೆ ಬಾಲೆ?
  ಓ ಎಲ್ಲಿ ಹೋದೆ?
ಯಮುನೆಯಾಗಿ ಹರಿದು ಬರುವೆ
ತೆರೆಯ ಮುತ್ತು ಕೊಟ್ಟು ಕರೆವೆ
  ಬಾ ಎನ್ನ ರಾಧೆ! *

—ಎಂಬುದಾಗಿ ಕಾತರಿಸುತ್ತಾನೆ. ಕೃಷ್ಣನ ತಲ್ಲಣ ಆತನ ಪ್ರೇಮಾರ್ದ್ರಹೃದಯಕ್ಕೆ ತಕ್ಕಂತಿದೆ. ಭಗವಂತನ ಪ್ರಣಯವನ್ನು ಪಡೆದು ರಾಧೆ ಕೃತಾರ್ಥಳಾದಂತೆಯೇ ಆಕೆಯ ಸವಿಮುತ್ತನ್ನು ಪಡೆದು ಕೃಷ್ಣನೂ ಕೂಡ ಕೃತಾರ್ಥನಾಗುವ ಚಿತ್ರವಂತೂ ಬಹಳ ಸುಂದರವಾಗಿದೆ.

ಹೊಮ್ಮಿದೆಳೆಯ ಗರುಕೆ ಮೇಲೆ
ಚಿಮ್ಮಿ ಹುಲ್ಲೆಮರಿಯ ಪೋಲೆ
ನಿನ್ನನೊಪ್ಪಿ ರಾಧೆಯುಪ್ಪಿ
ಚುಂಬಿಸಿದಳು ಕೆನ್ನೆಗೆ!

—ಎಂದು ಹಿಗ್ಗುವುದಷ್ಟೇ ಅಲ್ಲ, ವಿಧಿಯನ್ನು ಸಂಬೋಧಿಸಿ:

ಎಲ್ಲ ಬರೆದುಕೊಳುವ ವಿಧಿ
(ನಲ್ಲಗಾಣ್ಕೆ ಪುಣ್ಯನಿಧಿ!)
ನಿನಗೆ ನನ್ನದೊಂದು ಮೊರೆ:
ಮುತ್ತು ಕೊಟ್ಟುದನೂ ಬರೆ
ರಾಧೆ ನನ್ನ ಕೆನ್ನೆಗೆ.†

—ಎಂಬ ಭಾವ ಬಹು ಚಿತ್ತಾಕರ್ಷಕವಾಗಿದೆ. ಪ್ರಣಯ ಪ್ರಪಂಚದಲ್ಲಿ ಭಗವಂತನೂ ಸಹ ಆತ್ಮನಿವೇದನೆ ಮಾಡಿಕೊಳ್ಳಲು ಹಿಂತೆಗೆಯುವುದಿಲ್ಲ. ಆದ್ದರಿಂದಲೇ, ಹಾಲನ್ನು ಮಾರುವ ಹೆಂಗುಸೊಬ್ಬಳು, ತನ್ನ ಸಖಿಯನ್ನು ಕುರಿತು ಬೃಂದಾವನಕೆ

*ವಿರಹಿ—ಪ್ರೇಮಕಾಶ್ಮೀರ; ಪು. ೧೦ †ರಾಧೆ ನನ್ನ ಕೆನ್ನೆಗೆ—ಪ್ರೇಮಕಾಶ್ಮೀರ; ಪು. ೧೨

ಹೋಗುವ ಬಾರೆಂದೂ, ಅಲ್ಲಿ "ಹಾಲಸು ಮಾರಿ ಹರಿಯಸು ಕೊಳ್ಳುವ ನಾವೇ ಧನ್ಯರು ಕಮಲಮುಖಿ"* ಎಂದೂ ಹೇಳುವಳು. ಒಟ್ಟಿನಲ್ಲಿ ಶ್ರೀ ಕುವೆಂಪು ಅವರು ಸೃಜಿಸಿರುವ ಈ ಮಧುರಭಾವದ ಚಿತ್ರಗಳು ಮನಸ್ಸಿಗೆ ಮಹದಾನಂದವನ್ನುಂಟು ಮಾಡುತ್ತವೆ. ಎಷ್ಟೋ ಎಷ್ಟೋ ಕವಿಗಳು ಹಾಡಿ ಹೇಳಿದ ಸಂಗತಿಯಾದರೂ, ಹೊಸ ದೊಂದು ಆಸೆಯನ್ನುಂಟುಮಾಡುವಂತೆ ಹೃದಯಂಗಮವಾಗಿವೆ.

ಮನುಷ್ಯನ ಬಾಳಿನಲ್ಲಿ ಪ್ರಣಯದಸ್ಥಾನ ಬಹು ದೊಡ್ಡದು. ಅದರ ಪ್ರಭಾವ ಅತ್ಯಂತ ಪ್ರಬಲವಾದುದು. ಅದನ್ನು ಗೆಲ್ಲಲೆಳಸುವುದಕ್ಕಿಂತಲೂ ಸೋತು ಸವಿಯನ್ನನು ಭವಿಸುವುದೇ ಶ್ರೇಯಸ್ಕರವೇನೋ ಎನ್ನಿಸುತ್ತದೆ. ಶ್ರೀ ಕುವೆಂಪು ಅವರು ನಿತ್ಯಜೀವ ನದ ಪ್ರಣಯದ ಚಿತ್ರವನ್ನು ಹಲವಾರು ಮುಖಗಳಲ್ಲಿ ಕಂಡು, ಅದರ ಸುಖವನ್ನೂ ಶೋಖವನ್ನೂ ಅನುಭವಿಸಿ ನಮಗೆ ಅದರ ತಿರುಳನ್ನು ನೀಡಿರುತ್ತಾರೆ. ಅವರ ಕೃತಿಗಳಲ್ಲಿ ಸ್ಥೂಲವಾಗಿ ಒಂದು ಕ್ರಮವನ್ನು ರೇಖಿಸಬಹುದು. ಮನುಷ್ಯನ ಪ್ರೇಮ ವಿಕಸಿತ ವಾದಂತೆಲ್ಲ, ಅದರ ಬಗ್ಗೆ ವಿಚಾರ, ವಿಮರ್ಶೆಗಳು ಹೇಗೆ ಬೆಳೆಯುತ್ತ ಹೋಗುತ್ತವೆ ಎಂಬುದನ್ನು ಈ ಕವನಗಳ ವ್ಯಾಸಂಗದಿಂದ ನಮ್ಮ ನಮ್ಮ ಶಕ್ತಿಯಿದ್ದಮಟ್ಟಿಗಾದರೂ ತಿಳಿಯಬಹುದು. ಒಲವು ಮೂಡಿ ಬಂದ ದಿನದಿಂದ ಮೊದಲ್ಗೊಂಡು ಅದು ಫಲಿಸಿ ಫಲ ಬಿಡುವವರೆಗೆ ಯಾವ ಯಾವ ಅವಸ್ಥೆಗಳನ್ನು ಹಾದುಬರುತ್ತದೆಯೆಂಬುದನ್ನು ಪರಿಶೀಲಿಸುವುದು ಬಹಳ ಸ್ತುತ್ಯವಾದ ಪ್ರಯತ್ನವೇ ಸರಿ. ಪ್ರಿಯ ಪ್ರೇಯಸಿಯರ ಪ್ರಥಮ ಸಂದರ್ಶನ, ಪ್ರಥಮ ಮಿಲನ, ಪ್ರಥಮ ವಿರಹ, ಪ್ರಪ್ರಥಮವಾದ ಹಲವಾರು ಅನುಭವಗಳು ನಿತ್ಯ ಜೀವನವನ್ನು ಪ್ರತಿಬಿಂಬಿಸುವ, ರನ್ನಗನ್ನಡಿಗಳಂತಿವೆ.

ಕವಿಗಳು "ಷೋಡಶಿ" ಎಂಬ ಕವನ ಸಂಕಲನದಲ್ಲಿ ಪ್ರಣಯದ ಒಂದೆರಡು ಮುಖಗಳನ್ನು ಹೃದಯ ಕಲಕುವಂತೆ ಚಿತ್ರಿಸಿರುತ್ತಾರೆ. ರಚನೆಯ ಕಾಲದ ದೃಷ್ಟಿ ಯಿಂದ ಅವುಗಳನ್ನು ಮೊದಲು ಪರಿಶೀಲಿಸಬಹುದೆಂದು ತೋರುತ್ತದೆ. ಅನಿರೀಕ್ಷಿತ ವಾಗಿ ತರಳೆಯೊಬ್ಬಳನ್ನು ಕಂಡು, ಆಕೆ ಕಣ್ಮರೆಯಾಗಲು, ಕವಿಯ ಹೃದಯ ಹೇಗೆ ಪರಿತಪಿಸುತ್ತದೆಯೆಂಬುದನ್ನು "–ಗೆ" ಎಂಬ ಕವನದಲ್ಲಿ ನಾವು ಕಾಣಬಹುದು.

ಪೇರಲ ಮರದಡಿ ಹಣ್ಣನು ತಿನ್ನುತ
ಮಲಗಿರೆ ಹಸುರೊಳು ನೀ ಬಂದೆ.
ಕರಿ ಕುರುಳಿನ ಸುರಮೋಹವನೆರಚುತ
ಹೊಸ ವೈಯಾರದಿ ನೀ ಬಂದೆ.
ನೋಡಿದೊಡೆನ್ನನು ದೂರದಿ ನಿಂತೆ
ಮೂಡಿತು ಹೃದಯದೊಳೊಲವಿನ ಚಿಂತೆ.

—ಎನ್ನುವರು. ಆ ತರಳೆ ನಿಂತ ನಿಲುವಾದರೂ ಎಂತು?

---

*ಅತ್ಮನಿವೇದನ—ಪ್ರೇಮಕಾಶ್ಮೀರ: ಪು. ೨೧

ರಾತ್ರಿಯ ಗಗನದ ಚಂದಿರನಂತೆ
ತರಳೆಯೆ ಮೋಹಿಸಿ ದೂರದಿ ನಿಂತೆ!

—ಎನ್ನಿಸುತ್ತದೆ. ಆಕೆಯ ಸೊಬಗು ಹೇಳತೀರದು.

ಮೊಗದೊಳು ಸೊಬಗಿನ ಸುಗ್ಗಿಯು ಬೆಳೆದು
ಕೈ ಬೀಸೆನ್ನನು ಕರೆದಿತ್ತು,
ತುಂಬಿಯು ತುಳುಕದ ತಿಳಿಗೊಳದಂತೆ
ಕಂಗಳ ಲೀಲೆಯು ಮೆರೆದಿತ್ತು.
ಹೃದಯದ ಬಾಳಿನ ಕಂಪುಸಿರಂತೆ
ಬದುಕಿನ ಹೊಳೆಯನು ಹೀರುತ ನಿಂತೆ.

—ಎನ್ನುತ್ತಾರೆ. ಆದರೆ, ಈ ಚೆಲುವು ಕೈಗೆ ಎಟುಕದೆ ಹೋಯಿತು.

ಹೂವೇ, ತರಳೆಯೆ, ಕೊಯ್ಯುವ ಮುನ್ನ
ಕೊಂಡೊಯ್ದಿತೆ ಬಿರುಗಾಳಿಯು ನಿನ್ನ!

—ಎಂದು ಸಂಕಟಪಟ್ಟು, ಅದರ ಪರಿಣಾಮವಾಗಿ ಕವಿಯ ವಾಣಿ ಒಂದು ಸಂಕಲ್ಪವನ್ನೇ ನುಡಿಯುತ್ತದೆ.

ಪೇರಲ ಮರದಡಿ ಒಲಿದೆನು ಅಂದು
ಒಲಿದಿಹೆ ನಾ ಮುಂದೆಂದೆಂದು.
ಎದೆದೋಟದೊಳಲರಿರದಿರಲೇನು ?
ನಿನ್ನ ನೆನಪೇ ಸಿರಿಯಲರು.
ಚಲಿಸುವ ಮನಸಿಗೆ ನೀ ಹೂ ಬೇಲಿ!
ಧರ್ಮದ ದಾರಿಯೊಳೆಳೆಯುವ ಕಾಳಿ!

* * * *

ಬೇರೆಯ ಹೂಗಳ ಮುಡಿಯೆನು ನಾನು
ಮರೆಯಾದರು ಮುಡಿಪಾಗಿಹೆ ನೀನು!

* * * *

ಪ್ರೇಮದ ಗೀತಿಕೆಯಂದದಿ ಬಂದೆ
ಕೊಳಲನು ಊದುತ ಐತಂದೆ,
ಧರ್ಮಶ್ಲೋಕದ ತೆರದೊಳು ಹೋದೆ
ನೀತಿಯ ವೀಣೆಯು ನೀನಾದೆ.*

ಈ ರೀತಿ ಕವಿಯ ಹೃದಯ ಯಾವುದೋ ಯಾತನೆಯನ್ನು ಮನ ಮಿಡಿಯುವಂತೆ ಹೇಳುವಂತಿದೆ. ಒಮ್ಮೊಮ್ಮೆ "ಎಂದೋ ಎಂತೋ ಒಂದೆಡೆಯಂತೂ ಗಿರಿಜೇ,

---

*[redacted]ಗೆ—ಷೋಡಶಿ; ಪು. ೨೦-೨೧

ನೋಳಿಸಿ ನಾವುಗಳು, ಎಂದೋ ಎಂತೋ ಎಲ್ಲಾದರಂತೂ ನಮ್ಮಿ ಪ್ರಣಯವು ಫಲಿಸುವುದು ತರಳೇ, ನಿಶ್ಚಯ ಫಲಿಸುವುದು!"* ಎಂದು ದೂರದಾಸೆಯನ್ನು ಪ್ರಕಟಿಸುವುದು. ದೊರೆಯದ ತರಳೆಯನ್ನು ಕುರಿತು "ಕನಸಿನ ತೆರದಲಿ ನೀನಿರು ನನಗೆ: ದೂರದ ದೊರಕದ ಗುರಿ ಸವಿಯೆನಗೆ"† ಎನ್ನುವ ಮಾತೂ ಕೇಳಿ ಬರುತ್ತದೆ. ಇಂತೆಯೇ ಪ್ರಿಯೆಯಾದವಳು ತನ್ನ ಕಟ್ಟಕಡೆಯ ಕ್ಷಣದಲ್ಲಿ ಪ್ರಿಯನನ್ನು ಕುರಿತು ಆಡುವ ಕೆಲವು ನುಡಿಗಳು ಹೃದಯ ಕರಗುವಂತಿವೆ.

ನಾನಳಿದ ಮೇಲೆನ್ನ ಮರೆಯುವೆಯ ನೀನು
ನಿನ್ನ ಹೃದಯವು ಪರರ ವಶವಾಗದೇನು ?
ಮರೆತುಬಿಡು ಮರೆತುಬಿಡು ನೀ ಮರೆತೊಡೇನು ?
ನಾ ಮರೆಯೆ ! ನಾ ಮರೆಯೆ ! ನಾ ನಿನ್ನ ಮರೆಯೆ !

ಸೆರೆಗೊಳ್ಳುವುದು ನಿನ್ನ ಬೇರೊಂದು ಹೃದಯ
ಇನಿಯ ನಿನಗಾಗುವುದು ಹೊಸ ಹರುಷದುದಯ
ಆಗೆನ್ನ ನೆನೆಯದಿರು ; ಮರೆತುಬಿಡು ನೀನು
ನಾ ಮರೆಯೆ ನಾ ಮರೆಯೆ ನಾ ನಿನ್ನ ಮರೆಯೆ

ನಿನಗೆ ಮಂಗಳವಾಗಲಿನಿಯ, ಮರೆ ಎನ್ನ
ಮುದ್ದಿಡುತ ಹೊಸಬಳನು ನೆನೆಯದಿರು ಎನ್ನ
ಎನ್ನ ನೆನಪದು ಶೂಲ! ಮರೆತುಬಿಡು ನೀನು !
ನಾ ಮರೆಯೆ, ನಾ ಮರೆಯೆ, ನಾ ನಿನ್ನ ಮರೆಯೆ ‡

ಈ ಕವಿತೆಯ ಒಂದೊಂದು ಪದ್ಯವೂ ಕಂಬನಿಯ ಕೋಡಿಯನ್ನು ಹರಿಸುವಂತಹದು. ಒಲವಿನ ಆಳ ಹೇಳತೀರದು. ಮೆಚ್ಚಿದರೆ ಮಧುರ; ಚುಚ್ಚಿದರೆ ಕೂರಲಗು. ಕವಿಯು ಜೀವನದ ಅನುಭವವನ್ನು ನೋಡಿಯೋ ಅನುಭವಿಸಿಯೋ ಹೇಳಲು ಶಕ್ತನಾದವನು. ಪರರ ನೋವು, ಪರರ ನಲಿವುಗಳನ್ನು ಕಂಡು ತಾನೂ ಭಾಗವಹಿಸಬಲ್ಲವನು. ಏನೇ ಆಗಲಿ, ಮೇಲೆ ಉದಾಹರಿಸಿರುವ ಒಂದೊಂದು ಕವಿತೆಯೂ, ಪ್ರಣಯದ ಒಂದೊಂದು ರೀತಿಯನ್ನು ಪರಿಚಯಮಾಡಿಕೊಡುತ್ತದೆ.

ಪ್ರಣಯಿಗಳ ಪ್ರೇಮವನ್ನು ನಿರೂಪಿಸುವಾಗ ಕವಿಯು ಅನೇಕ ವಿಧಾನಗಳನ್ನು ಅನುಸರಿಸಬಹುದು. ಪ್ರಿಯೆಯ ದೃಷ್ಟಿಯಿಂದ ಪ್ರಣಯದ ಸ್ವರೂಪವನ್ನು ಶ್ರೀ ಕುವೆಂಪು ಅವರು ಪರಿಪರಿಯಾಗಿ ಚಿತ್ರಿಸಿರುತ್ತಾರೆ. ಆಕೆಯ ಹಂಬಲು, ವಿರಹ, ಆತ್ಮ

*ಪ್ರಣಯದ ದೂರದಾಸೆ—ನೋಡಿರಿ ; ಪು. ೩೭ †ಸಾಧನೆ—ನೋಡಿರಿ ; ಪು. ೩೯
‡ನಾ ನಿನ್ನ ಮರೆಯೆ—ನೋಡಿರಿ ; ಪು. ೪೦.

ಸಮರ್ಪಣ, ಮುಂತಾದ ಒಂದೊಂದು ನಿಲುವೂ ಈ ನಿರೂಪಣೆಯಲ್ಲಿ ಬಂದಿದೆ. ತನ್ನ ಪ್ರಾಣೇಶನಿಗಾಗಿ ಹೃದಯವನ್ನು ಅಣಿಗೊಳಿಸಿರುವ ರಾಗಿಣಿಯೊಬ್ಬಳು ಹೇಳುವ ಈ ಮಾತುಗಳನ್ನು ಕೇಳಿ.

ಹೃದಯ ಮಂದಿರದಲ್ಲಿ ಮಧುರ ಪ್ರಾಣೇಶನಿಗೆ
ಪ್ರಣಯದಾರತಿ ಪೂಜೆಯಾಗುತಿದೆ ಬಾ!
ಕಂಬನಿಯ ಚುಂಬನದ ಪ್ರೇಮಾಂಬುಜಾತದಲಿ
ತುಂಬಿ ಜೀವವನೆ ಮುಡುಪರ್ಪಿಸಲು ತಾ!
ರಾಗವೇ ವೈರಾಗ್ಯವಪ್ಪುದಲ್ಲಿ!
ಭೋಗವೇ ತ್ಯಾಗವಾಗಿರುವುದಲ್ಲಿ!
ಮೋಹವೇ ಭಕ್ತಿಯಾಗಿರುವುದಲ್ಲಿ!
ಪ್ರೇಮವೇ ಮುಕ್ತಿಯಂತೆಸೆವುದಲ್ಲಿ![1]

ಈ ರೀತಿ ಆತ್ಮನಿವೇದನೆಗೆ ಸಿದ್ಧಳಾಗಿರುವ ಪ್ರಿಯೆಗೆ ತನ್ನ ನಲ್ಲನು ಕ್ಷಣಕಾಲ ಅಗಲಿದರೂ ಆ ಯಾತನೆ ಯಮಯಾತನೆ. "ಏಕಾಂತವಿದು ಸಹಿಸಲಾರದಿದೆ; ಬಾರಯ್ಯ ಸೌಂದರ್ಯ ಮೂರುತಿಯೆ, ಹೃದಯವನಕೆ"[2] ಎನ್ನುತ್ತಾಳೆ. ಪ್ರಿಯೆಯು ತನ್ನ ಮನದನ್ನನನ್ನು ಕುರಿತು "ನೀನೆನ್ನ ಬಳಿಯಿರಲು ಜಗ ತುಂಬಿ ತುಳುಕುವುದು, ನೀನು ಪೋದರೆ ದೂರ ಶೂನ್ಯವಾಗುವುದು...."

ಬಿಸಿಲುರಿವ ಮರುಭೂಮಿಯಂದದಲಿ ನನ್ನೆದೆಯು
ವಿರಹದಿಂದುರಿದುರಿದು ಯೋಗಕೆಳಸುವುದು.
ಮಳೆಗರೆದು, ತಂಪಿತ್ತು, ಪರಿಹರಿಸಿ ಬೇಗೆಯನು
ಪ್ರೇಮ ತೋಯದ ಮೂರ್ತಿ, ಎದೆಗೆ ಬಾರೈ[3]

—ಎಂಬುದಾಗಿ ಮೊರೆಯಿಡುವಳು. ಏಕೆಂದರೆ, ಆಕೆಗೆ ಮಿಲನದಿಂದ ಆತ್ಮವಿಕಸನವಾಗುವುದೆಂದು ಅಚ್ಚಳಿಯದ ನಂಬಿಕೆ. ಅಗಲಿಕೆಯನ್ನು ಸಹಿಸಲಾರದ ಕಾಂತೆ, ರಮಣನನ್ನು ಕುರಿತು, "ನೀನು ಬಂದರೆ ಬಳಿಗೆ ಬಾಳರಳಿ ಹಬ್ಬುವುದು; ಆತ್ಮವಿಕಸನವಲ್ತೆ ಮಿಲನಸಾರ?"[4] ಎಂದು ಪ್ರಶ್ನಿಸುವಳು. ಆಕೆಯು ಸಕಲಾಲಂಕೃತಳಾಗಿ ತನ್ನ ಪ್ರೇಮದ ಅತಿಥಿಗಾಗಿ ಕಾಯುವಳು.

ಕೈಯಲಿ ಹಿಡಿದಿಹ ಕುಸುಮ ಮಾಲಿಕೆಯು
ಬಿಸುಸುಯ್ಲಿಗೆ ಬಾಡುವ ಮುನ್ನ
"ನೇತಿ"ಯ ನಿರ್ಗುಣ ಶೂನ್ಯವನುಳಿಯುತ
"ಇತಿ" ಯಾಗೈತರು ಓ ಚೆನ್ನ![5]

---

1ಹೃದಯಮಂದಿರದಲ್ಲಿ—ಪ್ರೇಮಕಾಶ್ಮೀರ ಪು. ೧೪ 2ಏಕಾಂತವಿದು ಸಹಿಸಲಾರದಿದೆ—ಪ್ರೇಮಕಾಶ್ಮೀರ ಪು. ೩೫ 3ನೀನೆನ್ನ ಬಳಿಯಿರಲು—ಪ್ರೇಮಕಾಶ್ಮೀರ ಪು. ೧೮ 4ಆತ್ಮವಿಕಸನವಲ್ತೆ ಮಿಲನ ಸಾರ—ಪ್ರೇಮಕಾಶ್ಮೀರ ಪು. ೧೯ 5ಪಾಸಕ ಸಜ್ಜಿಕೆ—ಪ್ರೇಮಕಾಶ್ಮೀರ ಪು. ೨೭

—ಎಂದು ಒಂದೇ ಸಮನೆ ಹಂಬಲಿಸುವಳು. ಸಂಜೆ ಬೇಸರವಾಗಲು, ಮನಕ್ಕೆ ಮಂಕು ಕವಿಯಲು, ಆಕಾಶಕ್ಕೆ ಮಬ್ಬು ಆವರಿಸಲು, ಆಕೆಯ ವಿರಹದೆದೆ ಮತ್ತೆ ಕುದಿಯಲಾರಂಭಿಸುವುದು.

ಮನೆಯ ಬಾಗಿಲೊಳೊಬ್ಬಳಿಯೆ ಕುಳಿತು ಹೊಸ್ತಿಲಲಿ
  ಹಾದಿ ನೋಡುತಲಿಹೆನು, ಬಾ ಬೇಗನೆ.
ಹೃದಯ ಶೂನ್ಯತೆಯ ಪರಿಹರಿಸಿ ಪೂರ್ಣತೆಯಿತ್ತು
  ಮುದಗೊಳಿಸು ಹೃದಯೇಶ ; ಬಾ ಬೇಗನೆ.*

—ಎಂಬುದಾಗಿ ಅಂಗಲಾಚುವಳು. ಅಗಲಿಕೆಯ ಯಾತನೆ ಮಿತಿಮೀರಲು ಕ್ಷಣವೊಂದು ಯುಗವಾಗುವುದು.

ಎಂತು ನೂಂಕಲಿ ನಾಳೆಯೊಂದು ದಿನವನು ಚೆನ್ನಾ
  ಯುಗವಾಗಿ ಕಾಣುತಿದೆ ನೀನಿಲ್ಲದೆ.
ನಾಳೆ ಕಳೆದರೆ ನಾಡಿದ್ದೈತರುವೆ ನೀನೆಂದು
  ಕಾಣುತಿದೆ ನಾಳೆ ಪಾತಾಳದಂತೆ.

—ಎನ್ನಿಸುತ್ತದೆ. ಈ ಮಧ್ಯೆ, ಆಕೆಗೆ ಒಂದೇ ಒಂದು ಉಪಾಯ ಹೊಳೆದಂತಾಗುತ್ತದೆ.

ನಿನ್ನ ಪ್ರೈಯನೆ ನೆನೆದು, ನಿನ್ನ ಹೆಸರನೆ ಕರೆದು
  ನೂರು ಸಾವಿರ ಸಾರಿ ಬರೆದು ಬರೆದು
ವಿರಹ ಯಾತನೆಯಿಂದ ಹರಿವ ಕಂಬನಿಯಿಂದ
  ಮತ್ತೆ ಮತ್ತೆಳಿಸಲೇನೆನ್ನ ಚೆನ್ನಾ.†

—ಎಂದು ಕೇಳುವಳು. ಪ್ರಿಯೆಯಾದವಳು ಕೇವಲ ಹಂಬಲ ಮಾತ್ರದಿಂದಲೇ ತೃಪ್ತಳಾಗುವುದಿಲ್ಲ. ತನ್ನನ್ನೂ ಮೈಚೆಲುವಿಗೆ ಒಲಿಯಬೇಡವೆಂದು ನೀತಿ ಹೇಳುವಳು. ಏಕೆಂದರೆ, ವಯೋಧರ್ಮಕ್ಕೆ ಅನುಗುಣವಾಗಿ ದೇಹ ಶಿಥಿಲವಾಗುತ್ತದೆ. ಆದ್ದರಿಂದ ಆಕೆ "....ಒಲಿವೊಡೆ, ಓ ಎದೆಯನ್ನ, ಮೈ ಚೆಲುವಿಂಗಾಗೊಲಿಯದಿರೆನ್ನ" ‡ ಎಂದು ಬೋಧಿಸುವಳು. ಈ ರೀತಿ, ಪ್ರಿಯೆಯಾದವಳ ವಿಶಿಷ್ಟ ವಿಚಾರಧಾರೆಯನ್ನೂ ಕವಿಗಳು ಬಿಡಿಸಿ ಬಿಡಿಸಿ ಹೇಳಿರುತ್ತಾರೆ.

ಶ್ರೀಯುತರು ಪ್ರಿಯನ ಮನೋಧರ್ಮವನ್ನು ನಿರೂಪಿಸಿರುವ ಗೀತಗಳಂತೂ ಇನ್ನೂ ಹೆಚ್ಚು ಆತ್ಮೀಯವಾಗಿವೆ. ಅವುಗಳು ನಿಕಟ ಸಂಪರ್ಕದಿಂದ ಹೆಚ್ಚು ಹೆಚ್ಚು ಉಜ್ವಲವಾಗಿ ಕಾಣುತ್ತವೆ. ಪ್ರಿಯನ ಕಾತರ ಸ್ವಭಾವ, ಪ್ರೇಮ ತೀಕ್ಷ್ಣತೆ, ಪ್ರಿಯೆಯ ಸ್ತುತಿ, ತಾತ್ಕಾಲಿಕ ಅಗಲಿಕೆ, ಪುನರ್ಮಿಲನದ ಆನಂದ, ಮುಂತಾದ ಹಲ

---

*ಬಾ ಬೇಗನೆ—ಪ್ರೇಮಕಾಶ್ಮೀರ; ಪು. ೪೦ †ಎಂತು ನೂಕಲಿ ನಾಳೆಯೊಂದು ದಿನವನು ಚೆನ್ನಾ ?—ಪ್ರೇಮಕಾಶ್ಮೀರ; ಪು. ೪೧ ‡ಮೈ ಚೆಲುವಿಗೆ ನೀನೊಲಿಯದಿರೆನ್ನ—ಪ್ರೇಮಕಾಶ್ಮೀರ; ಪು. ೪೨

ವಾರು ಭಾವಗಳು, ಅನುಭವಗಳು, ದಾಂಪತ್ಯದ ಮಧುರ ಫಲಗಳಂತಿವೆ. ಮೊದಲು ಪ್ರೇಯಸಿಯ ಸ್ತುತಿ ಪರಂಪರೆಯನ್ನು ಪರಿಶೀಲಿಸಬಹುದು. ಪ್ರಿಯನು ತನ್ನ ಪ್ರೇಯಸಿಯನ್ನು ಕುರಿತು "ಹಾಲು, ಹೂವು, ಜೊನ್ನ, ಜೇನು, ಎಲ್ಲ ಸೇರಿಯಾದೆ ನೀನು" ಎನ್ನುವನು. ಇದು ಕೇವಲ ಉಪಚಾರೋಕ್ತಿಯಲ್ಲ; ಬರಿಯ ಹೊಗಳಿಕೆಯೂ ಅಲ್ಲ. ಆಯಾ ವಸ್ತುವಿನ ಒಂದೊಂದು ಲಕ್ಷಣವನ್ನೂ ಹೇಳಿ, ಅವುಗಳೆಲ್ಲವನ್ನೂ ಮೀರಿಸಿರುವ ಆಕೆಯನ್ನು "ಹಾಲು ಸವಿ, ಜೇನು ಸವಿ, ಹಾಲು ಜೇನುಗಳನು ಮೀರಿ ನೀನೆ ನನಗೆ ಹೆಚ್ಚು ಸವಿ" * ಎನ್ನಿಸುತ್ತದೆ. ಕಣ್ಣಿಗೆ ಸುಂದರವಾಗಿ ಕಂಡ ನಲ್ಲೆಯನ್ನು, ನಾನಾ ರೀತಿಯಲ್ಲಿ ಹೊಗಳಿ, ವರ್ಣಿಸಿ,

ಕಣ್ಗೆ ಸುಂದರಿಯಾಗಿ
ಮನಕೆ ಮಂಗಳೆಯಾಗಿ
ಚೆಲ್ವು ಒಳ್ಪುಗಳೆರಡು
ಬೆರೆಯುತೊಂದಾಗಿ
ಬಂದಿರುವೆ ನೀನೆನಗೆ
ಪ್ರೇಮ ಸತಿಯಾಗಿ
ನಿಂದಿರುವೆ ಕಣ್ಮುಂದೆ
ಹೇಮಲತೆಯಾಗಿ †

—ಎನ್ನುವರು. ಕವಿಯ ಜೀವನಕ್ಕೆ ಒಲವಿನ ಸತಿ ಗೆಲುವಿನ ಬೆಂಬಲವೆಂದು ಬೇರೆ ಹೇಳಬೇಕಾಗಿಲ್ಲ. ಆಕೆ ಕವಿಯ ಜೀವನಕ್ಕೆ ಸ್ಫೂರ್ತಿ ಶಕ್ತಿ. ಇದನ್ನು ಮನಗಂಡ ಕವಿಗಳು "ಸತಿ ಎಂಬ ಮಮತೆಯಲಿ ನಾ ನುತಿಸುವವನಲ್ಲ; ಮೋಣಲ್ಲವಿದು ಪತಿಯ ಮೋಹದ ಅತಿಶಯೋಕ್ತಿ. ಅನುಭವವನಾಡುನೆನು : ನೀ ದೇವತಾವ್ಯಕ್ತಿ" ಎಂದು ನುತಿಸಿ, ಕಡೆಗೆ, "ದೇವಿ, ಪ್ರತಿಭೆಗೆ ನೀನೆ ಭಾವ ವಿದ್ಯುಚ್ಛಕ್ತಿ; ಕಲೆಗೆ ವಿದ್ಯಾಶಕ್ತಿ; ಪ್ರಾಣಕೆ ಪ್ರೇಮಶಕ್ತಿ" ‡ ಎನ್ನುವರು. ರಸ ಋಷಿಗೆ ತನ್ನ ರಮಣಿಯೇ ರಸದರ್ಶಿಯಾಗಿ ತೋರಿಬರುವಳು. ಏಕೆಂದರೆ, ಆಕೆಯನ್ನು ಕುರಿತು,

ನೀಂ ನಿಸರ್ಗದ ಮೂರ್ತಿ
ಸಾಮಾನ್ಯ ತಾ ಕೀರ್ತಿ
ಕವಿಗೆ ಸ್ವರ್ಗ ಸ್ಫೂರ್ತಿ
ಸಹಧರ್ಮಿಣಿ!

ಅಂದು ನಾಂ ಪ್ರಕೃತಿಯಲಿ
ಮತ್ತೆ ಸಂಸ್ಕೃತಿಯಲ್ಲಿ

---

*ಪ್ರಿಯನು ಪ್ರೇಯಸಿಗೆ—ಪ್ರೇಮಕಾಶ್ಮೀರ; ಪು. ೪೬ †ನನ್ನವಳು—ಜೇನಾಗುವಾ; ಪು. ೧೭ ‡ಪ್ರಿಯಸತಿಗೆ—ಜೇನಾಗುವಾ; ಪು. ೨೫

ಭಾವುಕ ತಪಸ್ಸಿನಲಿ
ರಸದರ್ಶಿಯಾದೆ.
ನಿನ್ನಾತ್ಮ ನಂದನದಿ
ಹರಿಯಲಾನಂದ ನದಿ
ಮಿಂದು ನಾನಿಂದೊಮ್ಮೆ
ರಸಲೀನನಾದೆ ! [1]

–ಎಂಬುದಾಗಿ ಹೊಗಳಿ ಹಿಗ್ಗುವರು. ಆಕೆಯ ಸುಂದರ ಮುಖ ಶಾಶ್ವತ ಸುಖವನ್ನು ನೀಡುವುದು. ದಿನದಿನಕ್ಕೂ ಆಕೆಯ ಒಲವಿನಲ್ಲಿ ಪಾಲು ವಹಿಸಿದಂತೆಲ್ಲ ಆಕೆಯಲ್ಲಿ ಪೂಜ್ಯಭಾವನೆ ವರ್ಧಿಸುವುದು. " ತಾಯ ಚರಣಕಿರಣವೊಂದು ಕೃಪೆಯೊಳೆನ್ನ ಪೊರೆಯಲೆಂದು, ನಿನ್ನ ರೂಪದಿಂದ ಬಂದು ಸಲವು ತಿರುವುದೆನ್ನನಿಂದು "[2] ಎಂದು ಆಕೆಗೆ ನಮಿಸುವುದಲ್ಲದೆ " ಗಂಡನೆಂಬ ಗಂಡು ಹೆಮ್ಮೆ ಮನವ ಮಥಿಸೆ ತಡೆಯಲಮ್ಮೆ " ಎಂದು ತಮ್ಮನ್ನು ತಾವೇ ಶೋಧಿಸಿಕೊಳ್ಳುವರು. ಮರ್ತ್ಯನ ಮಮಕಾರಕ್ಕೆ ಮರುಗಿ " ಹೇ ಮಾಸತಿ ಪ್ರೇಮಾವತಿ, ಮೃಣ್ಮಯದಲಿ ಚಿನ್ಮಯರತಿ, ಮನ್ನಿಸೆನ್ನ ಭಗವತಿ ! "[2] ಎಂದು ಬೇಡಿಕೊಳ್ಳುವುದಕ್ಕೂ ಕವಿಯು ಹಿಂತೆಗೆಯುವುದಿಲ್ಲ. ಆಕೆಯೇ ಕವಿಗೆ " ಜೀವನಾ ! ಸಂಜೀವನಾ ! " " ತಂಪಲಾ ! ಜೇನಿಂಪಲಾ ! " " ಕಂಪಲಾ ! ಸವಿಸೊಂಪಲಾ ! "[3] ಪತ್ನಿಯನ್ನು " ನೋಡಿ ಕಣ್ ಸಾರ್ಥಕ " ಎನ್ನಿಸುವುದು. " ಕೇಳಿ ಕಿವಿ ಸಾರ್ಥಕ " ವಾಗುವುದು, " ಸೋಂಕಿ ಮೆಯ್ ಸಾರ್ಥಕ " ವಾಗುವುದು, " ಅಪ್ಪಿ, ಬಾಳ್ ಸಾರ್ಥಕ "[4] ವಾಗುವುದು. ಇಂಥ ಪ್ರಣಯದ ಸವಿಯಲ್ಲಿ ನಲ್ಲೆ ನಕ್ಕರೆ ಹಾಲು ಸಕ್ಕರೆಯೆನಿಸುತ್ತದೆ. ಕವಿಯ ಅಕ್ಕರೆ ಜೇನಿನಂತೆ ಉಕ್ಕುತ್ತದೆ. ಆ ಮೂಲಕ, ನಶ್ವರದ ಕ್ಷಣದಲ್ಲಿಯೇ ಶಾಶ್ವತದ ಅರಿವಾಗುತ್ತದೆ. ಅಚ್ಚುಮೆಚ್ಚಾದ ಅರ್ಧಾಂಗಿಯನ್ನು ಪಡೆದ ಕವಿಗೆ.

ಮಡದಿ ಅಪ್ಸರಿ !
ಮನೆಯೆ ನಂದನ !
ಮುಕ್ತಿಯೈಸಿರಿ
ಪ್ರೇಮ ಬಂಧನ ! [5]

ಎನ್ನಿಸುವುದು. ತುಂಬಿದ ಪ್ರೇಮದಿಂದ ನಲ್ಲೆಯನ್ನು ಬಿಗಿದಪ್ಪಿದ ಆಲಿಂಗನವೇ " ಅನಂಗ ವಂದನಾ " ಎನ್ನಿಸುತ್ತದೆ. ಅದೇ " ಶಿವಗಿರಿಜಾ ಮದನ ರತಿಗೆ ಷೋಡಶಾಂಗ ಸಾಷ್ಟಾಂಗದ ಅನಂಗವಂದನಾ "[6] ಎನ್ನುವರು. ಮಡದಿಯೂ ಸಹ ಒಂದು ರೀತಿಯಲ್ಲಿ

1 ರಸದರ್ಶಿ-ಜೇನಾಗುವಾ ; ಪು. ೫೦-೫೧ 2 ಸತಿಗೆ-ಚಂದ್ರಮಂಚಕೆ ಬಾ ಚಕೋರಿ ; ಪು. ೭ 3 ಜೀವನಾ ! ಸಂಜೀವನಾ !-ಚಂದ್ರಮಂಚಕೆ ಬಾ ಚಕೋರಿ ; ಪು. ೧೧ 4 ಪ್ರೇಮ ಹೇಮ ರಂಗದಿ-ಚಂದ್ರಮಂಚಕೆ ಬಾ ಚಕೋರಿ ; ಪು. ೧೯ 5 ಹೇಮಬಂಧನ-ಚಂದ್ರಮಂಚಕೆ ಬಾ ಚಕೋರಿ ; ಪು. ೨೨ 6 ಅನಂಗವಂದನಾ-ಚಂದ್ರಮಂಚಕೆ ಬಾ ಚಕೋರಿ ; ಪು. ೩೦

ಯಾರೋ ಮಂತ್ರ ಗಾರ್ತಿ ಎನ್ನಿಸುತ್ತದೆ. ಏಕೆಂದರೆ, ಆಕೆಯ ಸಾನ್ನಿಧ್ಯದಲ್ಲಿ ಪ್ರಯಾಸ ಸಂಕಟಗಳೆಲ್ಲ ಸಪ್ಪಡಗುವುವು; ಕಷ್ಟಗಳೆಲ್ಲ ಕರಗುವುವು. ಅಂತೆಯೇ ಆಕೆಗೆ ಅಹಿತವಾದರೆ ಎಲ್ಲ ಆನಂದವೂ ಅಡಗುವುವು. ಆದ್ದರಿಂದ, ಕವಿ ಆಕೆಯ ಈ ಶಕ್ತಿಯನ್ನು ಕುರಿತು "ನರಕದಲಿ ನಾಕವನೆ ನೀ ಸೃಜಿಸಬಲ್ಲೆ. ನಾಕವನು ನಿಂತಲ್ಲೆ ನರಕವಾಗಿಸಬಲ್ಲೆ, ಓ ನಲ್ಲೆ[1] " ಎನ್ನುವರು. ಏನೇ ಆಗಲಿ, ಆಕೆಯೇ ಗೃಹಕ್ಕೆ ಸ್ವಾಮಿನಿ; ದೇವತೆ.

ಯಾವ ದೇವತೆಯೊಲಿದರೇನು
ಮನೆಯ ದೇವತೆ ಮುಳಿದರೆ
ಯಾವ ದೇವತೆ ಹೊಗಳಲೇನು
ಮನೆಯ ದೇವತೆ ಹಳಿದರೆ[2]

ಎಂಬ ಮಾತು ಎಲ್ಲರೂ ಒಪ್ಪತಕ್ಕದ್ದೆ. ಇದೇ ರೀತಿ ಪ್ರಿಯೆಯ ಒಂದೊಂದು ನಿಲುವೂ ಕವಿಗೆ ದಿನಕಳೆದಂತೆಲ್ಲ ಮಹೋನ್ನತವಾಗಿ ಕಾಣುತ್ತದೆ. ಆಕೆ ಸಾಂತತೆಯಲಿ ಅನಂತೆಯಾಗಿ ತೋರುತ್ತಾಳೆ. ಆಕೆಯ ಒಂದೊಂದು ಅಂಶವೂ ದೈವಾಂಶವೆನ್ನಿಸುತ್ತದೆ.

ಹೇ ದೇವಿ, ನೀನನಂತೆ
ಕೃಪೆಯಿಂದೆ ಮನೆ ಮನೆಯೊಳಾದೆ ಸಾಂತೆ
ಮತ್ತೆ ಮನಮನದೊಳಂತೆ ನಿಂತೆ
ಓ ಅಮೃತ ಶಾಂತೆ
ಸಚ್ಚಿದಾನಂದ ವಿಶ್ರಾಂತೆ
ಎದೆಯೆದೆಗೆ ಇಳಿದು ಬಾ, ಎದೆಯನ್ನೆಯಂತೆ[3]

ಎಂದು ಕೊಂಡಾಡುವರು. ಹೀಗೆ ಹೃದಯಗಳೆರಡು ಒಲಿದು ಪರಸ್ಪರ ಆತ್ಮ ನಿವೇದನೆ ಮಾಡಿಕೊಳ್ಳುವುದು ಕವಿಗೆ ಸಾಮಾನ್ಯವಾದ ಸಂಗತಿಯೆನ್ನಿಸುವುದಿಲ್ಲ. ಅದಕ್ಕೆ ಶಿವ ಪಾರ್ವತಿಯರ ಹರಕೆಯೇ ಕಾರಣವೆನ್ನಿಸುವುದು. ಆಕೆಯ ಶರೀರ ಕವಿಯ ಕಣ್ಣಿಗೆ ಕೇವಲ ಪಂಚಭೂತಾತ್ಮಕವಲ್ಲ. "ದೇವನಿತ್ತ ಧರಾಸ್ವರ್ಗ "[4] ಎನ್ನಿಸುವುದು. ಪತಿಭಕ್ತಿ ಪರಾಯಣೆಯಾದ ಪತ್ನಿ ತನಗೆ ನಿತ್ಯನಿತ್ಯವೂ ನಮಸ್ಕರಿಸುವುದನ್ನು ಕಂಡು " ನಮಸ್ಕರಿಸು ನಮಸ್ಕರಿಸಿ ನನ್ನನಮರಗೈದಿಹೆ" " ಒಂದೊಂದೆಯೆ ನಮನದಿಂದೆ ನನ್ನಲ್ಪವನೆಲ್ಲ ಕೊಂದೆ", " ಮನುಜತನವನಳಿಸಿಹೆ ದಿವಿಜತನವನಿಳಿಸಿಹೆ ನನ್ನನಳಿಸಿ ಉಳಿಸಿಹೆ "[5] ಎಂಬ ಮಾತುಗಳಿಂದ ತಮ್ಮಿಬ್ಬರ ಪುನೀತವಾದ ಬದುಕನ್ನು

---

1 ಮಂತ್ರಗಾರ್ತಿ-ಚಂದ್ರಮಂಚಕೆ ಬಾ ಚಕೋರಿ: ಪು ೩೧ 2 ಗೃಹದೇವತೆ-ಚಂದ್ರಮಂಚಕೆ ಬಾ ಚಕೋರಿ : ಪು ೩೨ 3ಅನಂತೆ ನೀಂ ಮನಮನಕೆ ಮನದನ್ನೆ-ಚಂದ್ರಮಂಚಕೆ ಬಾ ಚಕೋರಿ: ಪು. ೩೭ 4 ನಿನ್ನಮೆಯ್-ಚಂದ್ರಮಂಚಕೆ ಬಾ ಚಕೋರಿ: ಪು. ೪೨ 5 ನನ್ನನಮರಗೈದಿಹೆ-ಚಂದ್ರಮಂಚಕೆ ಬಾ ಚಕೋರಿ ; ಪು. ೬೭

ಬಣ್ಣಿಸುವರು. ಇಂತು, ಪರಿಶುದ್ಧವಾದ ಪ್ರಣಯದ ಸಲಿಲದಲ್ಲಿ ಮಿಂದು ಬಂದಿದ್ದೇ ಆದರೆ, ಆಡಿದ ಮಾತು ಅಪರಂಜಿಯಾಗುವುದರಲ್ಲಿ ಆಶ್ಚರ್ಯವಿಲ್ಲ.

ಹೀಗೆ ಬದುಕಿನಲ್ಲಿ ಹಾಸು ಹೊಕ್ಕಿನಂತೆ ಹೆಣೆದುಕೊಂಡಿರುವ ಒಲವಿನ ತೀಕ್ಷ್ಣತೆ, ನಿಶಿತ ಸ್ವಭಾವಗಳನ್ನು ಸ್ವಲ್ಪ ನೋಡಬಹುದು. ಒಲವು ಆಡೆ ತಡೆಗಳನ್ನು ಲೆಕ್ಕಿಸುವುದಿಲ್ಲ. ಎಷ್ಟು ಸವಿದರೂ ಸಾಕೆನಿಸುವುದಿಲ್ಲ. "ಹನಿಹನಿಯನೆ ಹೀರಿದರೂ, ಕಡಲೇಳು ಆರಿದರೂ ತಣಿಯ ದೊಲಿವಿನೆದೆಮಸೆ"[1] ಎನ್ನಿಸುವುದು. ಅಂತೆಯೇ "ಮೈಗೆ ಮೈ ಸೋಂಕಿದರೆ ನಂದನವೊ ನಮ್ಮಧರೆ!" "ಮೈಗೆ ಮೈ ಸೋಂಕಿದಗೆ ಮೈಗಳೆರಡಪ್ಪಿದರೆ, ಒಲಿದೊಪ್ಪಿದಪ್ಪಿನಲಿ ದ್ವೈತವದ್ವೈತದಲಿ ಲೀನ ಧುಮ್ಮಿಕ್ಕಿ"[2] ಎಂದು ಕವಿಗಳು ಪ್ರಣಯದ ಭರವನ್ನು ಬಣ್ಣಿಸುವರು. "ಹೂವಿನೆಸಳಿನ ಮೇಲೆ ಜೆಂಜೇನ ಹನಿಯಂತೆ" ಕಾಂತೆಪವಡಿಸಿರಲು "ಕವಿಯ ಕಣ್ಣಿನ ಹಕ್ಕಿ ನಾಲಗೆಯ ನಿಡುಚಾಚಿ ನೆಕ್ಕಿ ನೊಣೆಯುವುದು ನಿರ್ವಾಣಗೈವಂತೆ."[3] ಹೀಗೆ ಉಕ್ಕೇರಿ ಬಂದ ಪ್ರೇಮ ನೆರೆ ತುಂಬಿ ಬಂದ ಹೊಳೆಯಂತೆ ಹಿಡಿತಕ್ಕೆ ಮೀರಿದ್ದು.

ಇಂಥ ಬದುಕಿಗೆ ವಿರಹವನ್ನು ಸಹಿಸುವುದು ಅತಿ ಕಠಿನ. ಹೆಂಡತಿಯ ಅಗಲಿಕೆಯನ್ನು ನೆನೆಯಲೂ ಸಹ ಮನಸ್ಸಿಗೆ ಒಪ್ಪದು. ಏಕಾಂತವನ್ನು ಕುರಿತು "ಸಾಕು ಈ ಏಕಾಂತ! ಅಯ್ಯೊ ಸಾಕೇಕಾಂತ! ಪ್ರೇಮವಿಲ್ಲದೆ ನರಕ ಈ ಒಂಟಿ ವೇದಾಂತ"[4] ಎನ್ನುವರು. ಅಗಲಿಕೆಯ ದಿನಗಳು ಒದಗಿ ಬಂದಾಗ ಅವರಿಗೆ ಅವುಗಳು ಲೆಕ್ಕಕ್ಕೇ ಇಲ್ಲವೆಂಬಂತೆ ಎನ್ನಿಸುವುದು. "ಈ ಕೊಂದ ಕಾಲವನು ಕೂಡಿ ಕೊಡುವೆಯ ಕೊನೆಗೆ ನನ್ನಾಯುಮಾನಕ್ಕೆ ಮೃತ್ಯುದೇವ! ಏಕೆಂದರಿಷ್ಟು ದಿನವೂ ನಾನೆ ಸತ್ತಿದ್ದೆ! ನಲ್ಲಳನು ಕರೆದೊಯ್ಯೆ ಮನೆಗೆ ಮಾವ"[5] ಎಂಬ ಭಾವ ಹೊಚ್ಚ ಹೊಸದಾಗಿದೆ. ಹೆಂಡತಿ ತವರೂರಿಗೆ ಹೋಗಲು ಕವಿಗೆ ತನ್ನ ಮನೆಯೇ ಬಿಕೋ ಎನ್ನಿಸುತ್ತದೆ. ಆತನಿಗೆ ಅದು "ಮಸಣದೊಂದು ಹಾಳು ಬಾವಿ" "ಗೋಡೆ ಸುತ್ತಿದೊಂದು ಟೊಳ್ಳು"[6] ಎನ್ನಿಸುತ್ತದೆ. ತಮ್ಮ "ಪ್ರೇಮಶೀಲಾತ್ಮ ಶಿಶು ರೋದಿಸುತಿದೆ ಕೈಚಾಚಿ ಶೂನ್ಯವನೆ ಶೋಧಿಸುತಿದೆ"[7] ಎನ್ನುವರು. ಗೃಹವನ್ನೇ ಕುರಿತು "ಹೇಳು ಹೇಳು! ನಿನ್ನ ಮಗಳು ಎಂದು ಬಹಳು ನನ್ನವಳು"[8] ಎಂದು ಕೇಳುವರು. ಅಗಲಿಕೆಯ ಯಾತನೆಯನ್ನು ಸಹಿಸಲು ತಮಗೆ ಶಕ್ತಿಯನ್ನು ಕೊಡುವಂತೆ, ದಾಶರಥಿ, ಮೈಥಿಲಿ, ವೀರ ಮಾರುತಿ, ಸೌಮಿತ್ರಿ ಮುಂತಾದವರನ್ನು ಪ್ರಾರ್ಥಿಸುವರು. ಕಡೆಗೆ ಪ್ರಿಯೆಯನ್ನೇ ಕುರಿತು "ಇನ್ನೇನಾದರು ನೀ ಮಾಡು ಅಗಲುವುದೊಂದುಳಿದು ಮನ್ನಿಸಿ ಕರುಣಿಸಿ

---

1 ಕವಿಯ ಪ್ರೇಮ-ಪ್ರೇಮಕಾಶ್ಮೀರ; ಪು. ೬೨ 2 ಮೈಗೆ ಮೈಸೋಂಕಿದರೆ-ಪ್ರೇಮಕಾಶ್ಮೀರ; ಪು. ೬೩ 3 ನಿರ್ವಾಣ-ಜೇನಾಗುವಾ; ಪು. ೭೭ 4 ಸಾಕು ಈ ಏಕಾಂತ-ಪ್ರೇಮಕಾಶ್ಮೀರ; ಪು. ೫೬ 5 ಯಮುನಲ್ಲಿ ಭಿಕ್ಷೆ-ಪ್ರೇಮಕಾಶ್ಮೀರ; ಪು. ೫೯ 6 ವಿರಹ ಚಿತೆ-ಜೇನಾಗುವಾ, ಪು. ೨೧-೨೨ 7 ಶೂನ್ಯ ಶೋಧನೆ, ಜೇನಾಗುವಾ ಪು. ೨೬ 8 ಗೃಹನೆ ಬರುವಳೆಂದು ಗೃಹಿಣಿ, ಚಂದ್ರಮಂಚಕೆ ಬಾ ಚಕೋರಿ ಪು. ೧೨

ಕಾಪಾಡು ಕವಿ ಹೃದಯವ ತಿಳಿದು." "ಚಿತೆಯಾಗಿದೆ ಬಾಳ್; ಮನೆಯೆ ಸ್ಮಶಾನ! ಹದಿನೈದೇ ದಿನಗಳ್ ಶತಮಾನ! ಅಡಿಮುಡಿಯಾಗಿದೆ ಗೌರವ ಮಾನ! ದುಮ್ಮಾನದಿ, ಸತಿ, ನಾನತಿದೀನ"[1] ಎಂದು ಗೋಗರೆಯುವುದು ಹೃದಯ ಕರಗುವಂತಿದೆ. ನಾಳೆ ಬರುತ್ತಾಳೆಂದು ತಿಳಿದ ಒಡನೆಯೇ "ಬರುತಾಳೆ ಬರುತಾಳೆ ಬರುತಾಳೆ ನಾಳೆ ಕೈ ಹಿಡಿದ ಮನದನ್ನೆ ಚೆನ್ನೆ ಬರುತಾಳೆ" "ಶಿವನ ಮೊಗ್ಗೆಯೆ ಮಲರುವಂತೆ ಬರುವಳು ಕಾಂತೆ"[2] ಎಂದು ಹಿಗ್ಗಿ ಹಿರಿ ಹಿರಿಯಾಗುವರು. ಇಂಥ ಹೃದಯಕ್ಕೆ ಪ್ರಿಯೆಯನ್ನು ಎಷ್ಟು ಕಂಡರೂ ಎಷ್ಟು ಒಟ್ಟುಗೂಡಿ ನಲಿದರೂ, ತಣಿವಾಗುವುದಿಲ್ಲ. ಆ ವಿರಹತೃಷ್ಣೆ ಎಂದೆಂದಿಗೂ ಆರುವಂತಿಲ್ಲ. "ಹೀರಿದನಿತೂ ಹೀರಿ, ಸೇರಿ ಹೋಗುವಾಸೆ ಸೇರಿದನಿತೂ ಸೇರಿ ಬೇರೆಯಾಗದಾಸೆ" ಮಿಡಿಯುತ್ತದೆ. ಇದೀಗ ಕವಿಯ ವಿರಹದ ವಿವಿಧ ರೂಪಗಳು.

ಸತಿಯ ಮೇಲಿನ ಈ ಅನುರಾಗಕ್ಕೆ, ಕವಿಗೆ ಆಕೆಯಲ್ಲಿ ಉಂಟಾಗಿರುವ ಅಪಾರವಾದ ಆತ್ಮೀಯತೆಯೇ ಕಾರಣ. ಆಕೆ, ಆತನ ಪಾಲಿಗೆ "ಗುರುವು ಕೊಟ್ಟ ಪರಮ ಭಿಕ್ಷೆ" ಆಕೆಯೇ "ಧರ್ಮ ರಕ್ಷೆ" "ನೀತಿ ಶಿಕ್ಷೆ"[3]. ಅದಕ್ಕಾಗಿಯೇ ಆಕೆಯನ್ನು ಕುರಿತು "ನಿನ್ನ ಮೈ ದೇಗುಲದಿ ನಾನೆ ಪೂಜಾರಿ; ನೀನೆ ದೇವತೆ ಅಲ್ಲಿ, ನನ್ನೆದೆಯ ನಾರಿ", "ಪ್ರೇಮದಾಲಾಪನೆಯೆ ಋಷಿ ಮಂತ್ರದೋಜೆ, ಪ್ರಣಯ ಪ್ರವಾಸದಿಂ ತಣಿಯುವುದೆ ಪೂಜೆ"[4] ಎಂದು ಮುಕ್ತಕಂಠದಿಂದ ಹೊಗಳುವರು. ಆಕೆಯ ಸಾನ್ನಿಧ್ಯದಿಂದ "ಮರ್ತ್ಯನಾದರೂ ಗೆದ್ದೆನು ಸಾವನು, ನಿನ್ನಮೃತವ ಕುಡಿದೆ"[5] ಎನ್ನುವರು. ಈ ಆತ್ಮೀಯತೆಯ ಬಲದಿಂದಲೇ "ನಾ ನಿನಗೆ ನೀನೆನಗೆ ಜೇನಾಗುವಾ! ರಸದೇವಗಂಗೆಯಲಿ ಮೀನಾಗುವಾ!", "ರಾಮಚಂದ್ರನ ಮನದ ಮಾದೇವಿ ಸೀತೆ, ಪುಂಡರೀಕನ ಪಡೆದ ಶ್ರೀ ಮಹಾಶ್ವೇತೆ"ಯರು, "ತಮ್ಮ ಸೋಂಪಿಯ ಸುಧಾರಕ್ಷೆ ನೀಡಿ", ತಮ್ಮಿಬ್ಬರನ್ನೂ "ಕರುಣಿಸಲಿ ಕೃಪೆಮಾಡಿ"[6] ಎನ್ನುತ್ತಾರೆ. ಹೆಂಡತಿ ಊರಲ್ಲಿದ್ದರೆ ಸಾಲದು; ಮನೆಯಲ್ಲಿದ್ದರೆ ಸಾಲದು; ಆಕೆ ತಮ್ಮ ಸನಿಯದಲ್ಲೇ ಇರಬೇಕು. ದೂರ ನಿಂತರೆ "ದೂರವೇತಕೆ ನಿಲುವೆ ಹತ್ತಿರಕೆ ಬಾ!" "ತೋಳ್ಸೆರೆಗೆ ಬಾ" "ಆತ್ಮಕಾತ್ರದ ಗುಟ್ಟು ಹೊಳೆವಂತೆ ಬಿಗಿಕಟ್ಟು ಬಾ, ಬೇಗಬಾ"[7] ಎಂದು ಸಂಬೋಧಿಸುವರು.

ಈ ರೀತಿ ಸತಿಪತಿಯರ ದಿವ್ಯಾನುರಾಗವನ್ನು ಕಂಡ ಕವಿಯ ಕಣ್ಣಿಗೆ ಸಂಸಾರವೆಂಬುದು ಅತ್ಯಂತ ಪವಿತ್ರವೆನ್ನಿಸುತ್ತದೆ. ತಮ್ಮ ದಾಂಪತ್ಯವೂ ಸಹ ಹರಗಿರಿಜೆಯರ ಒಂದು ಅನುಗ್ರಹವೆಂದೂ, ಅವರೀರ್ವರ ಪ್ರಣಯದ ಲೀಲೆಯ ಒಂದು ಮುಖವೆಂದೂ

---

1 ಪ್ರಿಯೆಯಲ್ಲಿ ಭಿಕ್ಷೆ, ಚಂದ್ರಮಂಚಕೆ ಬಾ ಚಕೋರಿ ಪು. ೫೩ 2 ಬರುತಾಳೆ ನಾಳೆ, ಚಂದ್ರಮಂಚಕೆ ಬಾ ಚಕೋರಿ ಪು. ೫೪ 3 ನನ್ನವಳಿಗೆ, ಪ್ರೇಮಕಾಶ್ಮೀರ ಪು. ೬೫ 4 ರಸ ಜೆಪ್ಪೂ, ಪ್ರೇಮಕಾಶ್ಮೀರ ಪು. ೬೬ 5 ಅಮೃತಪಾನ, ಪ್ರೇಮಕಾಶ್ಮೀರ, ಪು. ೬೬ 6 ಜೇನಾಗುವಾ, ಜೇನಾಗುವಾ ಪು. ೨ 7 ಲಲ್ಲೆ, ಜೇನಾಗುವಾ, ಪು. ೮

ಭಾವಿಸುವರು. "ಸಂಸಾರದ ಸೇವೆ, ಶ್ರೀಪಾದದ ಪೂಜೆ, ಶ್ರೀಪಾದದ ಪೂಜೆ ಸಂಸಾರದ ಸೇವೆ" ಎಂದು ಭಕ್ತಿಭಾವದಿಂದ ತೂಗಿ ತೋರಿಸುವರು. "ಶ್ರೀಮಾತೆಯ ಪಾದದಲಿ" "ಶ್ರೀಗುರುವಾಶೀರ್ವಾದದಲಿ"[1] ತಮ್ಮ ಸಂಸಾರವು ಸರ್ವದಾ ಸೇವಾಬದ್ಧವಾಗಿದೆಯೆಂದು ಬಗೆಯುವರು. ಸಂಸಾರ ಸಮುದ್ರವನ್ನು ಮಥನಮಾಡಿದಂದು ಸುಖದುಃಖಗಳು ಒಡಗೂಡಿ ಬಂದರೂ, ಶಿವನ ಕೃಪೆಯಿಂದ ತಮಗೆ ಅಮೃತ ಸಿಕ್ಕದೆ ಇರದೆಂದು ಆತನ ಅಡಿಯನ್ನು ಶರಣುಹೋಗುವರು. ಸತಿಗೆ ಸೌಂದರ್ಯವೇ ಪರಮಭೂಷಣವೆಂದು ತಿಳಿದು ಆಕೆ ಸರ್ವದಾ ಸುಂದರವಾಗಿರಲೆಂದು ಹಾರೈಸುವರು. ಹೆಣ್ಣಿನ ಬಗ್ಗೆ ಈ ಅನುರಾಗ, ಈ ಅಭಿಮಾನ, ಈ ಪೂಜ್ಯಭಾವನೆಗಳನ್ನು ಅನುಭವಿಸುವ ಕವಿ, ಮತ್ತೊಬ್ಬರನ್ನು ಕುರಿತು "ಸಂಸಾರ ಸಾಗರದಿ ಹೆಣ್ಣು ಗಂಡು, ಕುತ್ತಿಗೆಗೆ ಗುಂಡಲ್ಲ ಬೆನ್ಗೆ ಬೆಂಡು"[2] ಎಂದು ಹೇಳಿ, ಆಕೆ ತನ್ನ ಪತಿಗೆ ಹೇಗೆ ಬೆಂಬಲವಾಗಿ ನಿಲ್ಲುತ್ತಾಳೆಂದು ಬಣ್ಣಿಸುವರು. ಸಂಸಾರಿಯಾದವನು ಎಷ್ಟು ಪುಣ್ಯಶಾಲಿಯೆಂದು ಹೇಳುವಂತೆಯೇ ತಾಯಿಯಾಗುವುದೂ ಸಹ ಪರಮಶ್ರೇಷ್ಠವಾದುದೆಂದು ಘೋಷಿಸುವರು. ತಾಯಿಯನ್ನು ಸಂಬೋಧಿಸಿ "ಜಗದೀಶ್ವರನೆ ವಿಶ್ವ ಸಂಸಾರಿಯಾಗಿರಲು ಸಂಸಾರ ಪಾಶವೆಂದೆನಬೇಡವೈ" "ಹಸುಳೆಯನು ಮಾಯಿಸಲು ಹರನಿಗಭಿಷೇಕವದು; ಶಿಶುವಿಗೂಡಿಸೆ ಶಿವಗೆ ನೈವೇದ್ಯವೈ! ಕಂದನಲಿ ಶಿವನ ಕಾಣುವ ಬಂಧನವೆ ಮುಕ್ತಿ; ತಪಕೊಲ್ಲದುದು ತಾಯ್ತನಕೆ ಸಾಧ್ಯವೈ"[3] ಎನ್ನುವರು. ಈ ಉದಾತ್ತ ಭಾವನೆಗಳು ಯಾರಿಗಾದರೂ ಒಪ್ಪಿಗೆಯಾಗುತ್ತವೆ. ಇಂತೆಯೇ ಪ್ರಣಯದ ಮಧುರ ಫಲವೇ ವಾತ್ಸಲ್ಯ. ಕವಿಗಳು ಈ ಭಾವವನ್ನೂ ಸಹ ವಿಧವಿಧವಾಗಿ ವರ್ಣಿಸಿರುತ್ತಾರೆ. ಸ್ಥಳಾವಕಾಶವಿಲ್ಲದ ಪ್ರಯುಕ್ತ ಅದನ್ನು ಇಲ್ಲಿ ಪ್ರಸ್ತಾಪಿಸಲಾಗುವುದಿಲ್ಲ.

ಕಡೆಕಡೆಗೆ ಕವಿಗೆ ತಮ್ಮ ಪ್ರೇಮ ಕೇವಲ ವ್ಯಾಮೋಹವಾಗಿ ಪರಿಣಮಿಸುವುದೋ ಏನೋ ಎಂಬುದಾಗಿ ಶಂಕೆಯುಂಟಾಗುವುದು. ಆದ್ದರಿಂದಲೇ, "ಸತೀಮೋಹ ಕ್ಲೇಶದಿಂದ ಪರಿಹರಿಸೆನ್ನಾತ್ಮವ, ಮೋಹಮುಕ್ತ ಪ್ರೇಮದಿಂದ ಸಿಂಗರಿಸೆನ್ನಾತ್ಮವ", "ಧರ್ಮಬದ್ಧ ಕಾಮವರ್ತಿ ರಸಪ್ರೇಮವುಳಿಯಲಿ"[4] ಎಂದು ಬೇಡುವರು. "ಹೊರಳುತಿಹೆನೀ ಸಕ್ಕರೆಯ ಕೆಸರಿನಲ್ಲಿ, ಸಿಕ್ಕಿರುವೆನೀ ಜೇನುಸುಬಿನಲ್ಲಿ, ನಿನ್ನ ಬೇವಿನ ಕಯ್ಯೆ ರಕ್ಷೆಯಿಂ ನೀಡಯ್ಯಾ. ನಿನ್ನ ನಖಕೃಪೆಯಿಂದ ಎತ್ತಿ ಪೊರೆಯಯ್ಯ"[5] ಎಂದು ಮೊರೆಯಿಡುವರು. ದಾಂಪತ್ಯವನ್ನು ಕೈಗೊಳ್ಳುವಂದು ಗುರುಗಳ ಆಶೀರ್ವಾದವನ್ನು ಬೇಡಿದಂತೆಯೇ, ಸಂಸಾರದ ಸುಖಸವಿಗಳನ್ನು ಕಂಡಮೇಲೆ "ಇಂದು ಕೈಕೊಳ್ಳುವೆವು ನಿಮ್ಮ ಪದತಲದಲ್ಲಿ ಬ್ರಹ್ಮಚರ್ಯವ್ರತವ, ಗುರುವೆ, ತಾಯಿ, ಪಶುಮಾನವರು ನಾವು ನಿತ್ಯ

---

1 ಶ್ರೀಪಾದ ಪೂಜೆ, ಚಂದ್ರಮಂಚಕೆ ಬಾ ಚಕೋರಿ ಪು. ೨೬ 2 ಹೆಣ್ಣು-ಗಂಡು, ಚಂದ್ರಮಂಚಕೆ ಬಾ ಚಕೋರಿ ಪು. ೬೦ 3 ಒಬ್ಬ ತಾಯಿಗೆ, ಪ್ರೇಮಕಾಶ್ಮೀರ ಪು. ೭ 4 ರಸಪ್ರೇಮವುಳಿಯಲಿ, ಚಂದ್ರಮಂಚಕೆ ಬಾ ಚಕೋರಿ ಪು. ೨೮ 5 ಸಕ್ಕರೆಯ ಕೆಸರಿನಲಿ, ಚಂದ್ರಮಂಚಕೆ ಬಾ ಚಕೋರಿ, ಪು. ೪೬

ಮುಕ್ತರು ನೀವು; ನೋಂಪಿ ಗೆಲುವಂತೆಮ್ಮ ಹರಸಿ ಕಾಯಿ", "ಪಂಕದಿಂ ಪಂಕೇಜಗಳೇಳುವವು ಮೂಡಿ ಪಾದವನಲಂಕರಿಪ ಪೂಜೆಯಂ ಮಾಡಿ"[1] ಎಂದು ತಮ್ಮ ಗುರುಗಳಿಗೂ, ಪೂಜ್ಯಮಾತೆಗೂ ಬಿನ್ನವಿಸಿಕೊಳ್ಳುವರು. ಆದರೆ, ಪ್ರೇಮಪಾಶದಿಂದ ಬಿಡುಗಡೆಯಾಗುವುದು ಅಷ್ಟು ಸುಲಭವಲ್ಲ. ಸೋಲುಗಳು ಸಾಧಾರಣ, ಆದರೆ, ಈ ಸೋಲುಗಳು ಕವಿಗೆ ನಿರಾಶೆಯನ್ನುಂಟುಮಾಡುವುದಿಲ್ಲ. "ಸೋಲಿನ ಕಮಾನುಗಳೆ ಸಾಲ್ಗಟ್ಟಿ ನಿಲೆ, ಹುಟ್ಟಿ ಬಟ್ಟೆವರಿವುದು ನಮ್ಮ ವಿಜಯ ಸೇತು"[2] ಎಂದು ಭರವಸೆಯನ್ನು ತಾಳುವರು. ಸಂನ್ಯಾಸಿಯೊಬ್ಬನು ತನ್ನ ಹೃದಯದ ಅಭೀಪ್ಸೆಯನ್ನು ಬಲಾತ್ಕಾರದಿಂದ ಒತ್ತಿ ಹಿಡಿಯಲು ಅದು ಕನಸಾಗಿ ಕಾಡುವುದೆಂದು "ಶಶಿಕಲಾ"[3] ಎಂಬ ಕವಿತೆಯಲ್ಲಿ ನಿರೂಪಿಸಿದ ಕವಿ, ಆ ಹೃದಯದ ಉದ್ವೇಗವನ್ನು ಒಂದೇ ಬಾರಿಗೆ ನಿರಾಕರಿಸುವುದು ಸಾಧ್ಯವಿಲ್ಲವೆಂದು ಒಪ್ಪಿಕೊಳ್ಳುವರು. ಅದಕ್ಕಾಗಿಯೇ "ಜನುಮ ಜನುಮಾಂತರದ ಸಂಸ್ಕಾರಸಂಗವನು ತೆಕ್ಕನೆ ವಿಸರ್ಜಿಸುವುದೆಮ್ಮ ಅಳವೆ? ತನ್ನ ಸಮಯಕೆ ಮೂಡುವಲರ ನೀ ಮುನ್ನವೆಯೆ ಗಿಡದ ಗಬ್ಬದಿನೆಂತು ಹೊರಗೆ ಎಳೆವೆ?"[4] ಎಂದು ಹಿತೋಕ್ತಿಯನ್ನು ಹೇಳುವರು.

ಕವಿಗಳು ತಮ್ಮ ದಾಂಪತ್ಯ ಜೀವನದಲ್ಲಿ ತಾವು ಅನುಭವಿಸಿದ ಕೆಲವು ಪ್ರಥಮಾನುಭವಗಳನ್ನು ಬಹು ಚೆನ್ನಾಗಿ ಹೇಳಿರುತ್ತಾರೆ. "ಜೇನಿರುಳು ಅಥವಾ ಪ್ರಥಮ ಮಿಲನ"ವನ್ನು ವಿವರಿಸುತ್ತ, ಸತಿಪತಿಯರ ಸಮಾಗಮ ಯಾಂತ್ರಿಕವಲ್ಲವೆಂದೂ, ಅದು ಜನ್ಮಜನ್ಮಾಂತರದ ಮಿಲನವೆಂದೂ ಹೇಳುವುದು ಅರ್ಥವತ್ತಾಗಿದೆ. "ಮರೆತ ಚಿರಪರಿಚಿತೆಯು ನಿನ್ನೊಮ್ಮೆ ಇದಿರುಗೊಂಡಂತಾದುದೇಕೆ? ಜನ್ಮಜನ್ಮಾಂತರದ ನಲ್ಲೆಯಾಕೆ?"[5] ಎಂದು ಹಿಗ್ಗುವರು. ಪ್ರಥಮ ಮಿಲನದ ಆನಂದವು ಇಂತಾದರೆ, ಪ್ರಥಮ ವಿರಹದ ಸಂಕಟ ಸಹಿಸಲಶಕ್ಯ. ನಲ್ಲೆಯಿಲ್ಲದ ಮಲೆನಾಡೇ ಕವಿಗೆ ಹಿರಿಮರಳುಗಾಡಾಗಿ ಪರಿಣಮಿಸುವುದು. ಕಾಲವೇ ಕಲ್ಲಾಗಿ ಭಾರದಿಂದೆದೆಯ ಜೀವವ ಹಿಂಡಿ ಹೀರುವುದು. ಇಂತೆಯೇ "ಕುಮಾರ ಸಂಭವ"ವಾದಂದೂ, ಕವಿಗೆ ಅತ್ಯಂತ ಆನಂದೋದ್ರೇಕವಾಗುವುದು. "ಕೇಳಿದೊಡನೆ ಚಿನ್ಮಾತ್ರಾನಂದದೋಕುಳಿ ಬುಗ್ಗೆ ತುಂಬಿದೆದೆ ಬಾನಲ್ಲಿ ಮಳೆಯ ಬಿಲ್ಲನು ಕಟ್ಟೆ!"[6] ಎಂದು ಪರಿಪರಿಯಾಗಿ ಹಾಡುವರು. ಭೋಗಸುಖವನು ಸವಿದು ಚಪ್ಪರಿಸುವಾಗ "ಮಿಲನ ಬೃಂದಾವನದ ನಿಧುವನ ನಿಕುಂಜದಲಿ ಭೋಗನರಹರಿ ಸುಖದ ಮುಖದೊಳಾದುದೊ ಸುಖದ ಅಮೃತ ನಿಧನ"[7] ಎಂದು ಹೇಳಿರುವ ರೀತಿ ಅತಿ ಗಂಭೀರವೂ, ಅತಿ ಮನೋಹರವೂ, ಅತಿ ಗುಹ್ಯವೂ ಆಗಿರುತ್ತದೆ. ಈ ಕವನ

---

1 ವ್ರತಭಿಕ್ಷೆ-ಚಂದ್ರಮಂಚಕೆ ಬಾ ಚಕೋರಿ, ಪು. ೪೭ 2 ವಿಜಯಸೇತು-ಚಂದ್ರಮಂಚಕೆ ಬಾ ಚಕೋರಿ, ಪು. ೪೮ 3 ಶಶಿಕಲಾ-ಪ್ರೇಮಕಾಶ್ಮೀರ, ಪು. ೩೨ 4 ವಿಜಯಸೇತು-ಚಂದ್ರಮಂಚಕೆ ಬಾ ಚಕೋರಿ, ಪು. ೪೮ 5 ಜೇನಿರುಳು ಅಥವಾ ಪ್ರಥಮ ಮಿಲನ-ಜೇನಾಗುವಾ, ಪು. ೪ 6 ಕುಮಾರ ಸಂಭವ-ಜೇನಾಗುವಾ, ಪು. ೨೭ 7 ಅಮೃತನಿಧನ-ಚಂದ್ರಮಂಚಕೆ ಬಾ ಚಕೋರಿ, ಪು. ೧೪

ಸಮುದಾಯದಲ್ಲಿ ಸುಖ ಸಂತೋಷಗಳ ನಿರೂಪಣೆಯ ಮಧ್ಯೆ ಕವಿಗಳು "ಮುನಿದ ಕಾಂತೆ"ಯನ್ನು ಗುರುತಿಸದೆ ಇಲ್ಲ. "ಮನೆಯ ಬೆಳಗುತಿರುವ ಓ, ನನ್ನ ಹೃದಯ ದೀಪ, ಎನಿತು ಎಣ್ಣೆ ಸುರಿದರೂ ಎನಿತು ಬತ್ತಿ ಉರಿದರೂ ತಣಿಯದಿಹುದೆ ತಾಪ ಪೂರ್ವಜನ್ಮ ಶಾಪರೂಪದೀ ಪ್ರಕೋಪ"† ಎಂದು ದುಃಖಪಡುವರು. ಅಂತೆಯೇ ಸತಿಯ "ಮಹಾಲಿಂಗನಾ ಮೋಕ್ಷವೊಂದನಂಗನಾ" ಎಂದು ಭಾವಿಸಿ, "ಲೋಕ ವೊಂದು ನರಕ ಕೂಪ, ಜನನವೊಂದು ಘೋರ ಶಾಪ, ನೀನು ತೊರೆದರೆ, ನಾನು ಮರೆತರೆ", "ನಿನ್ನ ಬಾಹು ಬಂಧನ ನನ್ನ ಮೋಕ್ಷ ನಂದನ, ನೀನು ಒಲಿದರೆ ನಾನು ತಿಳಿದರೆ"‡ ಎಂಬುದಾಗಿ ವ್ಯಕ್ತಪಡಿಸುವರು.

ಪ್ರಣಯದ ಪ್ರಪಂಚದಲ್ಲಿ ಈ ರೀತಿ ಸುಳಿದು, ನಲಿದು, ಒಲಿದು ಗೆಲುವಿನಿಂದ ಚೆಲುವನ್ನು ಸೂಸುವ ಕವಿಯ ಕಣ್ಣಿಗೆ ಇಡೀ ಪ್ರಪಂಚವೇ ಒಂದು "ರಾಸಲೀಲೆ" ಯಲ್ಲಿ ತೇಲುತ್ತಿರುವಂತೆಯೂ, ಓಲಾಡುತ್ತಿರುವಂತೆಯೂ ಕಂಡುಬರುತ್ತದೆ.

ವಿಶ್ವದ ಕೇಂದ್ರದ ಬೃಂದಾವನದಲಿ,
ಜೀವನ ಜಮುನೆಯ ಕೂಲದಲಿ,
ರಾಗದ ಭೋಗದ ಮಧು ಸಂಸಾರದ
ಕದಂಬ ತರುವರ ಮೂಲದಲಿ.

..............................

ನರ್ತಿಸುವನದೊ ತ್ರಿಭಂಗ ಮುರಾರಿ
ತ್ರಿಲೋಕ ಮೋಹಕ ರಾಸವಿಹಾರಿ!

—ಎಂಬುದಾಗಿ, ನೀಳ್ಗವನವೊಂದನ್ನು ಬಹು ಮನೋಹರವಾಗಿ ಆರಂಭಿಸಿ, ನಮ್ಮನ್ನು ಶ್ರೀ ಕೃಷ್ಣನ ರಾಸಲೀಲೆಯ ಪ್ರಪಂಚಕ್ಕೆ ಕರೆದೊಯ್ಯುವರು. ಹೆಜ್ಜೆ ಹೆಜ್ಜೆಗೂ ಗೆಜ್ಜೆಯ ದನಿಯನ್ನು ಕೇಳುವ ನಮಗೆ ಮೈಮರೆಯುವಂತಾಗುವುದು. ಆ ರಾಸಲೀಲೆಯಲ್ಲಿ ಮಗ್ನವಾಗಿರುವ ಪ್ರಪಂಚವನ್ನು ಕವಿ ಈ ರೀತಿ ಚಿತ್ರಿಸಿರುತ್ತಾರೆ.

ಭೂಗ್ರಹನಿಕರಂ ರವಿತಾರಾಳಿ
ರಾಸಕ್ರೀಡಾವೇಶವ ತಾಳಿ
ಯುಗಯುಗದಿಂ ಗಿರ್ರನೆ ಸುತ್ತಿವೆ
ಒಂದನ್ನೊಂದಂ ಸೆಳೆದಿವೆ, ಮುತ್ತಿವೆ
ಎಂದೆಂದಿಗು ಬಿಡದಾಲಿಂಗನದಿ
ರಹಸ್ಯಛಂದೋ ಬಂಧನದಿ
ನಿಲ್ಲಲ್ ಪ್ರಲಯಂ! ಚಲಿಸಲ್ ಸೃಷ್ಟಿ.

---

†ಮುನಿದಕಾಂತೆಗೆ-ಚಂದ್ರಮಂಚಕೆ ಬಾ ಚಕೋರಿ, ಪು. ೨೪
‡ಮಹಾಲಿಂಗನ-ಚಂದ್ರಮಂಚಕೆ ಬಾ ಚಕೋರಿ, ಪು. ೪೬

ನೃತ್ಯ ಗೀತಗಳೆ ಜೀವನತುಷ್ಟಿ
ಅಣು ಅಣುವಿಂ ನೀಹಾರಿಕೆವರೆಗೆ
ತೃಣಕಣ ಕಣದಿಂ ಹಿಮಗಿರಿವರೆಗೆ
ಎಲ್ಲೆಲ್ಲಿಯು ರಾಸಕ್ರೀಡೆ. *

ಈ ಮಧುರಭಾವ ಮನಸ್ಸಿಗೆ ಮನೋಹರ: ಬುದ್ಧಿಗೆ ಬಂಧುರ, ಹೀಗೆಯೇ ಪ್ರಣಯದ ಝೇಂಕಾರದಲ್ಲಿ ಮನಮೋಹಿಸುವ ಮತ್ತೊಂದು ದೀರ್ಘ ಕವಿತೆ "ಹರ ಗಿರಿಜಾ" ಎಂಬುದು. ಆರಂಭದ ವೈಭವವೇ ವೈಭವ.

ಪರ್ವತವಧೂ ಹೃದಯೇಶ್ವರ
ವರನಾದಾ ಅನಂತರ
ಸುರಶುಭಕಾ ಶಿವಶಿವೆಯರ
ಬಸಗೆಯಾಯ್ತೊ ಜಗಚ್ಚರ !
ಹರನೆಂದನು ಆಲಿಂಗಿಸಿ
ಸತಿಯ ಚುಂಬಿಸಿ :
"ನೀನು ಸುರ ಸರೋವರ
ನಾನು ದೇವಕುಂಜರ !"

ಮುಂದೆ ಹರಗಿರಿಜೆಯರ ಸರಸ ಸಲ್ಲಾಪಗಳ ಸಾಲಂಕೃತ ವರ್ಣನೆ ಬಗೆಬಗೆಯಾಗಿ ಸಾಗುತ್ತದೆ. ಒಟ್ಟು ಪ್ರಪಂಚವೇ ಅವರ ಅಮರ ಪ್ರೇಮಕ್ಕೆ ಅನುವಾಗುತ್ತದೆ. "ಯೋಗೀಶ್ವರ ತ್ಯಾಗೀಶ್ವರ ಹರನಾದನು ಗಿರಿಜಾತೆಗೆ ಭೋಗೇಶ್ವರ ಮನ್ಮಥ" ಎಂಬ ಭಾವವನ್ನು ಅನುಭವಿಸಿದಷ್ಟೂ ಅಸದೃಶವೆನಿಸುತ್ತದೆ. ಶಿವ ಪಾರ್ವತಿಯರ ಸಂಭಾಷಣೆಯಂತೂ ಅಪೂರ್ವವಾದ ಸಂಯೋಜನೆ.

ಹರನೆಂದನು ಆಲಿಂಗಿಸಿ
ಸತಿಯ ಚುಂಬಿಸಿ :
"ನೀ ಬಸಂತ ಬನಸಿರಿ !"
ಉಮೆಯೆಂದಳು ಮಂದಹಸಿತೆ
"ನೀನಾಗಿರಿ ವಿಹಂಗಮ
ನಿತ್ಯ ಜಂಗಮ !
ನೀನಾಗಿರಿ ಮಧುಕರ
ನಿತ್ಯ ಝೇಂಕರ !
ನೀನಾಗಿರಿ ಪರ್ವತ
ಮಲಯ ಮಾರುತ..."

*ರಾಸಲೀಲೆ-ಚಂದ್ರಮಂಚಕೆ ಬಾ ಚಕೋರಿ, ಪು. ೨೪-೨೫.

ಇದೀಗ ಅನ್ಯೋನ್ಯತೆಯ ಪರಾಕಾಷ್ಠೆ. ಭಗವಂತನ ಮಹಿಮೆಗೆ ಪಾರ್ವತಿ ಆಡುವ ಒಂದೆರಡು ನುಡಿಗಳೇ ಸಾಕು.

ಸರ್ವಜೀವ ಜಡಗಳಲ್ಲಿ
ನೀವೆ ಗಂಡು ನಾನೆ ಹೆಣ್ಣು
ಸಕಲ ಸೃಷ್ಟಿ ಮೂಲದಲ್ಲಿ
ಪುರುಷ ಪ್ರಕೃತಿ ಎರಡು ಕಣ್ಣು
ಶಿವ ಶಕ್ತಿ ; ಶಕ್ತಿ, ಶಿವ
ಮಿಲನದಾಟವದುವೆ ಭವ !
ಭೋಗಲೀಲೆ ಸಾಗಿದೆ !
ನಾನು ನೀನು ಆಗಿದೆ ! †

—ಎಂಬ ಮಾತುಗಳು ಪ್ರಪಂಚದ ಪ್ರಣಯದ ರಹಸ್ಯವನ್ನೇ ಬಿಚ್ಚಿ ಹೇಳು ವಂತಿವೆ. ಕಡೆಯ ಎರಡು ವಾಕ್ಯಗಳು ಭಗವಂತನ ಆ ಲೀಲೆಯಲ್ಲಿ ಪಾಲುಗೊಂಡಿರುವ ಕವಿ ದಂಪತಿಗಳ ಪಾತ್ರವನ್ನು ಕುರಿತು ಹೇಳುತ್ತವೆ.

ಈ ರೀತಿ, ಶ್ರೀ ಕುವೆಂಪು ಅವರ ಪ್ರಣಯಗೀತೆಗಳ ವಿಹಾರೋದ್ಯಾನದಲ್ಲಿ ಸಂಚರಿಸಿ ಬಂದರೆ, ಆಗುವ ಸುಖಾನುಭವವನ್ನು ಎಷ್ಟು ಹೇಳಿದರೂ ಮನಸ್ಸಿಗೆ ತೃಪ್ತಿ ಯಾಗುವುದಿಲ್ಲ. ಒಂದೊಂದು ನುಡಿಯೂ ಮಕರಂದದಂತಿದೆ. ಜೇನುತುಪ್ಪದ ಒಂದೊಂದು ತೊಟ್ಟಿನಲ್ಲಿಯೂ ಸವಿ ಹೆಚ್ಚಾಗುವಂತೆ ಈ ಕವಿತೆಗಳನ್ನು ಓದಿದಂತೆಲ್ಲ ಯಾವುದೋ ಒಂದು ಅನಿರ್ವಚನೀಯವಾದ, ಅಪೂರ್ವವಾದ ಅನುಭವವಾಗುತ್ತದೆ. (ಸಂಸಾರಿಗೂ ಸಹ ಸಂಸಾರದ ಮಹತ್ತನ್ನು ಒತ್ತಿ ಹೇಳುವಂತಿವೆ!) ಮುಖ್ಯವಾಗಿ, ಇವುಗಳೆಲ್ಲವೂ, ಕವಿಗಳ ನಿತ್ಯಾನುಭವದ ಆತ್ಮೀಯವಾದ ಆನಂದದ ಬಿಂದುಗಳು. ಇವು ಗಳು ಹೂವುಗಳಂತೆ ಕೋಮಲ ; ಪರಾಗದಂತೆ ಸೂಕ್ಷ್ಮ. ಹೆಚ್ಚು ಹಿಸುಕಿದರೆ ನಮ್ಮನ್ನು ನಾವೇ ವಂಚಿಸಿಕೊಂಡಂತಾಗುತ್ತದೆ. ಅಲ್ಲೊಂದು ಇಲ್ಲೊಂದು ಪಂಕ್ತಿಯನ್ನು ಆಯ್ದು ಸೆಯ್ದು ಕೊಟ್ಟಿರುತ್ತೇನೆ. ಶ್ರೀಯುತರು ನಮಗೆ ನೀಡಿರುವ ಈ ದಿವ್ಯಕುಸು ಮಾಂಜಲಿಯನ್ನು ಪದೇ ಪದೇ ತೆರೆದ ಹೃದಯದಿಂದ ಆಸ್ವಾದಿಸಬೇಕು. ಪ್ರೇಮವೆನ್ನು ವುದು ಕೇವಲ ಸತಿಪತಿಯರನ್ನು ಗಂಟುಹಾಕುವ ಹಿರಿಯರ ಒಳಸಂಚಲ್ಲ. ಅದು ಹರ ಗಿರಿಜೆಯರ ಹರಕೆಯನ್ನು ಹೊತ್ತು ಭೂಮಿಗವತರಿಸಿರುವ ದಿವ್ಯವಾದ ಶಕ್ತಿ ; ಪ್ರಪಂ ಚದ ಅಣುರೇಣುಗಳಲ್ಲಿಯೂ ನಡೆದಿರುವ ರಾಸಲೀಲೆಯ ಒಂದು ಅಂಶ. ಗಂಡ ಹೆಂಡ ತಿಯರು ಸಂಸಾರದ ಪಥದಲ್ಲಿ ಒಟ್ಟಿಗೆ ಬೆಳಗುವ ದಿವ್ಯ ದೀಪ್ತಿಗಳು. ಆತ್ಮನಿವೇದ ನೆಯೇ ಆತ್ಮಾನಂದದ ತುತ್ತ ತುದಿ. ಶ್ರೀ ಕುವೆಂಪು ಅವರ ಪ್ರಣಯಗೀತೆಗಳ ಮುಖ್ಯ ಸಂದೇಶವಾದರೂ ಇಷ್ಟೆ. ದಾಂಪತ್ಯವು ಸಾಮಾನ್ಯ ಸಂಗತಿಯಲ್ಲ. ಅದನ್ನು ಬಿತ್ತುವ

† ಹರಗಿರಿಜಾ. ಚಂದ್ರಮಂಚಕೆ ಬಾ ಚಕೋರಿ ಪು. ೧೫

ವರು ಶಿವ ಪಾರ್ವತಿ; ಬೆಳಸುವವರು ಅಜ ಸರಸತಿ, ಆ ಒಲವಿನ ಇನಿಜೇನನ್ನು ಸವಿಯುವವರು ಅನಂಗ ರತಿ. ಆದ್ದರಿಂದ ಕ್ಷಣಿಕವಾದ ಕಾಮವನ್ನು ನಿರ್ನಾಮ ಮಾಡಿ, ಪೂರ್ಣತೆಗೆ ದಾರಿಮಾಡಿಕೊಡುವ ಪ್ರೇಮವನ್ನು ಆರಾಧಿಸಿ, ಅವಲಂಬಿಸಿ, ಮರ್ತ್ಯನಾದವನು ಅಮರನಾಗುವ ಹೆದ್ದಾರಿಯನ್ನು ಈ ಒಂದೊಂದು ಕವಿತೆಯೂ ಕೈದೀಪದಂತೆ ಬೆಳಗುತ್ತಿವೆಯೆಂದರೆ ಅತಿಶಯೋಕ್ತಿಯಾಗಲಾರದು. ಪ್ರಣಯದ ನಿರೂಪಣೆ ಬಹು ಕಠಿಣ, ಶ್ಲೀಲ-ಅಶ್ಲೀಲಗಳ ನಡುವೆ ಹಾದು ಬರುವಾಗ ದಾರಿಯಾದರೂ ಬಹು ಕಡಿದು ಮತ್ತು ಬಹಳ ಇಕ್ಕಟ್ಟು. ಮನಸ್ಸು ನಿರ್ಮಲವಾದರೆ ಮಾತು ಮುತ್ತಾಗುತ್ತದೆ, ಅನುಭವ ಸತ್ಯವಾದರೆ ನಿರೂಪಣೆ ನೇರವಾಗುತ್ತದೆ. ಮುತ್ತಿನಂತಹ ಮಾತು ನೇರವಾದ ನಿರೂಪಣೆ ಎರಡೂ ಕೂಡಿ ಬಂದರೆ ಕಾವ್ಯದಲ್ಲಿ ರಸಿಕನಾದವನಿಗೆ ಪ್ರಯಾಸವಿಲ್ಲದೆಯೇ ರಸಾನುಭವವಾಗುತ್ತದೆ. ಈ ಸಹಜಗುಣಗಳೆಲ್ಲವೂ ಶ್ರೀ ಕುವೆಂಪು ಅವರ ಪ್ರಣಯಗೀತೆಗಳಲ್ಲಿ ಸ್ವಯಂ ವೇದ್ಯವಾಗುತ್ತವೆ. ಇಷ್ಟು ಹೇಳಿದರೂ, ಹೇಳಬೇಕಾದದ್ದು ಇನ್ನೂ ಉಳಿದಿದೆ. ಇದೇ ಉತ್ತಮ ಕವಿತೆಯ ತಿರುಳು; ಪ್ರಣಯದ ಗುಟ್ಟು.





# ಕವಿ ಕಂಡ ಸ್ವಾತಂತ್ರ್ಯ

## ವೀ. ಪುಟ್ಟಮಾದಪ್ಪ

ಆಗಸ್ಟ್ ಹದಿನೈದು !

ಅಗೋ, ದೂರದಲ್ಲಿ ಪ್ರಭಾತಫೇರಿಯ ಮೊಳಗು ಅಲೆ ಅಲೆಯಾಗಿ ತೇಲಿ ಬರುತ್ತಿದೆ. ಒಡನೆ ಕವಿ, ಸ್ಫೂರ್ತಿಯಿಂದ ಕೂಗುತ್ತಾನೆ: "ಬನ್ನಿ ಓ ಬನ್ನಿ, ಘಂಟಿ ಘೋಷದೊಳೆನ್ನಿ: "ಮಾತರಂ ವಂದೇ! ಮಾತರಂ ವಂದೇ! ಮಾತರಂ ವಂದೇ! ಮಾತರಂ ವಂದೇ"

ಕಂಚಿನ ಘಂಟೆಯಂತಿರುವ ಕೊರಳಿಂದ ಕರೆಯುತ್ತಾ ಆವೇಶದಿಂದ ಕವಿ ಕುಣಿಯುತ್ತಿದ್ದಾನೆ. ಉಚ್ಚಸ್ವರದಲ್ಲಿ ಬಾನನ್ನು ತಿರೆಗಿಳಿದು ಬರುವಂತೆ, ಬಂದು ಸ್ವಾತಂತ್ರ್ಯ ಸೊಬಗನ್ನು ಸವಿಯುವಂತೆ ಕರೆಯುತ್ತಾನೆ:

"ಓ ಬಾರ, ಸಹ್ಯಾದ್ರಿ ; ಬಾರ ಓ ವಿಂಧ್ಯಾದ್ರಿ : ಬಾರಾ ಹಿಮಾದ್ರಿ !
ಕುಲಾದ್ರಿಗಳೆ ಬನ್ನಿ, ಸುರಾದ್ರಿಗಳೆ ಬನ್ನಿ, ಬಾರೈ ಹರಾದ್ರಿ !
ಬಾರಮ್ಮ ಗಂಗೆ, ಬಾರಮ್ಮ ತುಂಗೆ ; ಬಾರ ಓ ಸಿಂಧು ;
ಯಮುನೆ ಕಾವೇರಿ ಗೋದೆಯರ ಸೇರಿ ಬಾ, ಕೃಷ್ಣ ಬಂಧು."

ಇವನೇನು ಕಲ್ಕಿಯೇ ! ರುದ್ರನೆ ! ವೀರಭದ್ರನೆ ! ಬಂಡೆಯಿಂದ ಬಂಡೆಗೆ ಧುಮು ಧುಮು ದುಮ್ಮಿಕ್ಕುವ ತರಹ ಕೂಗುತ್ತಿದ್ದಾನೆ; ಕುಣಿಯುತ್ತಿದ್ದಾನೆ. ಭಾರತಾಂಬೆಯ ಮುಂದೆ ನಿಂತು ಹೇಳುತ್ತಾನೆ :

"ಕಯ್‌ಮುಗಿದು ಬೇಡುವೆನು ಏಳ್, ತಾಯೆ, ಏಳ್ ;
ಕಾಲ್ಗೆರಗಿ ಬೇಡುವೆನು ಏಳ್....
ಓ ತಾಯೆ, ವಂದಿಸುವ ಕಂದನಂ ಕೇಳ್ :
ಏಳ್, ಪೇಳ್, ಬಾಳ್ !"

ಕವಿಯ ಉತ್ಸಾಹ ಆನಂದಗಳನ್ನು ಕಂಡು ಸ್ವಾತಂತ್ರ್ಯಮಾತೆ ಮಂತ್ರಮುಗ್ಧೆಯಂತೆ ಕೇಳುತ್ತಾಳೆ :

"ಏಕೆ ಈ ಉತ್ಸಾಹ ? ಏನು ಆನಂದವಿದು ಸಿನಗೆನ್ನ ಕಂದ ?"

ಉತ್ತರಿಸಲು ಕವಿಗೆ ಆತುರ. ಬೇಗ ಬೇಗ ಹೇಳುತ್ತಾನೆ :

"ಏಕೆ ಕೇಳುತಿಹೆ ?"

"ಹೇಳುವುದು ನೋಡಮ್ಮ ಹರಿದೆನ್ನ ಬಂಧ !"

ಮಗನ ಸಂತಸವನ್ನು ಕಂಡು ಮಾತೆಗೂ ಹೃದಯ ತುಂಬಿಬರುತ್ತದೆ. ಇಬ್ಬರೂ ಒಬ್ಬರನ್ನೊಬ್ಬರು ನೋಡುತ್ತ ಮೂಕರಂತೆ ನಿಲ್ಲುತ್ತಾರೆ.

ಕವಿ ಹಾಗೂ ಸ್ವಾತಂತ್ರ್ಯಮಾತೆ ಓಿಗೆ ನಿಂತಿರಲು ಆಗಸ್ಟ್ ೧೫ರ ವಿಜೃಂಭಣೆಯನ್ನು ಕಣ್ಣಾರೆ ಕಾಣಲು ದೇವತೆಗಳು ತಾವಾಗೇ ಬುವಿಗಿಳಿದು ಬರುತ್ತಾರೆ. ಅರ್ಧ ದಾರಿಯಲ್ಲಿಯೇ ಕೇಳಿ ಬಂದ ಸ್ವಾತಂತ್ರ್ಯಗೀತೆ ಅವರನ್ನು ಬೆರಗುಗೊಳಿಸುತ್ತದೆ. ದೃಷ್ಟಿಯನ್ನು ಭಾರತದತ್ತ ಹೊರಳಿಸುತ್ತಾರೆ. ಅಲ್ಲೇನು ಕಾಣಬೇಕು ಅವರು? ತಾವು ಸ್ವರ್ಗದಿಂದ ಬಂದೆವೋ ಅಥವಾ ಸ್ವರ್ಗಕ್ಕೆ ಹೋಗುತ್ತಿರುವೆವೋ ಎಂಬ ಸಂದೇಹ ಅವರಲ್ಲಿ ಮೂಡುತ್ತದೆ. ಸ್ವರ್ಗ ಸ್ಥಾನ ಬದಲಾಯಿಸಿತೋ ಎಂಬ ಭ್ರಮೆ ಅವರಿಗುಂಟಾಗುತ್ತದೆ. ಬೆರಗುಗೊಂಡು ಅಲ್ಲೇ ನಿಂತು ಸಂದೇಹಾತ್ಮಕವಾಗಿ ಹೇಳುತ್ತಾರೆ :

“ ಏನು ಕಾಂತಿಯಿದು ಏನು ಶಾಂತಿ ಈ ತುಂಗ ಶೃಂಗದಲ್ಲಿ !
ಅವಲೋಕದಾಲೋಕವಿದು ನಮ್ಮನೊಸಗೆ ಕರೆವುದಿಲ್ಲಿ ?
ಮರ್ತ್ಯಲೋಕವಲ್ಲವಿದು ದಿವ್ಯಧಾಮವದೊ ನೋಡು, ಬೆಳಗುಮೆಯ್ಯ
ಪುಣ್ಯ ಮೂರ್ತಿಗಳು ಕೀರ್ತಿಧವಳರೆನೆ ಹರಸಲೆತ್ತಿ ಕಯ್ಯ
ಸಾಲು ಸಾಲರಳಿ ಹಾಲುರುಳಿದಂತೆ ಮಿಂಚಿ ಮೆರೆವರಯ್ಯ”

ಅವರು ಹಾಗೆ ಆಶ್ಚರ್ಯದ ಮುದ್ದೆಗಳಂತೆ ನಿಂತಿರಲು ಭಾರತೀಯರ ಒಕ್ಕೊರಲಿನಿಂದ ಕೂಗುವ “ ವಂದೇ ಮಾತರಂ ” ಎಂಬ ನಿನದ ಕೇಳಿ ಬರುತ್ತದೆ. ಆ ಉಲಿಯಿಂದ ಸಮ್ಮೋಹಿತರಾಗಿ ಫೇಣಿವೀಚಿಗಳಂತೆ ಸಾಲುಸಾಲಾಗಿ ನಿಂತಿರುವ ಅಮರರು ಆನಂದೋತ್ಸಾಹರಾಗಿ ತಾವೂ ಹಾಡಲು ಪ್ರಾರಂಭಿಸುತ್ತಾರೆ :

“ ಸುರರ ಕೊರಳುಲಿಗೆ ನರರ ಕೊರಳುಲಿಯ ನೆರೆದು ಉಲಿವ ವಂದೆ !
ಮಾತರಂ ವಂದೆ ! ಮಾತರಂ ವಂದೆ ! ಮಾತರಂ ವಂದೆ ! ”

ಆಗಸ್ಟ್ ೧೫ !

ಸ್ವರ್ಗ ಮರ್ತ್ಯಗಳು ಒಂದಾಗಿವೆ. ಮಾನವರ, ದೇವತೆಗಳ ನಡುವಣ ಅಂತಃಪಟ ಕಳಚಿಬಿದ್ದಿದೆ. ಸ್ವರ್ಗವೀಣೆ ಮಿಡಿಯುತ್ತಿದೆ ; ಮರ್ತ್ಯಕಂಠ ಹಾಡುತ್ತಿದೆ. ಈ ಸೋಜಿಗವನ್ನು ಪ್ರಪಂಚವೇ ನೋಡುತ್ತಿದೆ. ಕೊನೆಗೆ ವಿಶ್ವವಾಣಿ ಮೊಳಗುತ್ತದೆ :

“ ಶ್ರೀದಿನಂ, ದಿಟವಿದು ಮಹಾದಿನಂ, ವಿರಾಡ್ ದಿನಂ :
ಭಾರತ ಸ್ವಾತಂತ್ರ್ಯ ಪುಣ್ಯೋದಯ ದಿನಂ !
ಶ್ರೀಮನ್ ಮಹಾದಿನಂ, ಭಗವದ್‌ದಯಾದಿನಂ,
ದಿಟವಿದು ವಿರಾಡ್‌ದಿನಂ !”

ಹಾಡುತ್ತ ಹಾಡುತ್ತ ಭಾರತೀಯರು ಮೆಲ್ಲನೆ ರಾಷ್ಟ್ರಧ್ವಜವನ್ನು ಮೇಲೆತ್ತುತ್ತಾರೆ. ಬೀಸುಗಾಳಿಗೆ ಸಿಲುಕಿದ ರುದ್ರನ ಜಟೆಯಂತೆ ರಾಷ್ಟ್ರಧ್ವಜ ತುಯ್ದಾಡುತ್ತದೆ. ಬಾವುಟವನ್ನು ಹೊತ್ತು ಮುಂದೆ ನಡೆದ ಭಾರತೀಯರು ಹಾಡಲು ಪ್ರಾರಂಭಿಸುತ್ತಾರೆ :

" ಕದಿರ ಕೈದುವನಾಂತು ಕತ್ತಲೆಯನೊತ್ತಿ ಬಾ ;
ಜನ ಹೃದಯಹೊಲದಲಿ ಅಹಿಂಸೆಯಂ ಬಿತ್ತಿ ಬಾ ;
ಲೋಕಕೆ ಅಶೋಕ ಸಂದೇಶಮಂ ಸಾರಿ ಬಾ ;
ಧರ್ಮಕ್ಕೆ ! ಸತ್ಯಕ್ಕೆ !
ನಾವೆತ್ತಿದೀ ಧ್ವಜಂ !
ಪುಣ್ಯಕ್ಕೆ ! ಪ್ರೇಮಕ್ಕೆ !
ತಾನಕ್ಕೆ ಬಲ್ ಭುಜಂ ! "

ಮೈಮರೆತು ದೇವತೆಗಳೂ ಈ ಹಾಡನ್ನು ಹಾಡುತ್ತಿದ್ದಾರೆ. ಮೆರವಣಿಗೆ ಮುಂದೆ ಹೊರಡುತ್ತದೆ. ಕವಿ ಹಿಂದಿನಿಂದ ಅದನ್ನು ನೋಡುತ್ತಾನೆ. ತನ್ನ ಕುಣಿತ ವನ್ನು ನಿಲ್ಲಿಸುತ್ತಾನೆ. ಆ ಗುಂಪಿನಲ್ಲಿ ಅವನು ಯಾರನ್ನೋ ಹುಡುಕುತ್ತಾನೆ; ಯಾರನ್ನೋ ನೆನೆಯುತ್ತಾನೆ; ತಕ್ಷಣ ಅವನ ಉತ್ಸಾಹ ಇಳಿದು ಹೋಗುತ್ತದೆ; ಕಂಠ ಗದ್ಗದಿತವಾಗುತ್ತದೆ. ಕಣ್ಣುಗಳಿಂದ ಹನಿ ಒಸರುತ್ತದೆ. ಅವನ ಬಾಯಿಂದ ಅವನಿಗರಿ ವಿಲ್ಲದೆಯೇ ಈ ನುಡಿಗಳು ಹೊರಬೀಳುತ್ತವೆ:

" ಮರೆವುದೆಂತಾ ನಮ್ಮ ಸ್ವಾತಂತ್ರ್ಯ ಶಿಲ್ಪಿಯಂ
ದಿವ್ಯ ದಿನದೀ ಮುಹೂರ್ತದಲ್ಲಿ ?
ಮರೆವುದೆಂತಯ್ ಭುವನ ಗೌರವ ಮಹಾತ್ಮನಂ
ಸ್ವಾತಂತ್ರ್ಯದೀ ಸುಪ್ರಭಾತದಲ್ಲಿ ?
ಹೆಜ್ಜೆ ಹೆಜ್ಜೆಯನಿಡಿಸಿ ಕೈಹಿಡಿದು ನಡೆಗಲಿಸಿ
ಬಿಡುಗಡೆಗೆ ತಂದ ಆ ತಂದೆಯೆಲ್ಲಿ ?
ಎಲ್ಲಿ ? ಓ ಅವನೆಲ್ಲಿ ? ನಿಚ್ಚವೂ ನಮ್ಮೆದೆಯ
ನಂಜೀಂಟುವಾ ನೀಲಕಂಠನೆಲ್ಲಿ ? "

ಕವಿ ಮುಖ ಮುಚ್ಚಿಕೊಳ್ಳುತ್ತಾನೆ; ಬಿಕ್ಕಿಬಿಕ್ಕಿ ಅಳುತ್ತಾನೆ. ಮತ್ತೆ ಕೈ ಎತ್ತಿ ಆಗಸವನ್ನು ದಿಟ್ಟಿಸಿ, ಏನೋ ಕಂಡವನಂತೆ ಕೂಗಿಕೊಳ್ಳುತ್ತಾನೆ.

" ಓ ಮಹಾತ್ಮನೆ, ನಿನ್ನ ಸಾನ್ನಿಧ್ಯ ತೀರ್ಥದಲಿ
ಮಾನವನ ಮೋಹ ಮದ ಮಾತ್ಸರ್ಯಗಳು ಮಿಂದು
ಪ್ರೇಮದಿ ಪುನೀತವಾಗಿಹವು! ಸುಮುಹೂರ್ತದಲಿ
ಭಾರತಾಂಬೆಯ ಸಿರಿವಸಿರಿನಿಂದಲ್ಲೈತಂದು
ಧರ್ಮದಲಿ ನೆಚ್ಚುಗೆಡುತಿದ್ದೆಮಗೆ ನೀನಿತ್ತೆ,
ಪ್ರಚ್ಛನ್ನ ಕಲ್ಕಿಯೆ, ದೃಢ ಭಕ್ತಿಯನು ಮತ್ತೆ! "

ಮುಂದೆ ನಡೆದು ಹೋಗುತ್ತಿರುವ ಗೆಳೆಯರ ಸ್ವಾತಂತ್ರ್ಯ ಪ್ರಗಾಥಾ ಕವಿಗೆ ಕೇಳಬರುತ್ತದೆ. ಯಾವುದೋ ಕನಸು ಕಂಡು ಎಚ್ಚೆತ್ತವನಂತೆ ಮೈ ಕೊಡವಿ, ಕಣ್ಣು

ಗಳನ್ನೊರಸಿ, ನಿಧಾನವಾಗಿ ಹಾಡುತ್ತಾನೆ :

"ಗಾಂಧಿಯೆಂಬಾ ಪೆಸರೆ ನಾಂದಿಯಾಗಲಿ ನಮ್ಮ
ಸ್ವಾತಂತ್ರ್ಯ ಸಂಭ್ರಮಕೆ; ಹಾಡು, ಪಕ್ಷಿ"

ಅವನು ಹಾಡುತ್ತಿದ್ದಂತೆ ಮತ್ತೆ "ತಿರೆಯು ತಟ್ಟಿದಂತೆ ಬಂತು ಜನಸಮುದ್ರ ಘೋಷ!" ಕವಿ ಪುಲಕಿತನಾಗುತ್ತಾನೆ. ಜಡದೇಹ ಮತ್ತೆ ಲಘುವಾಗುತ್ತದೆ. ಮತ್ತೆ ಮತ್ತೆ ಅದೇ ಘೋಷ "ವಂದೇ ಮಾತರಂ! ವಂದೇ ಮಾತರಂ!" ಕವಿ ತಲೆ ಮೇಲೆತ್ತುತ್ತಾನೆ. ದೇವತೆಗಳೂ ಹಾಡುತ್ತಿದ್ದಾರೆ. ಕುಣಿಯುತ್ತ ಹಾಡುತ್ತಿದ್ದಾರೆ, "ವಂದೇ ಮಾತರಂ, ವಂದೇ ಮಾತರಂ."

"ಏನು ಘೋಷ! ಏನು ತೋಷ! ಏನು ಆವೇಶ!
ದೇವವೃಂದ ಸಹಿತ ಬಂದ ಇಂದ್ರ ರುಂದ್ರ ಘೋಷ!"

ಸ್ಫೂರ್ತಿಗೊಂಡು ಕವಿ ಹಾಡಲು ಪ್ರಾರಂಭಿಸುತ್ತಾನೆ.

"ಏಳು ತಾಯಿ, ಬಾಳು ತಾಯಿ, ಜಗತ್ ಕಲ್ಯಾಣಿ:
ಯುಗಯುಗಾಯು ಜಗವನಾಳು, ಧರ್ಮಚಕ್ರಪಾಣಿ;
ದಿಗ್ ದಿಗಂತ ರಣಿತಮಕ್ಕೆ ನಿನ್ನ ದಿವ್ಯವಾಣಿ;
ಸುಕೃತದಿಂದೆ ಎದ್ದು ನಿಂದೆ; ನಡೆ ಮುಂದೆ, ರಾಣಿ!"

ಕವಿಯ ಗೆಳೆಯರ ಗುಂಪು ಬಾವುಟ ಹಾರಿಸುತ್ತ ದೂರದಲ್ಲಿ ಹೋಗುತ್ತಿದೆ. ಆ ಗುಂಪನ್ನು ದಿಟ್ಟಿಸುತ್ತಿದ್ದಂತೆ ಕವಿಯ ಕಣ್ಣುಗಳಲ್ಲಿ ಹೊಸ ಬೆಳಕು ಮೂಡುತ್ತದೆ. ಮತ್ತೆ ಕುಣಿಯುತ್ತ, ತಾಳ ಹಾಕುತ್ತ ಕವಿ ಆ ಗುಂಪನ್ನು ಹಿಂಬಾಲಿಸುತ್ತಾನೆ.

"ಶಾಂತಿ ಸತ್ಯ ಮುಕ್ತಿ ಧರ್ಮ ತತ್ತ್ವಮಹೋದಾತ್ತೆ
ಕಾವ್ಯ ಶಿಲ್ಪ ನೃತ್ಯ ಗಾನ ಸಕಲ ಕಲಾವೇತ್ತೆ
ಶ್ರದ್ಧೆಯಾಗಿ ಬುದ್ಧಿಯಾಗಿ, ತಪಸ್ ಶಕ್ತಿಯಾಗಿ,
ಭಗವದಾತ್ಮಸಿದ್ಧಿಗಾಗಿ ಪರಾಭಕ್ತಿಯಾಗಿ,
ನಡಸು ನಮ್ಮನ್ನೆಲ್ಲ, ಅಮ್ಮ, ಪೂರ್ಣ ಯೋಗಕಾಗಿ!"

ದೂರದಿಂದ ಕೇಳಿ ಬರುತ್ತದೆ: "ಮಾತರಂ ವಂದೆ! ಮಾತರಂ ವಂದೇ! ಮಾತರಂ ವಂದೇ!" ದೇವತೆಗಳೂ ಅದೇ ಉದ್ಗಾರವೆತ್ತಿದ್ದಾರೆ. ಕವಿ ಮತ್ತೆ ಆವೇಶದಿಂದ ಕೈಗಳನ್ನು ನಾಲ್ಕೂ ದಿಕ್ಕಿಗೂ ತಿರುಗಿಸುತ್ತ ಕಣ್ಮುಚ್ಚಿ ಕೂಗಿ ಹೇಳುತ್ತಾನೆ :

"ಸಾರಿ ಬಾ ಸರ್ವರ್ಗೆ ಸ್ವಾತಂತ್ರ್ಯಮಂ;
ಸಾರಿ ಬಾ ಸರ್ವರ್ಗೆ ಸಾಮ್ಯತ್ವಮಂ;
ಸರ್ವರ್ಗೆ ಸಾರಿ ಬಾ ಸೌಹಾರ್ದಮಂ;
ಸರ್ವ ಲೋಕದ ಸರ್ವ ಸಂತೋಷಮಂ;
ಸರ್ವರಿಂ, ಸರ್ವರಾ ಉದ್ಧಾರಮಂ!"

ಕವಿಯ ಈ ಹಾಡು ಕೇಳಿ ದೇವತೆಗಳ ಕಣ್ಣುಗಳಿಂದ ಆನಂದಾಶ್ರುಗಳು ಮಿಡಿಯುತ್ತವೆ. ಅವೇ ಸುವಾಸನಾಪೂರಿತ ಬಿರಿ ಮುಗುಳುಗಳಾಗಿ, ರಾಷ್ಟ್ರ ಧ್ವಜ ಹೊತ್ತು ರಾಷ್ಟ್ರ ಗೀತೆ ಹಾಡುತ್ತ ಹೊರಟಿರುವ ಭಾರತೀಯರ ಮೇಲೆ ಬಂದು ಬೀಳುತ್ತವೆ.

ಕವಿ ಮೇಲೆ ನೋಡುತ್ತಾನೆ. " ಓ! " ಎಂದು ಹುಚ್ಚನಂತೆ ಕೂಗುತ್ತಾನೆ. ಭಾರತೀಯರು ವೃತ್ತಾಕಾರದಲ್ಲಿ ರಾಷ್ಟ್ರ ಧ್ವಜದ ಸುತ್ತಲೂ ನಿಲ್ಲುತ್ತಾರೆ. ಸುಯ್ಯೆಂದು ಗಾಳಿ ಬೀಸಿದಂತೆ ಧ್ವಜ ತೊನೆದಾಡುತ್ತದೆ. ಕವಿ ಕೈಮುಗಿದು ರಾಷ್ಟ್ರಧ್ವಜದ ಸುತ್ತಲೂ ಕುಣಿಯುತ್ತ ವೈಮರೆತು ಹಾಡುತ್ತಾನೆ:

" ನಮೋ ದೇವಿ ! ನಮೋ ತಾಯಿ ! ನಮೋ ಭರತಮಾತೆ ,
ಅಸಾಮಾನ್ಯೆ, ಲೋಕಮಾನ್ಯೆ, ಧನ್ಯೆ ಭಾಗ್ಯದಾತೆ !
ನಮಸ್ ಸತ್ಯೆ, ನಮೋ ನಿತ್ಯೆ, ನಮೋ ಜಗನ್ಮಾತೆ ! "

ಸುತ್ತಲೂ ನೆರೆದಿರುವ ಜನ ಅದೇ ಹಾಡನ್ನು ಹಾಡುತ್ತದೆ. ದೇವತೆಗಳೂ ಅದೇ ಹಾಡನ್ನು ಹಾಡುತ್ತ ಆಗಸದಲ್ಲೇ ರಿಂಗಾಣ ಹಾಡಲು ಪ್ರಾರಂಭಿಸುತ್ತಾರೆ. ಇವರಿಬ್ಬರ ಹಾಡಿಗೆ ನೃತ್ಯ ಮಾಡುತ್ತಿರುವುದೇನೋ ಎಂಬಂತೆ ತ್ರಿವರ್ಣ ರಾಷ್ಟ್ರಧ್ವಜ ಗಾಳಿಯಲ್ಲಿ ತೊನೆದಾಡುತ್ತದೆ.

ಈ ನುಡಿಚಿತ್ರದಲ್ಲಿ ಶ್ರೀ ಕುವೆಂಪು ಅವರ 'ಸ್ವಾತಂತ್ರ್ಯೋತ್ಸವ ಮಹಾಪ್ರಗಾಥಾ'ದ ಸಾಲುಗಳನ್ನು ಬಳಸಿಕೊಂಡಿದೆ.



# ಕುವೆಂಪುರವರ 'ಕೃತ್ತಿಕೆ'

## ಪ. ಮಲ್ಲೇಶ್

ಕುವೆಂಪುರವರ ಕೃತ್ತಿಕೆಯಲ್ಲಿ ಎಪ್ಪತ್ತೈದು ಕವನಗಳೂ ಅಷ್ಟಷಟ್ಪದಿಯದಾಗಿದೆ (Sonnet) ಇಂಗ್ಲಿಷ್ ಸಾಹಿತ್ಯದಿಂದ ನಮ್ಮ ಸಾಹಿತ್ಯ ಭಂಡಾರಕ್ಕೆ ಬಂದ ಈ ಹೊಸ ಬಗೆ ಈಗ ಸುನೀತ ಎಂಬ ಹೆಸರು ಹೊತ್ತು ಪ್ರಚಾರದಲ್ಲಿದೆ. ಹೆಸರು ಸೂಚಿಸುವಂತೆ ಇದು ಹದಿನಾಲ್ಕು ಸಾಲಿನ ಕವನ. ಕವಿ ತನ್ನೆಲ್ಲ ಅನುಭವಗಳನ್ನು ಈ ಹದಿನಾಲ್ಕೇ ಸಾಲುಗಳಲ್ಲಿ ತುಂಬಬೇಕು. ಇದು ಕಷ್ಟಾದೆನಿಸಿದರು, ಚತುರತೆ ವಹಿಸಿ ಬರೆದು ಮುಗಿಸಿದಲ್ಲಿ ಬೇರೆ ರೀತಿಯ ಕವನಗಳಲ್ಲಿ ಸಿಗುವ ಕಾವು ತೀವ್ರತೆ ಇಲ್ಲಿಯೂ ಸಿಗುತ್ತದೆ. ಇದರ ವೈಶಿಷ್ಟ್ಯವೆಂದರೆ; ಸದ್ಯದ ಮೊದಲೆರಡು ಸಾಲುಗಳಲ್ಲಿ ಮೂಡಿರುವ ಭಾವ, ಕೊನೆಯ ಆರು ಸಾಲುಗಳಲ್ಲಿ ವಿಸ್ತಾರವಾಗಿ ಬೆಳೆಯುವುದೇ ಆಗಿದೆ. ಇಂಗ್ಲೀಷ್ ಸಾಹಿತ್ಯದಲ್ಲಿ ಇದು ಷೇಕ್ಸ್‌ಪಿಯರ್ ಸಾನೆಟ್ಟುಗಳಾಗಿ, ಮಿಲ್ಟನ್ ಸಾನೆಟ್ಟುಗಳಾಗಿ, ವರ್ಡ್ಸ್‌ವರ್ತ್ ಸಾನೆಟ್ಟುಗಳಾಗಿಯೇ ಬೆಳದಿರುವಂತೆ ನಮ್ಮಲ್ಲಿಯೂ ಹೊಸ ರೂಪಕ್ಕೆ ಹದಿನಾಲ್ಕು ಸಾಲುಗಳಾಗಿ ಕಂಡುಬಂದರೂ ರಚನೆಯಲ್ಲಿ ವೈವಿಧ್ಯತೆಯನ್ನು ಪಡೆದಿದೆ. ಇದಕ್ಕೆ ಸಾಕ್ಷಿ ಎಂದರೆ, ಕವಿಗಳಾದ ಶ್ರೀನಿವಾಸರು, ಬೇಂದ್ರೆಯವರು, ಪುಟ್ಟಪ್ಪನವರು ಬರೆದಿರುವ ಕೃತಿಗಳು,

ಕೃತ್ತಿಕೆಯಲ್ಲಿರುವ ಕವನಗಳನ್ನು ಮೂರು ವಿಭಾಗವಾಗಿ ವಿಂಗಡಿಸಬಹುದು. ೧. ಪ್ರಕೃತಿಯ ನೆಲೆವೀಡಾದ ಮಲೆನಾಡಿನ ಅನೇಕ ತಾಣಗಳನ್ನು ಕವಿ ಕಂಡು ಆದ ಅನುಭವದಿಂದ ಹೊರಹೊಮ್ಮಿದ ಕಾವ್ಯವಾಹಿನಿ. ೨, ನಾಡಿನ ಏಳ್ಗೆಗಾಗಿ ಬಾಳಿ ಗತಿಸಿದ ಮಹಾವ್ಯಕ್ತಿಗಳನ್ನು ನೆನಪುಮಾಡಿಕೊಡುವ ಕವನಗಳು. ೩. ಬಾಳಿನ ಬಹು ಮುಖಗಳನ್ನು ಚಿತ್ರಿಸುವ ಕವನಗಳು ಎಂದು.

ವಾಸ್ತವ ಜಗತ್ತಿನಿಂದ ನೇರವಾಗಿ ಕಲೆ ಜನ್ಮವೆತ್ತುವುದಿಲ್ಲ. ವಾಸ್ತವಿಕತೆಯ ತುಟ್ಟ ತುದಿಯಲ್ಲಿ ನಿಂತು. ಬೇರೊಂದು ಪ್ರಪಂಚವನ್ನು ಕಣ್ಣು ಕಂಡಾಗ ಆದ ಪ್ರತಿಕ್ರಿಯೆ ಹೊರಚಿಮ್ಮಿದಾಗ ಕಲೆ ನಿರ್ಮಾಣವಾಗುತ್ತೆ. ಆ ಬೇರೊಂದು ಪ್ರಪಂಚವೇ ಕವಿಪ್ರಪಂಚ. ಆ ಪ್ರತಿಕ್ರಿಯೆ, ಒಬ್ಬ ಶಿಲ್ಪಿಯಾಗಿ ಹೊರಬರಬಹುದು, ಕವಿಯಾಗಿ ಜನ್ಮವೆತ್ತಬಹುದು, ಚಿತ್ರಗಾರನಾಗಿ ಮೈವೆತ್ತಬಹುದು, ಸಂಗೀತದ ಸುಧೆಯುಣಿಸುವ ಸಂಗೀತಗಾರನೂ, ಕೊಳಲಾಗಿ, ವೇಣಿಯಾಗಿ ಕಾಣಿಸಿಕೊಳ್ಳಬಹುದು. ಇವೆಲ್ಲ ಕಲೆಯ ಬಹುಮುಖಗಳೆ. ಇವೆಲ್ಲಕ್ಕು ವಾಸ್ತವಜಗತ್ತಿನ ವಸ್ತುಗಳೇ ಮೂಲಾಧಾರ. ಈ ವಾಸ್ತವಿಕತೆ ಕಲೆಯ ಹುಟ್ಟಿ. ಆದರೆ ಈ ವಸ್ತುವೇ ಕಲೆಯಲ್ಲ. ಶಿಲ್ಪಿಗೆ ಸಿಕ್ಕ ವಾಸ್ತವಿಕ ಪ್ರಪಂಚದ ಕಲ್ಲಿಗೆ ತನ್ನ ಕಲಾಪ್ರೌಢಿಮೆಯ ಉಳಿಯ ಪೆಟ್ಟು ಬಿದ್ದಾಗಲೇ ಅದು ವಾಸ್ತವಿಕೆಯಿಂದ ಹಾರಿ ಕಲಾಪ್ರಪಂಚವನ್ನು ಸೇರುವುದು. ಕಲ್ಲನ್ನೇ ಕಲೆ

ಯೆಂದರೆ ಯಾರೂ ಒಪ್ಪುವುದಿಲ್ಲ. ಕಾವ್ಯದ ಜಗತ್ತಾದರೊ ಹೀಗೇನೆ. ಕವಿ ಯಾದವನಿಗೆ ಸಾಮಾನ್ಯ ಮನುಷ್ಯನಿಗಿಂತ ಒಂದು ಕಣ್ಣು ಜಾಸ್ತಿ ಇರುತ್ತದೆ. ಈ ಕಣ್ಣನ್ನೇ ಮುಕ್ಕಣ್ಣನ ಮೂರನೇ ಕಣ್ಣು ಎಂದು ಹೇಳುವುದು. ಇದಕ್ಕೆ ಪ್ರಬಲ ಕಾರಣವೆಂದರೆ ಮೂಲವಸ್ತುವನ್ನು ನಾಶಗೊಳಿಸದೆ ಹೊಸರೂಪ ಕೊಡುವ ಶಕ್ತಿ ಆ ಕಣ್ಣಿಗೆ ಇದೆ. ಸಾಮಾನ್ಯರ ಕಣ್ಣು ಬೆಳದಿಂಗಳನ್ನು ಕಂಡು ಸಂತೋಷಪಟ್ಟು ಸುಮ್ಮನಾದರೆ ಕವಿಯ ಕಣ್ಣು, ಕಂಡು ಆನಂದಪಟ್ಟು ಹಾಡುತ್ತದೆ. ಅದಕ್ಕೊಂದು ಹೊಸಕಳೆ ಕೊಡುತ್ತದೆ. ಮುಗಿಲಿನಿಂದ ಜಗಕ್ಕೆಲ್ಲವೂ ಪ್ರಸರಿಸುವ ಬೆಳಕನ್ನು, ತನ್ನ ಕಾವ್ಯವಾಹಿನಿಯಲ್ಲಿ ಹಿಡಿದು ಜನರ ಮನಕ್ಕೆಲ್ಲ ಹರಿಸುತ್ತಾನೆ. ಏಳು ಸುತ್ತಿನ ಮಲ್ಲಿಗೆಯ ಪರಿಮಳವನ್ನು ಮೂಗಿಗೇರಿಸಿಕೊಂಡು ಸಾಮಾನ್ಯ ವ್ಯಕ್ತಿ ಸುಮ್ಮನೆ ಹೋದರೆ, ಕವಿ ನಿಂತು ಅದರ ಬೆಡಗನ್ನು ಕಂಡು, "ಇಷ್ಟು ಹಚ್ಚಿನ ಹಸುರ ಗಿಡದಿಂ ಎಂತು ಮೂಡಿತು ಬೆಳ್ಳಗೆ" ಎಂದು ಅದರ ಹುಟ್ಟನ್ನು ಕೆದಕಿ ಆನಂದವನ್ನುಂಟುಮಾಡುತ್ತಾನೆ. ಅಲ್ಲದೆ ಕವಿ ಆನಂದದ ಜೊತೆಗೆ ಸತ್ಯವನ್ನು ತೆರೆದು ತೋರಿಸುತ್ತಾನೆ. ಅವನು ಬಾಳಿನ ಕಸದಲ್ಲಿಯೂ ರಸವನ್ನು ಕಾಣುತ್ತಾನೆ. ಹುಲ್ಲಿನಲ್ಲೂ ಬ್ರಹ್ಮಾಸ್ತ್ರದ ಶಕ್ತಿಯನ್ನು ತುಂಬುತ್ತಾನೆ. ಇವೆಲ್ಲವನ್ನು ಹೊತ್ತು ತಪಸ್ಸುಮಾಡಿ ದಾರ್ಶನಿಕನಾದಲ್ಲಿ ಕವಿ ರಸಮಯ, ಆನಂದಮಯ ಸಾಗರದಲ್ಲಿ, ಬಾಳಿನ ಎಲ್ಲ ಎಡರುತೊಡರುಗಳನ್ನು ದಾಟಿ ಭಗವತ್ ಸ್ವರೂಪವನ್ನು ಕಾಣುತ್ತಾನೆ.

ಈ ಜಾಡಿನಲ್ಲಿ ನಡೆದವರು ಶ್ರೀ ಪುಟ್ಟಪ್ಪನವರು, ಇವರು ಹೆಚ್ಚಾಗಿ ಪ್ರಕೃತಿ ಕವಿ (Nature poet). ಪ್ರಕೃತಿಯ ಕೂಸಾಗಿ ಅವಳ ಮಡಿಲಲ್ಲಿ ಮಲಗಿ ; ಸೌಂದರ್ಯ ಸತ್ಯ ಸುಖಾನುಭವಗಳನ್ನು ಅನುಭವಿಸಿ ಬೆಳೆದು ನಿಂತ ಕವಿ. ಪ್ರಕೃತಿಯ ಎಲ್ಲ ವಸ್ತುಗಳ ರಸಮಯ ಸಾಮೀಪ್ಯವನ್ನು ಪಡೆದವರು. ಅಲ್ಲದೆ ನಿಸರ್ಗದೊಡಲಿನಲ್ಲಿ ಹೊಕ್ಕು ಪರಮಾತ್ಮ ಸ್ವರೂಪವನ್ನು ಅರಸುತ್ತಿರುವವರು.

ಅವರ ಮೊದಲನೆಯ ಪದ್ಯದಲ್ಲಿಯೇ ವೈಶಾಖ ಪಾಡ್ಯಮಿಯ ಬೆಳ್ದಿಂಗಳನು ಹೀರಿ ಗಿರಿಪಂಕ್ತಿ, ವನರಾಜ, ಬುವಿಬಾನು, ಮುಗಿಲೆಲ್ಲವೂ ಜೋಂಪಿಸುತ್ತಿರುವುದನ್ನು ನೋಡಿ ಆನಂದಪರವಶರಾಗಿದ್ದಾರೆ, ಅಲ್ಲಿ ವೈವೆತ್ತ ಶಾಂತಿಯನ್ನು ಕಂಡು ಕವಿ ತನ್ನ ಪ್ರಿಯ ಬಂಧುವನ್ನು ಆ ರಸಮಯ, ಆನಂದಮಯ ಚಂದ್ರಿಕಾ ಸ್ವಪ್ನದಲ್ಲಿ ತೇಲುತ್ತಿರುವ ಜಗತ್ತಿಗೆ ಕರೆದೊಯ್ದು ನಮ್ಮನ್ನೂ ತೇಲಿಬಿಡುತ್ತಾರೆ. ಅಲ್ಲದೆ,

"ಪ್ರಿಯ ಬಂಧು, ಇದೆ ಹೊತ್ತು ಧ್ಯಾನಕ್ಕೆ; ಹೃದ್ಗ್ರಂಥಿ
ಪ್ರಳಯಕ್ಕೆ; ಏಳು ಸಮಾಧಿಸ್ಥಾ ವಿಶ್ವದಲ್ಲಿ
ತಲ್ಲೀನವಾಗುವಂ, ಛವಿ ರವಿಯೊಳಾಗುವಂತೆ!"

[ವೈಶಾಖ ಪಾಡ್ಯಮಿ]

ಎಂದು ಆಹ್ವಾನಿಸುತ್ತಾರೆ.

ಇನ್ನು ತಮ್ಮ ತಾಯಿನಾಡಿನ ತಾಣಗಳ ಸುಗಾಢ ಪರಿಚಯ ನಮಗೆ ಆಗುತ್ತದೆ. ಇದಕ್ಕಿಂತ ಮುಂಚೆ, ಅವರ 'ಮಲೆನಾಡಿಗೆ' ಎಂಬ ಕವನದಲ್ಲಿ, ಬೇರೆ ನಾಡಿನ ಜನರು ಹೊಗಳಿದಂತೆ ಹೊಗಳಲು ಬಂದ ತಮ್ಮ ತಾಯಿ ಮಲೆನಾಡನ್ನು—

"ತಾಯಿಯಾಗಿರು ಸಾಕು, ನಾನು ಹಸುಳೆಯು ನಿನಗೆ
ಜನರ ಹೊಗಳಿಕೆಯಿಂದ ತಲೆ ತುಂಬುಪುದು ಹೆಮ್ಮೆ."

ಎಂದು ಮನುಷ್ಯನ ಸಹಜ ಪ್ರವೃತ್ತಿಯನ್ನು ಚಿತ್ರಿಸಿದ್ದಾರೆ.

"ತಂದೆಯ ಬರಿಬಯಲು ಹೊಗಳಿಕೆ ಸಾಕೆ
ನಿನ್ನ ಕವಿ ಶಿಶುವಿಗೆ ?...."

ಎಂದು ಹೊಗಳಿಕೆಗೆ ಬೇಸತ್ತು ತಾಯ ಸಾನ್ನಿಧ್ಯದ ನಿಷ್ಕಲ್ಮಷ ಪ್ರೇಮವನ್ನು ಬೇಡುತ್ತಾರೆ. ಅಷ್ಟು ಪ್ರೀತಿ ತಮ್ಮ ಮಮತೆಯ ಹುಟ್ಟಿದೂರಿನ ಮೇಲೆ !

ಕವಿ ಹರಿವ ತುಂಗೆಯನ್ನು ನೋಡಿ, ತುಂಗೆಯ ಅಲೆಗಳು ಕಲ್ಲಿಗೆ ಅಪ್ಪಳಿಸಿ ನೊರೆಯುತ್ತು ಚಿಲ್ಲುತ್ತ ನುಗ್ಗುವುದನ್ನು ನೋಡಿ, ಸಂಜೆಯ ಬಂಗಾರದ ಬಣ್ಣದಲ್ಲಿ ಮಿಂದ ಮಳಲರಾಶಿಯನ್ನು ನೋಡಿ ಹಾಡಿರುವುದನ್ನು ನೋಡಿ:

"ಎಲ್ಲವೂ ಚಿರಚಿತ್ರಗತವಾದವೊಲು ತೋರಿ
ಸ್ಥೂಲ ಜಡವೆಂಬ ವಾಸ್ತವತೆ ಮನದಿಂ ಮಾಸಿ
ಕಣಸಾಗಿ ಮೂಡುತಿದೆ; ವಿಶ್ವಕವಿವರನ ಕಾವ್ಯಂ
ಭುವನವಿದು. ಸುರಗಾನದಾ ಛಂದಸನೆ ಸಾರಿ
ಹರಿಯುತಿದೆ ಹೊಳೆ...."

[ತೀರ್ಥಹಳ್ಳಿಯ ರಾಮತೀರ್ಥದಲ್ಲಿ]

ಕವಿ ಪ್ರಕೃತಿಯನ್ನು ನೋಡಿರುವ ಕಣ್ಣು ಎಷ್ಟು ಮಹತ್ವದ್ದಾಗಿದೆ !

'ಶಿವ ಕಾಣದ ಕವಿ ಕುರುಡನೊ; ಶಿವ ಕಾವ್ಯದ ಕಣ್ಣೊ' ಎಂದು ಸಾರಿರುವ ಕವಿ ಕುವೆಂಪು ರವರು ಪ್ರಕೃತಿಯ ಜಡ ಚೇತನ ವಸ್ತುಗಳೆಲ್ಲದರಲ್ಲೂ ಶಿವತ್ವವನ್ನು ಕಾಣುತ್ತಾರೆ. ನಿಸರ್ಗದಲ್ಲಿ ಅಡಗಿರುವ ಪರಮಾತ್ಮಸ್ವರೂಪವನ್ನು ತಮ್ಮ ಅನುಭಾವ ಕಣ್ಣಿನಿಂದ ನೋಡಿ, ಅನುಭವಿಸಿ ಅಲ್ಲಿಯ ಅನಂತತೆಯನ್ನು ಪ್ರತಿಮಾ ವಿಧಾನದಿಂದ ಚಿತ್ರಿಸಿದ್ದಾರೆ. ಕವಿ ಅನುಭಾವಿಯಾದಲ್ಲಿ ಜಡತ್ವದಲ್ಲಿಯೂ ಹೇಗೆ ಚೇತನವನ್ನು ಗುರುತಿಸುತ್ತಾನೆ ಎಂಬುದನ್ನು ತಮ್ಮ ಕವಿತಾ ಸಾಮರ್ಥ್ಯದಿಂದ ಎತ್ತಿ ತೋರಿಸಿದ್ದಾರೆ.

"ಪ್ರಕೃತಿ ಕಲೆಗಿಂ ಮಿಗಿಲೆ ನರಕೃತಿಯ ಕಲೆ?" ಎಂದು "ಮೋಡ" "ಅರಳೆ ರಾಶಿಗಳಂತೆ, ಬೆಣ್ಣೆ ಬಂಡೆಗಳಂತೆ, ಫೇನ ಮೃದು ರಜತಗಿರಿ ಶಿಖರ ಪದ್ಮಗಳಂತೆ ಕಡೆದ ಹಾಲ್ಗಡಲೆದ್ದು ಸಾಲ್ಗೊಂಡಲೆಗಳಂತೆ ಶೋಭಿಸುತ್ತಿರುವುದನ್ನು ನೋಡಿ ಅವುಗಳಲ್ಲಿ ಕವಿಯಕಣ್ಣು ಗುರುತಿಸಿರುವ ಚೇತನ ಪ್ರತಿಮೆಗಳು ಎಷ್ಟು ಭವ್ಯವಾಗಿವೆ:

"ಬರಿಯ ಮೋಡಗಳಲ್ಲ ಇವು ಬಿಳಿಯ ಆತ್ಮಗಳ್,
ಕ್ರಿಸ್ತಬುದ್ಧರಪೋಲ್ವ ವಿಶ್ವದ ಮಹಾತ್ಮರ್ಗಳ್ ;
ಹಿಂದೆ ಬಂದುವೊ ಮುಂದೆ ಬರಲಿಹವೊ ಪ್ರಾಣಗಳ್
ಧ್ಯಾನಗಳ್, ಭಾವಗಳ್, ಲೋಕ ಕಲ್ಯಾಣಗಳ್ !"

'ಅಂಚೆಮನೆಯ ಅರೆಕಲ್ಲು' ಕುಪ್ಪಳ್ಳಿಯಿಂದ ಒಂದೂವರೆ ಮೈಲಿ ದೂರದಲ್ಲಿ ಕಾಡುದಾರಿಯ ನಡುವೆ ಇರುವ ಹಳ್ಳದ ಹಾಸು ಬಂಡೆಗಳ ಪಕ್ಕದಲ್ಲಿ ತೊರೆ ತರಂಗ ತರಂಗವಾಗಿ ಹರಿಯುತ್ತದೆ, ಕವಿ ಕುವೆಂಪು, ಹಾಸು ಬಂಡೆಯ ಮೇಲೆ ಹಾಯಾಗಿ ಕುಳಿತು ಸುತ್ತಲೂ ತನ್ನ ಮೈಚಾಚಿರುವ ಜಗನ್ಮಾತೆಯ ಸ್ವರೂಪವನ್ನು ನೋಡುತ್ತ, ಮಂಜುಳ ನಿನಾದದಿಂದ ಹರಿಯುತ್ತಿದ್ದ ಹೊಳೆಗೆ ಕಿವಿಗೊಟ್ಟು:

—ಮನಕೆನಿಸು ನೋವು ತರುವಾ ಚಿಂತೆ
ಅಂತಿರಲಿ—ಮುಂದೆ ಎಂತೋ ಏನೊ ? ನಾನಿಂದು
ಬಿಸಿಲಬೇಗೆಯ ಕಳೆಯೆ ನಿನ್ನ ತಡಿಗೈತಂದು
ಮಲಗಿಹೆನು ಮರದ ತಣ್ಣೆಳಲಿನಲಿ ಮೈಚಾಚಿ ;
ಗಾನಗೈಯಲಿ ನಿನ್ನ ಗೇಯಲೋಲುಪವೀಚಿ !

ಎಂದು ಬಾಳಿನಲ್ಲಿ ಸಹಜವಾಗಿ ಬರುವ ದುಃಖ, ಚಿಂತೆ, ಕೊರತೆ, ಬಿಸಿಲಬೇಗೆ ಗಳೆಲ್ಲವನ್ನು ಮರೆತು ತೊರೆಯ ನಿನಾದದ ಬದಿಯಲ್ಲಿ ಮೈಮರೆತಿದ್ದಾರೆ.

ಕವಿ ಪ್ರಕೃತಿಯೊಡನೆ ಒಂದಾಗಿ ಬಾಳಿನ, ಜನದ ಬೊಬ್ಬೆಯನ್ನು ಮರೆಯಲು ಹಾತೊರೆಯುವರು. ಎಂದೂ ಹೇಳಹೆಸರಿಲ್ಲದೆ ಮರೆಯಾಗುವ ಈ ಜೀವಕ್ಕೆ ಕಷ್ಟ ಸುಖದ ಕುಣಿದಾಟಗಳೆಲ್ಲಕ್ಕೂ ರೋಸಿ, ಹೇಸಿ, ಎಲ್ಲವೂ ಕ್ಷಣಿಕವೆಂದು ಮಗು ತಾಯಿ ಯನ್ನು ಅರಸಿಕೊಂಡು ಅಲೆಯುವಂತೆ ಪ್ರಕೃತಿ ಮಾತೆಯ ಮಡಿಲಲ್ಲಿ ಕೂಸಾಗಿ ನಲಿ ಯಲು ಬರುತ್ತಾರೆ :

"ನಗರದೆದೆ ಬೇಸರದ ಬೊಬ್ಬೆಗಾಂ ಬೇಸತ್ತು
ಬಂದಿಹೆನು ನಿನ್ನೆದೆಗೆ, ಓ ಸಹ್ಯಾದ್ರಿ, ಹಸಿದ ಶಿಶು
ತಾಯೆದೆಗೆ ಹುಡುಕಿ ಹರಿವಂತೆ."

[ಪರ್ವತಾರಣ್ಯಗಳಲ್ಲಿ]

ಇವರ "ಕವಿಶೈಲ" ಎನ್ನುವ ಕವನಗಳಲ್ಲಿ ಕವಿಯು ವಾಸ್ತವ ವಸ್ತುವಿನಲ್ಲಿ ಕಂಡಿರುವ ಕವಿದೃಷ್ಟಿ ಉನ್ನತವಾಗಿದೆ. ಅದರ ಮುಂದೆ ಹಾದುಹೋಗುವವರ ಕಣ್ಣಿಗೂ ಮನಸ್ಸಿಗೂ ಸಿಕ್ಕ "ಕವಿಶೈಲ" ಕವಿಯ ಕಣ್ಣಿಗೆ ಸಿಕ್ಕಮೇಲೆ ಪಡೆದಿರುವ ಹೊಸ ರೂಪ ಬಹು ಮನಮೋಹಕವಾಗಿದೆ. ಅಲ್ಲಿಯ ನಿಸರ್ಗಸಂಪತನ್ನು ಕವಿ ಕಂಡು ತಮ್ಮದನ್ನಾಗಿ ಮಾಡಿಕೊಂಡು ತಮ್ಮದೇ ಆದ ರೀತಿಯಲ್ಲಿ ನೆಯ್ದು ಸೌಂದರ್ಯದ ಹೊದಿಕೆಯನ್ನು ಹೊದಿಸಿದ್ದಾರೆ. ಕವಿಶೈಲ ಕವಿಗೆ ಅಚ್ಚುಮೆಚ್ಚಿನ ಸ್ಥಾನ.

ಓ ನನ್ನ ಪ್ರಿಯತಮ ಶಿಖರ ಸುಂದರನೆ, ನನ್ನ
ಜೀವನಾನಂದನಿಧಿ. ಕವಿತಾ ಮನೋಹರಿಯ
ಪ್ರಥಮೋತ್ತಮ ಪ್ರಣಯಿ,

ಅದು ವಿಶ್ವಕವಿವರನ ಸೃಷ್ಟಿಯ ನೂರು ರೂಪುಗಳನ್ನೂ ತಾಳಿ ಕವಿ ಕುವೆಂಪುವಿಗೆ ಸ್ವರ್ಗವಾಗಿದೆ. ಮೈಸೂರಿನ ಮೈಸಿರಿ ಎಲ್ಲವನ್ನೂ ಉಂಡು 'ವನದೇವಿಯ್ಯೆಸಿರಿಯ ಸೀಠ ಚೂಡಾಮಣಿ' ಯಾದ 'ಕವಿಶೈಲ' ವನ್ನು ನೋಡಿದ ಕವಿಗೆ ಅದರ ಮುಂದೆ, ನೀಲಗಿರಿ, ಬ್ರಹ್ಮಗಿರಿ, ಗೇರುಸೊಪ್ಪೆ, ಆಗುಂಬೆ, ಶೃಂಗೇರಿಗಳೆಲ್ಲವೂ ಸಪ್ಪೆಯಾಗಿ ಕಾಣುತ್ತವೆ. ಇನ್ನೆಷ್ಟು ಸುಂದರವಾಗಿರಬಹುದು ಆ ಕವಿಶೈಲ! "ಹೆತ್ತಮ್ಮಗಿಂ ಮತ್ತೊಳರೆ? ತಾಯಹಳೆ ರಂಭೆ?" ಎಂದು ತಮ್ಮ ಪ್ರಿಯತಮನನ್ನು ಕಾಯ್ದಿಟ್ಟು ಕೊಂಡಿದ್ದಾರೆ.

ಮಂಜಿನ ಮಹಾಮಾಯೆ ನೊರೆಯಚೆಲ್ಲಿ, ಕ್ಷೀರಫೇನದಿ ಮಧ್ಯೆ ಶ್ಯಾಮಲ ಶಿರವನ್ನೆತ್ತಿ ಸ್ವರ್ಗಪ್ರದೇಶದ ಒಂದಂಶದಂತೆ ನಿಂತಿದ್ದ ಕವಿಶೈಲವನ್ನು ಕಂಡು :

ಪ್ರಿಯ ಬಂಧು, ಇದು ನಮ್ಮ ದೈನಂದಿನಿಳೆಯಂತೆ
ಕಾಣದೈ ; ಸೌಂದರ್ಯದೇವತೆಗಳಿದೊ ಸುತ್ತಿ
ಬಿಗಿವರೆಮ್ಮನು ಬಾಹುಬಂಧನಾನಂದದಿಂ !

ಎಂದು ಸೌಂದರ್ಯಾನಂದದಲ್ಲಿ ತಲ್ಲೀನರಾಗಿದ್ದಾರೆ.

ಕವಿಶೈಲದಲ್ಲಿ ಬೆಳಗು-ಸಂಜೆಗಳ ಅಂದಚಂದವನ್ನೀಂಟಿದ ಕವಿ ರಾತ್ರಿಯ ನೀರವತೆ, ನಿರ್ಜನತೆ, ಭೀಷಣಗಭೀರತೆಯನ್ನು ಕಂಡು ಅಚ್ಚರಿಗೊಂಡಿದ್ದಾರೆ. ಅಲ್ಲಿ ಆವರಿಸಿದ್ದ ಕತ್ತಲು ತಮ್ಮ ತನುಮನಗಳನ್ನೂ ಆವರಿಸಿ, ಅದರ ಸಂಕೇತದ ಅರಿವು ಸ್ಪಷ್ಟವಾಗಿ ತಿಳಿಯದೆ :

ನನ್ನೆದೆಯೊಳನುಭವವೇನು ?
ಭಯವೊ? ಆವೇಶವೊ? ಅಹಂಕಾರಲಯವೊ ಏನು ?

ಎಂದು ಎದೆಯಲ್ಲಿ ಎದ್ದಿರುವ ಭಾವನೆಗಳಿಂದಾಗಿ ತತ್ತರಿಸಿದ್ದಾರೆ. ಮುಂದುವರೆದು—

ಮಿತ್ರರಿರ, ಮಾತಿಲ್ಲಿಮೈಲಿಗೆ; ಸುಮ್ಮನಿರಿ :
ಮೌನವೇ ಮಹತ್ತಿಲ್ಲಿ............
ಪಟ್ಟಣದಿ, ಬೀದಿಯಲಿ, ಮನೆಯಲ್ಲಿ, ಸರ್ವತ್ರ
ಇದ್ದೆಯಿದೆ ನಿಮ್ಮ ಹರಟೆಯ ಗುಲ್ಲು ! ಆಸಂತೆ
ಇಲ್ಲೇಕೆ ?—ಪ್ರಕೃತಿದೇವಿಯ ಸೊಬಗುದೇಗುಲದಿ
ಆನಂದವೇ ಪೂಜೆ; ಮೌನವೇ ಮಹಾ ಸ್ತೋತ್ರ !



ಎಂದು ಜೀವನದಲ್ಲಿ ದೈವತ್ವದ, ಶಾಂತಿಯ ನೆಲೆಯನ್ನು, ಅದನ್ನು ಆಸ್ವಾದಿಸುವ ''ಗೆಯನ್ನು ಬಣ್ಣಿಸಿ ಎಚ್ಚರಿಸಿದ್ದಾರೆ.

ನಾಗರಿಕತೆಯನೆಲ್ಲ ತಳ್ಳಿ, ಹೊರೆ ಹೊಣೆಗಳಂ
ನೂಂಕಿ, ನಿರ್ಭಾರ ನಗ್ನಾತ್ಮರಾಗಿಯೆ ತೇಲಿ
ಬನ್ನಿ ಈ ಎಡೆಗೆ, ಹಕ್ಕಿಯು ಪುಕ್ಕವನು ಹೋಲಿ
ನೀರವ ನಿರುದ್ದೇಶದಿಂದೆ.

[ಏಳುಸೀಳು]

ಎಂದು "ಏಳುಸೀಳು" ಗೆ ಕರೆಗೊಟ್ಟಿದ್ದಾರೆ. ಕರೆ ಎಲ್ಲರಿಗೂ ಅಲ್ಲ; ರಸದೃಷ್ಟಿಯೊಂದನ್ನೇ ಹೊತ್ತುಬಂದವರಿಗೆ ಮಾತ್ರ. ಅಲ್ಲಿಗೆ ಬಂದು "ಸುಖವೆ ಸಲಿಲದ ರೂಪದಲಿ ಹರಿವ ಹೊಳೆಮಧ್ಯೆ ದುಮ್ಮಿಕ್ಕಿ ನೀರಾಡಿದರೆ, ಮರ್ತ್ಯದೀ ಸೃಷ್ಟಿ ನಾಕನಂದನವಾಗಿ ದೇವತೆಗಳಾಗುವಿರಿ" ಎಂದು ಸಾರಿದ್ದಾರೆ. ಜೀವನದ ಗುರಿ ದೇವತೆಗಳಾಗುವುದಲ್ಲದೆ ಮತ್ತೇನು!

ಅಲ್ಲದೆ—

ವಿಸ್ಮೃತಿಯ ವೈತರಣಿ ತೀರ್ಥರಸದಲಿ ಕೊಚ್ಚಿ
ಹೋಹವೈ ಕೊರಗು ಕೊಂಕುಗಳೆಲ್ಲ

ಎಂದು ಬಾಳಿನಲ್ಲಿ ಬೆಲ್ಲ ಸಕ್ಕರೆ ಸಿಗುವ ತಾಣವನ್ನು ತೋರಿದ್ದಾರೆ. ಯಾವ ಸನಿಹದಲ್ಲಿ ನಮ್ಮ ಅಲ್ಪತನ ಮಾಸಿ, ಆತ್ಮದ ಅರಿವು ಆಗಬಲ್ಲುದೋ ಆ ದಿವ್ಯ ತಾಣವನ್ನು ತೋರಿ ಕವಿ ಧನ್ಯರಾಗಿದ್ದಾರೆ.

ಹೀಗೆ ಮಲೆನಾಡಿನ ತಾಣಗಳನ್ನು ವೈವಿಧ್ಯಪೂರ್ಣವಾಗಿ, ರಸಋಷಿಯಾಗಿ, ಕಾವ್ಯರ್ಷಿಯಾಗಿ ಮನಮುಟ್ಟಿ ಅಹುದಹುದೆನ್ನುವಂತೆ, ಓದುತ್ತಿದ್ದಂತೆ, ಬೆಟ್ಟದಂಚಿನಿಂದ ಬುಗ್ಗೆಬುಗ್ಗೆಯಾಗಿ ಮೇಲೇರುವ ಮಂಜಿನಂತೆ, ಭಾವನೆಗಳೆದ್ದು ಮನ ಪುಳಕಿತವಾಗುವಂತೆ ವರಕವಿ ಪುಟ್ಟಪ್ಪನವರು ಚಿತ್ರಿಸಿದ್ದಾರೆ. ಕಣ್ಣೆದುರಿಗೆ ನಿಂತು ನಾಟ್ಯವಾಡುವ ಎಲ್ಲ ಚಿತ್ರಗಳೂ, ಮನಸ್ಸಿಗೆ ತಟ್ಟಿದ ಎಲ್ಲ ಭಾವನೆಗಳೂ ನಮ್ಮನ್ನು ಭಾವನಾ ಪ್ರಪಂಚದಲ್ಲಿ, ಪ್ರಕೃತಿಯ ಸುಂದರ ಕಡಲಿನಲ್ಲಿ ಎಲ್ಲಿಬೇಕಾದರೂ ಈಜಾಡಲು ಕೈ ಬಿಟ್ಟಿದ್ದಾರೆ. ಎಲ್ಲಕ್ಕಿಂತಲೂ ಹೆಚ್ಚಾಗಿ ಆತ್ಮಾನಂದ ನೀಡುತ್ತಾರೆ.

ಇನ್ನು ಕವಿ ರಾಜಧಾನಿ(ಮೈಸೂರು)ಗೆ ಬಂದಿದ್ದಾರೆ. ರಾಜಧಾನಿಯ ಮೇಲೆ ಮೂಡುವ ಬೆಳಕನ್ನು ಕಂಡು—

ಜಾಗರಿತವಾಗುತಿದೆ ನಗರದ ಮಹಾಮನಂ
ಹಗೆ ಒಲ್ಮೆ ಸಿರಿ ಬಿಜ್ಜೆ ಮಾನ ಮೇಣಪಮಾನ
ತಂತ್ರದಲಿ, ಜಟಿಲ ಜಾಲಂ ನೆಯ್ವ ಜೇಡನಂತೆ!

[ರಾಜಧಾನಿ]

ಎಚ್ಚರವಾಗುತಿದೆ ಎಂದು ವರ್ಣಿಸಿದ್ದಾರೆ. ಉಷೆವೆಣ್ಣು ಮೆಲ್ಲಮೆಲ್ಲನೆ ನಿದ್ದೆಗಣ್ಣಿನಿಂದೆದ್ದು ಬರುತ್ತಿದ್ದಾಳೆ. ಚಾಮುಂಡಿಯನ್ನು ಮೃದು ಮನೋಹರ ನೀಲಿ ಮುಸುಗಿಹುದು. ಇಂತಹ ಹೊತ್ತಿನಲ್ಲಿ ಕವಿಗೆ 'ದಿನ ದಿನದ ಪರಿಚಯದ ಮಣ್ಣು ಕೂಡ

ಸ್ವರ್ಗೀಯವಾಗಿ ಕಾಣುತ್ತದೆ. ರಾಜಧಾನಿಯಿಂದ ಕವಿ ಕನ್ನಂಬಾಡಿಗೆ ಧಾವಿಸಿದ್ದಾರೆ. ಮುಂಗಾರು ಮಳೆ ಹೊಯ್ದಂದು ರಾತ್ರಿಯಲ್ಲಿ ಕವಿ ಬೃಂದಾವನಕ್ಕೆ ಬಂದಿದ್ದಾರೆ. ಕವಿ ಅಲ್ಲಿಯ ಸಾವಿರಾರು ದೀಪಗಳಿಂದ ಮಿನುಗಿ ಮೆರೆಯುತ್ತಿರುವ ಬೃಂದಾವನ ಎಷ್ಟೆ ಚಲುವೆಯಾದರೂ ಅವರ ಮನಸ್ಸು ಆ ಥಳುಕಿಗೆ ಒಪ್ಪದು. ಅಲ್ಲದೆ ಕವಿಯ ಮನೋ ಧರ್ಮ ನಿಜವಾದ ಸೌಂದರ್ಯದ ಹಿಗ್ಗಿನ ನೆಲೆಯನ್ನು ಬಲ್ಲುದು.

ಇದು ಪಾಣ್ಬೆಯರ ಗಾಡಿ.
ಗರತಿ ಗೌರವವಿಲ್ಲದಿದು ರುಚಿ ಲಘುತ್ವಕ್ಕೆ.
ಕಲೆಯ ಪಾಂಗಿನಿತಿಲ್ಲವಿಲ್ಲಿ :

ಎಂದು—

............................ತಿರುಗುತ್ತಾ ಕಡೆ ;
ನೋಡುವಂ ನೀರು ನಿಂತಾ ಗಭೀರವನು; ನಡೆ !

ಎಂದು ಸಮುದ್ರದ ಭವ್ಯತೆಯನ್ನು ಹೊತ್ತು ನಿಂತಿರುವ 'ನೀರಾಕರ'ದೆಡೆ ಕರೆದೊಯ್ಯುತ್ತಾರೆ.

ಪ್ರತಿನಿಧಿ ಮಹಾಪುರುಷನೆಂತು ದೇವರಿಗಂತು
ನಮಗಿದು ಪಯೋನಿಧಿಗೆ ಪ್ರತಿಮೆ,

ಎಂದು ಅದರ ಮಹತ್ವವನ್ನು ಸಾರಿ :

ಬೃಂದೆಯಾ ಶಿಶುರುಚಿ ಕಲೆಯ ಮರೆತು,
ಮೇಣೆದರ ಋಷಿಕಲಾ ಭವ್ಯತೆಯನೆದೆಮುಟ್ಟೆ
ಸವಿದು ಸಾಕ್ಷಾತ್ಕರಿಸಿ : ಹೋಹನ್ನೆಗಂ ದಿಟ್ಟೆ
ನಿನ್ನಾತ್ಮವನು ತೇಲಿಬಿಡು ನೀರಿನಲಿ ಬೆರತು !

ಕವಿ ಅದನ್ನು ನೋಡ ನೋಡುತ್ತ ತಮ್ಮಾತ್ಮವನ್ನೂ ಅದರ ಜೊತೆ ಬೆರೆಯಲು ಬಿಟ್ಟಿದ್ದಾರೆ. "ನೀರಾಕರ"ದ ಗಂಭೀರತೆಯನ್ನು ನೋಡಿ ಅದರಲ್ಲಿ ತಪಶ್ಶಕ್ತಿಯನ್ನು ಗುರುತಿಸಿದ್ದಾರೆ. ಕವಿ ಆತ್ಮಚಿಂತನೆಯಲ್ಲಿ, ಆನಂದಮಯಲೋಕದಲ್ಲಿ ತಾವೂ ತಪಸ್ಸು ಮಾಡುತ್ತ ಧ್ಯಾನಸ್ಥರಾಗಿ ಹಾಗೆಯೇ ನೀರ್ಬಾಗಿಲೆಡೆ ಬರುತ್ತಾರೆ. ಅದು ಭೋರ್ಗರೆದು, ಮುತ್ತುಮುತ್ತಾಗಿ, ನೊರೆನೊರೆಯಾಗಿ ದುಮುಕಿ ಮುಂದೆ ನುಗ್ಗುತ್ತಿದ್ದುದನ್ನು ನೋಡಿ,

ಮೇಲಲ್ಲಿ ಸೇರಿದ ತಪಶ್ಶಕ್ತಿ
ಕರ್ಮಮಯವಾಗಿರುವುದಿಲ್ಲಿ.

ಎಂದು ಅದರ ಸಾರ್ಥಕತೆಯನ್ನು ಮನಮುಟ್ಟುವಂತೆ ಚಿತ್ರಿಸಿದ್ದಾರೆ.

ತಪದಿಂ ವ್ಯಕ್ತಿ
ಗಳಿಸಿ ಸತ್ವವನಿಳಿಯೆ ಕಾರ್ಯಕೆ, ರಜಶಾಲಿ

ತಾನಾಗಿ, ತಡೆವರಾರಾತನಂ? ಕಗ್ಗಲ್ಲು
ಕೂಡ ಕೆಲಸಾರುವುದು ಸಿಡಿತು ದಾರಿಯನಿತ್ತು;

ಎನ್ನುವುದರಲ್ಲಿ ಕವಿಯುಮನೋಧರ್ಮದ ಅರಿವುನಮಗಾಗುತ್ತದೆ. ಬಾಳಿನಲ್ಲಿ ತಪಸ್ಸು ಮಾಡಿ, ಬಾಳಿಗಾಗಿ ಆ ತಪಸ್ಸನ್ನು ಮುಡಿಸಾಗಿರಿಸಿ ಮುನ್ನುಗ್ಗಿದವಗೆ ಕರ್ಮಮಯ ಭೂಮಿಯಲ್ಲಿ ಎಂದೂ ಸೋಲಿಲ್ಲ. ಜಯ ಜಯಕಾರದ ಧ್ವನಿಯಲ್ಲಿ ತನ್ನೆಲ್ಲ ಗುರಿಯನ್ನು ಸಾಧಿಸಿ, ನಾಡಿನ ಏಳ್ಗೆಗಾಗಿ ದುಡಿದು ಮಡಿದರೂ ಬದುಕಿದವನಂತಾಗುತ್ತಾನೆ. ಬಾಳಿಗೆ ಅಂಟಿಕೊಂಡು ದೈವತ್ವವನ್ನು ಕಾಣುತ್ತಾನೆ. ಕವಿಯ ಈ ಪದ್ಯವನ್ನು ಓದಿದ ಯಾರೇ ಆಗಲಿ ತಕ್ಷಣವೇ ಕವಿಗೆ ನಮಸ್ಕರಿಸದೆ ಇರನು.

ಮುಟ್ಟಿದರೆ ಜಡವೂ ಮುತ್ತು
ಮುತ್ತಾಗಿ ರಾರಾಜಿಪುದು. ವೇಣವನ ಸೊಲ್ಲು
ನಿತ್ಯವಹುದದಕಿಲ್ಲದಯೆ ಮುದಿತನಂ ಮಿತ್ತು!

ಈ ಸಾಲುಗಳಲ್ಲಿ 'ಜ್ಯೋತಿ ಮುಟ್ಟಿದ ಬತ್ತಿ ಜ್ಯೋತಿಯಾಯಿತು' ಎಂಬ ಸತ್ಯವನ್ನು ಹೊರಗೆಡವಿದ್ದಾರೆ.

'ಕಟ್ಟೆ' ಎಂಬ ಅವರ ಕವನದಲ್ಲಿ ಮಾನವನ ಬುದ್ಧಿಶಕ್ತಿಯನ್ನು ಕಂಡು ಅಭಿನಂದಿಸಿದ್ದಾರೆ. ಪ್ರಕೃತಿಯನ್ನು ಮನುಷ್ಯ ತನ್ನ ಬಯಕೆಯ ನೊಗಕ್ಕೆ ಕಟ್ಟಿ ಎಳೆತಂದು ತನಗುಪಯೋಗವಾಗುವಂತೆ ತನ್ನ ಬುದ್ಧಿಶಕ್ತಿಯಿಂದ ಉಪಯೋಗಿಸಿಕೊಂಡಿದ್ದಾನೆ. ಅಲ್ಲದೆ—

"....ತೆಂಗುಗಿಂಗನು ಕುಟ್ಟಿ,
ಪೂಜೆಗೀಜೆಯ ಮಾಡಿ, ಬೇಡೆ, ಬಂಜರು ನೆಲಂ
ಫಲವತ್ತಹುದೆ? ಸೃಷ್ಟಿನಿಯಮದೊಳಗುಟ್ಟನರಿ,
ನಖಮುಖಾರಕ್ತಮಯಿಾ ಪ್ರಕೃತಿಮಾರಿಯ ಜುಟ್ಟು
ಹಿಡಿದಡಸಿ ನಿನ್ನೆದೆಯ ಬಯಕೆಯ ನೊಗಕೆ ಕಟ್ಟು!"

ಮಾನವನು ದರಿದ್ರನಾದಲ್ಲಿ ಎಲ್ಲಿಯ ಫಲ! ದೇವರೇ ಎಂದು ಕೈಕಟ್ಟಿ ಕೂತಲ್ಲಿ ಕಾರ್ಯಸಾಧನೆಯಾಗುವುದೆಲ್ಲಿ? ಸೃಷ್ಟಿಯೆ ನಮಗಾಗಿ ತನ್ನ ಮಧುಕುಡಿಕೆಯ ತೆರದು ನಿಂತಿರುವಾಗ ಅದನ್ನು ತಣಿ ಹೀರದೆಯೆ ಸಾಗಬಹುದೆ? ನಮ್ಮ ಬಯಕೆಯ ನೊಗಕೆ ಕಟ್ಟಿಕೊಂಡು ಗುರಿಯತ್ತ ಕಡೆ ಧಾವಿಸಿಕೊಂಡು ಓಡಬೇಕು.

ಬರಗಾಲದೆದೆಗೆ ಗುರಿಯಿಟ್ಟು ಕಟ್ಟೆಯ ಕೋವಿ
ಕಟ್ಟದಂತಿದೆ! ಪೆರ್ಮೆಯಿಂ ನೋಳ್ಪವೈತನ್ನಿ

—ಎಂದು ಅದರ ಜನ್ಮದುದ್ದೇಶವನ್ನು ಸಾರಿ ಹಾಗೆ ನೆರವಾದ ವಿಜ್ಞಾನಕ್ಕೆ ಕನ್ನಡಸಿರಿಯ ಶ್ರೀಯಸಿಯ ಪೂಣ್ಕೆ ಎಂದು ಹೊಗಳಿದ್ದಾರೆ.

"ಪ್ರೇಕ್ಷಕನೊಬ್ಬನಿಗೆ" ಎಂಬ ಕವನದಲ್ಲಿ ಕಲೆಯ ಸೋಗು ಹಾಕಿಕೊಂಡು ಅದರ ನೆಳಲಲ್ಲಿ ತಮ್ಮ ಭೋಗಾಪೇಕ್ಷೆಗಳನ್ನು ತೀರಿಸಿಕೊಳ್ಳುವವರನ್ನು ಕಾಣಿಸಿದ್ದಾರೆ.

ನಿತ್ಯವೂ ಬೆಳಗು-ಸಂಜೆಗಳ ಸೌಂದರ್ಯಾರಾಧನೆಯನ್ನು ಬಿಟ್ಟು ತಮ್ಮ ಇಂದ್ರಿಯ ಚಾಪಲ್ಯಕ್ಕೆ ಕನ್ನಂಬಾಡಿಗೆ ಬರುವವರ ಗುಂಪನ್ನು ಬಯಲಿಗೆಳೆದಿದ್ದಾರೆ. ನಮ್ಮ ನಿತ್ಯ ಜೀವನದಲ್ಲಿ ಇಂತಹ ಕಪಟಗಳನ್ನು ಎಷ್ಟು ನೋಡುತ್ತಿಲ್ಲ! ಹೆಣ್ಣುಗಂಡಾದಿ ಯಾಗಿ ಬಾಹ್ಯಾಡಂಬರಕ್ಕೆ ಮನಸೋತು ಒಬ್ಬರನ್ನೊಬ್ಬರು ಸಂದಿಸಲಿಕ್ಕೆ ಬರುವುದು ಎಲ್ಲರಿಗೂ ತಿಳಿದ ವಿಷಯ. ಹಾಗೆ ಬಂದ ಪ್ರೇಕ್ಷಕನೊಬ್ಬನಿಗೆ 'ನಿನ್ನ ಎದೆಗೆಲ್ಲೆಕಣ್ಣು: ನಿನ್ನಾಸೆ ಕಲೆಯಲ್ಲವೊ ಕಲೆಯಜಾರೆ!' ಎಂದು ಜರಿದಿದ್ದಾರೆ.

ಕನ್ನಂಬಾಡಿಯ ಕಲೆಗೆ ಮಾರುಹೋಗಿ, ಅಲ್ಲಿ ಸೃಷ್ಟಿಮಾನವನ ಹೊಂದಾಣಿಕೆ ಯಿಂದ ಉದ್ಭವಿಸಿರುವ ಕಲೆಗೆ ಮನಸೋತು ನಿಸರ್ಗದೊಡನೆ ಬೆಸುಗೆ ಹಾಕಿಕೊಂಡು ಕವಿ ಅದರ ಸಲಿಲದಲ್ಲಿ ಭಾವನಾಪರವಶರಾಗಿ ಆತ್ಮಾನಂದದಿಂದ, ಹೂವಾಗಿ, ಹೊಳೆ ಯಾಗಿ, ಗಿರಿಯಾಗಿ, ವನವಾಗಿ ಪ್ರಕೃತಿಯ ಎಲ್ಲ ನಾಡಿಗಳಲ್ಲೂ ಒಂದಾಗಿ ಸವಿ ಕಂಡು ಉಂಡು ಜೆರಗಾಗಿ, ತೃಪ್ತಿಪಟ್ಟು ಎದೆಯೊಲವನ್ನು ಸುತ್ತೆಲ್ಲವೂ ಪ್ರಸರಿಸಿ, ಕಾವ್ಯವಾಗಿ ಹರಿಸಿ ಜನರೆದೆಯನ್ನು ತಣಿಸಿದ ಮರುಗಳಿಗೆಯಲ್ಲೇ ದಾರಿಯ ಹಳ್ಳಿಯನ್ನು ನೆನೆಸಿ ಕೊಂಡು ಕರ್ಮಕಾಂಡಕ್ಕೆ ದುಮ್ಮಿಕ್ಕುತ್ತಾರೆ. ಹಳ್ಳಿ ಹರಿದು ಹಂಚಿರುವುದನ್ನು ಕಂಡು ಕನಿಕರದಿಂದ, ದುಃಖದಿಂದ ಕರಗಿ ನೀರಾಗಿದ್ದಾರೆ. ಅದೇತಾನೆ ಮನಮೋಹಕ ದೃಶ್ಯ ಗಳಿಂದ ಮನಸ್ಸು ಗರಿಗೆದರಿ ಹಾರುತ್ತಿದ್ದುದು, ಹಳ್ಳಿಯೆಲ್ಲಾ ನೆಲಸಮವಾಗಿರುವದನ್ನು ನೆನೆದು ಬಗೆಗಾಣದೆ ತತ್ತರಿಸಿದ್ದಾರೆ. ಹಳ್ಳಿಯ ಜನರ ರಕ್ತಕಣಗಳೂ ಇಂದು ಮಣ್ಣ ಕಣಗಳಾಗಿ ಕಾಣುತ್ತಿದ್ದ ಭೀಕರ ದೃಶ್ಯದಿಂದ ಬೆರಗಾಗಿ ಕವಿ ಹೃದಯ ಅಯ್ಯೋ ಎಂದು ಚೀರುತ್ತದೆ. ಇಷ್ಟು ದುರವಸ್ಥೆಗೆ ಕಾರಣರಾದ ಧನಿಕರು ಕಣ್ಣಿಗೆ ಬಿದ್ದಲ್ಲೆ, ಕೋಪ ದಿಂದ :

ಓ ಧಣಿಯೆ, ನಿನ್ನ ಮನದಿಂ ಮರೆಯಬಿಡೆನಯ್ಯ
ಆ ಮುರುಕು ಬಡಹಳ್ಳಿಯಂ ಅದರ ಪೊಲೆ ಕೀವು
ನಿನ್ನ ಸಂತೋಷದೊಡಲಿನಲಿ! ನೀನಿದೊ ಕಳೆವ
ಹೊತ್ತಿನಲಿ ಹಸಿಹಸಿಯುಮಾ ಬಡವರೊಣಮೆಯ್ಯ
ಬಸಿವ ಪಸಿನೆತ್ತರನೆ, ನೀಂ ನಾಡಿನೆದೆಬಾವು!

ಧನಿಕರನ್ನು ದೂಷಿಸಿ ಬಡವರ ಬಗ್ಗೆ ಕರುಣೆ ತೋರಿಸಿದ್ದಾರೆ. ಬಂಜರು ಹಳ್ಳಿಯನ್ನು ನೋಡಿ, ಸರ್ವಸುಖ ಸಂತಸಗಳ ಆಗರವಾದ ಕನ್ನಂಬಾಡಿಯನ್ನು ಬಿಟ್ಟು 'ಇದು ಇರಲಿ! ಅದನು ನೆನೆ!' ಎಂದು ದಾರಿಯಲ್ಲಿ ಉಸಿರಾಡಲು ತಿಣುಕುತ್ತಿರುವ ಹಳ್ಳಿಯನ್ನು ಬೆಟ್ಟುಟ್ಟು ತೋರಿಸಿದ್ದಾರೆ.

ಜಗನ್ಮಾತೆಯ ಅಂಗಗಳಾದ ಸತ್ಯ, ದರ್ಶನ, ದೈವತ್ವ, ಆನಂದ ಭೀಷಣತೆ ಗಳನ್ನು ಅನುಭವಿಸಿ, ರಸಗಟ್ಟಿಯಿಳಿಸಿ ತಮ್ಮ ಈ ಕೃತಿಕೆಯಲ್ಲಿ ತುಂಬಿದ್ದಾರೆ. ಅವರ ಅನುಭಾವಮತ, ದರ್ಶನ ಕಣ್ಣು ಅವರ ಕವನಗಳಲ್ಲೆಲ್ಲ ಪ್ರಜ್ವಲಿಸುತ್ತದೆ. ಅವರು ಉಪಯೋಗಿಸಿರುವ ಪ್ರತಿಮೆ, ಧ್ವನಿಪೂರ್ಣವಾದ ಶೈಲಿಯಿಂದ ಓದುಗನ ಮನಸ್ಸನ್ನು

ಸೆಳೆದಿದ್ದಾರೆ. ರಸಗಂಗೆಯಲಿ ತೇಲಿ ಭಾವನಾ ಪ್ರಪಂಚದಲ್ಲಿ ಮುಗಿಲಗುಂಟೆ ಹೋಗು ವವನಿಗೆ ಅದನ್ನು ನೀಡಿದ್ದಾರೆ. ತೊರೆಯ ನಿನಾದಕ್ಕೆ ಮಾರುಹೋಗಿ ; ಅದರ ಅಲೆ ಯಲೆಯ ಜೊತೆ ತಾವೂ ನರ್ತನಗೈಯುತ್ತ ಹೋಗಬಯಸುವವರಿಗೆ ಅದರ ಸವಿ ಯನ್ನು ಉಣಿಸಿದ್ದಾರೆ. ಹಕ್ಕಿಗಳಾಗಿ, ಮರವಾಗಿ, ಗಿಡವಾಗಿ, ನವಿಲಾಗಿ, ಕಾಜಾಣ ಪಿಕಗಳಾಗಿ, ಮುಗಿಲಾಗಿ, ಮಂಜಾಗಿ ಸಂಚರಿಸೋಣ ಎಂದಿರುವವರಿಗೆ ಆ ರಸದೌತಣ ವನ್ನು ನೀಡಿದ್ದಾರೆ. ಕವಿ ಪ್ರಕೃತಿಯೊಡನೆ ತಮ್ಮ ವ್ಯಕ್ತಿತ್ವನೆಲ್ಲವನ್ನೂ ಬೆರೆಸಿ ಅದರಲ್ಲಿ ಒಂದಾಗಿದ್ದಾರೆ.

ಕವಿ ಪ್ರಕೃತಿಯಲ್ಲಿ ದೇವದರ್ಶನವನ್ನು, ಬಾಳಿನ ಪಥವನ್ನು, ಅದರ ಅಂತ್ಯ ಗುರಿ ಯನ್ನು ಕಂಡುದಲ್ಲದೆ, ನಿತ್ಯಬಾಳಿನ ಕಗ್ಗಲ್ಲುಗಳನ್ನು, ಆರ್ಥನಾದ ಸ್ವರಗಳನ್ನು, ದಾಂಟೆ ನಿತ್ಯಸತ್ಯದ ಚಿರಂಜೀವತ್ವವನ್ನು ನಿಸರ್ಗದ ತಡಿಯಲ್ಲಿ ಹೇಗೆ ಪಡೆಯಬಹು ದೆಂಬುದನ್ನು ತೋರಿಸಿದ್ದಲ್ಲದೆ ದೇಶದೇಳ್ಗೆಗಾಗಿ, ಆತ್ಮದುದ್ಧಾರಕ್ಕಾಗಿ ಬಾಳ ಸಾರ್ಥ ಕತೆಗಾಗಿ, ತಮ್ಮ ಜೀವನವನ್ನು ತೆಯ್ದು ಕಣ್ಮರೆಯಾಗಿರುವ ಮಹಾನ್ ಮಹಾನ್ ವ್ಯಕ್ತಿಗಳನ್ನು ನೆನೆದು ತಮ್ಮ ಪ್ರೀತಿ ಗೌರವ ಕೃತಜ್ಞತೆಗಳನ್ನು ಹೇಳಿಕೊಂಡಿದ್ದಾರೆ.

ಮೊಟ್ಟಮೊದಲು ರಾಮಾಯಣದ ತಪಶ್ರೀಯಾದ 'ಊರ್ಮಿಳಾದೇವಿ'ಯನ್ನು ನೆನೆದು ಜನನಿ ಎಂದು ಮನಮುಟ್ಟುವ ಮಾತನ್ನು ಆಡಿದ್ದಾರೆ. ರಾಮಾಯಣದಲ್ಲಿ ಶೋಭಿಸುವ ರಾಮ, ಸೀತೆ, ಲಕ್ಷ್ಮಣರಿಗಿಂತಲೂ ಮೂಲೆಯಲ್ಲಿ ಯಾರಿಗೂ ಕಾಣದೆ; ಬಾಳಿನ ನಿಜಕಹಿಯನ್ನುಂಡು ಸಂಯಮಿಸಾಧ್ವೀಮಣಿಯಾಗಿ ತಪಸ್ಸುಮಾಡಿ ಉಸಿರೂ ಬಿಡದೆ; ಕಣ್ಣುಬಿಟ್ಟು ನೋಡಿದವರಿಗೆ ಬೆಳಕಾಗಿ, ಸಂಸ್ಕೃತಿಯ ಪೂರಕವಾಗಿ, ತಾಯಿ ಯಾಗಿ ಕಾಣುವ ಊರ್ಮಿಳಾದೇವಿಗೆ ಪೂಜೆಸಲ್ಲಿಸಿದ್ದಾರೆ.

ಪೂರ್ಣಸತಿ, ಊರ್ಮಿಳಾದೇವಿ, ಲಕ್ಷ್ಮಣ ಚಿರತಪಶ್ರೀಲೆ! ಎಂದು ಆ ನಿಷ್ಕ ಲ್ಮಷ ಹಾಲು ಹೊಳೆಯಂತಹ, ಹೃದಯಕ್ಕೆ ಕಾಣಿಕೆಯರ್ಪಿಸಿದ್ದಾರೆ.

ಇಂತಹ ಸತ್ವಶೀಲ ಹೆಣ್ಣಿನ ಧ್ಯಾನದಲ್ಲಿ, ಸಂಸ್ಕೃತಿಯ ತದೇಕರೂಪವಾದ, ಉತ್ತುಂಗ ಶಿಖರಕ್ಕೇರುವ ವ್ಯಕ್ತಿತ್ವಗಳ ಸ್ಮರಣೆಯಲ್ಲಿರುವ ಕುವೆಂಪುರವರು ಹೋಮ ರನ ಕಲೆಗೆ ಬೆಲೆಕೊಟ್ಟರೂ ಅವರ ನಾಡಿನಾಡಿಯಲ್ಲಿ ಸಂಚರಿಸುತ್ತಿರುವ ದಿವ್ಯಪ್ರಜ್ಞೆ, ಊರ್ಧ್ವಾಭಿಮುಖವಾದ ವ್ಯಕ್ತಿತ್ವ, ಹೋಮರ್ ಚಿತ್ರಿಸಿರುವ ಹೆಲೆನ್. 'ಪತಿಯುಮಂ, ಪೆಣ್ಗೂಸುಮಂ ತ್ಯಜಿಸಿ, ತನುರುಚಿಗೆ ಸೋತು, ಪಾಣ್ಬಂ ಬೆರೆಸುತೋಡಿದಾಪೆಣ್ಗೆ!' ಹೇಸಿ :

> ಈಲಿಯಡ್ಡಿನ ಮಹಾಕಲೆಯ ನೆತ್ತರಗಣ್ಗೆ
> ಬೆಲೆವೆಣ್ಣೆ ಗುರಿಯಾಯ್ತೆ ?

ಎಂದು ಹೋಮರನ ಕಲೆಯ ಗುರಿಯನ್ನು ಒಪ್ಪುವುದಿಲ್ಲ.

> —ಸೀತೆಯ ಶುಚಿಗೆ
> ರಾಮಾಯಣವನೊರೆದನಾದಿಕವಿವಾಲ್ಮೀಕಿ.

ನೀನೇಕೆ ಹೀಗೆ ಮಾಡಿದೆ ಎಂದು ಆ ಶುಚಿಯಗಂಗೆಯಲ್ಲಿ ಮಿಂದ ಇವರಿಗೆ ಹೋಮರಸ ರಣಕ್ರೀಡೆ ಸಹಿಸಲಸಾಧ್ಯವಾಗುತ್ತದೆ. ಅಲ್ಲದೆ 'ದಿವ್ಯಕಲೆಗಿರವೇಳ್ಕು ಭವ್ಯವಿಷಯಂ' ಎಂದು ತಮ್ಮ ದಿವ್ಯದೃಷ್ಟಿಯನ್ನು ತೋಡಿಕೊಂಡಿದ್ದಾರೆ. ಕವಿಯ ವ್ಯಕ್ತಿತ್ವ ಇಲ್ಲಿ ಎದ್ದು ಕಾಣುತ್ತದೆ. ಅವರ ಮಹದಾಕಾಂಕ್ಷೆಯ ಜ್ಯೋತಿಸ್ವರೂಪದ ಅರಿವು ನಮಗಾಗುತ್ತದೆ. ಇದೇ ಮನಸ್ಸು, ವ್ಯಕ್ತಿತ್ವ ಕಾರಣವಿರಬಹುದು. ಕವಿ 'ರಾಮಾಯಣ ದರ್ಶನಂ' ಕಾವ್ಯ ಬರೆದು, ಅದು ಮಹಾಕಾವ್ಯವಾಗಿ, ತಾವೂ ಮಹಾ ಕವಿಯಾಗಿರುವುದು.

ಪ್ರಕೃತಿಯ ಹಿರಿಯ ಪುತ್ರರಾಗಿ ಕನ್ನಡಮ್ಮನ ನಿಜಕುವರರಾಗಿ ಉನ್ನತ ಬಾಳನ್ನು ಬಾಳುತ್ತಿರುವ ಮಹಾಕವಿ ಕುವೆಂಪು ಆಂಗ್ಲರಲ್ಲಿ ಪ್ರಕೃತಿಗೆ ಹಿರಿಯ ಪುತ್ರ ನಾಗಿರುವ ಮಹಾಕವಿ ವರ್ಡ್ಸ್‌ವರ್ತ್‌ಗೆ ಬಹುವಾಗಿ ಪ್ರೀತಿ ಗೌರವಗಳನ್ನು ತೋರಿ ಸಿದ್ದಾರೆ.

ಪ್ರಕೃತಿ ಸಂಸರ್ಗದಲಿ ದಿವ್ಯಭಾವವು ಮೂಡಿ
ಆತ್ಮವು ವಿರಾಟದಲಿ ಎಂತು ವಿಹರಿಸುವಂತೆ
ಮಾಡುವುದೊ, ಕಾವ್ಯರ್ಷಿ, ನಿನ್ನವಾಣಿಯರೀತಿ
ಅಂತಿಹುದು.

ಇದು ಮಹಾಕವಿಗೆ ಮಹಾಕವಿಯ ಕಾಣಿಕೆ.

ಹಿರಿಯ ಕವಿ ಪಂಜೆಯವರನ್ನು ನೆನೆದು ಭಕ್ತಿಯಿಂದ ಹಾಡಿದ್ದಾರೆ. ಪದ್ಯದ ಮೊದಲಲ್ಲಿ 'ಹಾಲು ಸಕ್ಕರೆ ಸೇರಿ ನೀವಾದಿರಾಚಾರ್ಯ' ಎಂದು ಅವರ ಹಾಲು ಸಕ್ಕರೆಯಂತಹ ಶುಚಿರುಚಿಯ ವ್ಯಕ್ತಿತ್ವವನ್ನು ಅಷ್ಟೆ ಶುಚಿಯಾಗಿ ತೋರಿಸಿ :

....ಕೀರ್ತಿ ಲೋಭಕೆಬಾಗಿ
ಬಾಳ್ಬಂಡಿ ನೊಗಕೆ ಹೆಗಲಿತ್ತವರು ನೀವಲ್ಲ :
ತೇರ್ಮಣಿಯನೆಳದಿರಲ್ಲದೆ ಮತ್ತೆಮಣದಿಲ್ಲ ಎಂದು

ಪಂಜೆಯವರ ಅಪರಂಜಿಯಂತಹ ಬಾಳನ್ನು ಬಹುಸೊಗಸಾಗಿ ಚಿತ್ರಿಸಿದ್ದಾರೆ. ಮಧ್ಯೆ ಬರುವ

ಕಪ್ಪುರಕೆ ಕಿಡಿ ಮತ್ತೆ ಸತ್ಯಕೆ ಸೌಂದರ್ಯ
ಸಂಗಮಿಸಿದಂತೆ,.........................
ಕಚ್ಚಿದರೆ ಕಬ್ಬಾಗಿ, ಹಿಂಡಿದರೆ ಜೇನಾಗಿ
ನಿಮ್ಮುತ್ತಮಿಕೆಯನ್ನೆ ಮೆರೆದಿರಯ್ಯ

ಈ ಸಾಲುಗಳು ಪಂಜೆಯವರ ವ್ಯಕ್ತಿತ್ವವನ್ನು ಕಡೆದಂತಿವೆ. ಬಾಳಿ ಕಣ್ಮರೆ ಯಾದ ದಿವ್ಯಚೇತನಕ್ಕೆ ಬಾಳಸವಿ ಸವಿಯುತ್ತಿರುವ ಹಿರಿಚೇತನದ ಕಾಣ್ಕೆ.

ಹೀಗೆಯೇ, ಸಂಪ್ರದಾಯದ ಸಂಕೋಲೆಯಿಂದ ಜನ ತಮ್ಮ ಬಾಳನ್ನು ಹೀಳು ಮಾಡಿಕೊಳ್ಳುತ್ತಿದ್ದುದನ್ನು ತಪ್ಪಿಸಲು ಪ್ರಯತ್ನಿಸಿ ಆ 'ಸಂಪ್ರದಾಯವನ್ನು' ಕುಡಿದು

ಮರೆಯಾದಂತೆ ವಿಷ ಕುಡಿದು ಮರೆಯಾದ ಸತ್ಯಶೋಧಕ ಸಾಕ್ರೆಟೀಸನನ್ನೂ ರಾಜನಾಗಿ ಯುದ್ಧದ ಕೋಟಲೆಯಲ್ಲಿ ಜೀವತೆತ್ತು ಸಹಸ್ರಾರು ಜನ ಸಾವಿನ ಮಡುವಿನಲ್ಲಿ ಮುಳುಗಿದವರನ್ನು ನೋಡಿ, ಬುದ್ಧದೇವನ ವಾಣಿಯಂತೆ ಅಹಿಂಸಾ ಮಾರ್ಗ ಹಿಡಿದು ದೇಶೋದ್ಧಾರಕ್ಕೆ ಪಣತೊಟ್ಟು ಬಾಳಿದ ಅಶೋಕ ಚಕ್ರವರ್ತಿಯನ್ನು 'ನೀಂ ದಿಟದ ರಾಜರ್ಷಿ' ಎಂದೂ—ಆಧುನಿಕ ರಾಜಕೀಯದಲ್ಲಿ ಸೇರಿ ಜನರ ಏಳ್ಗೆಗಾಗಿಯೇ ಹೋರಾಡಿ ಮಡಿದ ಲೆನಿನ್, ಟಾಲ್‌ಸ್ಟಾಯ್‌ರನ್ನು ಕವಿ ಹೃತ್ಪೂರ್ವಕವಾಗಿ ವಂದಿಸಿದ್ದಾರೆ. ಬಾಳಿಗೆ ಹೆದ್ದಾರಿ ಹಾಕಿಕೊಟ್ಟವರನ್ನು ಕವಿ ತಮ್ಮ ಈ ಅಷ್ಟ ಷಟ್ಪದಿಯಲ್ಲೇ ಅವರ ಪೂರ್ಣಚಿತ್ರ ಕೊಟ್ಟಿರುವುದು ಪ್ರಸಂಶನೀಯ.

ಕುವೆಂಪುರವರು ಅಪಾರ ದೇಶಭಕ್ತರು. ನಾಡಿಗಾಗಿ, ನುಡಿಗಾಗಿ ತಮ್ಮ ವಾಕ್ ಚಾತುರ್ಯದಿಂದ ಜನರ ಮನದಲ್ಲಿ ರಾಷ್ಟ್ರತೆಯನ್ನು ತುಂಬಿದವರು. ಅವರ ಪೌರುಷ ವಾಣಿಯಲ್ಲಿ ಸತ್ವತುಂಬಿ, ರಾಷ್ಟ್ರೀಯತೆ ತುಂಬಿ ಮಲಗಿದವರನ್ನು ಚಪ್ಪರಿಸಿ ಏಳಿಸುವಷ್ಟು ಶಕ್ತಿ ಇದೆ.

ರಾಷ್ಟ್ರದ ಬಿಡುಗಡೆಗಾಗಿ ಹೋರಾಡಿದ ಅನೇಕ ಹಿರಿಯ ವ್ಯಕ್ತಿಗಳು ಮಡಿದು ಕೆಚ್ಚಿದೆಯಿಂದ ಹಿರಿಯರ ಪಥ ತುಳಿದು ಹೊರಡಲನುವಾಗಿದ್ದ ಯುವಕರು ದಾರಿ ಕಾಣದೆ ತತ್ತರಿಸುತ್ತಿರುವಾಗ ಕುವೆಂಪುರವರು ಕಳೆಗುಂದಿದ ಜನಸ್ತೋಮಕ್ಕೆ-ಅಳಿದ ಮಹಾತ್ಮ ಮತ್ತೆ ಬಂದು ನೆಟ್ಟ ಕಟ್ಟುಗಳನ್ನು ತುಂಬುವನೆಂದೂ ಬರಿಯ ಯೋಚನೆಯಲ್ಲಿ ಹೊತ್ತು ಕಳೆಯಬೇಡಿರೆಂದು ಹೇಳಿ

........ಏಕೆನೆ, ಬಿತ್ತು
ಲಯವಾಗುವುದೆ ಮೊಳಕೆಗಾಯಸ್ಸು. ಮುನ್ನುಗ್ಗಿ,
ತಳಿರುಗಳೆ, ಕಾಯುತಿದೆ ನಿಮಗಾಗಿ ಹೊಸಸುಗ್ಗಿ !

ಎಂದು ಭವಿಷ್ಯವನ್ನು ನುಡಿದಂತಿದೆ ಕವಿಯವಾಣಿ.

ತ್ಯಾಗವಿಲ್ಲದ ದೇಶಭಕ್ತಿ ಕೈಬ್ಯಕೆಯುಷ್ಟಿ !

ಬರಿಮಾತಿನಲ್ಲಿ ತಮ್ಮ ಒಣ ಹಿರಿಮೆಯೆಲ್ಲವನ್ನು ಹೇಳಿಕೊಂಡು ಭಾಷಣಗಳ ಮಳೆಯನ್ನು ಸುರಿಸುತ್ತ ತಿರುಗುವವರನ್ನು ಕಂಡು ಕವಿಗೆ ಹಿಡಿಸದೆ ನಿಜವಾದ ತ್ಯಾಗವೇ ರಾಷ್ಟ್ರೀಯನ ಕರ್ತವ್ಯ ಎಂದು ಎಚ್ಚರಿಸಿದ್ದಾರೆ.

ನಾಡಿಗಾಗಿ ಮಡಿದ ವೀರದೇಶ ಭಕ್ತನ ಸಂದೇಶ ನೋಡಿ.

ಬೆದರದಿರು, ಬೆದರದಿರು................
................ನಾನಳಿದರೇನಂತೆ
............ನನ್ನ ಜಡದೇಹ
ಹತವಾಯ್ತು; ನನ್ನಾತ್ಮ ಸಂಗ್ರಾಮ ಗತವಾಯ್ತು.
ಒಬ್ಬನಾಗಿದ್ದವನು ಕೋಟಿಯಾಗಿಹೆನಿಂದು !
ಸ್ವಾತಂತ್ರ್ಯವನು ಕೊಲ್ಲುವರೆ ಒಬ್ಬನನು ಕೊಂದು ?

ಎಂತಹ ಅಮರವಾಣಿ !

ಕವಿ ಮನದ ವೀಣೆ ಬರಿ ಭಾವನಾಲೋಕದ, ಪ್ರಕೃತಿಯ ಸವಿಯುಂಡು ಸಂಚರಿಸುವ ಸ್ವರ್ಗೀಯ ಆನಂದದ ನಾದವನ್ನೇ ಮಿಡಿದಿಲ್ಲ. ಬಾಳಿನ ಬವಣೆಯನ್ನೂ ಮಿಡಿದಿದೆ. ಬಾಳಿನ ಬಹುಮುಖಗಳನ್ನು ಕಂಡು ತಮ್ಮ ಅನುಭವದ, ಕಾವ್ಯದ ಮೂಸೆಯಲ್ಲಿ ಇಟ್ಟು ಅವಕ್ಕೆ ತಕ್ಕಂತೆ ರೂಪಕೊಟ್ಟು ಕೆತ್ತಿದ್ದಾರೆ. ಅವರ ಕಾವ್ಯದಲ್ಲಿ ನಿರ್ಮಿಸದಿರುವ ವಸ್ತುವಿಲ್ಲ. ಅವರ ಹರಿಯದಿರುವ ತಾಣವಿಲ್ಲ. ಸೃಷ್ಟಿಯನ್ನು ಕಂಡು ಸಂತೋಷಪಟ್ಟಂತೆ, ಹಿರಿಯ ಚೇತನಗಳನ್ನು ನಮಸ್ಕರಿಸುವಂತೆ, ಬಾಳಿನ ಕಷ್ಟಕಾರ್ಪಣ್ಯಗಳನ್ನೂ ಕಂಡು ಕರಗಿದ್ದಾರೆ. ಕ್ರೌರ್ಯ ದರ್ಪಗಳನ್ನು ನೋಡಿ ರೊಚ್ಚಿಗೆದ್ದಿದ್ದಾರೆ. ಮೂಢತೆಗೆ ಮಾರುಹೋದ ಜನಕ್ಕಾಗಿ ಮರುಗಿದ್ದಾರೆ.

ಮಾದೇಶ್ವರನ ಬೆಟ್ಟಕಂತೆ, ಅದೊ ನೋಡಲ್ಲಿ,
ನಡುಹಗಲಿನುರಿಬಿಸಿಲಿನಲಿ ಕೂಗಿಕೊಳ್ಳುತ್ತೆ
ಬಿಡುಮುಡಿಯ ಹರಿದುಡೆಯ ಹೊಟ್ಟೆಗಿಲ್ಲದ ಹಳ್ಳಿ
ಹೋಗುತಿದೆ ! ಕೂಸುಗಳೊ ಬಿರುಸೆಕೆಗೆ ಸೀಯುತ್ತೆ
ತಾಯ್ಗಳೆದೆ ಗೊರಲುತಿವೆ !

ಎಂತಹ ಹೃದಯ ವಿದ್ರಾವಕವಾದ ಚಿತ್ರ ! ಇಂದಿನ ಲೌಕಿಕ ವ್ಯವಹಾರ ಹದಗೆಟ್ಟು, ದೀನದಲಿತರ ರಕ್ತದ ಕಣಗಳು ನಿರ್ಮಿಸುವ ಹಣ ಸೌಕರ್ಯವೆಲ್ಲವೂ ಹೀಗೆ ಧನಿಕನ ಡೊಳ್ಳುಹೊಟ್ಟೆ ತುಂಬುತ್ತಿರುವುದನ್ನು ಚಿತ್ರಿಸುವ ಕವನವೆಂದರೆ 'ಬೆಕ್ಕು-ಇಲಿ'

ಊರಿನ ಕೊಳೆಯನೆಲ್ಲ ತೊಳೆವ ನಿನಗೆಯೆ ತೊಳೆಯೆ
ನೀರಿಲ್ಲ, ಓ ತೋಟಿ ! ಹಣವಂತರಿಗೆ ತೊಟ್ಟ
ಮನೆಗಳನು ಕಟ್ಟುವ ನಿನಗೆ ಮಲಗೆ ಬಡಹಟ್ಟು
ಗತಿಯಿಲ್ಲ, ಓ ಕೂಲಿಕಾರ ! ಪೈರನು ಬೆಳೆಯೆ
ನೀನು, ಲೋಕಕೆ ಕೂಳು ; ಆದರುಣ್ಣಲು ನಿನಗೆ
ಕಾಳಿಲ್ಲ, ಓ ರೈತ ! ತಿಂದು ಧನಿಕರ ಬುತ್ತಿ
ತೇಗುತಿದೆ; ಜಡಜನರೊ ಹೊಟ್ಟೆಬೆನ್ನಿಗೆ ಹತ್ತಿ
ನರಳಿ ಹೊರಳುತ್ತುರುಳುತಿರುವರು ಜವನ ಮನೆಗೆ.

ಕವಿಯ ಕವನಕವನದಲ್ಲೂ ಅವರ ವ್ಯಕ್ತಿತ್ವ ಎದ್ದು ಕಾಣುತ್ತದೆ. ಅವರ ಗುರಿ, ಜೀವನದೃಷ್ಟಿ ಎಲ್ಲವೂ ಕವನಗಳಲ್ಲಿ ಮಿಳಿತವಾಗಿವೆ. ಅವರ 'ಮಾಯೆ-ಮುಕ್ತಿ' ಎಂಬ ಕವನದಲ್ಲಿ ಜೀವನದ ನೆಲದಲ್ಲೇ ನಡೆಸಲೆಳಸುವ ವ್ಯವಸಾಯ ನೋಡಿ.

ಮರುಭೂಮಿ ಮಾರ್ಗದಲಿ, ವೈರಾಗ್ಯಸಾಧನದಿ
ಮುಕ್ತಿ ?—ನಾನದನೊಲ್ಲೆ. ಅದು ನನ್ನ ಪಥವಲ್ಲ ;
ರಸ ತಪಸ್ಸಿನ ಕವಿಯ ದರ್ಶನದ ಮತವಲ್ಲ
ಸೌಂದರ್ಯ ಮಾಧುರ್ಯ ಸಮ್ಮೋಹ ನಂದನದಿ,

ಮಾಯಾ ಜಗತ್ತಿನ ಸಹಸ್ರಾರು ಬಂಧ ನದಿ,
ಮಳೆಬಿಲ್ಲಿನಲಿ ಬಣ್ಣಗಳು ರಮಿಸುವಂದದಿಂ,
ನಲಿಯುವೆನು ಹಾಸುಹೊಕ್ಕಾಗಿ.

ಕವಿ ಇಲ್ಲಿ ಸತ್ವಶಾಲಿಯಾಗಿ ದುಡಿಯುವ ಕಲಿಯಾಗಿದ್ದಾರೆ. ಕಲ್ಲಲ್ಲಿ ರಸತೆಗೆಯುವ ದೀಕ್ಷೆ ತೊಟ್ಟಿದ್ದಾರೆ. ಬಾಳಿನಿಂದ ಪಲಾಯನ ವಾದ ಹೇಳರು. ಜೀವನದಲ್ಲಿ ಎಲ್ಲ ಸುಖದುಃಖಗಳೊಡನೆ ಹಾಸುಹೊಕ್ಕಾಗಿ ತ್ಯಾಗ–ಭೋಗಗಳ ಎರಡೂ ಕೈಗಳಿಂದ ಬಾಳನ್ನು ತಬ್ಬಿ ಮುಕ್ತಿ ಪಡೆಯುವ ನಿರ್ಧಾರವಿದೆ. ನೆಲದವನಾಗಿ, ನೆಲದಲ್ಲಿ ನಿಂತು ಮುಗಿಲ ಮುಟ್ಟುವುದೇ ಆಗಿದೆ ಇವರ ದೃಷ್ಟಿ.

ಕವಿ ತಮಗೆ ಬರಲಿರುವ ಕೀರ್ತಿಯನ್ನು ಶನಿ ಎಂದು ಜರೆದು ತುಚ್ಛೀಕರಿಸಿದ್ದಾರೆ.

ಪೀಡಿಸುತ್ತಿಹೆ ಏಕೆ? ತೊಲಗಾಚೆ ಕೀರ್ತಿ ಶನಿ ;
ಸಾಕೆನಗೆ ನಿನ್ನ ಸಹವಾಸ ವಿಭವಭ್ರಾಂತಿ !

ಅವರಿಗೆ

ಬಳಿಯಿರುವ ವೆಂಕಯ್ಯ, ಕಂಠಯ್ಯ ಕಸ್ತೂರಿ,
ಶ್ರೀನಿವಾಸರು ಮೆಚ್ಚಿದರೆ ಸಾಕೆನಗೆ ತೃಪ್ತಿ ;
ನನ್ನ ಕನ್ನಡ ಕವನಗಳ ಯಶಸ್ಸಿನ ವ್ಯಾಪ್ತಿ
ಲಂಡನ್ನಿನೊಳಗೂದ ಬೇಕಿಲ್ಲ ತುತ್ತೂರಿ !

ಎಂದು ತೃಪ್ತಿಗೊಂಡಿದ್ದಾರೆ.

ಹೀಗೆ ಕವಿ ತಮ್ಮ ಕಾವ್ಯದಲ್ಲಿ ಜೀವನದೃಷ್ಟಿಯನ್ನು ಅನೇಕ ಮುಖಗಳಲ್ಲಿ ನಮಗೆ ತಿಳಿಸಿದ್ದಾರೆ. ಬಾಳಿನ ಏನೆಲ್ಲ ತೊಂದರೆಗಳು ಸಮುದ್ರದ ಅಲೆಯಂತೆ ಬಂದು ಎದುರಿಸಿದರೂ, ಅವರ ಆತ್ಮವು ದೇವನೆಡೆಗೆ ಓಡೋಡಿ ಹೋಗುತ್ತಿರುವಾಗ ಯಾವುದನ್ನೂ ಲೆಕ್ಕಿಸುವುದಿಲ್ಲ. ಅವರೇ ಹೇಳಿರುವಂತೆ ಇಂತಹ ಗುರಿಯುಳ್ಳ ಜೀವನದ ಪರಿಪೂರ್ಣತೆಯಿಂದಲೇ ಪರಮ ಸುಖವೆಂಬುದು ತಿಳಿಯುತ್ತದೆ. ‘ ಪೂರ್ಣಯೋಗಿಯೆ ಪರಮಭೋಗಿ ’ ಎಂಬ ಪದ್ಯದಲ್ಲಿ ಗೋಚರವಾಗುತ್ತದೆ.

ಬೇಸರದ ಬಂದಿಳಿಕೆ ಮನದ ಮಾವಿನ ಮರಕೆ
  ಹಿಡಿದವನು ತಿರುಗಿಸುವ ಮೊದಲೆ ಜೇನಿನತನಕೆ
  ನಿನ್ನ ಜೀವವನು ದುಮುಕಿಸು ಜಗದ ಜೀವನಕೆ :
ತೊರೆಯಲ್ಲಿ ತೆರೆಯಾಗಿ ಹರಿಯಲದು ಸಾಗರಕೆ.
ಪಾಲ್ಗೊಂಡು ಬೇರೆ ನಿಲ್ಲುವ ನೀರ್ಗೆ ಪರಮಗತಿ
  ಪಾಚಿ ; ಹೊಳೆಗಿಳಿಯಲ್ಕೆ ತಾನೆ ಸಂಜೀವ ಸುಧೆ :
  ಕೋಟಿ ವೀಚಿಗಳೊಡನೆ ಕುಣಿಯುವಾನಂದವಿದೆ ;
ತನ್ನಲ್ಪ ಗಾನಕ್ಕೆ ಕಲ್ಲೋಲ ಸರ್ವರುತಿ
ಶ್ರುತಿಯಾಗುವೊಂದತುಲ ಸಂಘಕೃಪೆ–ಜಡತನಂ

ಸ್ವಾರ್ಥದ ತಮೋನಿದ್ರೆ : ತಳ್ಳಿ ತೊರೆದೆದ್ದೇಳು.
ಜೀವೋತ್ಸವದ ತೇರ್ಗೆ ಗಾಲಿಯಾದೊಡೆ ಬಾಳು
ಸಾರ್ಥಕಂ, ಸುಂದರಂ, ಮಧುರ ಚಿರನೂತನಂ.
ನೀರಸತೆಗಿಂ ಪಾಪವಿಲ್ಲ, ರಸಕೆಣೆಯಾಗಿ
ಪುಣ್ಯವಿಲ್ಲೆನೆ—ಪೂರ್ಣಯೋಗಿಯೆ ಪರಮಭೋಗಿ !

ಕೃತ್ತಿಕೆಯ ನಕ್ಷತ್ರಲೋಕದಲ್ಲಿ ವಿಹರಿಸಿದವರಿಗೆ ಅಲ್ಲಿ ಕಲೆ ಹಣ್ಣಾಗಿರುವುದು ತಿಳಿಯುತ್ತದೆ. ಇಲ್ಲಿ ಕುವೆಂಪುರವರ ಶೈಲಿ ಸೊಗಸಾಗಿದೆ, ಸುಂದರವಾಗಿದೆ. ಮನಮೆಚ್ಚಿದ ಭಾವಗಳು ಬಹು ನಯವಾಗಿ, ನವುರಾಗಿ ಮನಮುಟ್ಟುವಂತೆ ಮೂಡಿಬಂದಿವೆ.



# ಕನ್ನಡವನ್ನು ಕುರಿತು ಕುವೆಂಪು ಕವಿತೆಗಳು

**ಹಾ. ಮಾ. ನಾಯಕ**

ರಾಜಕಾರಣಿ ಕಟ್ಟುವ ಸಂಬಂಧ ನಶ್ವರವಾದುದು, ಸ್ವಾರ್ಥಮೂಲವಾದುದು. ಕವಿ ಬೆಳಸುವ ಬಾಂಧವ್ಯ ಚಿರವಾದುದು, ಆದರ್ಶಪರವಾದುದು. ರಾಜಕಾರಣ ಯಾವ ಕಾಲದಲ್ಲೂ ಕನ್ನಡಕ್ಕೆ ಒಳ್ಳೆಯದನ್ನು ತರಲಿಲ್ಲ. ಅಧಿಕಾರದ ಆಸೆ, ಸಂಪತ್ತಿನ ಹಂಬಲ ಇವೇ ಕಾಲಕಾಲಕ್ಕೆ ನಾಡನ್ನು ಚೂರು ಚೂರು ಮಾಡುತ್ತಾ ಬಂದುವು. ಒಂದು ಸಂಸ್ಕೃತಿಯ, ಒಂದು ಭಾಷೆಯ ಜನ ಬೇರೆ ಬೇರೆ ಪ್ರಭಾವಗಳಿಗೆ ಸಿಕ್ಕಿ ನರಳಲು ಕೂಡ ರಾಜಕಾರಣದ ದೈತ್ಯಶಕ್ತಿಯೇ ಕಾರಣವಾಯಿತು. ಬೇರೆ ಬೇರೆ ಆಳ್ವಿಕೆಯಲ್ಲಿ ಹಂಚಿಹೋದರೂ ಕನ್ನಡ ಜನ ತಾವು ಒಂದೇ ಎಂಬುದನ್ನು ಮರೆಯಲಿಲ್ಲ. ಪರಂಪರಾಗತವಾಗಿ ಬೆಳೆದು ಬಂದ ಅವರ ಜೀವನದ ಧರ್ಮ, ಕಲೆ, ಸಂಸ್ಕೃತಿ, ಸಾಹಿತ್ಯಗಳು ಅವರನ್ನು ಒಂದು ಸೂತ್ರದಲ್ಲಿ ಬಂಧಿಸಿದುವು. ರಾಜಕಾರಣ ಬಾಹ್ಯದಲ್ಲಿ ಈ ಕಟ್ಟನ್ನು ಸಡಲಿಸುತ್ತ ಬಂದಹಾಗೆಲ್ಲ, ನಮ್ಮ ಕವಿಗಳು, ಕಲಾವಿದರು ಆಂತರಂಗಿಕವಾಗಿ ಬಿಗಿಗೊಳಿಸುತ್ತಾ ಬಂದಿದ್ದಾರೆ. ಜನ ಆತ್ಮಶಕ್ತಿಯನ್ನು ಕಳೆದುಕೊಳ್ಳುವಂಥ ಸಂದರ್ಭದಲ್ಲಿ, ಬೆಳಕನ್ನು ನೋಡುವ ಹಂಬಲನ್ನು ಬಿಟ್ಟು ಮಂಕರಾಗಿ ಉಳಿದ ಸಂದರ್ಭದಲ್ಲಿ ಅವರನ್ನು ಹೊಡೆದೆಬ್ಬಿಸಿದ್ದಾರೆ; ಉತ್ಸಾಹ ತುಂಬಿದ್ದಾರೆ.

ನಾಡಿನ ನಾನಾಮುಖದ ಹಿರಿಮೆಯನ್ನು ಬಣ್ಣಿಸಿ, ಒದಗಿದ ದುಸ್ಥಿತಿಯಿಂದ ಎಚ್ಚರಾಗಿ ನಾಳಿನ ಅರುಣೋದಯಕ್ಕೆ ಸಿದ್ಧರಾಗುವಂತೆ ಕೂಗಿ, ನಮ್ಮತನವನ್ನು ನಾವು ಮರೆಯುತ್ತಿರುವ ನಾಚಿಗೆಗೇಡಿನ ಪ್ರಸಂಗಕ್ಕೆ ವ್ಯಥಿತರಾಗಿ ಹಾಗಾಗದಂತೆ ನವಚೇತನವನ್ನು ತುಂಬಿ ನಮ್ಮ ಕವಿಗಳು ಮನಃಪೂರ್ವಕವಾಗಿ ತಮ್ಮ ಕರ್ತವ್ಯವನ್ನು ನಡೆಸಿದ್ದಾರೆ. ಜನತೆಗೆ ಮಾರ್ಗದರ್ಶನ ನೀಡಿದ್ದಾರೆ.

ಸಾಹಿತ್ಯಕ್ಷೇತ್ರಕ್ಕೆ ಪ್ರವೇಶಿಸುವವರು ಮೊದಲು ಕವಿತೆಯನ್ನು ಬರೆಯಲು ತೊಡಗಿದಂತೆ, ಪ್ರಾಚೀನ ಸಾಹಿತ್ಯದಲ್ಲಿ ಕೆಲವು ಕಾವ್ಯವಸ್ತುಗಳು ಅನಿವಾರ್ಯವಾದಂತೆ, ಕನ್ನಡದ ನವೋದಯದ ಈ ಕಾಲದಲ್ಲಿ ಕನ್ನಡವನ್ನು ಕುರಿತು ಕವಿ ಬರೆಯುವುದು ಒಂದು ಸಂಪ್ರದಾಯವೇ ಆಯಿತು. ನಾಡಿನ ಹಿರಿಮೆಯನ್ನು ಹೊಗಳಿ ಹಾಡುವ ಭರದಲ್ಲಿ ಕವಿತೆಗಳು ಕ್ಯಾಟಲಾಗುಗಳಾದುವು; ದುಸ್ಥಿತಿಗೆ ಅತ್ತರು, ಕರೆದರು; ಗೋಳಾಡಿದರು. ದುಃಖಭರಿತರಾಗಿ ನಾಳಿನ ಬರವನ್ನು ಮರೆತರು. ಎಲ್ಲ ಕವಿತೆಗಳೂ ಚರ್ವಿತ ಚರ್ವಣವಾದುವು. ಕನ್ನಡ ನಾಡಿನ ವರ್ಣನೆ, ಕನ್ನಡದ ಪರಿಸ್ಥಿತಿ 'ಅಷ್ಟಾದಶ ವರ್ಣನೆ'ಗಳ ಪಟ್ಟಿಗೆ ಒಂದು ಹೊಸ ವಿಷಯವಾಯಿತು,

ಆದರೆ ಪ್ರತಿಭಾವಂತರಾದವರು—ಮಣ್ಣನ್ನು ಹೊನ್ನುಮಾಡಲು ಸಮರ್ಥರಾದವರು—ಈ ಬಗೆಯ ಕಾವ್ಯದ ನಿಜ ಉದ್ದೇಶವನ್ನು ಸಾಧಿಸಲು ಸಮರ್ಥರಾದರು. ಜನರಿಗೆ ನಾಡುನುಡಿಗಳ ಬಗೆಗೆ ಅಭಿಮಾನ, ಒಲವು ಮೂಡಿಸುವ ಕಾರ್ಯದಲ್ಲಿ ನೆರವಾದರು. ಹೊಸಬಾಳಿನ ಹಾಡನ್ನು ಹಾಡಿ ಹೊಸಲೋಕಕ್ಕೆ ಆಹ್ವಾನಿಸಿದರು. ಕಾವೇರಿಗೋದೆಯರು ನೈತೊಳಿವ ನಲುನಾಡು ಎಂದು ಕಾವ್ಯಮಯವಾಗಿ ವರ್ಣಿಸುವಾಗ; ತನುಕನ್ನಡ, ಮನಕನ್ನಡ, ನುಡಿಕನ್ನಡವೆಮ್ಮವು ಎಂದು ಜೀವನದ ಆದರ್ಶವನ್ನು ಸಾರುವಾಗ; ಕನ್ನಡವೇ ಶ್ರೀಗಂಧ ಶ್ರೀ ತುಲಸಿ ಎಂದು ಹಾಡುವಾಗ; ಸೊಕ್ಕಿನಲಿ ತಲೆಯೆತ್ತಿ ಜೊತೆಯವರ ಕೂಟದಲಿ ನಾವು ಸಮ ನಿಮಗೆಂದು ನುಡಿವ ಬಲವಿಲ್ಲ ಎಂದು ಕೊರಗುವಾಗ; ನಾವೆಲ್ಲ ಒಂದೆ ಮನೆಯವರಣ್ಣತಮ್ಮದಿರು, ನಮ್ಮೆಲ್ಲರನು ಪಡೆದುದೊಂದೆ ನಾಡಿನಬಸಿರು ಎಂದು ನಾವೆಂದವೇ ನಮಗೆ ಇನ್ನಾರೆದುರು ಎಂದು ಭರವಸೆಯನ್ನು ತೋರುವಾಗ; ನರಕಕ್ ಇಳ್ಸಿ ನಾಲ್ಗೆ ಸೀಳ್ಸಿ ಬಾಯ್ ಒಲ್ಸಾಕಿದ್ರೂ ನೂವೆಮೂಗ್ನಲ್ ಕನ್ನಡ್ ಪದವಾಡ್ತೀನೆ ಎಂದು ಶಪಥಮಾಡಿ ಪರ್‍ಪಂಚ ಇರೋತನ್ಕ ಕನ್ನಡ ಪದ್ಗೊಳ್ ನುಗ್ಲಿ ಎಂದು ಹಾರೈಸುವಾಗ; ಎಂಥ ನಾಡಿದು ಎಂಥ ಕಾಡಾಯಿತೋ ಎಂದು ಕಣ್ಣೀರು ಕರೆಯುವಾಗ; ಬಾಳೋಣ ಏಳಿನ್ನು ಅರಸಾಗಿ ಆಳೋಣ ಮನೆಮುರುಕರನ್ನು ಮುರಿದು ಎಂದು ಎಚ್ಚರಿಸುವಾಗ; ಕನ್ನಡ ಕಂದಮ್ಮನ ಲಾಲಿ ಹಾಡುವ ಅಪೂರ್ವ ಕಲ್ಪನೆಯನ್ನು ವ್ಯಕ್ತಪಡಿಸುವಾಗ—ಯಾವ ಜನಾಂಗ ಎಚ್ಚರಾಗದು? ಅಭಿಮಾನ ತಾಳದು? ಮೈಕೊಡಹಿ ಏಳದು? ರಸರೋಮಾಂಚನಗೊಳ್ಳದು? ತನ್ನ ಜಡತೆಗೆ ನಾಚಿ, ಕರೆಗೆ ಓ ಕೊಡದು?

ನೆಲದಲ್ಲಿ ಬೀಳುವ ಒಂದು ಬೀಜ, ಸಹಸ್ರ ಬೀಜಗಳಿಗೆ ಕಾರಣವಾಗುವಂತೆ, ಕವಿಯ ಹೃದಯದಿಂದ ಹೊಮ್ಮುವ ಒಂದು ಮಾತು ನೂರು ಹೃದಯಗಳನ್ನು ಎಚ್ಚರಿಸುತ್ತದೆ; ನೂರು ಕತ್ತಿಯಮೊನೆ ಸಾಧಿಸದ ಕೆಲಸವನ್ನು ಪ್ರತಿಭಾ ಸಂಪನ್ನನಾದ ಒಬ್ಬ ಕವಿಯ ಲೇಖನಿ ಸಾಧಿಸುತ್ತದೆ. ಅಧಿಕಾರಬಲದಿಂದ ನಡೆಯದ ಕೆಲಸ ಪ್ರೀತಿಯ ಹಾರೈಕೆಯಿಂದ ನಡೆಯುತ್ತದೆ. ರಣಘೋಷದಿಂದ ಈಡೇರದುದು ಕವಿವಾಣಿಯಿಂದ ಸಿದ್ಧಿಸುತ್ತದೆ. ಹಲವು ಕಾಲ ತಮಗೆ ಎದುರಾದ ದುಷ್ಟಪರಿಸ್ಥಿತಿಗೆ ಮರುಗದೆ, ಹಿಂಜರಿಯದೆ, ನಿರ್ವಿಣ್ಣರಾಗದೆ ಕನ್ನಡಿಗರು ತಮ್ಮ ಒಂದುತನವನ್ನು ಕಾಪಾಡಿಕೊಂಡು ಬಂದಿರುವುದಕ್ಕೆ ಅವರ ಕವಿಸಂತಾನವೇ ಮುಖ್ಯ ಕಾರಣವಾಗಿದೆ.

ಹಂಪೆಯನ್ನು ಹಾಳುಮಾಡಿದ, ಕನ್ನಡ ನೆಲವನ್ನು ಹರಿದು ಹಂಚಿದ ರಾಕ್ಷಸ ಶಕ್ತಿಗಳಿಗಿಂತ ಗೊಮ್ಮಟನನ್ನು ಕೆತ್ತಿದ, ಶಿಲಾಬಾಲಿಕೆಯರನ್ನು ಕಡೆದ, ವಿಕ್ರಮಾರ್ಜುನವಿಜಯ-ರಾಮಾಯಣದರ್ಶನಗಳನ್ನು ವಿರಚಿಸಿದ ವ್ಯಕ್ತಿ ಶಕ್ತಿಗಳು ಕನ್ನಡಿಗರ ಗೌರವಕ್ಕೆ, ಪ್ರೀತಿಗೆ ಕಾರಣವಾಗಿವೆ. ಅವರ ಬದುಕಿಗೆ ಭರವಸೆಯನ್ನು ನೀಡಿವೆ.

ಈ ತಲೆಮಾರಿನ ಪ್ರಮುಖ ಕವಿಯಾದ ಕುವೆಂಪು ಅವರ ಕಾವ್ಯರಂಗದಲ್ಲಿ ನಿಸರ್ಗ, ಅಧ್ಯಾತ್ಮ, ಪ್ರೇಮ ಮೊದಲಾದ ವಿಷಯಗಳು ಹೇಗೆ ಪ್ರಮುಖವಾಗಿವೆಯೋ, ಅವರ ಕನ್ನಡ ಪ್ರೇಮವೂ ಅಷ್ಟೇ ಮಹತ್ತರವಾಗಿ ವ್ಯವೆತ್ತಿದೆ. ಅವರ ಭಾಷಣಗಳಲ್ಲಿ ಕನ್ನಡದ ಸಮಸ್ಯೆಗಳು ಹೇಗೆ ಪ್ರತಿಪಾದಿತವಾಗಿರುತ್ತವೆಯೋ, ಚರ್ಚಿತವಾಗಿರುತ್ತವೆಯೋ ಹಾಗೆಯೇ ಅವರ ಕೆಲವು ಕವಿತೆಗಳಲ್ಲಿ ಕನ್ನಡತನ ಮಿಂಚಿದೆ. ಅಲ್ಲಿ ಹಿಂದಿನ ವೈಭವವನ್ನು ಸ್ಮರಿಸಿ, ಇಂದಿನ ಅವನತಿಗೆ ಮರುಗಿ, ನಾಳಿನ ದಿವ್ಯದರ್ಶನವನ್ನು ಕವಿ ಕಂಡಿದ್ದಾರೆ. ಕನ್ನಡ ಶಕ್ತಿಯಾಗಿ, ಕಿಡಿಯಾಗಿರುವುದನ್ನು ಗುರುತಿಸಿದ್ದಾರೆ. ಕನ್ನಡ ಜನ ತಮ್ಮ ಬಹುಕಾಲದ ಬಯಕೆಯಂತೆ ಒಂದು ಆಡಳಿತದೊಳಕ್ಕೆ ಒಳಪಡುತ್ತಿರುವ ಈ ಸಮಯದಲ್ಲಿ ನಾಡು–ನುಡಿಗಳ ಬಗೆಗೆ ಕವಿ ಏನು ಚಿಂತನೆ ಮಾಡಿದಾನೆಂದು ನೋಡುವುದು ಸಮಯೋಚಿತವಾಗಿದೆ.

ಕುವೆಂಪು ಅವರಿಗೂ ಕನ್ನಡಕ್ಕೂ ಇರುವ ನಿಕಟ ಬಾಂಧವ್ಯವನ್ನು ಅಳೆಯ ಬರುವುದಿಲ್ಲ. ಕುವೆಂಪು–ಕನ್ನಡ ಒಂದಾಗಿ ಬೆಸೆದಿದೆ. ಜೀವನೆತ್ತಿರುವುದೇ ಕನ್ನಡದ ಸೇವೆಗಾಗಿ, ಉತ್ಕರ್ಷಕ್ಕಾಗಿ :



ಬಾಳುವುದೇತಕೆ ? ನುಡಿ, ಎಲೆ ಜೀವ
ಸಿರಿಗನ್ನಡದಲಿ ಕವಿತೆಯ ಹಾಡೆ
ಸಿರಿಗನ್ನಡದೇಳಿಗೆಯನು ನೋಡೆ
ಕನ್ನಡತಾಯಿಯ ಸೇವೆಯ ಮಾಡೆ

ಕವಿಯ ಎದೆ ಕುಣಿದಾಡಲು, ಕಿವಿ ನಿಮಿರಲು ಕೋಗಿಲೆಯ ದನಿಬೇಕಿಲ್ಲ; ನದಿಗಳ ಮಂಜುಳ ನಿನಾದಬೇಕಿಲ್ಲ; ಚೆಲುವೆಯರ ಕಲರವಬೇಕಿಲ್ಲ–ಹರಿ ಬರೆಯುವ, ಹರ ತಿರಿಯುವ ಕನ್ನಡ ಎಂಬಮಾತು ಸಾಕು! ಕಾಮನಬಿಲ್ಲನ್ನು ಕಂಡು ಕವಿ ಮೈಮರೆಯುವಂತೆ, ಕನ್ನಡವೂ ಕವಿಯ ಮೈಮರೆಸುವ ಸಮ್ಮೋಹಕ ಶಕ್ತಿಯಾಗಿದೆ.

ಹಂಪೆಯ ಕೋಟೆ ಹೆಬ್ಬಾಗಿಲಿನಲ್ಲಿ ಬಿಸುಸುಯ್ಯುತ್ತಿರುವ, ಕಂಬನಿಕರೆಯುತ್ತ ಮೂಕನಾಗಿರುವ, ಬಲ್ಗದೆಯ ಮೈಗಲಿಯಾದ ಭೀಮನನ್ನು ಕನ್ನಡನಾಡಿನ ಇಂದಿನ ಪರಿಸ್ಥಿತಿಗೆ ಕವಿ ಒಂದು ಪ್ರತಿಮೆಯನ್ನಾಗಿ ನಿಲ್ಲಿಸಿದ್ದಾರೆ. ಅವನು ಹಾಡುವ ಶೋಕಗೀತ ಒಂದು ಕಾಲದ ಕನ್ನಡಿಗರ ವೈಭವದ ಚರಮಗೀತೆಯಾಗಿದೆ. ನಮ್ಮ ಧೀರ ಬಾಳುವೆಯ ಅವನತಿಯ ಸಂಕೇತವಾಗಿ ಧರಣಿಪರು, ಮಂತ್ರಿಗಳು, ಸೈನಿಕರು, ಕಬ್ಬಿಗರು ಬಿಟ್ಟಳಿದ ಪಾಳ್ನೆಲವನ್ನು ಅವನು ಕಾಯುತ್ತಿದ್ದಾನೆ :

ರನ್ನ ಪಂಪರ ಮಹಾಕಾವ್ಯ ರಸರಂಗದಲಿ
ಭಾರತದ ಕೊಳುಗುಳದಿ ನಿನ್ನನೋಡಿಹೆನು.
ಕಂಬನಿಯ ಕರೆವ ಭೀಮನನಲ್ಲಿ ಕಂಡಿಲ್ಲ;

ಜಯಮತ್ತ ರುದ್ರಮಾರುತಿಯು ಕಂಡೆ!
ನಮಿಸುವ ಹಿಮಾಲಯವ ಕಂಡು ವಿಸ್ಮಿತನಾದೆ,
ಹಂಪೆಯಲಿ, ಭೀಮ, ನೀನಳುವುದ ಕಂಡು!

ತಿರುಗುವ ಗದೆ ನಿಷ್ಪಂದವಾಗಿರುವ ಪರಿಸ್ಥಿತಿಯ ಅರಿವಾಗಿ ಕವಿ ಪ್ರಾರ್ಥಿಸುತ್ತಾರೆ:

....ಯಾತ್ರಿಕರ ಹೃದಯದಲಿ ಕೆಚ್ಚೂರಿ, ನೆಚ್ಚೂರಿ,
ಹೆಂಬೇಡಿಗಳನೆಲ್ಲ ನಿನ್ನೆಡೆಗೆ ಗೆಲ್ಲು!

ಇಷ್ಟೆ ಅಲ್ಲ. ಸತ್ತವರು ನಾವಲ್ಲ ನೀವೆಂದು ಸಾರುತ್ತಿರುವ ಕನ್ನಡ ನಾಡಿನ ವಿಶಿಷ್ಟವಾದ ವೀರಗಲ್ಲುಗಳು, ಮಾಸತಿಯ ಚಾಗ ಸೊಲ್ಲುಗಳು ನಮ್ಮ ಗಮನ ಸೆಳೆಯಲು ಅಸಮರ್ಥವಾಗಿವೆ. ಅತ್ತಕಡೆ ನಮ್ಮ ಗಮನ ಸೆಳೆಯುವ ಕವಿಯ ಈ ಮಾತುಗಳು ಮನೋಜ್ಞವಾಗಿವೆ:

ಕೂಗುತಿವೆ ಕಲ್ಲು
ಕಿವಿವೆತ್ತ ಕಿವುಡರಿರ, ಕೇಳಿ ಆ ಸೊಲ್ಲು.

ಕಲ್ಲುಗಳಿಗೇ ಪ್ರಾಣ ಸಂಚಾರವಾಗಿದೆ; ಶಿಲೆಯೇ ಭೇರಿಯಾಗಿ ಬಾರಿಸುತ್ತಿದೆ; ಬಲಿದಾನಗೈದ ಕನ್ನಡತನದ ತುತ್ತೂರಿ ನಾದಗೈಯುತ್ತಿದೆ. ಆದರೆ ಕಿವಿವೆತ್ತ ಕಿವುಡರಿಗೆಲ್ಲಿ ಕೇಳಬೇಕು ಆ ಸೊಲ್ಲು. ನಮ್ಮ ಉದ್ಧಾರವಾಗಬೇಕಾದರೆ ಈ ಕಿವುಡು ನೀಗಬೇಕು, ಹೊಸ ಪ್ರಾಣ ಸಂಚಾರವಾಗಬೇಕು. ಕನ್ನಡನಾಡಿನ ಸಾಂಸ್ಕೃತಿಕ ಪರಂಪರೆ ಒಂದೆರಡು ವರ್ಷದ್ದಲ್ಲ; ಒಂದೆರಡು ತಲೆಮಾರಿನದಲ್ಲ; ಹಲವು ಶತಮಾನಗಳದ್ದು. ಭವ್ಯವಾದ ಇತಿಹಾಸ ನಮ್ಮ ಪಾಲಿಗಿದೆ. ಜಗತ್ತೆಲ್ಲ ನಿದ್ದೆಮಾಡುತ್ತಿದ್ದ ಸಮಯದಲ್ಲಿ ಎಚ್ಚರಾಗಿ ನಡೆದ ಭಾರತಮಾತೆಯ ಪ್ರೇಮದ ಮಗಳು ಈ ಕನ್ನಡ ತಾಯಿ.

ಜೈ! ಭಾರತ ಜನನಿಯ ತನುಜಾತೆ,
ಜಯಹೇ ಕರ್ಣಾಟಕ ಮಾತೆ
ಜೈ! ಸುಂದರ ನದಿವನಗಳ ನಾಡೆ
ಜಯಹೇ ರಸ ಋಷಿಗಳ ಬೀಡೆ!

ಕಣ್ಣಿದ್ದೂ ಕುರುಡರಾಗಿರುವುದು, ಹಾಲಿಟ್ಟುಕೊಂಡು ಮಜ್ಜಿಗೆ ಬೇಡುವುದು. ಇದಕ್ಕೆ ಒಂದೆ ಕಾರಣ-ನಾವು ಅಭಿಮಾನಶೂನ್ಯರಾಗಿ ಹೋಗಿರುವುದು. ತಾಯಿನಾಡು, ತಾಯಿನುಡಿ, ನಮ್ಮ ಸಂಸ್ಕೃತಿ, ನಮ್ಮ ಕಲೆ ಎಂಬ ಆದರವನ್ನು ನಾವು ಉಳಿಸಿಕೊಂಡಿಲ್ಲ. ನಮ್ಮ ಹಿರಿಮೆಯಲ್ಲಿ ನಮಗೆ ಗೌರವವಿಲ್ಲ. ಗೌರವವಿದ್ದವರಿಗೆ ಮುಂದೆ ನಡೆಯಬೇಕು, ಭೂತದ ಅಸ್ತಿಭಾರದ ಮೇಲೆ ಭವಿಷ್ಯದ ಗೋಪುರ ಕಟ್ಟಬೇಕು ಎಂಬ ಹಂಬಲವಿಲ್ಲ.

ಕನ್ನಡಕೆ ಹೋರಾಡು, ಕನ್ನಡದ ಕಂದಾ;
ಕನ್ನಡವ ಕಾಪಾಡು, ನನ್ನ ಆನಂದಾ
....ದಮ್ಮಯ್ಯ ಕಂದಯ್ಯ ಬೇಡುವೆನು ನಿನ್ನ;

ಕನ್ನಡಮ್ಮನ ಹರಕೆ ಮರೆಯದಿರು ಚಿನ್ನ

ಎಂದು ತಾಯಿಯೇ ಮಕ್ಕಳ ಬಳಿಗೆ ಬಂದು ತನ್ನನ್ನುಳಿಸಿಕೊಳ್ಳಲು ಅಂಗಲಾಚಬೇಕಾದ ಪರಿಸ್ಥಿತಿ ಬಂದಿದೆ. ಕನ್ನಡನುಡಿ, ನಮಗೆ, ಕನ್ನಡಿಗರಿಗೆ ಮೊಲೆಹಾಲಿನೊಡಗೂಡಿ ಬಂದದ್ದು; ಮೊಲೆಹಾಲಿನಂತೆ ಸವಿಜೇನು; ತಾಯಯಪ್ಪುಗೆಯಂತೆ ಮೈಗೆ ಬಲು ಸೊಗಸು; ತಾಯಿ ಮುತ್ತುಕೊಡುವಂದು ನಮ್ಮ ಕೆನ್ನೆಯ ಮೇಲೆ ಪೋಣಿಸಿದ ಮುತ್ತಿನಂತೆ ಮೆರೆದುದದು; ನಲ್ಲೆಯರೊಡನೆ ನಲ್ನುಡಿಯನಾಡುವಾಗ ತುಟಿಗೆ ಬಂದು ಕಲಿಸುವುದು; ಗುರುವಿನ ಒಳ್ನುಡಿಯಂತೆ ನಮ್ಮ ಬಾಳಿಗೆ ಅದು ಶ್ರೇಯಸ್ಸ ನೀಡುವುದು. ಆದರೆ ನೂರು ಮೋಹಗಳಿಗೆ ಮರುಳಾಗಿ ಈ ಅಂಶಗಳನ್ನು ನಾವು ಮರೆತಿದ್ದೇವೆ. ನಮ್ಮ ಅಭಿಮಾನ ಶೂನ್ಯತೆಯಿಂದ ಕನ್ನಡ ಸಾಯುವ ಸ್ಥಿತಿಗೆ ಬಂದಿದೆ. ರಾಜನುಡಿ, ರಾಷ್ಟ್ರನುಡಿ, ದೇವನುಡಿ ಎಂಬ ಶಿಫಾರಸ್ಸುಗಳೊಡನೆ ಧಾವಿಸಿರುವ ಹೊರನುಡಿಗಳ ಹೊರೆಯಿಂದ ಕನ್ನಡಮ್ಮನ ಮುದಿಮೂಳೆ ಮುರಿಯುತಿದೆ. ಮಕ್ಕಳೇ ಹಲವರು ಮುನ್ನುಗ್ಗಿ ಬಾಯ್ಮುಚ್ಚಿ ಹಿಡಿದಿರುವುದರಿಂದ ಕೂಗಿಕೊಳ್ಳಲು ಕೂಡ ಬಲವಿಲ್ಲ. ಇದಕ್ಕಿಂತ ದುರಂತ ಪರಿಸ್ಥಿತಿ ಇನ್ನೇನುಬೇಕು. ನಮಗೆ ಇರುವ ಅಲ್ಪಶಕ್ತಿಯನ್ನು ಅಲ್ಪದ್ರವ್ಯವನ್ನು ಪರಭಾಷೆಯ ವ್ಯಾಮೋಹಕ್ಕಾಗಿ ಚೆಲ್ಲಬಾರದೆಂದು ಕವಿಯ ಕಳಕಳಿಯ ಪ್ರಾರ್ಥನೆ. ಮೊದಲು ಕನ್ನಡವನ್ನು ಬೆಳೆಸಬೇಕು; ಬಲಪಡಿಸಬೇಕು. ಹೂಮಾಲೆ ಹಾಕುತ್ತೇವೆಂದು ನೇಣುಬಿಗಿಯಬೇಡಿರೆಂದು ಕವಿ ಎಚ್ಚರಿಕೆ ಕೊಡುತ್ತಾನೆ. ಹೊರಗಿನಿಂದ ಬರುವವರು ಆಶೀರ್ವಾದ ಮಾಡಲು ಕೈ ಎತ್ತಿಕೊಂಡೇ ಬರುತ್ತಾರೆ. ಕೊನೆಗೆ ಅದೇ ಕುತ್ತಿಗೆಗೆ ಕರವಾಳವಾಗುತ್ತದೆ. ನಮ್ಮ ನುಡಿಯೇ ನಮಗೆ ತೊದಲಾಗುತ್ತದೆ. ಎಲ್ಲಿಯತನಕ ಕನ್ನಡನಾಡಿನ ಮಕ್ಕಳ ಜ್ಞಾನ ಸಂಪಾದನೆ, ಹಳ್ಳಿಯ ರೈತರ-ಸರ್ಕಾರದ ವ್ಯವಹಾರ, ಕನ್ನಡದಲ್ಲಿ ನಡೆಯುವುದಿಲ್ಲವೋ ಅಲ್ಲಿಯತನಕ ಈ ಪರಿಸ್ಥಿತಿ ತಪ್ಪುವುದಿಲ್ಲ. ಭಾಷೆ ಜನಾಂಗದ ಪ್ರಬಲಸಾಧನ. ಒಂದು ಬೆಳೆದರೆ ಇನ್ನೊಂದು ಬೆಳೆಯುತ್ತದೆ; ಒಂದರ ಬಲಕ್ಕೆ ಇನ್ನೊಂದು ಅವಲಂಬನ:

ನಿಮ್ಮ ನುಡಿ ನಿಮ್ಮ ಗಂಡಸುತನಕೆ ಹಿರಿ ಸಾಕ್ಷಿ;
ಗೆಲವಿದ್ದರದಕೆ ನಿಮಗಿಹುದು ಶಕ್ತಿ.
ನುಡಿ ಮಡಿದರೆಲ್ಲರೂ ಮೂಕಜಂತುಗಳಂತೆ
ಬಾಲವಲ್ಲಾಡಿಪುದೆ ಪರಮ ಭಕ್ತಿ!
ಉತ್ತರದ ಕಾಶಿಯುಲಿ ಕತ್ತೆಯಿಂದ್ಯೆತರಲು
ದಕ್ಷಿಣದ ದೇಶಕದು ಕುದುರೆಯಹುದೆ?
ತಾಯಿತ್ತ ಮೊಲೆಹಾಲು ನಿಮ್ಮ ಮೈಗಾಗದಿರೆ
ಹೊತ್ತಹೊರೆ ಬಲಕಾರಿ ನೆತ್ತರಹುದೆ?

ಗರ್ಜಿಸುವುದನ್ನು ಕಲಿತು ಸಿಂಹವಾಗಿ, ನಖದಂಷ್ಟ್ರ ಕೇಸರಗಳನ್ನು ಬೆಳಸಿ ಹುರಿಗೊಂಡು ಶಿರವೆತ್ತಿ ನಿಂತು ಕುರಿತನವನ್ನು ನೀಗಲು ಕನ್ನಡನಾಡಿನ ಮಕ್ಕಳಿಗೆ ಕವಿ

ಆದೇಶ ನೀಡಿದಾರೆ. ಹಾಗಾಗಬೇಕಾದರೆ ಮೊದಲು ಕನ್ನಡದ ಪ್ರೇಮ ಉದಿಸಬೇಕು ; ಕನ್ನಡದ ಪ್ರಜ್ಞೆ ಎಚ್ಚರಗೊಳ್ಳಬೇಕು

ನೀ ಮೆಟ್ಟುವ ನೆಲ—ಅದೆ ಕರ್ನಾಟಕ ;
ನೀನೇರುವ ಮಲೆ—ಸಹ್ಯಾದ್ರಿ
ನೀ ಮುಟ್ಟುವ ಮರ—ಶ್ರೀಗಂಧದಮರ ;
ನೀ ಕುಡಿಯುವ ನೀರ್—ಕಾವೇರಿ

ಈ ತಿಳಿವಳಿಕೆ ಬರಬೇಕು. ಈ ಅಭಿಮಾನ ಹುಟ್ಟಬೇಕು. ಅಂಥವರು ಎಲ್ಲಿದ್ದರೇನು ? ಎಂತಿದ್ದರೇನು ?

ಎಂದೆಂದಿಗು ತ್ರಾನ್—
ಕನ್ನಡವೇ ಸತ್ಯ !
ಕನ್ನಡವೇ ನಿತ್ಯ !
ಅನ್ಯವೆನಲಡೆ ಮಿಥ್ಯ !

ಕನ್ನಡತನ ಜಾಗೃತಗೊಳ್ಳಲು ಕನ್ನಡಜನ ಒಂದು ಆಡಳಿತಕ್ಕೆ ಒಳಗಾಗಬೇಕು ಎಂಬ ಹಂಬಲು ಬಹುದಿನದ್ದು. ಆದರೆ ಇದುವರೆಗೆ ಅದು ಈಡೇರಲಿಲ್ಲ–ಏಕೆಂದರೆ ಅದು ಬರಿಯ ರಾಜಕೀಯದ ನಾಟಕವಾಗಿ, ರಾಜಕೀಯ ಬೂಟಾಟಿಕೆಯಾದದ್ದರಿಂದ. ರಾಜಕಾರಣಕ್ಕೆ ಸಂಬಂಧಿಸಿದ ಏಕೀಕರಣ ಕವಿಯ ಕಣ್ಣಿಗೆ ಗೌಣ. ಕನ್ನಡ ಜನಶಂಕರಿಯ ಹೃದಯಗಳ ಏಕೀಕರಣ ಅವನಿಗೆ ಅಗತ್ಯ, ಆವಶ್ಯ, ಅನಿವಾರ್ಯ ಮತ್ತು ಶ್ರೇಯಸ್ಕರ. ಮನಮನಗಳನ್ನು ಬಿಗಿಯಲು 'ಸರಸ್ವತಿಯೆ ರಚಿಸಿದ ರಾಜಕೀಯ ತ್ರೋಟಕ' ನೆರವಾಗುತ್ತದೆ. ಇಂದು ಬಂದು ನಾಳೆ ಸಂದುಹೋಗುವ ಸಚಿವ ಮಂಡಲ ತನ್ನ ಸ್ವಾರ್ಥವನ್ನಲ್ಲದೆ ನಾಡಿನ ಅಭ್ಯುದಯವನ್ನೇನು ಸಾಧಿಸೀತು ? ಕನ್ನಡ ಜನದ ಉನ್ನತಿಗೆ, ಉತ್ಕರ್ಷಕ್ಕೆ ಸರಸ್ವತಿಯೆ ರಚಿಸಿದ ಮಂತ್ರಿಮಂಡಲವಿದೆ. ಅಲ್ಲಿ ನೃಪತುಂಗನೇ ಚಕ್ರವರ್ತಿ ; ಪಂಪನೇ ಮುಖ್ಯ ಮಂತ್ರಿ.

ಕನ್ನಡ ಎಂಬುದು ಎರಡು ಕೋಟಿ ಜನರು ಆಡುವ ಮಾತು ಮಾತ್ರವಲ್ಲ ; ಕರ್ನಾಟಕ ಅವರು ವಾಸಮಾಡುವ ನೆಲ ಮಾತ್ರವಲ್ಲ. ಹಾಗಾದರೆ ಅದೇನೆಂಬುದನ್ನು ಕವಿಯಿಂದಲೇ ಕೇಳಬೇಕು.

ಮಾತೆ ಕಣಾ ! ಶಕ್ತಿಕಣಾ !
ತಾಯಿ ಕಣಾ ! ದೇವಿಕಣಾ !
ಬೆಂಕಿ ಕಣಾ ! ಸಿಡಿಲುಕಣಾ !
ಕಾವ ಕೊಲುವ ಬಲವ
ಪಡೆದ ಚಂಡಿ ಕಣಾ !
ಋಷಿಯ ಕಾಣ್ಬಕಣ್ಣಿಗೆ !

ಕಳೆದ ಮೂರು ದಶಕಗಳಿಂದ ಕನ್ನಡ ನಾಡು, ನುಡಿ, ಜನದ ಮಂಗಳಕ್ಕೆ

ತಪಸ್ಸು ನಡೆಸುತ್ತಾ ಬಂದ ಕಾವ್ಯರ್ಷಿ ಕುವೆಂಪು ಕನ್ನಡವನ್ನು ತಾಯಿಯನ್ನಾಗಿ, ಶಕ್ತಿಯನ್ನಾಗಿ, ದೇವಿಯನ್ನಾಗಿ ಕಂಡಿದ್ದಾರೆ. ಬೆಂಕಿಯನ್ನಾಗಿ, ಸಿಡಿಲನ್ನಾಗಿ ದರ್ಶಿಸಿದ್ದಾರೆ. ಉಳಿದ ಜನ ಹಾಗೆಂದು ಅರಿತಾಗ, ಕಂಡಾಗ ಕನ್ನಡ ಗೆಲ್ಲುತ್ತದೆ. ಅಲ್ಲಿಯ ತನಕ ಕನ್ನಡ ಜನಕ್ಕೆ ಮುಕ್ತಿಯಿಲ್ಲ!

೩

ಕನ್ನಡದ ಪಾಂಚಜನ್ಯವನ್ನೂದಿ ಕುವೆಂಪು ಕನ್ನಡ ಜನರನ್ನು ಜಾಗೃತ ಗೊಳಿಸಿದ್ದಾರೆ. ಕನ್ನಡ ದನಿ ಏರುಮುಖವಾಗಿರುವುದಕ್ಕೆ ಸಂದ ಕವಿ ಕಾಣಿಕೆ ಅಲ್ಪವಾದುದಲ್ಲ. ಕನ್ನಡ ಕವಿಗಳು, ಕಲಾವಿದರು ಕನ್ನಡ ಜನದ ಮನಸ್ಸನ್ನು ಬೆಸುಗೆ ಹಾಕುವುದಕ್ಕೆ, ಅವರನ್ನು ಒಂದು ಗುರಿಯ ಮಾರ್ಗದಲ್ಲಿ ನಡೆಸುವುದಕ್ಕೆ ಸತತವಾಗಿ ಶ್ರಮಿಸಿದ್ದಾರೆ. ಕವಿಯ ಕೊಳಲ ನಿನಾದಕ್ಕೆ ಮಾರುಹೋದ ಜನ, ಕವಿಯ ಪಾಂಚಜನ್ಯಕ್ಕೆ ಎಚ್ಚರಗೊಂಡ ಜನ ತಮ್ಮತಮ್ಮ ಕಲಹಗಳನ್ನು ಮರೆತು, ತಮಗಿಂತ ನಾಡು ದೊಡ್ಡದು ಎಂದು ಅರಿತಿದ್ದಾರೆ. ದೊಡ್ಡಆಸೆ, ಆದರ್ಶಗಳ ಬೆನ್ನುಹಿಡಿದು ಸಾಗಿದ್ದಾರೆ. ಈ ದೊಡ್ಡ ಉದ್ದೇಶದಲ್ಲಿ ಕುವೆಂಪು ಸಲ್ಲಿಸಿರುವ ಸೇವೆ ಅಪಾರವಾಗಿದೆ.

ಕುವೆಂಪು, ಕನ್ನಡದ ಸಿರಿ, ಸಂಪತ್ತು ಎಲ್ಲ. ಅವರು ಕನ್ನಡಕ್ಕಾಗಿ ತಮ್ಮ ಬಾಳನ್ನು ಮುಡಿಪಿಟ್ಟವರು. ಉನ್ನತ ಧ್ಯೇಯಕ್ಕಾಗಿ ದುಡಿಯುತ್ತಿರುವವರು. ಕನ್ನಡದಿಂದ ಜೀವನ ನಡೆಸುವ ಹಲವಾರು ಜನರು ನಮ್ಮೆದುರಿಗಿದ್ದಾರೆ; ಆದರೆ ಕನ್ನಡಕ್ಕಾಗಿಯೇ ಜೀವಿಸುವವರು ವಿರಳ. ಆ ಅತಿ ವಿರಳರ ಪಂಙ್ತಿಯಲ್ಲಿ ಕುವೆಂಪು ಗಣ್ಯರಾಗಿದ್ದಾರೆ.

ಕನ್ನಡ ಜನಕ್ಕೆ ಅವರು ನೀಡುವ ನಿತ್ಯ ಸಂದೇಶ ಇದು; ಸಲ್ಲಿಸುವ ಪ್ರಾರ್ಥನೆ ಇದು :

ಎಲ್ಲಾದರು ಇರು; ಎಂತಾದರು ಇರು
ಎಂದೆಂದಿಗು ನೀ ಕನ್ನಡವಾಗಿರು.
ಕನ್ನಡ ಗೋವಿನ ಓ ಮುದ್ದಿನಕರು
ಕನ್ನಡ ತನವೊಂದಿದ್ದರೆ ನೀನಮ್ಮಗೆ ಕಲ್ಪತರು!



# ನಾಟಕಕಾರ ಕುವೆಂಪು

ಸಿ. ಡಿ. ಗೋವಿಂದರಾವ್

ಕುವೆಂಪು ಅವರ ಸಾಹಿತ್ಯ ವಾಹಿನಿ ಮಲೆನಾಡಿನ ತುಂಗೆಯಂತೆ ಏಳುಸೀಳಾಗಿ ಹರಿದಿದೆ. ಚಿಕ್ಕ ಪುಟ್ಟ ಕವಿತೆಗಳಿಂದ ಮೊದಲಾದ ಅವರ ಸಾಹಿತ್ಯಝರಿ ಕಾಲ ಉರುಳಿದಂತೆ ತನ್ನ ಪಾತ್ರವನ್ನು ವಿಸ್ತರಿಸಿಕೊಂಡು ಇದೀಗ **ರಾಮಾಯಣ ದರ್ಶನ** ವೆಂಬ ಮಹಾ ಪ್ರವಾಹವಾಗಿ ಬಂದಿದೆ. ಈ ಮಧ್ಯೆ ಅದು ಕೆಲವೆಡೆ ಸಣ್ಣ ಕಥೆಯಾಗಿ, ಒಮ್ಮೆ ಕಾದಂಬರಿಯಾಗಿ, ಆಗಾಗ ಜೀವನಚರಿತ್ರೆಯಾಗಿ, ಆಗೊಮ್ಮೆ ಈಗೊಮ್ಮೆ ವಿಮರ್ಶನಾತ್ಮಕ ಪ್ರಬಂಧವಾಗಿ, ಹನ್ನೆರಡು ಬಾರಿ ಕಾವ್ಯ ರೂಪಕವಾಗಿ ಹರಿದಾಡಿದೆ. ಆ ಕಾವ್ಯ-ರೂಪಕಗಳ ಸೂಕ್ಷ್ಮ ತುಲನವೇ ಈ ಪ್ರಬಂಧದ ಗುರಿ.

"ಇಂಗ್ಲಿಷ್ ಸಾಹಿತ್ಯವು, ಇಂಗ್ಲಿಷ್ ಭಾಷೆಯ ಮೂಲಕ ಪರಿಚಯವಾದ ವಿಶ್ವ ಸಾಹಿತ್ಯವು, ಆಧುನಿಕ ಕನ್ನಡ ಸಾಹಿತ್ಯಕ್ಕೆ ಪ್ರಾಣದಾಯಕವಾಗಿದೆ" ಎಂದು ಶ್ರೀಮಾನ್ ಎ. ಆರ್. ಕೃಷ್ಣಶಾಸ್ತ್ರಿಗಳು 'ರಕ್ತಾಕ್ಷಿ' ಗೆ ಮುನ್ನುಡಿ ಬರೆಯುತ್ತ ಹೇಳಿದ್ದಾರೆ. ಇದು ಗಮನಾರ್ಹವಾದ ವಿಷಯ. ಪಾಶ್ಚಿಮಾತ್ಯ ಸಾಹಿತ್ಯದಲ್ಲಿ ನಾಟಕ ಮೂರು ಬಾರಿ ಮುಗಿಲನ್ನು ಮುಟ್ಟಿತೆನ್ನಬಹುದು—ಈಸ್ಕೈಲಸ್, ಸಾಫೊಕ್ಲಿಸ್, ಯೂರಿಪಿಡಿಸ್ ಇವರಿದ್ದ ಕಾಲದಲ್ಲಿ ಗ್ರೀಸ್‌ದೇಶದಲ್ಲೊಮ್ಮೆ; ಷೇಕ್ಸ್‌ಪಿಯರ್ ಕಾಲದಲ್ಲಿ ಇಂಗ್ಲೆಂಡಿನಲ್ಲೊಮ್ಮೆ; ಇಬ್ಸನ್ ಕಾಲದಲ್ಲಿ ನಾರ್ವೆಯಲ್ಲೊಮ್ಮೆ. ಆ ಕಾಲ ದೇಶಗಳಿಗನುಗುಣವಾಗಿ ಪಾಶ್ಚಿಮಾತ್ಯ ನಾಟಕಗಳಲ್ಲಿ ಮೂರು ಸಂಪ್ರದಾಯಗಳು ನಡೆದು ಬಂದಿವೆಯೆಂದು ಹೇಳಬಹುದು. ಈ ಮೂರು ಸಂಪ್ರದಾಯಗಳನ್ನೂ ಅಳವಡಿಸಿಕೊಂಡಿದ್ದಾರೆ ಕುವೆಂಪು ತಮ್ಮ ನಾಟಕಗಳಲ್ಲಿ.

"ಹಳೆಯ ಕಥೆಯನ್ನು ಹೊಸ ಸಾಹಿತಿ ತನ್ನ ಕೃತಿಗೆ ತನ್ನಿಷ್ಟದಂತೆ ಉಪಯೋಗಿಸಿಕೊಳ್ಳುವ ಪದ್ಧತಿಯೂ ಮಹಾಕವಿ ಸಂಪ್ರದಾಯಸಿದ್ಧವಾದುದು" ಎಂದು ಕುವೆಂಪು ಅವರೇ 'ಶೂದ್ರ ತಪಸ್ವಿ' ಗೆ ಬರೆದಿರುವ ಮಾರ್ನುಡಿಯಲ್ಲಿ ಹೇಳಿದ್ದಾರೆ. ಅವರು ತಮ್ಮ ನಾಟಕಗಳಲ್ಲಿ ಮಾಡಿ ತೋರಿಸಿರುವುದೂ ಅಷ್ಟೇ—ಕಥೆಯೆಲ್ಲ ಹಳೆಯವು. ರೀತಿಯೆಲ್ಲ ಹೊಸವು; ವಸ್ತು ಪ್ರಾಚೀನ, ದೃಷ್ಟಿ ನವೀನ.

೨

ಕುವೆಂಪು ಅವರ ಮೊದಲ ನಾಟಕ **ಯಮನ ಸೋಲು.** ಇದರ ವಸ್ತು ಭಾರತೀಯರೆಲ್ಲರಿಗೆ ಚಿರಪರಿಚಿತವಾದ ಸಾವಿತ್ರಿಯ ಕಥೆ. ಆದರೆ ಹೇಳಿರುವ ರೀತಿ ತೀರ

ಹೊಸದು. ಸರಳ ರಗಳೆ ಕನ್ನಡ ನಾಟಕಕ್ಕೆ ಕಾಲಿಟ್ಟುದು ಈ ನಾಟಕದಲ್ಲಿ. "ಸರಳ ರಗಳೆಯ ಧಾಟಿಯು, ಆಡುವ ಮಾತಿನದಕ್ಕಿಂತ ಗಂಭೀರವಾಗಿಯೂ, ಕಂದ ವೃತ್ತಗಳ ದರಷ್ಟು ಪೆಡಸಲ್ಲದೆಯೂ, ಆದ್ದರಿಂದಲೇ, ಭಾವಗೌರವವಿರುವಾಗ ಹೆಚ್ಚು ಸ್ವಾಭಾವಿಕವಾಗಿಯೂ ಇರುತ್ತದೆ." ಶೈಲಿಯಂತೆಯೇ ದೃಷ್ಟಿಯಲ್ಲಿಯೂ ಒಂದು ನವೀನತೆಯಿದೆ:

ಎದೆಯೊಲವು ಋತ ನಿಯಮ—
ಕತೀತವೆಂಬುದನು ತೋರಿಸುವೆ.

ಇಲ್ಲಿ ನಾವು ನೋಡುವುದು :

"ಯಮನ ಜಯಿಸಿದ ಕತೆ...."

....................................

"ಪ್ರೇಮಧರ್ಮವಗೆದ್ದು ಬಾವುಟವ ನಭಕೆತ್ತಿ
ಹಿಡಿದುದನು ಕಂಡೆ."

ಹಾಗೆಯೇ ನಾಟಕಕಾರರ ಪ್ರಕೃತಿ ಪ್ರೇಮವನ್ನೂ ಸತ್ಯವಾನನ ಕೆಲವು ಮಾತುಗಳಲ್ಲಿ ಕಾಣಬಹುದು. ಈ ನಾಟಕದ ಅತ್ಯಂತ ಉತ್ತಮವಾದ ಉಪಮೆಯು ಸಹ ಪ್ರಕೃತಿಯಿಂದ ತೆಗೆದುಕೊಂಡದ್ದಾಗಿದೆ :

"ಬಿರುಗಾಳಿಯಲಿ ಸಿಕ್ಕಿ ತೂರಾಡುವಾ
ತರಗೆಲೆಯ ತೆರನಾದೆ ಹದಿಬದೆಯ ಜ್ವಾಲೆಯೊಳು ಸಿಕ್ಕಿ."

ಈ ನಾಟಕದಲ್ಲಿ ನಾವು ನೋಡುವುದು ಹದಿಬದೆಯ ಹಿರಿಮೆಯನ್ನು ಮಾತ್ರವೇ ಅಲ್ಲ, ಪ್ರೇಮದ ಪೂಜ್ಯತೆಯನ್ನು. ಸಾವಿತ್ರಿ ಯಮನಿಗೆ ಹೇಳುತ್ತಾಳೆ :

....ಅನುರಾಗ
ವಿದ್ದಲ್ಲಿ ವೈಕುಂಠ. ಪ್ರೇಮವೆಲ್ಲಿರುವುದೋ
ಅಲ್ಲಿ ಕೈಲಾಸ. ಎದೆಯೊಲ್ಮೆಯೆಲ್ಲಿಹುದೊ
ಅಲ್ಲಿಹುದು ಮುಕ್ತಿ. ನಾಕವೆಂದರೆ ಏನು ?
ನರಕವೆನಲೇನು ? ನಾಕ ನರಕಗಳೆರಡ
ಸೃಜಿಸ ಬಲ್ಲುದು ಮನಸು.

ಅದಕ್ಕೆ ಯಮನ ಉತ್ತರವಿಷ್ಟೆ :

"ನಿನ್ನ ನುಡಿಯೇ ವೇದ. ಮೆಚ್ಚಿದೆನು."

ಹೀಗೆ ಹಳೆಯ ಕಥೆಯೊಂದನ್ನು ಹೊಸ ದೃಷ್ಟಿಯಿಂದ ನೋಡಿ, ಹೊಸ ರೀತಿಯಲ್ಲಿ ಹೇಳಿರುವುದು ಕುವೆಂಪುರವರ ಹಿರಿಮೆ. ಈ ಮಾತನ್ನೇ ನಾವು ಅವರ ಇತರ ನಾಟಕಗಳ ವಿಷಯದಲ್ಲೂ ಸ್ಥೂಲವಾಗಿ ಹೇಳ ಬಹುದು.

**ವಾಲ್ಮೀಕಿಯ ಭಾಗ್ಯ**ದಲ್ಲಿಯ ಕಥಾವಸ್ತುವೂ ಹಳೆಯದೇ: ಸೀತಾ ಪರಿತ್ಯಾಗ. ಆದರದು ಕುವೆಂಪು ಅವರ ದೃಷ್ಟಿಯಲ್ಲಿ 'ವಾಲ್ಮೀಕಿಯ ಭಾಗ್ಯಮಲ್ತೆ ?' ಈ ರೂಪಕ

ದಲ್ಲಿಯೂ ಪ್ರಕೃತಿವರ್ಣನೆ ತುಂಬಿತುಳುಕುತ್ತದೆ.

ಪ್ರಕೃತಿ ವರ್ಣನೆ ಕುವೆಂಪು ಅವರಿಗೆ ದೈವದತ್ತವಾಗಿ ಬಂದ ಒಂದು ವರ. ಪ್ರಕೃತಿಪ್ರೇಮ ಅವರಿಗೆ ರಕ್ತಗತವಾಗಿ ಬಂದಿದೆ. ಮಲೆನಾಡಿನ ಮುಗ್ಧಿನ ಮಗುವಾದ ಕುವೆಂಪು ಪ್ರಕೃತಿಗೆ ಮಾರುಹೋಗುವುದರಲ್ಲಿ ಆಶ್ಚರ್ಯವೇನಿಲ್ಲ. ಆದರದನ್ನು ನಾಟಕ ದಲ್ಲಿ ಔಚಿತ್ಯ ಮೀರದಂತೆ ಉಪಯೋಗಿಸಿಕೊಂಡಿರುವುದು ಒಂದು ವೈಶಿಷ್ಟ್ಯ. ಅದನ್ನು ನಾವು ಚೆನ್ನಾಗಿ ಕಾಣುವುದು **ಬೆರಳ್‌ಗೆ ಕೊರಳ್**‌ನಲ್ಲಿ.

ಈ ನಾಟಕದ ಕಥಾವಸ್ತುವೂ ಹಳೆಯದೆ–ಏಕಲವ್ಯನ ಕಥೆ. ಆದರಿಲ್ಲಿ ನಾಟಕ ಕಾರರು ದ್ರೋಣನನ್ನು ಏಕಲವ್ಯನಲ್ಲಿಗೆ ಬರಮಾಡುತ್ತಾರೆ, ದ್ರೋಣನಿಗೆ 'ವನಯಾತ್ರೆ' ಮಾಡಿಸುತ್ತಾರೆ. ವನದ ವರ್ಣನೆ ಬಹು ಚೆನ್ನಾಗಿದೆ. ಆದರಿಲ್ಲಿ ನಾವು ಹೆಚ್ಚಾಗಿ ಗಮ ನಿಸಬೇಕಾದುದು ದ್ರೋಣನ ಒಂದು ಮಾತು :

" ಅಂತೆ ಕರ್ಮದ ಪಾಂಗು : ಮರಿಗೆ ಮರಿ ; ಮರಿಗೆ ಮರಿ :
ಬೆರಳ್‌ಗೆ ಕೊರಳ್."

ಈ ನಾಟಕದ ಓಟ ಗ್ರೀಕ್ ನಾಟಕಗಳ ಓಟದಂತಿದೆಯೆಂದರೆ ತಪ್ಪಾಗಲಾರದು.

" ಈ ಅಹಂಕಾರಮೆಯೆ ಮೂಲಮನಿತರ್ಕಂ "

ಎಂಬ ಮಾತನ್ನು ನಾಟಕದ ಮೊದಲಲ್ಲೇ ಕೇಳುತ್ತೇವೆ. ದ್ರೋಣನು ಅಹಂಕಾರದಿಂದ ದ್ರುಪದನನ್ನು ಅರ್ಜುನನಿಂದ ಸೆರೆಹಿಡಿಸಿದನು. ಅದಕ್ಕೆ ಬದಲಾಗಿ ಅರ್ಜುನನನ್ನು ಅತ್ಯುತ್ತಮ ಬಿಲ್ಲುಗಾರನನ್ನಾಗಿ ಮಾಡಲು ಮಾತುಕೊಟ್ಟನು. ಆ ಮಾತನ್ನು ಉಳಿಸಿ ಕೊಳ್ಳಲೋಸುಗವೇ ಏಕಲವ್ಯನ ಬೆರಳನ್ನು ಬೇಡಿದನು. ಅದರಿಂದಲೇ ಮಾತೃ ಶಾಪಕ್ಕೆ ಗುರಿಯಾಗಿ ತನ್ನ ಕೊರಳನ್ ಕೊಟ್ಟನ್ ! ಬೆರಳ್‌ಗೆ ಕೊರಳ್ ! ಆದರವನೇ ಒಮ್ಮೆ ಹೇಳುವಂತೆ ಇವೆಲ್ಲಕ್ಕೂ 'ವಿಧಿಕಾರಣಂ'. ವಿಧಿ ಕಾರಣವೇನು ? ಇನ್ನೊಮ್ಮೆ ದ್ರೋಣನೇ ಅಶ್ವತ್ಥಾಮನಿಗೆ ಹೇಳುತ್ತಾನೆ :

" ನನ್ನಹಂಕಾರದಾ ಛಲಮೆ ಮರಿಯಿಕ್ಕಿದುದು
ಪಾರ್ಥನ ಅಹಂಕಾರದೀ ಕ್ರೂರ ಈರ್ಷ್ಯೆಯಂ."

ಆದರೀ ಅಹಂಕಾರ ಅಂಕುರಿಸುವುದೂ ವಿಧಿಯ ಲೀಲೆಯೇ !

" ಜೀವಿಗಳ ಕರ್ಮಜಟಿಲತೆ, ಏಕಲವ್ಯ, ಈ
ಕುಟಿಲ ಕಾರ್ಯಂಗಳಿಗೆ ನಮ್ಮನ್ ನಿಯೋಜಿಪುದು,
ದೇವಸಿಚ್ಛೆಯು ದಿವ್ಯಲೀಲಾ ಪ್ರಯೋಜನಕೆ."

* * * *

ಇನ್ನೊಂದು ಕಡೆ ದ್ರೋಣ ಹೇಳುವಂತೆ :

" ಸರ್ವವಿತ್ ಆ ವಿಶ್ವಚಿತ್."

ಎಂದರೆ ಮನುಷ್ಯನಾದವನು ಎಲ್ಲತಪ್ಪನ್ನೂ ವಿಧಿಯಮೇಲೆ ಹಾಕಿ ಕೂಡಬೇಕೆಂದಲ್ಲ.

ದ್ರೋಣ ಹೇಳುವಂತೆ :

"ಮಾಳ್ಪುದನ್ ಮಾಳ್ಪೆನ್! ತಾನ್ ಅಪ್ಪುದಕ್ಕೆ!"

ನಾವು ಮಾಡುವುದನ್ನು ಮಾಡಲೇಬೇಕು, ಇಷ್ಟರಮೇಲೆ ದೇವರಿಚ್ಛೆ. ಈ ಒಂದು ಮನೋಭಾವ ಭಾರತಿಯರಿಗೇನು ಹೊಸದಲ್ಲ. ಆದರೂ ಗ್ರೀಕ್‌ನಾಟಕಗಳಲ್ಲಿ ವಿಧಿ ವಿಲಾಸ ಚಿತ್ರಿತವಾದಂತೆಯೇ ಈ ಹೊಸಗನ್ನಡ ನಾಟಕದಲ್ಲಿಯೂ ಚಿತ್ರಿತವಾಗಿದೆ ಯೆಂದರೆ ಯಾರೇನು ತಪ್ಪರ್ಥಮಾಡಿಕೊಳ್ಳಬಾರದು.

ಈ ನಾಟಕದ ಇನ್ನೊಂದು ವೈಶಿಷ್ಟ್ಯವೆಂದರೆ ದ್ರೋಣನ ಮನಸ್ಸಿನ ತುಮುಲ ವನ್ನು ಚಿತ್ರಿಸಿರುವುದು. ಹಾಗೆಯೇ ಏಕಲವ್ಯನ ಹಿರಿಮೆಯನ್ನೂ ಒಂದೇ ಒಂದು ಮಾತಿನಲ್ಲಿ ತೋರಿಸಿದ್ದಾರೆ:

"ಪಡೆವುದೆಲ್ಲಂ ಕೊಡುವುದಕ್ಕಲ್ತೆ?"

ಈ ಮನೋಭಾವ ಏಕಲವ್ಯನಲ್ಲಿದ್ದುದರಿಂದಲೇ ದ್ರೋಣನು ಹೇಳುತ್ತಾನೆ:

"ಗುರುಕೃಪಾ ಮಹಿಮೆಯಂ ಲೋಕಕ್ಕೆ ಸಾರಿದಯ್"

ಎಂದು. ಈ ನಾಟಕವನ್ನು ಅನೇಕ ಕೋನಗಳಿಂದ ನೋಡಬಹುದು. ವಿಧಿಯಾಟವೆನ್ನ ಬಹುದು—ಅಹಂಕಾರದ ದುಷ್ಪರಿಣಾಮದ ಚಿತ್ರವೆನ್ನಬಹುದು. ಗುರುಶಿಷ್ಯರಲ್ಲಿರ ಬೇಕಾದ ಪ್ರೇಮದ ಪ್ರತೀಕವೆನ್ನಬಹುದು.

೩

**ಮಹಾರಾತ್ರಿ**ಯಲ್ಲಿನ ಕಥಾವಸ್ತುವೂ ಹಳೆಯದೆ. ಅಲ್ಲಿ ಚಿತ್ರಿತವಾಗಿರುವುದು 'ಸಿದ್ಧಾರ್ಥ ಬುದ್ಧನಾಗುವ ರಾತ್ರಿ; ಸಗ್ಗದೊಲವಿಳೆಗಿಳಿವ ರಾತ್ರಿ.' "ಜ್ಞಾನ ಒಳಗಿನ ಬೆಳಕು" ಎಂದರಿತಿರುವ ಸಿದ್ಧಾರ್ಥ "ಒಳಗಿನಾಬೆಳಕ ಪಡೆಯಲು" ಹೋಗುತಿಹನು. ಹೋಗುವ ಮುನ್ನ ಅವನು ನಿದ್ರಿಸುತ್ತಿರುವ ಹೆಂಡತಿ ಮಕ್ಕಳನ್ನು ಕೊನೆಯ ಬಾರಿ ನೋಡಿಬರುವ ಚಿತ್ರ ಬಲುಚೆನ್ನಾಗಿ ಚಿತ್ರಿತವಾಗಿದೆ. ಅಲ್ಲಿ ಅವನ ಮಾನವೀಯತೆ ಎದ್ದು ಕಾಣುತ್ತದೆ. ಮಗನಾದ ರಾಹುಲನನ್ನು ಚುಂಬಿಸುತ್ತಾನೆ. "ನಿಷ್ಕಾಮ ಚುಂಬನವು" ಎಂದು ಹೇಳಿದರೂ ಪಿತೃವಾತ್ಸಲ್ಯವೆಷ್ಟಿದ್ದಿರಬೇಕೆಂದು ತಿಳಿಯುತ್ತದೆ. ಎಲ್ಲಕ್ಕಿನ್ನ ಎದೆಕರಗಿಸುವ ಚಿತ್ರವೆಂದರೆ ಸಿದ್ಧಾರ್ಥನು ತನ್ನ ಕುದುರೆಯನ್ನು ಬೀಳ್ಕೊ ಡುವುದು. ಅಷ್ಟೊಂದು ಪ್ರೇಮ ಆತನಲ್ಲಿದ್ದುದರಿಂದಲೇ ಆತ ವಿಶ್ವಪ್ರೇಮಿಯಾಗಲು ಸಾಧ್ಯವಾಯಿತು. "ಕಡಲಾಗಿ ಹಿಂತಿರುಗಲೆಂದೇ ಹನಿಯಾಗಿ ಹೊರಟಹೆನು" ಎನ್ನು ತ್ತಾನೆ. ಹನಿಯ ಘನತೆಯೇ ಎಷ್ಟೆಂಬುದನ್ನು ನಾಟಕದಲ್ಲಿ ತೋರಿಸಿ, ಅದು ಕಡಲಾ ದಾಗ ಎಷ್ಟಿದ್ದಿರಬೇಕೆಂಬುದನ್ನು ನೋಟಕರ ಊಹೆಗೆ ಬಿಟ್ಟುಬಿಡಲಾಗಿದೆ.

**ಶ್ಮಶಾನ ಕುರುಕ್ಷೇತ್ರ**ವನ್ನು ಓದುತ್ತಿದ್ದಾಗ, ನೋಡುತ್ತಿದ್ದಾಗ, ನಮಗೆ ಜ್ಞಾಪಕಕ್ಕೆ ಬರುವುದು ಮಹಾಭಾರತ ಕಥೆಮಾತ್ರವಲ್ಲ, ಡ್ರಿಂಕ್‌ವಾಟರ್ ಎಂಬ

ಇಂಗ್ಲೀಷ್ ಕವಿಯ ಒಂದು ಕಿರುನಾಟಕ X=O. ಎರಡು ನಾಟಕಗಳಲ್ಲಿ ಚಿತ್ರಿತವಾಗಿರುವುದೂ ಯುದ್ಧದ ನಿಷ್ಪ್ರಯೋಜಕತೆ. ಹೇಗೆ, "ಮಾನವರು ಕೊಲೆಗೆ ಕೈಯಿಡೆ ಮಾರಿಯನ್ ವಿಾರ್ದಪರ್" ಎಂಬುದು. ಈ ನಾಟಕದಲ್ಲಿ ಬರುವ 'ಮಾತೃಕಂದ'ರ ಮಾತುಗಳನ್ನು ಕೇಳಿದರೆ ಕಲ್ಲು ಕೂಡ ಕರಗುತ್ತದೆ. ಮುದುಕಿ ಹೇಳುವಂತೆ:

"ನಮ್ಮನ್ನೋಲಿಹ ಬಡಜನಂಗಳೆಲ್ಲ ಮಂಕುಗಳಮ್ಮ
ಪಾಂಡವರ್ ಕೌರವರ್ ನೆಲಕೆಪ್ರೊಯ್ದಾಡಿದರೆ ನಮ್ಮ ಮಕ್ಕಳು ಅವರಿವರ
ಕೆಳೆಗೊಂಡುಸಿಂತು ಪೆಸ್ರೆಗೆ ಬಡಿದಾಡಿ ಮಡಿಯುವರ್."

ಈ ಪಂಕ್ತಿಗಳನ್ನು ಓದಿದಾಗ ಇಂಗ್ಲೀಷ್ ಕವಿ ವಿಲ್‌ಫ್ರೆಡ್ ಓವನ್ ಎಂಬುವನ 'ಸ್ಟ್ರೇಂಜ್‌ಮಿಾಟಿಂಗ್' ಎಂಬ ಪದ್ಯ ಜ್ಞಾಪಕಕ್ಕೆ ಬರುತ್ತದೆ. ನಾಟಕದ ಕೊನೆಯಲ್ಲಿ ಕೃಷ್ಣನು ಮಾಡುವ ಕಲಿಯುಗದ ವರ್ಣನೆ ನಾಟಕಕಾರರ ಹೊಸದೃಷ್ಟಿಯನ್ನು ತೋರಿಸುತ್ತದೆ.

**ಜಲಗಾರ,** ಕುವೆಂಪು ಅವರ ಪೂರ್ಣಸ್ವಂತ ಕೃತಿ. ಇದರಲ್ಲಿ ಹಳೆಯ ಕಥಾವಸ್ತುವಾವುದೂ ಇಲ್ಲ. ಸಮಾಜದಲ್ಲಿನ ಒಂದು ಸಮಸ್ಯೆಯನ್ನು ಇಲ್ಲಿ ಪ್ರತಿಬಿಂಬಿಸಿದ್ದಾರೆ. ಇಲ್ಲಿನ ಜಲಗಾರ ಸಾಧಾರಣ ಜಲಗಾರನಲ್ಲ, ಅವನೊಬ್ಬ ಕರ್ಮಯೋಗಿ; ಜ್ಞಾನಯೋಗಿ ಎಂದರೂ ಆದೀತು. "ಎಡೆಯೊಲವೆ ವರಧರ್ಮ ಶಾಸ್ತ್ರ"ವೆಂದು ಹೇಳುತ್ತಾನೆ, ಅದರಂತೆ ನಡೆದುಕೊಳ್ಳುತ್ತಾನೆ. ಅವನೊಬ್ಬ ಪ್ರಕೃತಿಯ ಆರಾಧಕ; ಪ್ರಕೃತಿಯಲ್ಲಿ ಪರಮಾತ್ಮನನ್ನು ಕಾಣಬಲ್ಲವ.

ಎಲೆ ರಮ್ಯವನಗಳಿರ, ನಿಮ್ಮ ಸೌಂದರ್ಯದಲಿ
ಪರಮಾತ್ಮನಂ ಕಾಣದವಗಿದ್ದರೇಂ ಕಣ್ಣೆರಡು?"

ಆತನಿಗೆ ಗುಡಿಗೋಪುರಗಳಲ್ಲಷ್ಟು ಶ್ರದ್ಧೆಯಿಲ್ಲ. ಏಕೆಂದರೆ, ತಿರುಕನು ಹೇಳುವಂತೆ:

"ಗುಡಿಗಳಿವು ಪಾಪಿಗಳ, ಭೋಗಿಗಳ ಗೂಡುಗಳು."

ಆದುದರಿಂದ ಆತನು ಅಂತಹ ಗುಡಿಗಳಿಂದ ದೂರವಿರುತ್ತಾನೆ. ಇವನು ಶಿವನಲ್ಲಿಗೆ ಹೋಗುವುದಿಲ್ಲ, ಶಿವನೇ ಇವನಲ್ಲಿಗೆ ಬರುತ್ತಾನೆ. ಏಕೆಂದರೆ ಶಿವನು ಜಗದ ಜಲಗಾರ! ಆತ ಕೊನೆಯಲ್ಲಿ ಹೇಳುವಂತೆ:

"ಬೀದಿಗುಡಿಸುವ ಬಡವನೆದೆಯಲ್ಲಿ ನಾನಿರುವೆ
ಉಳುತಿರುವ ಒಕ್ಕಲಿಗನೆಡೆಯಲ್ಲಿ ನಾನಿರುವೆ."

ದೇವರು ಕರ್ಮಯೋಗಿಗಳಿಗೆ ಒಲಿಯುತ್ತಾನೆನ್ನುವುದೇನೂ ಹೊಸ ವಿಷಯವಲ್ಲ. ಅದನ್ನು ರವೀಂದ್ರರು "ಗೀತಾಂಜಲಿ"ಯ ಕವಿತೆಯೊಂದರಲ್ಲಿ ಹಾಡಿದ್ದರು. ಆದರವನ್ನು ನಾಟಕರೂಪವಾಗಿ ತಂದು, ಅವರಲ್ಲಿಯೂ ಜಲಗಾರನನ್ನು ನಾಟಕದ ನಾಯಕನನ್ನಾಗಿ ಮಾಡಿ ಕರ್ಮಯೋಗದ ಸತ್ಯತೆಯನ್ನು ತೋರಿಸಿದ ಎದೆಗಾರಿಕೆ ಕುವೆಂಪು ಅವರಿಗೆ ಸೇರತಕ್ಕದ್ದು.

ಇದೇರೀತಿಯ ಸಮಾಜದ ಸಮಸ್ಯೆಯನ್ನು—ವರ್ಣ ಮದಾಂಧತೆಯನ್ನು—ಇನ್ನೊಂದು ನಾಟಕದಲ್ಲಿಯೂ ಕುವೆಂಪು ಅವರು ಚಿತ್ರಿಸಿದ್ದಾರೆ. ಆದರಿಲ್ಲಿಯ ಕಥೆ ಹಳೆಯದು—ರಾಮಾಯಣದ್ದು ; ದೃಷ್ಟಿ ತೀರಹೊಸದು.

**ಶೂದ್ರತಪಸ್ವಿ** ಮೊಟ್ಟಮೊದಲು ಪ್ರಕಟಿಸಿದಾಗ ಈ ಕೃತಿ ಜಾತಿಮಾತ್ಸರ್ಯದಿಂದ ಪ್ರೇರಿತವಾದ ಮೂದಲಿಕೆಯೆಂದು ತಪ್ಪರ್ಥಮಾಡಿಕೊಳ್ಳಲ್ಪಟ್ಟಿತ್ತು. ಆದರೀಗ ಸಾವಧಾನವಾಗಿ ಓದಿದವರಾರೂ ಆರೀತಿ ಅಭಿಪ್ರಾಯಪಡಲಾರರು. ಶಂಬೂಕನು ಶೂದ್ರನಾದ ಮಾತ್ರಕ್ಕೆ ಅವನಿಗೆ ತಪಸ್ಸು ಮಾಡಲು ಹಕ್ಕಿಲ್ಲವೆ? ವಾಲ್ಮೀಕಿ, ವಿಶ್ವಾಮಿತ್ರರರೂ ಹುಟ್ಟು ಬ್ರಾಹ್ಮಣರಲ್ಲತಾನೆ! ಬ್ರಹ್ಮಜ್ಞಾನವನ್ನು ಪಡೆದವನೇ ನಿಜವಾದ ಬ್ರಾಹ್ಮಣನೇವಿನಹ, ಆ ಕುಲದಲ್ಲಿ ಹುಟ್ಟಿದವರೆಲ್ಲಾ ಬ್ರಹ್ಮಜ್ಞಾನಿಗಳೆಂದು ಹೇಳಲು ಸಾಧ್ಯವೇ? ಈ ನಾಟಕದಲ್ಲಿ ನಾವು ನೋಡುವುದು ಹೇಗೆ ರಾಮನು ಬ್ರಾಹ್ಮಣನಿಗೆ ಜ್ಞಾನೋದಯವನ್ನುಂಟುಮಾಡುತ್ತಾನೆನ್ನುವುದು. ಹಳೆಯವಸ್ತುವನ್ನು ಹೊಸ ದೃಷ್ಟಿಕೋನದಿಂದ ನೋಡುವ ಪ್ರತಿಭೆಗೆ ಅತ್ಯುತ್ತಮ ಉದಾಹರಣೆ **ಶೂದ್ರತಪಸ್ವಿ.**

೪

ಇಂಗ್ಲಿಷ್ ಸಾಹಿತ್ಯದ ಪ್ರಭಾವ ಕುವೆಂಪು ಅವರಮೇಲೆ ಸಾಕಷ್ಟು ಆಗಿದೆ ಎಂಬುದು ನಿರ್ವಿವಾದವಾದ ವಿಷಯ. ಅದಕ್ಕೆ ಅವರ '**ರಕ್ತಾಕ್ಷಿ**', '**ಬಿರುಗಾಳಿ**'ಗಳೇ ಸಾಕ್ಷಿ.

**ರಕ್ತಾಕ್ಷಿ** ಪಾಶ್ಚಾತ್ಯ ಜಾತಿಯ ರುದ್ರನಾಟಕ. ಎಂದರೆ ಇದು **ಹ್ಯಾಂಲೆಟ್** ನಾಟಕದ ಭಾಷಾಂತರವೆಂದು ತಪ್ಪರ್ಥಮಾಡಿಕೊಳ್ಳಬಾರದು—ಎರಡು ನಾಟಕಗಳನ್ನೂ ಓದಿರುವವರಾರೂ ಹಾಗೆ ಮಾಡಲಾರರು. ನಿಜವಾಗಿಯೂ ಇದು ಸ್ವತಂತ್ರ ಐತಿಹಾಸಿಕ ನಾಟಕ. ಆದರೆ ಇದರಮೇಲೆ **ಹ್ಯಾಂಲೆಟ್** ನಾಟಕದ ಛಾಯೆ ಬಿದ್ದಿದೆ. ಈ ಕೃತಿಗೆ ಮುನ್ನುಡಿ ಬರೆಯುತ್ತಾ ಶ್ರೀ ಮರ್ಾ ಎ. ಆರ್. ಕೃಷ್ಣಶಾಸ್ತ್ರಿಗಳು ಈ ಕೃತಿಗೆ ತಾವು ಎಷ್ಟರಮಟ್ಟಿಗೆ ಪ್ರೇರಕರಾದರೆಂಬುದನ್ನು ತಿಳಿಸಿದ್ದಾರೆ. ಅವರ ಪ್ರೇರಣೆಯ ಮೇಲೆ, **ಹ್ಯಾಂಲೆಟ್** ನಾಟಕವನ್ನು ದೃಷ್ಟಿಯಲ್ಲಿಟ್ಟುಕೊಂಡು, ಮೈಸೂರು ದೇಶದ ಚರಿತ್ರೆಯ ಒಂದು ಮುಖ್ಯ ಘಟನೆಯನ್ನು ಕುವೆಂಪು ಅವರು ಈ ನಾಟಕದಲ್ಲಿ ಚಿತ್ರಿಸಿದ್ದಾರೆ. ಇಲ್ಲಿ ಬರುವ ಪ್ರಕೃತಿ ವರ್ಣನೆ—ಮಲೆನಾಡಿನ ವೈಭವ—**ಹ್ಯಾಂಲೆಟ್**ನಲ್ಲಿ ಬರಲು ಹೇಗೆ ಸಾಧ್ಯ? ಇಲ್ಲಿನ ಮಂತ್ರಿ ಲಿಂಗಣ್ಣ ಪಲೋನಿಯಸ್ಸಿನಗಿನ್ನ ಬಹಳ ಉತ್ತಮನಾದ ವ್ಯಕ್ತಿ. ಇಲ್ಲಿ ಬರುವ ಸಂನ್ಯಾಸಿ, ಬ್ರಹ್ಮಚಾರಿಗಳು **ಹ್ಯಾಂಲೆಟ್**ನಲ್ಲಿ ಇಲ್ಲವೇ ಇಲ್ಲ. ಇಂಗ್ಲೀಷ್ ನಾಟಕ ನಾಯಕನಾದ **ಹ್ಯಾಂಲೆಟ್**ನನ್ನೇ ಅವಲಂಬಿಸಿದೆ; ಆದರಿಲ್ಲಿಯ ಮುಖ್ಯ ಪಾತ್ರ ರುದ್ರಾಂಬೆ, ರಕ್ತಾಕ್ಷಿ. ರುದ್ರಾಂಬೆಯ ರೌದ್ರತೆ ಒಫಿಲಿಯಾನಲ್ಲಿ ಇಲ್ಲವೇ ಇಲ್ಲ. ಒಫಿಲಿಯಾ ಬಹು ಕೋಮಲವಾದ ಕನ್ಯೆ; ರುದ್ರಾಂಬೆ

ನಿಜವಾಗಿಯೂ ರುದ್ರಭಯಂಕರಳೇ ಆಗಿ ಚಿತ್ರಿತವಾಗಿದ್ದಾಳೆ. ಹೀಗೆಯೇ ಎಷ್ಟೋ ವಿಷಯಗಳಲ್ಲಿ ಈ ಎರಡು ನಾಟಕಗಳು ಬೇರೆಬೇರೆಯಾಗಿವೆ. ಆದುದರಿಂದ **ರಕ್ತಾಕ್ಷಿ ಹ್ಯಾಂಲೆಟ್**ನ ಭಾಷಾಂತರವೆನ್ನುವುದು ತಪ್ಪು; ಒಂದರ ಪ್ರಭಾವ ಇನ್ನೊಂದರ ಮೇಲೆ ಆಗಿದೆಯೆಂದರೆ ತಪ್ಪಾಗಲಾರದು.

ಇದೇ ಮಾತನ್ನು **ಬಿರುಗಾಳಿ**ಯ ವಿಷಯದಲ್ಲಿಯೂ ಸ್ಥೂಲವಾಗಿ ಹೇಳಬಹುದು. ದಿವಂಗತ ವೆಂಕಣ್ಣಯ್ಯನವರು ಹೇಳಿರುವಂತೆ ಈ ನಾಟಕ "**ಟೆಂಪೆಸ್ಟ್** ನಾಟಕದ ಮೂಲ ಭಾವಗಳನ್ನೂ ಸನ್ನಿವೇಶಗಳನ್ನೂ ಅನುಸರಿಸಿ ರಚಿತವಾಗಿದೆ. ಇದನ್ನು ಮೂಲನಾಟಕದ ಭಾಷಾಂತರ ಅಥವಾ ಅನುವಾದ ಎಂದು ಹೇಳಲಾಗದು; ಆ ನಾಟಕವನ್ನು ಈ ನಾಟಕ ರಚನೆಗೆ ಪ್ರೇರಕವೆಂದು ಹೇಳಬಹುದು." ಮುಖ್ಯವಾಗಿ ನಾವಿಲ್ಲಿ ಗಮನಿಸಬೇಕಾಗಿರುವುದು ಕುವೆಂಪು ಅವರು ಹೇಗೆ ಭೈರವನಪಾತ್ರ ನಿರೂಪಣೆಯನ್ನು ಮಾಡಿದ್ದಾರೆಂದು. ಅವನ ಶಕ್ತಿ **ಟೆಂಪೆಸ್ಟ್**‌ನಲ್ಲಿರುವಂತೆ ಮಾಯ ಮಂತ್ರಗಳದ್ದಲ್ಲ; ಅದೊಂದು ಆತ್ಮಶಕ್ತಿ, ತಪಶ್ಶಕ್ತಿ. ಈ ದಿವ್ಯಶಕ್ತಿ ಶನಿಯಂತಹ ಕೇಡಿಗರಿಗೆ ಕೆಡಕನ್ನು ಉಂಟುಮಾಡಿದರೂ, ಲೋಕಕಲ್ಯಾಣಕ್ಕಾಗಿಯೇ ವಿನಿಯೋಗಿಸಲಾಗಿದೆ. ಈ ಶಕ್ತಿಯುಳ್ಳವರು ಚಿಕ್ಕತನಕ್ಕಿಳಿಯಲಾರರು.

> "ಮುಯ್ಗೆಮುಯ್ಯಂ ತೀರ್ಚಿಕೊಳ್ವುದದು ಜಸಮಲ್ತು!
> ಕ್ಷಮೆಯೆ ಪುಣ್ಯಾತ್ಮರಿಗೆ ಸಿರಿಯ ಪೊಂದೊಡಿಗೆ."

೫

**ಬಲಿದಾನ**ವೊಂದು ಸಣ್ಣರೂಪಕ. ಇದನ್ನು ಕುವೆಂಪು ಅವರ ರಾಜಕೀಯ ದರ್ಶನವೆಂದರೆ ತಪ್ಪಾಗಲಾರದು. ಇದನ್ನು ಓದುತ್ತಿದ್ದಾಗ ಬೇಂದ್ರೆಯವರ ಕವನವೊಂದು ಜ್ಞಾಪಕಕ್ಕೆ ಬರುತ್ತದೆ—'ಕನಸಿನೊಳಗೊಂದು ಕಣಸು! ಬೇಂದ್ರೆಯವರು ತಮ್ಮ ಕನಸನ್ನು ಕವನದಲ್ಲಿ ಹಾಡಿ ತೋರಿಸಿದರೆ, ಕುವೆಂಪು ಅವರು ಅದನ್ನು ದೃಶ್ಯವಾಗಿ ಕಟ್ಟಿ ತೋರಿಸಿದ್ದಾರೆ.

> "ಸ್ವಾತಂತ್ರ್ಯ ಜೀವನಂ ಬಲಿಪರಂಪರೆಯೆಂಬುದಂ
> ಬಲಿದಾನ ತತ್ತ್ವಮಂ ಭಾವಿಸಿ ಮನಂಗಾಣ್"

**ನನ್ನ ಗೋಪಾಲ:** ಒಂದು ಕಿರುನಾಟಕ; ಮಕ್ಕಳಿಗಾಗಿಯೇ ಬರೆದದ್ದು. ಅದರಲ್ಲಿ ಸಹ ಸುಲಭಮಾತಿನಲ್ಲಿ ಗಾಢವಾದೊಂದು ವಿಷಯವನ್ನು ಹೇಳಿದ್ದಾರೆ. ಬನದಗೋಪಾಲ ಹೇಳುತ್ತಾನೆ:

> "ತಿಳಿವಳಿಕೆಗೆ ನಾ ಸಿಲುಕೇ ಮನುಜಾ
> ಒಲುಮೆಗೆ ಸೆರೆಯಾಗುವೆನು."

ಇದೇ ರೀತಿಯಲ್ಲಿ **ನೋಡಣ್ಣನ ತಮ್ಮ** ಎಂಬ ಮಕ್ಕಳ ನಾಟಕವೂ ಸಹ ಬುದ್ಧಿವಾದವೊಂದನ್ನು ಹೇಳುತ್ತದೆ:

"ಧರ್ಮ ಮೇಘ ನೀನಾಗಲುಬೇಕು.
ಧರ್ಮದ ಮಳೆಯನು ಸುರಿಸಲುಬೇಕು."

ಈ ಪುಟ್ಟ ದೃಶ್ಯಕಾವ್ಯ ನರ್ತನ ರೀತಿಯ ಛಂದಸ್ಸಿನಲ್ಲಿದೆ. ಮಕ್ಕಳು ಹಾಡುತ್ತ, ಕುಣಿಯುತ್ತ ಈ ನಾಟಕವನ್ನಾಡಬಹುದು.

೬

ಕುವೆಂಪು ಅವರ ನಾಟಕಗಳಲ್ಲಿ ವೈವಿಧ್ಯತೆಯಿದೆ, ವೈಶಾಲ್ಯತೆಯಿದೆ. ಆ ವಿಷಯವೆಲ್ಲ ಹಳೆಯದೆಂದೇ ಹೇಳಿದರೂ, ಹೇಳುವ ರೀತಿಯಲ್ಲಿ ಹೊಸದೊಂದು ಶೈಲಿಯಿದೆ, ದೃಷ್ಟಿಯಿದೆ, ಕೆಚ್ಚಿದೆ. ಇವುಗಳಲ್ಲಿ ಕೆಲವು ಅಭಿನಯಕ್ಕೆ ಯೋಗ್ಯವಾಗಿದ್ದರೂ, ಎಲ್ಲವೂ ರೇಡಿಯೋ ಪ್ರಸಾರಕ್ಕೆ ಅತ್ಯುತ್ತಮವಾಗಿವೆ. ಇವುಗಳಲ್ಲಿ ಯಥೇಚ್ಛವಾಗಿ ಬರುವ ಹಾಡುಗಳು, ವರ್ಣನೆಗಳು ಕೇಳಲು ಬಹಳ ಆನಂದಕರವಾಗಿರುವುದರಲ್ಲಿ ಸಂಶಯವಿಲ್ಲ. ಸಂಸ್ಕೃತಿ ಪ್ರಚಾರವಾಗಬೇಕೆಂದು ಎಲ್ಲೆಲ್ಲೂ ಕೇಳಿಬರುತ್ತಿರುವ ಇಂದಿನ ಕೂಗಿಗೆ ಹಿಂದೇ ಕುವೆಂಪು ಅವರು ಸಾಕಷ್ಟು ಸಾಮಗ್ರಿಯನ್ನು ಒದಗಿಸಿದ್ದಾರೆ. ಅವರ ನಾಟಕಗಳನ್ನು ಕನ್ನಡನಾಡಿನ ಮೂಲೆ ಮೂಲೆಯಲ್ಲೂ ಆಡಿಸಿ, ಹಾಡಿಸಿ, ಭಾರತಸಂಸ್ಕೃತಿಯನ್ನು ಮನೆ ಮನೆಗೂ ಹಂಚುವುದು ಅಕ್ಷರಸ್ಥರೆಲ್ಲರ–ಅದರಲ್ಲಿಯೂ ಕುವೆಂಪು ಅವರ ಶಿಷ್ಯರ, ಮಿತ್ರರ, ಹಿರಿಯ ಹೊಣೆ. ಹಾಗೆ ಮಾಡಿದರೇ ನಾವವರಿಗೆ ಸರಿಯಾದ 'ಉಡುಗೊರೆ'ಯನ್ನು ಕೊಟ್ಟು ಗೌರವಿಸಿದಂತಾಗುತ್ತದೆ.



# ಬೆರಳ್‌ ಗೆ ಕೊರಳ್‌

ತ. ಸು. ಶಾಮರಾಯ

ನಾಡಿನ ಪೂರ್ವಪುಣ್ಯದಿಂದ ಮಹಾಕವಿಯೊಬ್ಬನು ಉದಿಸುವನಂತೆ! ಅಹುದು; ಕುವೆಂಪುವಿನಂತಹ ಮಹಾಕವಿ ಉದಯಿಸಲು ಕನ್ನಡತಾಯಿ ಪುಣ್ಯಗರ್ಭಳೇ ಆಗಿರ ಬೇಕು. ಅವರ ಕಾವ್ಯರಾಶಿಯನ್ನು ಓದಿ, ಅರ್ಥಮಾಡಿಕೊಂಡು ಆನಂದಾನುಭವ ಮಾಡಬಲ್ಲ ಸಹೃದಯರಿಗೆ ಈ ಮಾತು ಸತ್ಯದೂರವಲ್ಲವೆಂದು ಮನವರಿಕೆಯಾಗದೆ ಹೋಗದು. ದಿವಂಗತ ಶ್ರೀ ವೆಂಕಣ್ಣಯ್ಯನವರು ಕುವೆಂಪುರವರ ಕಾವ್ಯಗಳನ್ನು ಆರ್ದ್ರಹೃದಯದಿಂದ ವಿಮರ್ಶಿಸುತ್ತಾ "Puttappa at his best excels all the other Poets in Kannada, whether ancient or modern" ಎಂದು ಮಮತೆಯಿಂದ ಮೆಚ್ಚಿಗೆಯನ್ನು ಸೂಚಿಸುತ್ತಿದ್ದರು. ವೈವಿಧ್ಯತೆ, ಪ್ರಮಾಣ, ಯೋಗ್ಯತೆ—ಈ ಮೂರನ್ನೂ ಒಟ್ಟಿಗೆ ತೆಗೆದುಕೊಂಡು ವೀಕ್ಷಿಸಿದಾಗ ಈ ಮೆಚ್ಚಿಕೆಯ ಪೂರ್ಣ ಅರ್ಥವಾಗುತ್ತದೆ; ಕುವೆಂಪುರವರ ಅದ್ವಿತೀಯತೆ ಸ್ವಯಂವೇದ್ಯ ವಾಗುತ್ತದೆ. ಅವರ ಕೃತಿಮೇರುವಿನ ಎತ್ತರಬಿತ್ತರಗಳೆರಡೂ ಅನನ್ಯ ಸಾಧಾರಣ ವಾದುವು. ಅವರೊಬ್ಬ ಅಮರ ಕವಿ; ಅವರ ಕೃತಿಗಳು ಅಮರಕೃತಿಗಳು.

ಮುಗ್ಧಜ್ಞಾನರಾದ ಎಳೆಯಮಕ್ಕಳನ್ನು ವಿನೋದಗೊಳಿಸಬಲ್ಲ 'ಬೊಮ್ಮನ ಹಳ್ಳಿಯ ಕಿಂದರಜೋಗಿ'ಯಿಂದ ಹಿಡಿದು ಜ್ಞಾನಿಗಳೆನಿಸಿಕೊಂಡ ಪರಿಣತವಯಸ್ಕ ರನ್ನೂ ಬಿಡುಗಣ್ಣರನ್ನಾಗಿ ಮಾಡಬಲ್ಲ 'ಶ್ರೀರಾಮಾಯಣ ದರ್ಶನಂ'ವರೆಗೆ ಕುವೆಂಪು ರವರ ಸಾಹಿತ್ಯಸೃಷ್ಟಿಯ ಹರವು ಪ್ರಸರಿಸಿದೆ. ಕಥೆ, ಕಾದಂಬರಿ, ಜೀವನ ಚರಿತ್ರೆ, ಭಾವಗೀತೆ, ನಾಟಕ, ವಿಮರ್ಶೆ, ಮಹಾಕಾವ್ಯ—ಇತ್ಯಾದಿ ಸಾಹಿತ್ಯದ ಯಾವ ಮುಖವೂ ಅವರ ಲೇಖನಿಯಿಂದ ವಂಚಿತವಾಗಿಲ್ಲ, ಎಲ್ಲೆಡೆಯಲ್ಲಿಯೂ ಅವರು ತಮ್ಮದೇ ಆದ ಪ್ರಭಾವವನ್ನು, ವಿಶಿಷ್ಟ ವ್ಯಕ್ತಿತ್ವವನ್ನು ಸ್ಥಾಪಿಸಿಕೊಂಡಿದ್ದಾರೆ. ಅವರ ಕೃತಿಧೇನುಗಳು ತಮ್ಮ ಜ್ಞಾನಾಮೃತದಿಂದ ಕನ್ನಡ ಸಾಹಿತ್ಯದ ಅಮರತೆಗೆ ಸಹಾಯಕವಾಗಿ ನಿಂತಿವೆ.

ಕುವೆಂಪುರವರ ವೈವಿಧ್ಯಪೂರ್ಣ ಸಾಹಿತ್ಯಸೃಷ್ಟಿಯಲ್ಲಿ ಪ್ರಕೃತ ಅವರ ನಾಟಕ ಸಾಹಿತ್ಯವನ್ನು ಮಾತ್ರ ಕುರಿತು ಹೇಳುವುದಾದರೆ ಅವರ ನಾಟಕ ಸಾಹಿತ್ಯದ ಹರವಾದರೂ ಅಲ್ಪಸ್ವಲ್ಪವಾಗಿಲ್ಲ. ಮೋಡಣ್ಣನ ತಮ್ಮ, ನನ್ನ ಗೋಪಾಲ—ಈ ಎರಡೂ ಮಕ್ಕಳ ನಾಟಕಗಳು. ರಕ್ತಾಕ್ಷಿ—ಒಂದು ಐತಿಹಾಸಿಕ ನಾಟಕ; ಬಿರು ಗಾಳಿ—ಭಾಷಾಂತರ; ಬಲಿದಾನ—ಛಾಯಾರೂಪಕ; ಚಂದ್ರಹಾಸ, ವಾಲ್ಮೀ ಕಿಯ ಭಾಗ್ಯ, ಯಮನ ಸೋಲು, ಮಹಾರಾತ್ರಿ, ಶ್ಮಶಾನ ಕುರುಕ್ಷೇತ್ರಂ, ಶೂದ್ರತಪಸ್ವಿ, ಬೆರಳ್‌ ಗೆ ಕೊರಳ್‌ ಇವು, ಮೂಲವಸ್ತು ಪೌರಾಣಿಕವಾದರೂ

ಕುವೆಂಪುರವರ ಪ್ರತಿಭೆಯು ಕಾವಿನಲ್ಲಿ ಕರಗಿ ಚಿರನೂತನವಾದ ದಿವ್ಯಾಕಾರದಿಂದ ಹೊರಹೊಮ್ಮಿರುವ, ಆಧುನಿಕ ಚಿರನಾಟಕಗಳು (Modern Classics); ಜಲಗಾರ—ಒಂದು ಸಾಮಾಜಿಕ ಗೀತರೂಪಕವೆಂದು ಕರೆಯಬಹುದಾದರೂ ಇದೂ ಚಿರನಾಟಕಗಳ ಸಾಲಿಗೇ ಸೇರತಕ್ಕದ್ದು. ಹೀಗೆ ಸಂಖ್ಯೆಯ ದೃಷ್ಟಿಯಿಂದ ಮಾತ್ರವಲ್ಲದೆ ವೈವಿಧ್ಯದ ದೃಷ್ಟಿಯಿಂದಲೂ ಕುವೆಂಪುರವರ ನಾಟಕ ಸಾಹಿತ್ಯಸೃಷ್ಟಿ ಗಮನಾರ್ಹ ವಾದುದು.

ನಾಟಕವೆಂಬುದು ಪ್ರಯೋಗಪ್ರಧಾನವಾದುದು. ನಾಟಕದ ಸಂಪೂರ್ಣ ಪ್ರಯೋಜನವನ್ನು ಪಡೆಯಲು ರಂಗಸ್ಥಳದಲ್ಲಿ ಅದನ್ನು ಪ್ರದರ್ಶಿಸುವುದು ಅಗತ್ಯ ವೆಂದೇ ಹೇಳಬೇಕು. ಆದ್ದರಿಂದಲೇ ಈ ಕಲಾಕೃತಿಯು ರೂಪಕ, ದೃಶ್ಯ ಎಂಬ ಹೆಸರುಗಳಿಂದ ಪ್ರಸಿದ್ಧವಾಗಿರುವುದು. ‘ತ್ರೈಗುಣ್ಯೋದ್ಭವಮತ್ರಲೋಕಚರಿತಂ ನಾನಾ ರಸಂ ದೃಶ್ಯತೇ’ ಎಂಬ ಕಾಳಿದಾಸೋಕ್ತಿಯಂತೆ ಹಲವು ಕಲೆಗಳ ರಸ ಸಮನ್ವಯವಾದಾಗ ಮಾತ್ರ ‘ನಾಟ್ಯಂ ಭಿನ್ನರುಚೇರ್ಜನಸ್ಯ ಬಹುಧಾಪ್ಯೇಕಂ ಸಮಾರಾಧನಂ’ ಆಗುವುದು. ಕಾಳಿದಾಸನ ಮಾತಿನಲ್ಲಿ ಹೇಳುವುದಾದರೆ ನಾಟಕ ವೆಂಬುದೊಂದು ಚಾಕ್ಷುಷ ಯಜ್ಞ. ಆದರೆ ಕುವೆಂಪುರವರ ನಾಟಕಗಳೆಲ್ಲವೂ ಅಲ್ಲದಿದ್ದರೂ, ಅವುಗಳಲ್ಲಿ ಅತ್ಯುತ್ತಮವಾದುವೆಂದು ಪರಿಗಣಿಸಬಹುದಾದುವು ರಂಗಸ್ಥಳಕ್ಕೆ ಹೊಂದಿಕೊಳ್ಳುವುದಿಲ್ಲವೆಂಬುದು ಅವರ ನಾಟಕಗಳ ಮೇಲಿನ ಒಂದು ಆರೋಪಣೆ. ಇದರಲ್ಲಿ ಸ್ವಲ್ಪಮಟ್ಟಿಗೆ ಸತ್ಯವೂ ಇದೆ. ಕುವೆಂಪು ಪ್ರಥಮತಃ ಕವಿ. ಅವರ ಕಲ್ಪನಾಪಕ್ಷಿ ಗರಿಗೆದರಿ ಗಗನಚುಂಬಿಯಾಗಿರುವಾಗ ಮೃಣ್ಮಯವಾದ ಪಾರ್ಥಿವ ಜಗತ್ತು ಸ್ವಲ್ಪಮಟ್ಟಿಗೆ ಅವರ ದೃಷ್ಟಿಗೆ ದೂರವಾಗುತ್ತದೆ. ಇದನ್ನು ಕುವೆಂಪುರವರೂ ಗಮನಿಸಿದ್ದಾರೆ. ಇಂತಹ ಸಂದರ್ಭಗಳಲ್ಲಿ ಕವಿ ಕುವೆಂಪು ಕೊಡುವ ಸಮಾಧಾನವೇನೆಂದರೆ ‘ಈ ನಾಟಕಗಳಲ್ಲಿ ಬರುವ ಚಿತ್ರಗಳ ಬೃಹತ್ತನ್ನೂ ಮಹತ್ತನ್ನೂ ಹೊರಗಡೆಯ ಅಲ್ಪವೇದಿಕೆಯ ಕೃತಕಾಭಿನಯದಿಂದ ಪ್ರದರ್ಶಿ ಸುವುದು ಅಸಾಧ್ಯ. ಆದ್ದರಿಂದ ಕಲ್ಪನಾತಪಸ್ಸಾಧ್ಯವಾದ ಮನೋರಂಗ ಭೂಮಿ ಯಲ್ಲಿಯೇ ಅವನ್ನು ಸೃಷ್ಟಿಸಿ ದೃಷ್ಟಿಸಬೇಕು. ದೃಶ್ಯರೂಪಿಯಾದರೂ ಅವು ಕಾವ್ಯಾತ್ಮಕವಾದುವು. ದೃಶ್ಯರೂಪಧಾರಣೆ ಮಾಡಿದ ಮಾತ್ರಕ್ಕೆ ಕಾವ್ಯವು ಟಿಕೇಟಿನ ಆಡಳಿತಕ್ಕೆ ಒಳಗಾಗಲೇಬೇಕೆಂಬ ದುರಾಗ್ರಹ ಒಂದು ಹಳೆಯ ಪ್ರಯೋಜನದ ನಿಷ್ಪ್ರಯೋಜಕವೂ ಅವಶೇಷಾತ್ಮಕವೂ ಆಗಿರುವ ಮನಃಸ್ಥಿತಿಯೆಂದೇ ಹೇಳಬೇಕಾಗು ಗುತ್ತದೆ. ಮನೋವೇದಿಕೆಯ ಸಜೀವತೆಯ, ಮತ್ತು ಶ್ರೀಮಂತತೆಯ ಮುಂದೆ ಹೊರಗಡೆಯ ಒಂದು ನಾಟಕಶಾಲೆ ಒಂದು ದರಿದ್ರ ಪ್ರಯತ್ನವೆಂದು ಪ್ರತಿಭಾ ಪ್ರಭುಗಳೆಲ್ಲರಿಗೂ ನಿತ್ಯಾನುಭವ ವೇದ್ಯ.’ ಕುವೆಂಪುರವರು ತಮ್ಮ ನಾಟಕಗಳ ದೃಶ್ಯ ಶಕ್ತಿಯ ವಿಚಾರದಲ್ಲಿ ಕೊಟ್ಟಿರುವ ಮೇಲಣ ಸೂತ್ರ ಗಮನಾರ್ಹವಾದುದು. ಅವರ ನಾಟಕಗಳು ದೃಶ್ಯರೂಪಿಗಳಾದರೂ ಕಾವ್ಯತ್ಮಕವಾದುವು. ಆದ್ದರಿಂದ ಅವುಗಳನ್ನು

ಕುರಿತು ವಿಚಾರಮಾಡುವಾಗ ರಂಗಸ್ಥಳವನ್ನು ದೃಷ್ಟಿಯಲ್ಲಿಟ್ಟುಕೊಂಡೇ ವಿಮರ್ಶೆ ಮಾಡಹೊರಡುವುದು ಅನುಚಿತವಾದುದು. ಹೀಗೆಂದಮಾತ್ರಕ್ಕೆ ಅವರ ನಾಟಕಗಳಲ್ಲಿ ಯಾವುದೂ ರಂಗಸ್ಥಳಕ್ಕೆ ಅಳವಡುವುದೇ ಇಲ್ಲವೆಂದು ಭಾವಿಸಬಾರದು. ಅವರ ಹಲವು ನಾಟಕಗಳು ರಂಗಸ್ಥಳದಲ್ಲಿಯೂ ಯಶಸ್ಸನ್ನು ಗಳಿಸಿರುವುದು ಅನೇಕರಿಗೆ ಅನುಭವವೇದ್ಯವಾಗಿದೆ.

ನಾಟಕವೊಂದು ರಂಗಸ್ಥಳಕ್ಕೆ ಅಳವಡುವುದಿಲ್ಲ ಎಂಬ ಮಾತು ಸಂಪೂರ್ಣ ಸತ್ಯವೆಂದು ಹೇಳುವಂತಿಲ್ಲ. ರಂಗಸ್ಥಳದ ಸಾಧನಸಾಮಾಗ್ರಿಗಳು ಕಾಲಕಾಲಕ್ಕೆ ಬದಲಾಯಿಸುತ್ತಾ ಹೋಗುತ್ತವೆ. ಷೇಕ್ಸ್‌ಪಿಯರ್ ಕವಿಯ 'ರೋಮಿಯೊ ಜೂಲಿಯಟ್' ನಾಟಕವಾಡುವಾಗ ಚಂದ್ರೋದಯವಾಯಿತೆಂದು ತೋರಿಸುವುದಕ್ಕಾಗಿ ಒಬ್ಬ ಮನುಷ್ಯನ ತಲೆಯಮೇಲೆ ಒಂದು ಲಾಂದ್ರವನ್ನಿಟ್ಟು ನಿಲ್ಲಿಸುತ್ತಿದ್ದರಂತೆ. ಇದು ಇಂತಹ ದೃಶ್ಯ ಎಂದು ಜನರಿಗೆ ಮನದಟ್ಟಾಗುವುದಕ್ಕಾಗಿ ಒಂದು ರಟ್ಟಿನಮೇಲೆ ಅದನ್ನು ಬರೆದಿಡುತಿದ್ದರಂತೆ. ನವನಾಗರೀಕತೆಯಿಂದ ಕೂಡಿ ವಿಪುಲವಾದ ಸಾಧನ ಸಾಮಗ್ರಿಗಳನ್ನು ಪಡೆದಿರುವ ಇಂದಿನ ರಂಗಸ್ಥಳಗಳಲ್ಲಿ ಇದು ಶುದ್ಧ ಆಭಾಸವಾಗಿ ಹಾಸ್ಯಾಸ್ಪದವಾಗಿ ಕಾಣಬಹುದು. ಆದರೂ ರಂಗಸ್ಥಳದ ಸಾಧನ ಸಾಮಗ್ರಿಗಳನ್ನು ನಾವು ಎಷ್ಟೇ ಉತ್ತಮಗೊಳಿಸಿದರೂ ಅದರ ಇತಿಮಿತಿಗಳನ್ನು ನಿರ್ಲಕ್ಷಿಸುವಂತಿಲ್ಲ. ಆದ್ದರಿಂದ ಕೇವಲ ರಂಗಸ್ಥಳದ ಪ್ರದರ್ಶಕ ಗುಣವೊಂದರಿಂದಲೇ ನಾಟಕಗಳ ಬೆಲೆಯನ್ನು ಅಳೆಯುವುದು ಅಷ್ಟು ಶ್ರೇಷ್ಠವಾದ ರುಚಿಶುದ್ಧಿಯೆಂದು ನಾವು ಹೇಳಲಾರೆವು. ಕಾಳಿದಾಸ ಮಹಾಕವಿಯ 'ಶಾಕುಂತಲ' ನಾಟಕದಲ್ಲಿ ದುಷ್ಯಂತನು ಬೆನ್ನಟ್ಟಿಬರುವ ಜಿಂಕೆಯ ದೃಶ್ಯವನ್ನು ರಂಗಸ್ಥಳದಲ್ಲಿ ಪ್ರದರ್ಶಿಸುವುದು ಸಾಧ್ಯವಿಲ್ಲವೆಂದ ಮಾತ್ರಕ್ಕೆ, ಅದು 'ನಾಟಕೇಷು ಶಕುಂತಲಾ' ಎಂಬ ಕೀರ್ತಿಯಿಂದ ವಂಚಿತವಾಗುತ್ತದೆಯೇ? ಸ್ವರ್ಗಮರ್ತ್ಯಗಳ ರಸಸೇತುವೆಯಂತಿರುವ ಆ ನಾಟಕದ ನಾಲ್ಕನೆಯ ಅಂಕವು ರಂಗಸ್ಥಳದ ಮೇಲೆ ಯಥಾವತ್ತಾಗಿ ಪ್ರದರ್ಶಿತವಾಗುವುದು ಹೇಗೆ ಸಾಧ್ಯ? ಅದರಂತೆಯೇ ಕುವೆಂಪುರವರ ನಾಟಕಗಳಾದರೂ ರಂಗಸ್ಥಳದ ನಿಬಂಧನೆಗಳಿಗೆ ಸಂಪೂರ್ಣವಾಗಿ ವಶವರ್ತಿಗಳಾಗುವುದು ಅಸಾಧ್ಯವಾದರೂ ಅವುಗಳ ಹಿರಿತನಕ್ಕೆ ಸ್ವಲ್ಪವೂ ಲೋಪವಿಲ್ಲವೆಂದು ಘಂಟಾಘೋಷವಾಗಿ ಹೇಳಬಹುದು.

ಒಂದುವೇಳೆ ನಮ್ಮ ಈ ವಾದವನ್ನು ಒಪ್ಪದಿರುವವರೂ ಕೂಡ ಕುವೆಂಪುರವರ ನಾಟಕಗಳ ಕಾವ್ಯಗುಣಗಳನ್ನು ಆರ್ದ್ರಹೃದಯದಿಂದ ಮೆಚ್ಚುವುದರಲ್ಲಿ ಯಾವ ಸಂದೇಹವೂ ಇಲ್ಲ.

ಈಗ ಕುವೆಂಪುರವರ ನಾಟಕ ಶೈಲದಲ್ಲಿ ಗೌರೀಶಂಕರದಂತಿರುವ 'ಬೆರಳ್‌ಗೆ ಕೊರಳ್' ನಾಟಕವನ್ನು ಮಾತ್ರ ಕುರಿತು ಇಲ್ಲಿ ವಿವೇಚಿಸಲಾಗಿದೆ. ಇದುವರೆಗೆ ಕನ್ನಡದಲ್ಲಿ ಪ್ರಕಟವಾಗಿರುವ ನಾಟಕಗಳಲ್ಲಿ ಚಿರಕಾವ್ಯದ ಪಟ್ಟಕ್ಕೇರುವ ಭಾಗ್ಯಶಾಲಿಗಳಲ್ಲೆಲ್ಲಾ ಇದು ಅಗ್ರಗಣ್ಯವೆಂದು ನಮ್ಮ ಭಾವನೆ. ಇದಾಗಲೀ ಅಥವಾ ಶೂದ್ರತಪಸ್ವಿಯಾಗಲಿ

ಸಾಧಾರಣ ಸಾಮರ್ಥ್ಯದ ರಂಗಪ್ರದರ್ಶನಕ್ಕೆ ಅಳವಡುವಂತಿಲ್ಲ. ಇವುಗಳನ್ನು ಕಲ್ಪನಾ ತಪಸ್ಸಾಧ್ಯವಾದ ಮನೋರಂಗಭೂಮಿಯಲ್ಲಿಯೇ ಸೃಷ್ಟಿಸಿ ದೃಷ್ಟಿಸಬೇಕು. ದೃಶ್ಯ ರೂಪಿಗಳಾದರೂ ಅವು ಕಾವ್ಯಾತ್ಮಕಗಳಾದುವು. ಆದ್ದರಿಂದ ಈ ನಾಟಕಗಳನ್ನು ವಿಚಾರಮಾಡುವಾಗ ನಾಟಕರಂಗವನ್ನು ಅಷ್ಟಾಗಿ ದೃಷ್ಟಿಯಲ್ಲಿಟ್ಟುಕೊಳ್ಳಕೂಡದು. ಆದರೆ ಅತ್ಯುತ್ತಮ ನಟರೂ ಶ್ರೇಷ್ಠ ದಿಗ್ದರ್ಶಕರೂ ದೊರೆಯುವ ಪಕ್ಷದಲ್ಲಿ ಇವೆರಡು ನಾಟಕಗಳೂ ಚಲನಚಿತ್ರರಂಗದಲ್ಲಿ ಅದ್ಭುತ ವಿಜಯವನ್ನು ಗಳಿಸಬಲ್ಲವು.

'ಬೆರಳ್ ಗೆ ಕೊರಳ್' ನಾಟಕದ ಕಥಾವಸ್ತು ಮಹಾಭಾರತದಿಂದ ಎತ್ತಿ ಕೊಂಡುದಾಗಿದೆ. ಅಲ್ಲಿ ಕ್ವಚಿತ್ತಾಗಿ ಬರುವ ಏಕಲವ್ಯನ ಜೀವನವೃತ್ತಾಂತ ಈ ಕಥಾವಸ್ತುವಿಗೆ ಮೂಲವಸ್ತು. ಶಿಷ್ಯವೃತ್ತಿಗಾಗಿ ತನ್ನ ಬಳಿಗೆ ಬಂದ ಏಕಲವ್ಯನನ್ನು ಅವನು ವ್ಯಾಧನೆಂಬ ಕಾರಣಕ್ಕಾಗಿ ರಾಜಗುರು ದ್ರೋಣನು ತಿರಸ್ಕರಿಸಿದನು. ಆದರೂ ಏಕಲವ್ಯನು ದ್ರೋಣರ ಮೃಣ್ಮಯ ವಿಗ್ರಹವನ್ನಿಟ್ಟುಕೊಂಡು ಶಸ್ತ್ರಾಭ್ಯಾಸಕ್ಕೆ ತೊಡಗಿ ಶಸ್ತ್ರವಿದ್ಯಾಪರಿಣತನಾದನು. ಒಮ್ಮೆ ಕೌರವ ಪಾಂಡವರು ಬೇಟೆಗೆ ಹೋಗಿದ್ದಾಗ ಏಕಲವ್ಯನ ಶಸ್ತ್ರವಿದ್ಯಾಕೌಶಲ ಅವರ ಗಮನಕ್ಕೆ ಬಂದಿತು. ತನ್ನನ್ನು ಕಂಡು ಬೊಗು ಳಿದ ನಾಯಿಯ ಬಾಯೊಳಕ್ಕೆ ಒಮ್ಮೆಯೇ ಏಳು ಬಾಣಗಳನ್ನು ಪ್ರಯೋಗಿಸಿ ಆತನು ತನ್ನ ಕೈಚಳಕದಿಂದ ಅರ್ಜುನನ ಅಸೂಯೆಯನ್ನು ಕೆರಳಿಸಿದ. ಊರಿಗೆ ಹಿಂದಿರುಗಿ ದೊಡನೆಯೇ ಆ ರಾಜಪುತ್ರನು ದ್ರೋಣರ ಬಳಿಗೆ ಹೋಗಿ ತನ್ನ ಹೃದ್ರೋಗವನ್ನು ಅವರಲ್ಲಿ ಹೇಳಿಕೊಂಡನು. ಒಡನೆಯೇ ದ್ರೋಣರು ಅರ್ಜುನನೊಡನೆ ಏಕಲವ್ಯನ ಬಳಿಗೆ ಹೋಗಿ, ಅವನ ಹೆಬ್ಬೆರಳನ್ನು ಗುರುದಕ್ಷಿಣೆಯಾಗಿ ಪಡೆದು ಅರ್ಜುನನನ್ನು ಸಂತೋಷಪಡಿಸಿದರು. ಈ ಕಥೆಯ ಸ್ಥೂಲರೇಖೆಗಳನ್ನು ಮಾತ್ರ ಸ್ವೀಕರಿಸಿ ಚಿರ ನೂತನವಾದ ನಾಟಕವೊಂದನ್ನು ಸೃಷ್ಟಿಸಿದ್ದಾರೆ ಶ್ರೀ ಕುವೆಂಪು.

'ಬೆರಳ್ ಗೆ ಕೊರಳ್' ಎಂಬ ನಾಟಕದ ನಾಮಕರಣವೇ ಮನೋಹರವಾಗಿದೆ. ಈ ಕೃತಿಯ ಸಾರಸರ್ವಸ್ವವನ್ನು ಅಡಗಿಸಿಟ್ಟುಕೊಂಡಿರುವ ಬೀಜಮಂತ್ರದಂತಿದೆ ಆ ಹೆಸರು. ಅದರ ಸಾರ್ಥಕತೆಯನ್ನು ಅರಿತುಕೊಳ್ಳಲು ಇಡೀ ನಾಟಕದ ವಿವರವಾದ ವಿಮರ್ಶೆ ಮೊದಲು ಅಗತ್ಯ. ಈ ನಾಟಕದ ಪ್ರಾರಂಭವೇ ಸಾಕು; ದಿವ್ಯತೆಯೇ ಮೆರವಣಿಗೆ ಹೊರಟಂತೆ ಅತ್ಯಂತ ಭವ್ಯವಾಗಿದೆ. ಆಗತಾನೆ ಮಸುಕುಮಸುಕಾಗಿ ಬೆಳಕು ಹರಿಯುತ್ತಿದೆ. ಮೌನಜಲಧಿಯಲ್ಲೆದ್ದ ನಾದತರಂಗದಂತೆ ಪಕ್ಷಿಕೂಜನದ ಕಾಕಲಿಧ್ವನಿ; ಆ ಧ್ವನಿಗೆ ಸ್ವರಮೇಳ ಒಡ್ಡಿದಂತೆ ಕೇಳಿಬರುತ್ತಿರುವ ಅಬ್ಬಿಯ ಓಂಕಾರನಾದ; ಕಡೆದು ಕಂಡರಿಸಿದಂತೆ ಧ್ಯಾನಸ್ಥಿಮಿತಮೂರ್ತಿಯಾಗಿ ನಿಸರ್ಗ ಮಧ್ಯದ ನಿಸರ್ಗವೆಂಬಂತೆ ಕುಳಿತಿರುವ ಏಕಲವ್ಯನು ಗುರುಸ್ತವನವನ್ನು ಭಕ್ತಿಭಾವ ದಿಂದ ಹಾಡಿ ಹರಿಸುತ್ತಿದ್ದಾನೆ. ಈ ಸಾತ್ವಿಕವಾದ ಹಿನ್ನೆಲೆಯ ಪ್ರಭಾವದಿಂದ ಪವಿತ್ರವಾತಾವರಣವೊಂದು ಸೃಷ್ಟಿಯಾಗುತ್ತದೆ. ಆ ಸೃಷ್ಟಿಯ ಪರಂಪರಾದರ್ಶನವೇ ಈ ದಿವ್ಯನಾಟಕ. ಅಂದು ಗುರುವಾದ ದ್ರೋಣಾಚಾರ್ಯರು ಏಕಲವ್ಯನ ಬಳಿಗೆ

ಬರುವವರಾಗಿದ್ದಾರೆ. ಇದರಿಂದ ಹರ್ಷಪುಳಕಿತನಾಗಿರುವ ಏಕಲವ್ಯನ ಬಾಯಿಂದ ಗುರುವಿನ ಆಗಮನದ ಸುದ್ದಿ ತನಗೆ ತಾನೇ ತಾನತಾನವಾಗಿ, ದಿವ್ಯಲಹರಿಯಾಗಿ, ಪಲ್ಲವಿ ಅನುಪಲ್ಲವಿಯಂತೆ ಹರಿದುಬರುತ್ತದೆ. ಸ್ವಲ್ಪಸ್ವಲ್ಪವಾಗಿ ಕತ್ತಲೆಯಳಿದು ಇನಿತಿನಿತೆ ಬೆಳಕುಮೂಡುತ್ತಿರುವ ಪ್ರಕೃತಿವ್ಯಾಪಾರವೂ ಕೂಡ ಗುರುವಿನಾಗಮನದ ಸಂಕೇತದಂತೆ ಕಾಣಿಸುತ್ತದೆ. ಅಜ್ಞಾನಾಂಧಕಾರವನ್ನು ನೀಗಾಡಿ ಜ್ಞಾನದ ಬೆಳಕನ್ನು ನೀಡುವ ಗುರುವಿನ ಆಗಮನ ಸಮೀಪಿಸಿದಂತೆಲ್ಲ ಕತ್ತಲು ಅಳಿದು ಬೆಳಕು ಮೂಡುತ್ತಿರಬಹುದೆಂಬಂತೆ ಧ್ವನಿತವಾಗುತ್ತಿದೆ. ಏಕಲವ್ಯನ ಗುರುಸ್ತವನದ ಮಹಿಮೆಯಿಂದ ನಡೆದ ಪವಾಡದಂತೆ ಮೂಡಿರುವ ಈ ಬೆಳಗಿನಲ್ಲಿ ಆ ಸಚ್ಛಿಷ್ಯನಿಗೆ ಎಲ್ಲೆಲ್ಲಿಯೂ ಗುರುಸಂದರ್ಶನವಾದಂತಾಗುತ್ತಿದೆ. ಮಂಜುಮೋಡವು ಗುರುವುಟ್ಟ ಧವಳೋತ್ತರೀಯದ ಅಂಚಲದಂತಿದೆ; ಪರಪುಟ್ಟನಿಂಚರ ಗುರುದೇವನ ಆಗಮನವನ್ನು ಸಾರುತ್ತಿರುವಂತಿದೆ; ಕಾಜಾಣವು ಸುಖಾಗಮನದ ಮಂಗಳಗೀತವನ್ನು ಹಾಡುವಂತೆ ಕಾಣುತ್ತಿದೆ. ಗುರುಭಕ್ತಿಭರಿತನಾದ ಏಕಲವ್ಯನು ತನ್ನ ಗುರುವಿನ ಆಗಮನಕ್ಕೆ ಸರ್ವಸಿದ್ಧತೆಯನ್ನು ನೇರ್ಪುಗೊಳಿಸುವಂತೆ ಪ್ರಕೃತಿಯನ್ನು ಬೇಡುತ್ತಾನೆ. ಸೃಷ್ಟಿಯೆಲ್ಲವೂ ತನ್ನ ಗುರುವಿನ ಕೈಂಕರ್ಯವೆಸಗಬೇಕೆಂಬುದು ಆತನ ಅಭಿಲಾಷೆ. ಈ ದಿವ್ಯಭಾವಗಳ, ಸುಖ ಶಾಂತಿಗಳ ಸಮುದ್ರವನ್ನು ಕಲಕುವಂತಹ ದುಗುಡವೊಂದು ಆತನ ಮನಸ್ಸನ್ನು ಸುರುಳಿ ಸುತ್ತುತ್ತಿದೆ. ಭೋರ್ಗರೆಯುವ ಅಬ್ಬಿಯ ದನಿ ಯಾವುದೋ ಒಂದು ಕಟು ಸತ್ಯವನ್ನು ಸಾರಿ ಹೇಳುತ್ತಿರುವಂತೆ ಭಾಸವಾಗುತ್ತಿದೆ. ಇದಕ್ಕೆ ಕಾರಣ ಆತನು ಅಂದು ಕಂಡಿದ್ದ ಕನಸು. "ಇಂತಪ್ಪ ಶುಭದಿನಕೆ ಅದೆಂತಪ್ಪ ನಾಂದಿಯೋ" ಎಂದು ಮನ ಕಾತರಿಸುತ್ತಿದೆ. ಈ ಅಲ್ಪವಾದ ಮಾತುಗಳಲ್ಲಿ ಕವಿಯು ಒಂದು ಕಲ್ಪವನ್ನೇ ಹುದುಗಿಸಿದ್ದಾರೆಂದು ಹೇಳಬಹುದು. ಗುರುವು ಆಗಮಿಸುವುದು ಆತನ ಬಾಳಿನಲ್ಲಿ ಅತ್ಯಂತ ಮಂಗಳಕರವಾದ ಸನ್ನಿವೇಶ. ಆದರೆ ಆ ಸನ್ನಿವೇಶದ ಅಂತ್ಯದಲ್ಲಿ ಭಯಂಕರವಾದ ಕಾರ್ಯ ನಡೆದುಹೋಗುತ್ತದೆ. ಅದನ್ನು ಸೂಚಿಸುವುದು ಆ ಕನಸು. ಬಹಿರಂಗ ದೃಷ್ಟಿಗೆ ಭಯಂಕರವಾಗಿ ಕಾಣಬಹುದಾದ ಆ ಪರಿಣಾಮವು ಪೂರ್ಣದೃಷ್ಟಿಯಲ್ಲಿ ದಿವ್ಯವಾದುದೇ. ಆದುದರಿಂದ ಅದನ್ನು ಸೂಚಿಸುವ ಕನಸನ್ನು ನಾಂದಿ ಎಂದು ಕರೆದಿರುವುದು ಎಷ್ಟು ಉಚಿತವಾಗಿದೆಯೋ ಅಷ್ಟು ಧ್ವನಿಪೂರ್ಣವಾಗಿದೆ. ಏಕಲವ್ಯನು ತನ್ನ ಮನಸ್ಸಿನ ದುಗುಡವನ್ನು ಪ್ರಯತ್ನಪೂರ್ವಕವಾಗಿ ಮೆಟ್ಟಿ ಪ್ರಕೃತಿಸೌಂದರ್ಯದಲ್ಲಿ ತಲ್ಲೀನನಾಗಲು ಯತ್ನಿಸುತ್ತಾನೆ; ಗುರುವಿನಾಗಮನದ ಉತ್ಸಾಹದಲ್ಲಿ ಮುಳುಗಿಹೋಗುತ್ತಾನೆ.

"ಗುರುರ್ಬ್ರಹ್ಮಾ ಗುರುರ್ವಿಷ್ಣು : ಗುರುರ್ದೇವೋ ಮಹೇಶ್ವರಃ" ಇತ್ಯಾದಿಯಾದ ಗುರುಸ್ತುತಿ ಅವ್ಯಕ್ತ ಮಧುರತೆಯಿಂದ ದಿವ್ಯ ನಿಸರ್ಗದ ವಾತಾವರಣಕ್ಕೆ ಭಕ್ತಿಭಾವದ ಬಣ್ಣವನ್ನು ತುಂಬುತ್ತದೆ. ಓದುಗರಾದರೂ ಭಕ್ತಿಯುಕ್ತರಾಗಿಯೇ ಕಾವ್ಯವನ್ನು ಆರಂಭಿಸಬೇಕು. ಮಲಿನ ಮನಸ್ಸಿನ ಶ್ವಪಚರಿಗೆ ಈ ವಾತಾವರಣವನ್ನು

ಪ್ರವೇಶಿಸುವ ಹಕ್ಕಿಲ್ಲ. ಏಕಲವ್ಯನು ಗುರುನಿರೀಕ್ಷಣೆಯ ಭಕ್ತಿಭಾವದಿಂದ "ಇಂದು ಗುರುವೈತಪ್ಪನೆನ್ನೀ ವನಸ್ಥಲಕೆ: ಪವಿತ್ರತರಮಪ್ಪುದೀ ಕಾಡು ಮಲೆ ದಲ್ ದಿಟಂ" ಎಂಬ ಮಧುರಭಾವವನ್ನು ಚಪ್ಪರಿಸುತ್ತಾ ಕುಳಿತಿದ್ದಾನೆ. ಅವನ ಹೃದಯದಲ್ಲಾಗಲೇ ಗುರುವು ಆಗಮಿಸಿ ನೆಲೆಸಿದ್ದಾನೆ. ಆ ಸಂತೋಷದಲ್ಲಿ ಮುಳುಗಿ ಬಾಹ್ಯಜಗತ್ತನ್ನೇ ಮರೆತಿರುವ ಆತನ ಬಳಿಗೆ ತಾಯಿ ಬೆಳಗಿನ ಊಟವನ್ನು ಹೊತ್ತು ಅರಸುತ್ತಾ ಬರುತ್ತಾಳೆ. ಆ ಮುಪ್ಪಿನ ಮುದುಕಿ ಎಷ್ಟು ಮುಗ್ಧಳೋ ಅಷ್ಟು ಪ್ರೇಮಮಯಿ. ಆ ತಾಯಿಮಕ್ಕಳ ಸಂಭಾಷಣೆ ಸರಸಸುಂದರವಾಗಿದೆ, ಚೇತೋಹಾರಿಯಾಗಿದೆ, ಮನೋಜ್ಞವಾಗಿದೆ. ಆಕೆ ಹೊತ್ತುತಂದಿರುವ, ಜೇನಿನಂತೆ ಮಧುರವಾದುದು ಆಕೆಯ ಅಕ್ಕರೆ; ಆಕೆಯು ತಂದಿರುವ ತನಿವಣ್ಣು ಆಕೆಯ "ತಾಯಿತನಕ್ಕೆ ಪಡಿಮೆಯೆ ದಿಟಂ" ಅಬ್ಬಿಯ ದನಿಯೊಡನೆ ಸ್ಪರ್ಧಿಸುತ್ತಿರುವ ಆಕೆಯ ಕೂಗನ್ನು ಕೇಳಿ ಏಕಲವ್ಯನು ಆಕೆಗೆ ತಿಳಿಸದೆಯೇ ತಾನು ಹೊರಟುಬಂದುದಕ್ಕಾಗಿ ಮನಸ್ಸಿನಲ್ಲಿ ಮಿಡುಕಿಕೊಳ್ಳುತ್ತ ತಾನಿರುವೆಡೆಯನ್ನು ಕೂಗಿ ನಿರ್ದೇಶಿಸುತ್ತಾನೆ. ಹಿಂದೆ ಎಷ್ಟೋವೇಳೆ ತನ್ನೊಡನೆ ಅಲ್ಲಿಗೆ ಬರುವಂತೆ ತಾನು ಆಕೆಯನ್ನು ಪೀಡಿಸಿದ್ದ. ಆದರೂ ಆಕೆ ಬಂದಿರಲಿಲ್ಲ. ಇಂದು ಮಗನ ಒಲವನ್ನು ಹೊತ್ತ ಆ ತಾಯಿಯ ಕರುಳು ತಾನಾಗಿಯೇ ಅರಸಿಕೊಂಡು ಬಂದಿದೆ. ಆದ್ದರಿಂದ ಅವಳನ್ನು "ಬಿನದಂಬಡಿಸಿ ನಗಿಸುವೆನ್" ಎಂದುಕೊಂಡ ಮಗ, ಅಬ್ಬಿಯ ಹಿಂದೆಯಿದ್ದ ಪೊಟರೆಯಲ್ಲಿ ಅಡಗಿ ಕುಳಿತು ತಾಯಿಯನ್ನು ಕೂಗಿದ. ಮಗನನ್ನು ಕಾಣದೆ ಅವನ ದನಿಯನ್ನು ಮಾತ್ರ ಕೇಳುತ್ತಿದ್ದ ತಾಯಿ ಅದು ಪರೇತದ ದನಿಯಿರಬಹುದೆಂದು ಭ್ರಮಿಸಿ ಬೆಕ್ಕಸಗೊಂಡಳು. ಮರುನಿಮಿಷದಲ್ಲಿಯೇ ಮಗನು ಅಲ್ಲಿಂದ ನೆಗೆದು ತಾಯಿಯ ಬಳಿಗೆ ಓಡಿದನು. ಅವನು ನೀರಿನ ಮಡುವಿನಿಂದಲೇ ಹಾರಿ ಬಂದನೆಂದು ಭ್ರಾಂತಿಗೊಂಡ ತಾಯಿ "ನೀರೊಳ್ ಅದೆಂತಿರ್ದೆಯೊ? ಮುಳುಗಿಯುಂ ಮೈ ತೊಯ್ದುದಿಲ್ಲ!" ಎಂದು ಬಿಡುಗಣ್ಣಾಗಿ ಪ್ರಶ್ನಿಸಿದಳು. "ಮಂತ್ರಶಕ್ತಿ ಅಬ್ಬೆ, ಜಲಸ್ತಂಭ ಮೆಂಬರ್" ಎಂದು ಮಗ ಘೋಂಗೆ ಬಿಟ್ಟ. ಮೊನ್ನೆ ತಾನೆ ಮಡುವೊಂದರಲ್ಲಿ ಜಾರಿಬಿದ್ದು ತೊಪ್ಪನೆತೊಯ್ದಿದ್ದ ಮಗನನ್ನು ಕಂಡಿದ್ದತಾಯಿ ಅವನ ಮಾತನ್ನು ಸಂದೇಹಿಸಿ ಆಕ್ಷೇಪಿಸಿದಳು. "ನಿನ್ನೆ ತಾನಾದುದೀ ಸಿದ್ಧಿ ಅಬ್ಬೆ" ಎಂದು ಮುಂದುವರಿಸಿದ ಮಗ. ಈ ಮಾತಿನ ವಿನೋದವನ್ನು ಗ್ರಹಿಸಲಾರದೆ ತಾಯಿ ಬೆಕ್ಕಸಗೊಂಡಳು. ಇದನ್ನು ಕಂಡ ಮಗನು "ನಿನಗೆ ಮಂಕೆ, ಅಬ್ಬೆ, ಒಂದಿನಿತೂ ಬಿನದಮನರಿಯಲಾರೆ" ಎಂದು ಮೃದುವಾಗಿ ಟೀಕಿಸಿ ಆಕೆಯ ಬೆಕ್ಕಸದ ಮುತ್ತನ್ನು ಇಳಿಸಲು ಹವಣಿಸಿದ. ಆದರೆ ಇದರಿಂದ ವಿನೋದಕ್ಕೆ ಬದಲು ವಿಷಾದದ ಛಾಯೆ ಇಣುಕಿಹಾಕಿತು. ಬಿನದದ ಮಾತೆತ್ತಿದೊಡನೆಯೇ ಆಕೆ "ನಿನ್ನಯ್ಯಂಗೆ ಉಸಿರ್ನಿಂದಂದೆ ನನ್ನನಿತು ಬಿನದಮುಂ ಆ ಬೆಂಬಳಿಯೆ ನಡೆದತ್ತು" ಎಂದು ದುಃಖ ಧ್ವನಿಯಿಂದ ಉದ್ಗಾರ ತೆಗೆದಳು. ಮಗನ ಮಾತಿನಲ್ಲಿ ವಿನೋದಕ್ಕೂ ಅಸತ್ಯವನ್ನು ಆಕೆ ಊಹಿಸಲಾರಳು. "ನಿನ್ನಂ ಮೇಣ್ ನಿನ್ನೆಂಬುದನ್ ನಾನ್ ನಂಬದಂದು ದೆಸೆಗೆಟ್ಟೆನೆಂದೆ ತಿಳಿ" ಎಂದು ತನ್ನ ಅಂತರಂಗವನ್ನು ಬಿಚ್ಚಿ

ತೋರಿಸುತ್ತಾಳೆ. ಆಕೆಗೆ ತನ್ನ ಬಾಳಿನ ಬೆಳಕಾಗಿ, ತನ್ನ ಪ್ರೇಮದ ಅಖಂಡ ಚಕ್ರವರ್ತಿಯಾಗಿ ಕುಳಿತಿದ್ದಾನೆ, ಆ ಮಗ. ಅವನು ಸದಾ ಸುತ್ತುತ್ತಿರುವ ಮಿಗ ಖಗ ಗಿರಿದರಿ ಮೊದಲಾದ "ಆ ಪ್ರಕೃತಿಗಳ್ ದಿಟಂ ಸುಕೃತಿಗಳ್" ಎಂಬ ಭಾವನೆ ಆಕೆಗೆ. ತನ್ನ ಅಖಂಡ ಪ್ರೇಮಕ್ಕೆ ಮಗನ ಪ್ರಕೃತಿಪ್ರೇಮವು ಎಲ್ಲಿ ಕೊರತೆಯನ್ನು ತಂದೊಡ್ಡುವುದೋ ಎಂಬ ಆತಂಕ. "ನೀಂ ಎದೆಯ ತುಂಬೆ ಬಾಳ್ ತುಂಬುವುದು ಸನಗೆ" ಎಂಬ ಮಗನ ಆಶ್ವಾಸನೆಯಿಂದ ಆಕೆಯ ಮುಖ ಅರಳುತ್ತದೆ. ಕಣ್ಣಲ್ಲಿ ಮುದ್ದು ಸೂಸುತ್ತದೆ. ತಾನು ತಂದಿರುವ ಉಪಾಹಾರವನ್ನು ತಿನ್ನುವಂತೆ ಮಗನಿಗೆ ತಿಳಿಸುತ್ತಾಳೆ. ಆದರೆ ಏಕಲವ್ಯನು ಗುರುವನ್ನು ನೋಡದೆ ಊಟಮಾಡೆನೆಂಬ ನೋಂಪಿಯಲ್ಲಿದ್ದಾನೆ. ಆದ್ದರಿಂದ "ನೋಂಪಿ ಮುಗಿದಿಂ ಬಳಿಯೆ, ಅಬ್ಬೆ, ಉಣ್ಬೆನ್" ಎಂದು ಹೇಳುತ್ತಾನೆ. ಅದು ಆಕೆಗೆ ಅರ್ಥವಾಗುವುದಿಲ್ಲ. ಆ ಪ್ರಾಕೃತ ಜೀವಿಗೆ ನೋಂಪಿಯ ಸುದ್ದಿಯಿಂದೆದ್ದ ಭಾವ ತರಂಗಗಳು ನಾಗರಿಕರಿಗೆ ಹಾಸ್ಯಾಸ್ಪದವಾಗಿ ತೋರಬಹುದು. ನೋಂಪಿ ಪಾರ್ವರಿಗೆ ಮೀಸಲಾದುದು. ಒಂದು ಪಕ್ಷ ಬಿಯದರು ಮಾಡಬಹುದೆಂದರೂ ತನ್ನ ಮುದ್ದುಮಗನಿಗೆ ಇರುವ ಬಯಕೆಯೇನು? "ಚೆಲ್ವುಪೆಣ್?" ಅಥವಾ "ಬಲ್ ಬೇಂಟೆ ಕೈಗೂಡಲೆಂದೊ?" ತಾಯಿಯ ಈ ವಿಚಾರಸರಣಿಯನ್ನು ಕೇಳಿ ಏಕಲವ್ಯನು ನಕ್ಕು ನೋಂಪಿಗೆ ಕಾರಣವನ್ನು ಹೇಳ ಹೊರಡುತ್ತಾನೆ. ಅವನು ಬರೆದಿದ್ದ ದ್ರೋಣ ಪ್ರತೀಕಗಳನ್ನು ಆಕೆ ಇದುವರೆಗೆ ಎಷ್ಟೋ ಬಾರಿ ಎಲ್ಲೆಲ್ಲಿಯೋ ಕಂಡಿದ್ದಾಳೆ. ಆದರೆ ಅದು ತನ್ನ ಮಗನ ಬಾಲಕೇಳಿಯೆಂದುಕೊಂಡು "ಹುಂ ಅಣುಗನಲ್ತೆ ಆಡಲಿ" ಎಂಬ ಅನಾಸಕ್ತಭಾವವನ್ನು ತಾಳಿದ್ದಳು. ಇಂದು ಅದನ್ನು ಗುರುವಿನ ಪ್ರತೀಕವೆಂದು ತಿಳಿದಾಗ, ದೈವವೆಂದು ಅರಿಕೆಯಾದಾಗ ಅದಕ್ಕೆ ನಮಿಸಿದಳಾದರೂ ಅದರ ಅರ್ಥವನ್ನು ಗ್ರಹಿಸಲಾರದೆ ಹೋದಳು. ಆಕೆಗೆ ಗೊತ್ತಿರುವುದು ಒಂದೇ ದೇವರು; ಅದು ಬೇಂಟೆಯ ದೇವತೆ. ಇಂದು ಮಗ ಹೇಳಿದ ಗುರುದೇವರು "ಅದಾವುದಾ ಪೊಸ ದೇವರ್? ಪುಟ್ಟಿದುದೊ, ಬೇಂಟೆದೇವರ ಮರಿಯೊ?" ಎಂಬ ನಿಗೂಢ ಸಮಸ್ಯೆಯೊಂದು ಆಕೆಯ ಮುಂದೆ ನಿಲ್ಲುತ್ತದೆ. ಇದನ್ನು ಕೇಳಿ ನಾವು ನಗುವಂತೆ ಏಕಲವ್ಯನೂ ನಕ್ಕು "ಮರಿಯಿಕ್ಕಲೇಂ ನೀಂ ಸಾಕುವಾ ಕೋಳಿಯೇ?" ಎಂದು ತಾಯಿಯನ್ನು ಹಾಸ್ಯಮಾಡಿ ತನ್ನ ಗುರುವಿನ ಕಥೆಯನ್ನು ಹೇಳಹೊರಡುತ್ತಾನೆ. ಗುರುವಿನ ಕಥೆಯೊಡನೆ ಏಕಲವ್ಯನ ಗತಕಾಲದ ಬಾಳಕತೆಯೂ ನಮಗೆ ಬೆಳ್ಪಂಬೆಳಗಾಗುತ್ತದೆ. ತಾಯಿಯು ಮಗನ "ದನಿಗೆ ನಲ್ಗತೆಯ ಸವಿ ನೆರೆಯೆ ಕಿವಿಗೆ ಜೇನ್" ಎಂದುಕೊಂಡು ಮೈಯೆಲ್ಲಾ ಕಿವಿಯಾಗಿ ಕಥೆ ಕೇಳುತ್ತಾಳೆ. ಈ ಕಥೆ ಆ ತಾಯಿಯ ಕಿವಿಗೆ ಮಾತ್ರವೇ ಅಲ್ಲ, ಏಕಲವ್ಯನಲ್ಲಿ ಯಾವ ಮಮಕಾರವೂ ಇಲ್ಲದ ನಮಗೂ "ಕಿವಿಗೆ ಜೇನ್". ಏಕಲವ್ಯನು ರಾಜಗುರು ದ್ರೋಣರ ಕೀರ್ತಿಯಿಂದ ಆಕರ್ಷಿತನಾಗಿ ಹಸ್ತಿನಾವತಿಗೆ ಹೋದುದನ್ನೂ, ಅಲ್ಲಿ ಅರ್ಜುನನ ಅಸೂಯೆಗೆ ತುತ್ತಾದರೂ ಗುರುಕರುಣೆಗೆ ಪಾತ್ರನಾಗಿ ಬಿಲ್ಬಿಜ್ಜೆಯೊಡನೆ ಸಕ್ಕದಕ್ಕರ ವಿದ್ಯೆಯನ್ನು ಕಲಿತುದನ್ನೂ, ತಂದೆಯು ಬಗ್ಗ

ನಿಂದೇರುಗೊಂಡ ಸುದ್ದಿಯನ್ನು ಕೇಳಿ ಹಿಂತಿರುಗಿದುದನ್ನೂ ಆತನು ವಿವರಿಸಿ ಹೇಳುತ್ತಾನೆ. ಇಲ್ಲಿ ಕಾಣಬರುವ ಸಂವಿಧಾನಕೌಶಲವು ಮನೋಹರವಾಗಿದೆ. ತನಗೂ ಅರ್ಜುನನಿಗೂ ನಡೆದ ಕಲಹವನ್ನು ವಿವರಿಸುವ ನೆಪದಲ್ಲಿ ಶಬ್ದವೇಧಿಯ ವ್ಯಾಜವನ್ನಿಟ್ಟುಕೊಂಡು ಏಕಲವ್ಯನು ದ್ರೋಣಶಿಷ್ಯನಾದ ರೀತಿ ಇಲ್ಲಿ ಮನೋಹರವಾಗಿ ವರ್ಣಿತವಾಗಿದೆ. ಮುಂಗತೆಯು ಬೆಳೆದಂತೆ ಹಿಂಗತೆಯ ಸುರುಳಿ ಬಿಚ್ಚುವ ಈ ಕೌಶಲ ಗಮನಾರ್ಹವಾದುದು. ಮೂಲಭಾರತದಲ್ಲಿ ಬರುವ ಕಥೆಯಿಂದ ಇದು ಸಂಪೂರ್ಣ ಭಿನ್ನವಾಗಿದೆ. ಬೊಗಳಿದ ನಾಯಿಯ ಬಾಯೊಳಗೆ ಬಾಣವರ್ಷವನ್ನು ಕರೆಯುವುದಕ್ಕೆ ಬದಲಾಗಿ ಶಬ್ದವೇಧಿಯ ಪ್ರಸಕ್ತಿಯನ್ನು ತಂದಿರುವುದು ಹೆಚ್ಚು ಸುಸಂಸ್ಕೃತ ರೀತಿಯ ಸನ್ನಿವೇಶವನ್ನು ಕಲ್ಪಿಸಲು ಸಹಾಯಕವಾಗಿದೆ. ಇಲ್ಲಿನ ಕಥೆಯು 'ಕಿರಾತಾರ್ಜುನೀಯ'ದ ಕಥಾವಸ್ತುವನ್ನು ಸ್ಥೂಲ ರೇಖಾಂಶಗಳಲ್ಲಿ ಹೋಲುವುದಾದರೂ ಇಲ್ಲಿನ ಗುರಿ ಬೇರೆ, ಪರಿಣಾಮ ಬೇರೆ. ತನ್ನನ್ನು ಮೀರಿಸುವ ಪ್ರತಿಸ್ಪರ್ಧಿಯೊಬ್ಬನು ಜಗತ್ತಿನಲ್ಲಿರುವನೆಂಬ ಈರ್ಷ್ಯೆ ಅರ್ಜುನನ ಹೃದಯದಲ್ಲಿ ಮೂಡಲು ಕಾರಣವಾಗುತ್ತದೆ. ಅರ್ಜುನ ಏಕಲವ್ಯರ ಸಂಭಾಷಣೆ ಅವೆರಡು ಪಾತ್ರಕ್ಕಿರುವ ವೈಷಮ್ಯವನ್ನು ಎತ್ತಿ ತೋರಬಲ್ಲ ಒರೆಗಲ್ಲಿನಂತಿದೆ.

ಇತ್ತ ತಾಯಿ ಮಗ ಗುರುಕಥೆಯಲ್ಲಿ ತಲ್ಲೀನರಾಗಿರುವಾಗ ಅತ್ತ ಏಕಲವ್ಯನ ಸಾಕು ಜಿಂಕೆ ಮನೆಯಿಂದ ಒಂಟಿಯಾಗಿ ಅಲ್ಲಿಗೆ ಬಂದು ತಾಯಿ ತಂದಿರುವ ಬುತ್ತಿಯನ್ನೆಲ್ಲಾ ಪಳಾರ ಮಾಡತೊಡಗುತ್ತದೆ. ಇದನ್ನು ಕಂಡ ತಾಯಿ ಅದನ್ನು ಛೀಗುಟ್ಟಿ, "ಒರ್ದಿನಂ ತೋಳನುಣಿಸಪ್ಪೆ ನೀನ್ ಇಂತಲೆಯೆ ಕಾಡನ್" ಎಂದು ಗದರಿಸುತ್ತಾಳೆ—ಆ ಜಿಂಕೆಗೆ ತನ್ನ ಮಾತು ಅರ್ಥವಾಗುವುದೋ ಎಂಬಂತೆ. ಒಡನೆಯೆ ಏಕಲವ್ಯನು ಆ ಮರಿಯನ್ನು—ತಾಯಿ ಮಗನನ್ನು ಹೊಡೆಯಬಂದಾಗ ಮನೆಯಲ್ಲಿರುವವರು ಮಗುವನ್ನು ಎತ್ತಿಕೊಂಡು ಔಚಿಟ್ಟುಕೊಳ್ಳುವಂತೆ—ಎತ್ತಿಕೊಂಡು, ಮುಂಡಾಡುತ್ತಾ "ತೋಳನೆಲ್ಲಿರ್ಕುಂ ಈ ನನ್ನ ಮಲೆಯೊಳ್?" ಎಂದು ಗುಡುಗುತ್ತಾನೆ. ಮರಿಯನ್ನು ಅತ್ತ ಓಡಬಿಡುತ್ತಾ "ಮುದ್ದ, ಮನಂ ಬಂದತ್ತ ನೀನ್ ಅಲೆ. ನಿನ್ನ ಮೈಗಾವಲಲ್ತೆ ನಾನ್" ಎಂದು ಅದನ್ನು ಪ್ರೋತ್ಸಾಹಿಸುತ್ತಾನೆ. [ಹೀಗೆ ಮುದ್ದಿಸಿದರೆ ಮಗು ಕೆಟ್ಟುಹೋಗುತ್ತದೆ—ಎಂಬ ತಾಯಿಯ ಬುದ್ಧಿವಾದವೊಂದು ಇಲ್ಲಿ ಲೋಪವಾಗಿದೆ. ಅಷ್ಟಾದರೆ ಇದೊಂದು ಪುಟ್ಟ ಸಂಸಾರದ ವ್ಯವಹಾರ ಸ್ವಸಂಪೂರ್ಣವಾಗುತ್ತಿತ್ತೆಂದು ಹೇಳಬಹುದು.] ಮತ್ತೊಮ್ಮೆ ತಾಯಿ-ಮಗ ಗುರುವಿನ ಕಥೆಯತ್ತ ಹೊರಳುತ್ತಾರೆ. ಗುರು ಬರುತ್ತಿರುವುದು ತನ್ನ ಮಗನನ್ನು ಕರೆದುಕೊಂಡು ಹೋಗುವುದಕ್ಕೇ ಇರಬೇಕು—ಎಂಬುದು ಆ ಸರಳಜೀವಿಯ ತರ್ಕ. ಹೆಮ್ಮೆ, ಆಕಾಂಕ್ಷೆ, ಆತಂಕಗಳ ತ್ರಿವೇಣಿ ಸಂಗಮದಲ್ಲಿ ಮಿಂದು ಆ ಮಾತೃಹೃದಯ ಪ್ರಶ್ನಿಸುತ್ತದೆ:—"ಅರಸರ್ಗೆ ಕೆಳೆಯ ನೆರಮಾಗಲೆಂದೊ?" ಎಂಬುದಾಗಿ. ತಾನು ಅದುವರೆಗೆ ವಿವರಿಸಿದ ಸೂಕ್ಷ್ಮಭಾವಗಳನ್ನು ತಾಯಿ ಅರ್ಥಮಾಡಿಕೊಳ್ಳದುದನ್ನು ಕಂಡು ಮಗನಿಗೆ ನಗುಬರುತ್ತದೆ. ಆಕೆಯನ್ನು

ಹಾಸ್ಯಮಾಡುತ್ತಾ "ಅಜ್ಜಿ ನಿನ್ನಳ್ಕರೂಹೆ ದಬ್ಬೆಯೊಳ್ ಕಬ್ಬಂ ಕಾಣ್ಬ ಕಬ್ಬಿಗಂಗಂ ಅಬ್ಬಬ್ಬಮಕ್ಕುಂ" ಎನ್ನುತ್ತಾನೆ. ಇಲ್ಲಿನ ಹಾಸ್ಯ ಎಷ್ಟು ಮಧುರವಾಗಿದೆಯೋ ಅಷ್ಟು ಗಂಭೀರವಾಗಿಯೂ ಇದೆ.

ಈ ತಾಯಿ, ಈ ಮಗ, ಈ ಜಿಂಕೆ—ನಿಸರ್ಗದ ಮಡಿಲಲ್ಲಿರುವ ಈ ಪುಟ್ಟ ಸಂಸಾರಜೀವನ ಎಷ್ಟು ರಸಮಯವಾಗಿದೆ! ಮುಗ್ಧತೆಯೇ ಮೈವೆತ್ತಂತಿರುವ ಆ ತಾಯಿ, ಸಾತ್ವಿಕಪ್ರೇಮದ ಸಾಕಾರಮೂರ್ತಿಯಂತಿರುವ ಆ ಮಗ, ಅವರಿಬ್ಬರ ಅವ್ಯಾಜಕರುಣೆಗೆ ಒಳಗಾದ ಆ ಹರಿಣಶಿಶು! ಈ ಬಾಳಿನ ಸುಂದರಚಿತ್ರ ಮನೋಹರ ವಾಗಿರುವಷ್ಟೇ ಮಾರ್ಮಿಕವಾಗಿಯೂ ಇದೆ. "ಬಲ್ ಸೊಗಸು ಬಲ್ ಸೊಗಸು ನೀನೆಂದ ಕಥೆ" ಎಂದು ಕವಿಯನ್ನು ಹೊಗಳಬೇಕೆನ್ನಿಸುತ್ತದೆ.

"ಗುರು" ಎಂಬ ಪ್ರಥಮದೃಶ್ಯದಲ್ಲಿ ರಂಗಸ್ಥಳವನ್ನು ಅಲಂಕರಿಸಿರುವುದು ಎರಡು ಪಾತ್ರಗಳು ಮಾತ್ರ. ಹಾಗೆ ಹೇಳಬಹುದಾದರೆ ಏಕಲವ್ಯನ ಬೆಳಗಿನ ಊಟ ವನ್ನು ಫಲಾಹಾರಮಾಡುವ ಜಿಂಕೆಯನ್ನೂ ಒಂದು ಪಾತ್ರವೆಂದು ನಾವು ಸ್ವೀಕರಿಸ ಬಹುದು. ಪಾತ್ರಗಳು ಹೀಗೆ ಅಲ್ಪಸಂಖ್ಯೆಯಲ್ಲಿರುವುದು ನಾಟಕದ ಪ್ರದರ್ಶನದ ದೃಷ್ಟಿಯಿಂದ ಒಂದು ಲೋಪವೇಬಂತೆ ಭ್ರಾಂತಿ ಬಂದೀತು! ಇದೂ ಅಲ್ಲದೆ ನಾಟಕ ದಲ್ಲಿ ಬಹುಭಾಗ ಕ್ರಿಯಾತ್ಮಕವಾಗಿಲ್ಲವೆಂಬಂತೆ ಹೊರನೋಟಕ್ಕೆ ಗೋಚರಿಸೀತು. ಕಥೆಯ ಬಹುಭಾಗವನ್ನು ಏಕಲವ್ಯನು ತನ್ನ ತಾಯಿಗೆ ವಿವರಿಸಿದಂತೆ ಇಲ್ಲಿ ನಿರೂಪಿತ ವಾಗಿದೆ. ರಂಗಸ್ಥಳವನ್ನು ಮಾತ್ರವೇ ದೃಷ್ಟಿಯಲ್ಲಿಟ್ಟುಕೊಂಡು ಹೇಳುವುದಾದರೆ ನಮ್ಮ ಕಣ್ಣೆದುರಿಗೆ ನಿಂತಿರುವುದು ಎರಡೇ ಪಾತ್ರಗಳೆಂಬುದು ನಿಜ. ಆದರೆ ಇದು ದೃಶ್ಯರೂಪದ ಒಂದು ಕಾವ್ಯ. ಇದನ್ನು ಜ್ಞಪ್ತಿಯಲ್ಲಿಟ್ಟುಕೊಂಡಾಗ ಈ ಲೋಪ ಭ್ರಾಂತಿ ಮಾಯವಾಗುತ್ತದೆ. ಏಕಲವ್ಯನು ವಿವರಿಸುವ ಕಥೆಯೆಲ್ಲವೂ ಕ್ರಿಯಾಪೂರ್ಣ ವಾಗಿದೆ. ಆತನು ಹಸ್ತಿನಾವತಿಗೆ ಹೋದುದು, ಅಲ್ಲಿನ ರಾಜಕುಮಾರರ ಬಿಲ್ಬಿಜ್ಜೆಯ ಸಾಧನ, ಅರ್ಜುನನ ಅಸೂಯೆ, ದ್ರೋಣರು ಏಕಲವ್ಯನನ್ನು ಆಳಾಗಿ, ಶಿಷ್ಯನಾಗಿ, ಮಗನ ಸಂಗಾತಿಯಾಗಿ ಸ್ವೀಕರಿಸಿದುದು, ಅಲ್ಲಿ ಬಿಲ್ವಿದ್ಯೆಯೊಡನೆ ಸಕ್ಕದ ವಿದ್ಯೆ ಯನ್ನೂ ಕ್ರಮಕ್ರಮವಾಗಿ ಕಲಿತುದುದು—ಇವೆಲ್ಲವೂ ಎಷ್ಟು ಕ್ರಿಯಾತ್ಮಕವಾಗಿ, ಪಾತ್ರಗಳಿಂದ ತುಂಬಿದ ದೃಶ್ಯಪರಂಪರೆಯನ್ನು ಒದಗಿಸಬಲ್ಲವು! ಇದರಂತೆಯೇ ಏಕ ಲವ್ಯನು ಶಬ್ದವೇಧಿಯ ಪ್ರಭಾವದಿಂದ ಹಂದಿಯನ್ನು ಕೊಂದುದು. ಅರ್ಜುನನನ್ನು ಸಂಧಿಸಿ ಅವನೊಡನೆ ವಾಗ್ವಾದಮಾಡಿದುದು, ಅಶ್ವತ್ಥಾಮನ ಆಗಮನ—ಇವು ಈ ಕಾವ್ಯಭಾಗವನ್ನು ಕ್ರಿಯಾತ್ಮಕವಾಗಿ ಮಾಡಿರುವುದಲ್ಲದೆ ವಿವಿಧ ದೃಶ್ಯಗಳನ್ನೂ ಒದಗಿ ಸಿವೆ. ಚಲನಚಿತ್ರವೊಂದನ್ನು ತಯಾರಿಸುವವರಿದ್ದರೆ ಈ ಒಂದೊಂದೂ ಬೇರೆ ಬೇರೆ ದೃಶ್ಯವಾಗಿ, ದಿವ್ಯ ಮನೋಹರವಾಗಬಲ್ಲವು. ಓದುಗರಾದರೂ ಈ ದೃಶ್ಯಗಳನ್ನು ಕಲ್ಪಿಸಿಕೊಂಡು ಆನಂದಪಡುವುದು ಅಸಾಧ್ಯವೂ ಅಲ್ಲ, ಅಸಂಭಾವ್ಯವೂ ಅಲ್ಲ. ಆದ್ದ ರಿಂದಲೇ ಸಹೃದಯನಾದವನಿಗೆ ಈ ಕಾವ್ಯ ಉಸಿರು ತಿರುಗಿಸಿಕೊಳ್ಳಲು ಆಸ್ಪದವಿಲ್ಲ

ದಂತೆ ಮನಸ್ಸನ್ನು ಆಕ್ರಮಿಸಿ ಸೆರೆಹಿಡಿಯುತ್ತದೆ. ಇಲ್ಲಿಯ ಸಂಭಾಷಣಾಚಾತುರ್ಯ, ವರ್ಣನಾವೈಖರಿ, ಕಥಾನಿರೂಪಣೆ,—ಈ ಒಂದೊಂದೂ ಒಂದು ನೋಡಿಯಂತೆ ನಮ್ಮ ಮನಸ್ಸನ್ನು ಸೆಳೆದು ಸಂತೋಷಪಡಿಸುತ್ತದೆ.

ಇನ್ನು ಈ ದೃಶ್ಯಕ್ಕಿಟ್ಟಿರುವ 'ಗುರು' ಎಂಬ ಹೆಸರಿನ ಸಾರ್ಥಕತೆಯನ್ನು ಸ್ವಲ್ಪ ವಿವೇಚಿಸೋಣ. ಕಾವ್ಯ ಆರಂಭವಾಗಿರುವುದು ಸುದೀರ್ಘವಾದ ಗುರುಸ್ತವನ ದೊಡನೆ. ಶಿಷ್ಯನಾದ ಏಕಲವ್ಯನು ತನ್ನ ಗುರುವಾದ ದ್ರೋಣರನ್ನು ನಿರೀಕ್ಷಿಸುತ್ತಾ ಕುಳಿತಿರುವ ಸನ್ನಿವೇಶ ಇದು. ಆ ಗುರುವಿನಿಂದ ತನಗೆ ಸುಜ್ಞಾನ ದೊರೆಯಿತೆಂದು ಈ ಸಚ್ಛಿಷ್ಯನ ಎಣಿಕೆ. ಗುರುವಿಗೆ ತಕ್ಕ ಶಿಷ್ಯ, ಶಿಷ್ಯನಿಗೆ ತಕ್ಕ ಗುರು. ಗುರುವಿನ ಶಿಷ್ಯವಾತ್ಸಲ್ಯವು ಅಪಾರವಾಗಿದ್ದರೆ ಶಿಷ್ಯನ ಭಕ್ತಿಯೂ ಅಪಾರವಾದುದೇ. ಈ ಭಕ್ತಿ ಆ ವಾತ್ಸಲ್ಯಗಳಿಂದ ತುಂಬಿದೆ ಈ ದೃಶ್ಯ. ರಾಜ-ಪ್ರಜೆ, ಗಂಡ-ಹೆಂಡತಿ, ದೇವರು-ಭಕ್ತ—ಎಂಬ ಪದಜೋಡಿಗಳಲ್ಲಿ ಒಂದೊಂದು ಪದವೂ ಮತ್ತೊಂದನ್ನು ಅವಲಂಭಿಸಿರುವಂತೆ ಗುರುಪದವು ಶಿಷ್ಯಪದವನ್ನು ಅವಲಂಭಿಸಿಯೇ ನಿಲ್ಲತಕ್ಕುದು; ಒಂದು ಮತ್ತೊಂದಕ್ಕೆ ಪೂರಕ. ಗುರು ಎಂಬ ಮಾತಿಗೆ ಅಂಧಕಾರವನ್ನು ಹೋಗಲಾಡಿಸುವವನು ಎಂದು ವಾಚ್ಯಾರ್ಥ. ಆತನು ನೀಡುವ ಬೆಳಕನ್ನು ಪರಿಗ್ರಹಿಸಲು ಶಕ್ತನಾಗಿರುವವನು ಸಚ್ಛಿಷ್ಯ. ದೇವರಿಗಿಂತಲೂ ಭಕ್ತನೇ ದೊಡ್ಡವನೆಂದು ನಮ್ಮವರು ಹೇಳುವುದುಂಟು. ಅದರಂತೆ ಗುರುವಿಗಿಂತ ಶಿಷ್ಯನೇ ಹೆಚ್ಚು ಮಹಿಮಾವಂತನೆಂದು ಹೇಳುವುದು ತಪ್ಪಾಗಲಾರದು. ಈ ಮಹಿಮೆಯನ್ನು ನೀಡುವವನು ಗುರು ಎಂಬುದಕ್ಕಿಂತ ಸಂಪಾದಿಸುವವನು ಶಿಷ್ಯ ಎಂಬುದು ಹೆಚ್ಚು ಸತ್ಯ. ಗುರುವು ನೀಡಿದ ಮಾರ್ಗದರ್ಶನವನ್ನು ಮುಂದುವರಿಸಿ ಶಿಷ್ಯನು ಗುರುವಿಗಿಂತಲೂ ಮುಂದೆ ಗಮಿಸಬಲ್ಲನು. ಇದಕ್ಕೆ ಬೇಕಾದುದು ಶ್ರದ್ಧೆ, ಭಕ್ತಿ, ನಂಬಿಕೆ, ಅಧ್ಯವಸಾಯ. ಏಕಲವ್ಯನಲ್ಲಿ ಸಚ್ಛಿಷ್ಯನ ಈ ಸದ್ಗುಣಗಳೆಲ್ಲವೂ ತುಂಬಿವೆ. ಗುರುವು ಪ್ರತ್ಯಕ್ಷನಾಗಿಲ್ಲದಿದ್ದರೂ ಈ ಶಿಷ್ಯನ ವ್ಯವಹಾರದಿಂದ, ಈ ಶಿಷ್ಯನ ನುಡಿಗಳಿಂದ ಇಡೀ ದೃಶ್ಯವೇ ಗುರುಪ್ರಭಾವ ಪೂರಿತವಾಗಿ ಹೋಗಿದೆ. ಆ ಗುರು ತನ್ನನ್ನು ಕಂಡ ರೀತಿ, ತನ್ನಲ್ಲಿ ತೋರಿದ ಅವ್ಯಾಜ ವಾತ್ಸಲ್ಯ—ಇವುಗಳನ್ನು ಶಿಷ್ಯನು ಸಾರ್ಥಕಪಡಿಸಿಕೊಂಡಿದ್ದಾನೆ. ಗುರುವನ್ನು ಅಗಲಿ ಬಂದಮೇಲೂ ಆತನ ವಿದ್ಯಾಭ್ಯಾಸ ಮುಂದುವರಿಯುತ್ತದೆ. ಗುರುವಿನ ಪ್ರತೀಕವನ್ನು ಇಟ್ಟುಕೊಂಡು ತನ್ನ ಅಸ್ತ್ರವಿದ್ಯಾಭ್ಯಾಸವನ್ನು ಮುಂದುವರಿಸುತ್ತಾನೆ. ಆ ಬೊಂಬೆಯೇ ಗುರುವೆಂದು ಭಾವಿಸುತ್ತಾನೆ. 'ಯದ್ಭಾವಂ ತದ್ಭವತಿ'. ಅವನ ಬಿಲ್ವಿದ್ಯೆ ಸಿದ್ಧಿಗೊಳ್ಳುತ್ತದೆ. ಪ್ರತ್ಯಕ್ಷ ಗುರುವಿನಲ್ಲಿ ಅಭ್ಯಾಸಮಾಡಿದ ಅರ್ಜುನನನ್ನೂ ಆತನು ಮೀರಿಸುತ್ತಾನೆ. ಹೀಗೆ ಗುರುವಿನ ಪ್ರಭಾವದಿಂದ—ಏಕಲವ್ಯನೇ ಆ ಗುರುಪ್ರಭಾವದ ಮೂರ್ತಿಮಂತ ವ್ಯಕ್ತಿ—ತುಂಬಿಹೋಗಿರುವ ಈ ದೃಶ್ಯಕ್ಕೆ ಗುರುನಾಮಧೇಯವು ಸಾರ್ಥಕವಾಗಿದೆ. ನರಗುರು ನಿಮಿತ್ತಮಾತ್ರ. ಗುರುಭಾವನೆ ಹಿರಿದಾದುದು. ಆ ಭಾವನೆಯೇ ಮಹತ್ತನ್ನು ತಂದೀಯುವುದು.

ಭಾರತಕ್ಕೆ ಲೋಕಪೂಜ್ಯತೆಯನ್ನು ಒದವಿಸಿರುವ ಮಹಾವ್ಯಕ್ತಿಗಳಲ್ಲಿ ದ್ರೋಣನೂ ಒಬ್ಬನೆಂದು ಮಹಾಕವಿ ಪಂಪನ ಹೇಳಿಕೆ. ದ್ವಾಪರಯುಗದ ಆ ದಿವ್ಯ ಮೂರ್ತಿಯನ್ನು ಚಿರನೂತನವಾದ ದಿವ್ಯತರ ಮೂರ್ತಿಯಾಗಿ ಕಡೆದು ನಿಲ್ಲಿಸಿದ್ದಾರೆ ನಮ್ಮ ಶಬ್ದಶಿಲ್ಪಿ ಕುವೆಂಪು. ಏಕಲವ್ಯನು ಆತನಿಗೆ ಸಲ್ಲಿಸಿರುವ ಈ ಕಾಣಿಕೆಯನ್ನು (ಕವಿ ಸಲ್ಲಿಸಿರುವ ಕಾಣಿಕೆ!) ನೋಡಿ–" ಪಾರ್ವರೊಳ್ ಪಾರ್ವನ್, ದ್ವಿಜವರೇಣ್ಯನ್, ಗಣ್ಯನ್, ಅಗ್ರಗಣ್ಯನ್." ಮೊಟ್ಟಮೊದಲಬಾರಿ ಆತನನ್ನು ಕಂಡಾಗ ಏಕಲವ್ಯನ ಹೃದಯದಲ್ಲಿ ಮಿಂಚಿದ ಈ ಭಾವಗಳ ಜಾಜ್ವಲ್ಯತೆಯನ್ನು ಆಲಿಸಿ—" ಅಬ್ಬೆ ಏನ್ ತೇಜಮಾ ಆಚಾರ್ಯನದು! ತಳತಳಿಪ ಆಯುಧಾಗಾರಮಂ ಪೊಕ್ಕಪೋಲಾಯ್ತು ನನಗಾತನಂ ಕಂಡು." ಬಹಿರಂಗ ಎಷ್ಟು ಉಜ್ವಲ ತೇಜಸ್ಸಿನಿಂದ ಕೂಡಿದುದೊ ಅಷ್ಟೇ ಸತ್ವಯುಕ್ತವಾದುದು ಆತನ ಅಂತರಂಗ. ಭಾರತದ ಏಕಲವ್ಯೋಪಾಖ್ಯಾನದಲ್ಲಿ ಕಾಣಬರುವ ದ್ರೋಣರ ಪಾತ್ರ ಅಷ್ಟೇನೂ ಶುಭ್ರಧವಳವಾಗಿಲ್ಲ. ಕವಿಯ ದಿವ್ಯ ಪ್ರತಿಭೆಯಲ್ಲಿ ಆ ಮೂರ್ತಿ ಕರಗಿಹೋಗಿ, ಕಾಳಿಕೆಗಳೆದು, ಸ್ವರ್ಣವರ್ಣವನ್ನು ತಾಳಿದೆ, " ಬೆರಳ್ ಗೆ ಕೊರಳ್ " ನಾಟಕದಲ್ಲಿ. ಮೂಲದ ದ್ರೋಣರಂತೆ ನಮ್ಮ ನಾಟಕದ ದ್ರೋಣನು ವಿದ್ಯಾರ್ಥಿಯಾಗಿ ಬಂದ ಏಕಲವ್ಯನನ್ನು " ಪೂಜ್ಯನ್ ತಿರಸ್ಕರಿಸಲಿಲ್ಲ." ಅಡಿಯಿಂದ ಮುಡಿಯವರೆಗೆ ಅವನನ್ನು ದಿಟ್ಟಿಸಿ ನೋಡಿ, ಮಗನೊಡನೆ "ಅಶ್ವತ್ಥಾಮ, ನಮ್ಮ ಚಟ್ಟರೊಳಿವನುಮೊರ್ವನ್ ; ನಿನ್ನ ನೇರ್ಗಿರಿಯನೆಂದೀತನನ್ ಕಾಣ್ " ಎಂದು ಹೇಳಿ ಪುತ್ರಸದೃಶವಾದ ಪ್ರೇಮವನ್ನು ಅವನ ಮೇಲೆ ವರ್ಷಿಸುತ್ತಾನೆ. ಆತನ ಮಾತನ್ನು ಕೇಳಿದ ಏಕಲವ್ಯನಿಗೆ " ಮೂಡಿದ ಕೋಡು ಸಗ್ಗದೈರಾವತದ ದಂತಮಂ ಸೆಣಸಿ ತಿವಿದುದಲ್ತೆ" ಎನ್ನಿಸಿತು. ಅವನ ಬಿಲ್ಲೇಳ್ಗೆಯನ್ನು ಕಂಡು ಕ್ಷತ್ರಿಯ ಪುತ್ರನಾದ ಅರ್ಜುನನಿಗೆ ಅಸೂಯೆ ಹುಟ್ಟಿತು. ಶೂದ್ರನೊಡನೆ ತನ್ನ ವಿದ್ಯಾಭ್ಯಾಸವು ನಡೆಯಕೂಡದೆಂದು ಪ್ರತಿಭಟಿಸಿದನು. "ಕಲ್ತುಮೇಲಿಂ ಬಳಿಂ ನಿಮಗೆ ಸಲ್ವನ್, ನಿಮ್ಮ ಸೇವೆಯೊಳೆ ನಿಲ್ವನ್ " ಎಂದು ದ್ರೋಣರು ಆ ಕ್ಷತ್ರಿಯಕುಮಾರನಿಗೆ ಸಮಾಧಾನ ಹೇಳಿದರೂ ಸಾರ್ಥಕವಾಗಲಿಲ್ಲ. ಆಗ ಕಣ್ಣೀರುಗರೆಯುತ್ತಾ ನಿಂತಿದ್ದ ಆ ಬಾಲಕನನ್ನು ಕಂಡು, ಕರುಣಾಮಯನಾದ ಗುರು ಕರಗಿಹೋದನು. ಆ ಬಾಲಕನ ಕೈ ಹಿಡಿದು, ತಲೆ ಸವರಿ, ಸಂತೈಸಿ, ತನ್ನ ಮನೆಯಲ್ಲಿ ಆಳಾಗಿಟ್ಟುಕೊಂಡು ದೂರದಿಂದ ಅರಸುಮಕ್ಕಳ ವಿದ್ಯಾಭ್ಯಾಸವನ್ನು ಕಂಡು, ಕಲಿಯುವಷ್ಟನ್ನು ಕಲಿಯುವಂತೆ ಏರ್ಪಡಿಸಿದುದಲ್ಲದೆ ಮನೆಯಲ್ಲಿಯೇ ಅಶ್ವತ್ಥಾಮನೊಡನೆ ಆ ಬಾಲಕನಿಗೂ ಪಾಠ ಕಲಿಸಿದನು. ಬಿಲ್ವಿದ್ಯೆಯೊಡನೆ ಸಕ್ಕದದಕ್ಕರವಿದ್ಯೆಯನ್ನೂ ಅಕ್ಕರೆಯಿಂದ ಅವನಿಗೆ ಬೋಧಿಸಿದನು. ತಂದೆಯಿಟ್ಟ ' ಬಚ್ಚು ' ಎಂಬ ಹೆಸರನ್ನು ಬದಲಾಯಿಸಿ ' ಏಕಲವ್ಯ ' ಎಂಬ ನೂತನ ನಾಮಧೇಯವನ್ನು ಅಳವಡಿಸಿಕೊಟ್ಟನು, ಈ ಹೊಸ ತಂದೆ.

' ಬೆರಳ್ ಗೆ ಕೊರಳ್' ನಾಟಕದಲ್ಲಿ ನಾವು ದ್ರೋಣರ ಪಾತ್ರವನ್ನು ಮೊದಲು ಪ್ರತ್ಯಕ್ಷವಾಗಿ ಕಾಣುವುದು ' ಕರ್ಮ ' ಎಂಬ ಎರಡನೆಯ ದೃಶ್ಯದಲ್ಲಿ. ಬ್ರಹ್ಮತೇಜಸ್ಸಿ

ನೊಡನೆ ಕ್ಷಾತ್ರಶಕ್ತಿಯನ್ನು ಸಮರಸವಾಗಿ ಬೆರಸಿ ಕಂಡರಸಿದ ಪಾತ್ರವದು. ಗುರು ಪ್ರಭಾವದ ಬೆಳಕಿನ ಹೊಳೆಯಿಂದ ಮಿಂದು ಬಂದಿರುವ ಓದುಗರಿಗೆ ದ್ರೋಣರ ಪಾತ್ರ ವನ್ನು ಕಂಡೊಡನೆಯೇ ಭವ್ಯಭಾವನೆಯು ಉದಿಸಿ, ಆಜಾನುಬಾಹುವಾದ ಆ ತೇಜಃ ಪುಂಜ ಮೂರ್ತಿಗೆ ಮನಸ್ಸು ಮಣಿಯುತ್ತದೆ. ಚಿಂತಾಗಭೀರವಾದ ಆ ಮೂರ್ತಿಯ ಮುಖಮುದ್ರೆಯನ್ನು ಕಂಡು ನಮ್ಮಲ್ಲಿ ಅನಿರ್ವಚನೀಯವಾದೊಂದು ಕಳವಳ, ದುಗುಡ, ದುರಂತಚ್ಛಾಯೆ ಉದ್ಬುದ್ಧಗೊಳ್ಳುತ್ತದೆ. ಬಹಿರಂಗಕ್ಕೆ ತಕ್ಕ ಅಂತರಂಗದ ಶ್ರೀಮಂತತೆಯಿಂದ ತುಂಬಿದ ಆ ವ್ಯಕ್ತಿ ತನ್ನ ವ್ಯಕ್ತಿತ್ವಕ್ಕೆ ತಕ್ಕಂತೆ ಸಂಯಮಶಾಲಿ ಯಾಗಿ ವ್ಯವಹರಿಸುತ್ತಾನೆ. ದಾರಿತಪ್ಪಿದ ಮಗನನ್ನು ಅರ್ಧ ಹಾಸ್ಯ, ಅರ್ಧ ಅರ್ಥ ಪೂರ್ಣವಾಗಿ ಟೀಕಿಸುತ್ತಾನೆ—"ಬಟ್ಟೆಯಿರದೆಡೆ ಬಟ್ಟೆಯರಸುತಿರ್ಪೈ, ವತ್ಸ. ಪುಟ್ಟುಗುಣವಿದು ನಿನಗೆ" ಎಂದು ಹೇಳುವ ದ್ರೋಣರ ಮಾತು ಧ್ವನಿಪೂರ್ಣವಾಗಿ, ಅಶ್ವತ್ಥಾಮನ ಇಡೀ ಪಾತ್ರವನ್ನು ಸೂಚಿಸುವ ಸೂತ್ರದಂತಿದೆ. ಆ ಸೂತ್ರಸತ್ಯವನ್ನು ಅಶ್ವತ್ಥಾಮನೂ ಅರಿತಿದ್ದಾನೆ. ಆದರೂ ಗುರುಭಕ್ತಿಯಿಂದ ಆತನು ಮೌನವನ್ನು ವಹಿಸಿದ್ದನು. ಮತ್ತೊಮ್ಮೆ ಅದೇ ಮಾತನ್ನೇ ಗುರು ನುಡಿದಾಗ ಅಶ್ವತ್ಥಾಮನ ಸ್ವಭಾವ ಸಹಜವಾದ ಮುಂಗೋಪವೂ ಮೇಲೆದ್ದಿತು. "ಆರ್ಯ, ಇದೇನ್ ಹಸ್ತಿನಪುರದ ಉದ್ಯಾನ ದೊಂದು ಬಹಿರ್ವಲಯಂಗೆತ್ತಿರೇನ್ ? ಇದು ಅಡವಿ" ಎಂದು ಮೂದಲಿಸುತ್ತಾನೆ— ಇದು ಅಡವಿಯೆಂಬುದು ದ್ರೋಣನಿಗೆ ತಿಳಿಯದೋ ಎಂಬಂತೆ. ಪರಿವಾರದವರನ್ನು ಕರೆ ತರಬೇಕಾಗಿತ್ತೆಂದು ಮಿಡುಕಿದ ತಂದೆಗೆ "ಪರಿವಾರಮುಂ ಕರೆತಂದ ಮಾತ್ರದಿಂ ನಿಮಗೆ ಪಾದವೇದಿಕೆಯಾಗೆ ಅಡವಿಗೇಂ ಬೈತಲೆಯ ಬಟ್ಟೆಯುಂ ತೆಗೆಯುತಿರ್ದರೆ ಅವರ್" ಎಂದು ಗದರಿಸುತ್ತಾನೆ. ಸರಿಯಾದ ದಾರಿಯನ್ನು ಹುಡುಕುವುದಾಗಿ ಹೇಳಿ ತಂದೆ ಯನ್ನು ಬಂಡೆಯೊಂದರ ಮೇಲೆ ಕುಳ್ಳಿರಿಸಿ ಆತನು ಹೊರಟು ಹೋಗುತ್ತಾನೆ.

ಏಕಾಂಗಿಯಾದ ದ್ರೋಣರು ತಮ್ಮ ಹೃದ್ರೋಗವನ್ನು ಹೇಳಿಕೊಂಡು ಸಂಕಟ ಪಡುತ್ತಾರೆ. ಮತ್ತೊಬ್ಬರಲ್ಲಿ ಪ್ರಸ್ತಾಪಿಸಲಾಗದ, ಪ್ರಸ್ತಾಪಿಸಬಾರದ ಹೃದಯ ವೇದನೆ ಅದು. ಹೊರಹೊರಡಲು ದಾರಿಗಾಣದೆ ಭೂಗರ್ಭದಲ್ಲಿ ತಕತಕ ಕುದಿಯು ತ್ತಿರುವ ಲಾವಾ ರಸದಂತಿದೆ, ಅವರ ಆ ಮೂಕವೇದನೆ. ಏಕಾಂತ ದೊರೆತೊಡನೆಯೇ ಈ ಹೃದ್ರೋಗ ಮಂದಮಂದವಾಗಿ ಹೊರಕ್ಕೆ ಹರಿದುಬರುತ್ತದೆ.—"ಅರಸು ಮಕ್ಕ ಳ್ಗೊವಜುಗೈವುದುಂ ಮೇಣ್ ಸಿಡಿಮುದ್ದನರೆವುದುಂ ಎರಡುಮೊಂದೆ" ಎಂಬ ಬಿಸಿಯುಸಿ ರೊಡನೆ. ಕೌರವ ಪಾಂಡವರ ದಾಯಾದಿ ಮಾತ್ಸರ್ಯವನ್ನು ಕಂಡೇ ಆತನ ಜೀವ ರೋಸಿಹೋಗಿದೆ. ಇದರ ಮೇಲೆ ಆ ಅರ್ಜುನನ ದುರಾಗ್ರಹ ಬೇರೆ. ಯಾವ ವಿಷ ಘಳಿಗೆಯಲ್ಲಿ ಅಹಂಕಾರದ ದೆವ್ವಕ್ಕೆ ಧೂಪವಿಕ್ಕಿ ದ್ರುಪದನ ಮೇಲೆ ಪ್ರತೀಕಾರ ಕೈ ಕೊಳ್ಳಲು ಮನಸ್ಸಿನಲ್ಲಿ ಎಣಿಕೆ ಹುಟ್ಟಿತೋ ! ಅಂದೇ ದುರ್ದೈವ ತನ್ನ ಕಾರ್ಯವನ್ನು ಆರಂಭಿಸಿತೆಂದು ತೋರುತ್ತದೆ. ದ್ರುಪದನನ್ನು ಗೆದ್ದು ತನ್ನಡಿಯಲ್ಲಿ ಕೆಡಹುವಂತೆ ಅರ್ಜುನನಿಗೆ ಹೇಳಿ ಅದಕ್ಕೆ ಪ್ರತಿಫಲವಾಗಿ "ಲೋಕತ್ರಯಂಗಳೊಳ್ ನಿನ್ನಂ

ಪಿರಾರ್ಪರಿಲ್ಲಮೆನೆ ನಿನಗೆ ಬಿಲ್ಬಿಜ್ಜೆಯಂ ಕಲಿಪೆನ್ " ಎಂದು ಭಾಷೆಯಿತ್ತುದು, ತನ್ನ ಕೊರಳಿಗೆ ತಾನೇ ನೇಣಕುಣಿಕೆಯನ್ನು ತೊಡಿಸಿಕೊಂಡಂತಾಯಿತು. ಕೀರ್ತಿಶನಿ ಹಿಡಿದಿರುವ ಅರ್ಜುನನು ಏಕಲವ್ಯನ ಬಿಲ್ವಿದ್ಯಾಶಕ್ತಿಯನ್ನು ಸರ್ವನಾಶಮಾಡುವಂತೆ ಗುರುವನ್ನು ಬೇಡಿದ್ದಾನೆ. ಅವನ ಹಂಗಿಗೊಳಗಾದ ಗುರು ಆ ಅಕಾರ್ಯವನ್ನು ನಡೆಸಲೇಬೇಕು, ತನ್ನ ಮಾತನ್ನು ಉಳಿಸಿಕೊಳ್ಳಲೇಬೇಕು.

ಅರ್ಜುನನ ನೆತ್ತಿಗೇರಿರುವ ಅಹಂಕಾರದ ಪೈಶಾಚ್ಯವನ್ನು ಕುರಿತು ತಿರಸ್ಕರಿಸುತ್ತಿರುವ ಸಂದರ್ಭದಲ್ಲಿ ದ್ರೋಣರಿಗೆ ತಮ್ಮ ಅಹಂಕಾರವೂ ಜ್ಞಾಪಕಕ್ಕೆ ಬರುತ್ತದೆ. ತಮ್ಮ ವಿದ್ಯೆಯೆಲ್ಲವೂ ಅವಿದ್ಯೆ ಎಂದು ತಮಗೆ ತಾವೇ ತಿರಸ್ಕರಿಸಿಕೊಳ್ಳುತ್ತಾರೆ. ಕೀರ್ತಿ ಎಂಬುದು ಅಹಂಕಾರದ ಒಂದು ಛದ್ಮನೆ. ಅಂತರ್ಮುಖಿಯಾಗಿ ಆಲೋಚಿಸುತ್ತಿರುವ ಗುರುವಿಗೆ, ಕ್ಷಣಿಕವಾದ ಇಹಜನ್ಮದ ಹೆಸರಿಗಾಗಿ ನೆತ್ತರನ್ನು ಚಲ್ಲುವಂತಹ ಗರ್ಹಣೀಯ ಕಾರ್ಯವನ್ನು ಕೈಕೊಳ್ಳಲು ಮನಸ್ಸು ಹೇಸುತ್ತದೆ. ಏಕಲವ್ಯನ "ಬೆರಳ್ ಕೊಯ್ಪು, ಆ ರಕ್ತಪಂಕದೊಳಿವನ ಕೀರ್ತಿಪುಂಕೇಜಮುಂ ಮೆರೆಯುವೇಳ್ಕಂತೆ!" ಎಂದು ಅಕ್ಕಸಪಡುತ್ತಾರೆ. ಹೀಗೆ ತಮಗೆ ತಾವೇ ಕನಲುತ್ತಿರುವ ಅವರ ಬಳಿಗೆ ಅಶ್ವತ್ಥಾಮನು ಹಿಂದಿರುಗಿ, ಏಕಲವ್ಯನ ಆಳುಗಳು ದಂಡಿಗೆಯನ್ನು ತರುತ್ತಿರುವರೆಂದು ತಿಳಿಸುತ್ತಾನೆ.

' ಬೆರಳ್ ಗೆ ಕೊರಳ್ ' ನಾಟಕದಲ್ಲಿ ಬರುವ ಅಶ್ವತ್ಥಾಮನೂ ಕುವೆಂಪುರವರ ಪ್ರತಿಭೆಯ ಪಾವನಗಂಗಾಜಲದಲ್ಲಿ ಮಿಂದು ಪವಿತ್ರನಾಗಿದ್ದಾನೆ. ಇಲ್ಲಿ ವ್ಯವಹರಿಸುತ್ತಿರುವಷ್ಟು ಕಾಲವೂ ಆತನು ನಮ್ಮ ಆದರಗೌರವಗಳಿಗೆ ಪಾತ್ರನಾಗುತ್ತಾನೆ. ಗುರುಭಕ್ತನಾದ ಏಕಲವ್ಯನಲ್ಲಿ ಅವನಿಗೆ ಅವ್ಯಾಜವಾದ ಸೋದರಪ್ರೇಮ. ಆತನನ್ನು ಕಾಣ ಹೊರಟಿರುವ ತನ್ನ ತಂದೆ ಚಿಂತಾಮಗ್ನನಾಗಿರುವುದು ಅವನಿಗೊಂದು ದೊಡ್ಡ ಸಮಸ್ಯೆಯಂತಿದೆ. ಇದಕ್ಕೆ ತಕ್ಕಂತೆ ದ್ರೋಣರು ಮಗನನ್ನು ಜೊತೆಯಲ್ಲಿ ಕರೆದೊಯ್ಯಲು ನಿರಾಕರಿಸುತ್ತಾರೆ. " ಏಕಾಂತಮೊಂದಿರ್ಪುದಾ ಏಕಲವ್ಯನ ಕೂಡೆ " ಎಂದು ಅವರು ಹೇಳುವ ಕುಂಟುನೆಪದಿಂದ ಅಶ್ವತ್ಥಾಮನಿಗೆ ಸಮಾಧಾನವಾಗುವುದಿಲ್ಲ. ಏಕಾಂತಕ್ಕೆ ಭಂಗಬರದಂತೆ ತಾನು ದೂರ ನಿಂತಿರುವುದಾಗಿ ಹೇಳಿ, ತನ್ನನ್ನೂ ಏಕಲವ್ಯನ ಬಳಿಗೆ ಕರೆದೊಯ್ಯುವಂತೆ ತಂದೆಯನ್ನು ಪ್ರಾರ್ಥಿಸುತ್ತಾನೆ. ಹೃದಯವೇದನೆಯಿಂದ ಸಹನೆ ತಪ್ಪಿದ ದ್ರೋಣರು ಮಗನನ್ನು " ನಿನಗೆ ಲೇಸಾಗುವಾಸೆಯಿರ್ದೊಡೆ, ನನ್ನನೊರ್ವನೆಯೆ ಬಿಟ್ಟು ನಡೆ " ಎಂದು ಹೇಳುವಷ್ಟು ದೂರ ಕ್ರೋಧಕರ್ಕಶರಾಗುತ್ತಾರೆ. " ಎಂತಾದೊಡಂ ತಿಳಿವೆನ್" ಎಂದು ಮನಸ್ಸಿನಲ್ಲಿ ನಿಶ್ಚಯಿಸಿಕೊಂಡಿರುವ ಅಶ್ವತ್ಥಾಮ ದ್ರೋಣರ ಕೋಪದಿಂದಲೂ ತನ್ನ ನಿಶ್ಚಯವನ್ನು ಕದಲಿಸುವುದಿಲ್ಲ. ಮಗನಾದ ತನಗೆ ತಂದೆಯ ಗುಟ್ಟನ್ನು ಅರಿಯುವ ಹಕ್ಕಿದೆಯೆಂದು ವಾದಿಸಿ, " ದಿಟಂಪೇಳಿಂ; ಕಾಲ್ವಿಡಿದು ಬೇಡುವೆನ್: ಆವುದೊ ಅಮಂಗಳಕೆ ಕೈಕೊಂಡಿರೀ ಪಯಣಮಂ " ಎಂದು ತನ್ನ ಶಂಕೆಯನ್ನು ಸ್ಪಷ್ಟಪಡಿಸುತ್ತಾನೆ. ಮರೆಮೋಸಗಳು ಗೊತ್ತಿಲ್ಲದ ಆ

ವೃದ್ಧಬ್ರಾಹ್ಮಣ ಮಗನ ಬಳಿ ತನ್ನ ಹೊಟ್ಟೆಯ ಸಂಕಟವನ್ನು ಹೇಳಿಕೊಳ್ಳುತ್ತಾನೆ. ಗುಟ್ಟು ರಟ್ಟಾಗುತ್ತದೆ. ತನ್ನ "ಪ್ರೂಣ್ಕೆ ನಿಲ್ವಂತೆ, ಮೇಣ್ ಅರ್ಜುನನ ಮಚ್ಚರಾಗ್ನಿಗೆ ಬೇಳ್ವೆ ಸಲ್ವಂತೆ" ಏನಾದರೊಂದು ಕಾರ್ಯವನ್ನು ನಡೆಸುವುದಾಗಿ ಹೇಳುತ್ತಾರೆ ಆತ. ಕೇಳಿ ಕೆರಳಿದ ಅಶ್ವತ್ಥಾಮ "ಆ ಅರಸು ಮಕ್ಕಳ ಕೂಳ್ಗೆ ಆಳಾಗಿ, ಬಾಳ್ಗೋಣ ನೊಡ್ಡುತಿರ್ಪಿರಿ ನರಕನಕ್ರದ ಬಾಯ್ಗೆ" ಎಂದು ತಂದೆಯನ್ನು ಗದರಿಸುತ್ತಾನೆ. ತಮ್ಮ ತಪ್ಪೊಪ್ಪಿಕೊಂಡು ಅವರು ಮಗನಿಗೆ ಕೊಡುವ ಉತ್ತರ ಈ ದೃಶ್ಯದ ಸಾರಸರ್ವಸ್ವ ದಂತಿದೆ—"ಕೂಳ್ ಮಿಣಿಯ ಪಿಡಿದಿರ್ಪುದಾ ಬಿದಿಯ ಕೆಯ್! ನೂಂಕುತಿಹುದನಿ ಬರಂ ತನ್ನ ಲೀಲಾರ್ಥಂ. ಅಂತಲ್ಲದಿರೆ, ನಮ್ಮ ನೆತ್ತಣಿಂದಲೊ ಕರೆದು ಒಯ್ದು ತಂದೀ ನೃಪಾಲರೂಳಿಗಕೆ ತಳ್ಳುತಿರ್ದುದೆ ಈಶ್ವರೇಚ್ಛಾರೂಪದೆಮ್ಮ ಕರ್ಮಪಾಶಂ?" ಎಂದು ಹೇಳಿ, ಏಕಲವ್ಯನಿಗೆ 'ಪೆರ್ಕೇಡೆಸಗದೊಲ್' ತನ್ನ ಕಾರ್ಯವನ್ನು ನಡಸುವುದಾಗಿ ಮಗನಿಗೆ ಭರವಸೆಯಿತ್ತು ಹೊರಡುತ್ತಾರೆ.

ಮೇಲಿನ ದ್ರೋಣವಚನಗಳಿಂದ ಈ ದೃಶ್ಯಕ್ಕೆ 'ಕರ್ಮ'ವೆಂಬ ನಾಮಕರಣ ಸಾರ್ಥಕವಾಗಿರುವುದನ್ನು ನಾವು ಕಾಣುತ್ತೇವೆ. 'ಧರ್ಮಸಂಕಟದೊಂದು ಚಿಂತಾಗ್ನಿಯಿಂದ' ಆತನ ಹೃದಯ ದಹಿಸುತ್ತಿದೆ. 'ಕೀರ್ತಿಶನಿ'ಯ ಕೈಗೊಂಬೆಯಾಗಿರುವ ಅರ್ಜುನನಿಗೆ ತಾನು ಕೊಟ್ಟ ಮಾತನ್ನು ಕಳೆದುಕೊಳ್ಳಬೇಕು, ಇಲ್ಲವೆ, ಮಾತೃಸೇವೆಯಲ್ಲಿ ತೊಡಗಿರುವ 'ಆ ಕಾಡ ಬೇಡರ ಹುಡುಗನನ್ ಬೆರಳ್ ಕೊಯ್ದು' ಏನೂ ಅರಿಯದ ಆ ಮುಗ್ಧಬಾಲಕನಿಗೆ ಕೇಡೆಸಗಬೇಕು—ಈ ಕತ್ತರಿಗೆ ಸಿಕ್ಕಿ ನಲುಗಿಹೋಗಿದೆ ದ್ರೋಣರ ಚೇತನ. ಈ ಎಲ್ಲ ಸಂಕಟಕ್ಕೂ ತನ್ನ ಅಹಂಕಾರವೇ ಮೂಲವೆಂದು ಅವರಿಗೆ ಅರ್ಥವಾಗಿದೆ. "ನನ್ನಹಂಕಾರದಾ ಛಲಮೆ ಮರಿಯಿಕ್ಕಿದುದು ಪಾರ್ಥನ ಅಹಂಕಾರದೀ ಕ್ರೂರ ಈರ್ಷ್ಯೆಯಂ" ಎಂದು ಮಗನಿಗೆ ಅವರು ಸ್ಪಷ್ಟವಾಗಿ ತಿಳಿಸುತ್ತಾರೆ. ಅಹಂಕಾರಿಯಾದ ತಾನು ತನ್ನ ಶಿಷ್ಯನಲ್ಲಿಯೂ ಅಹಂಕಾರವನ್ನು ಪ್ರಚೋದಿಸಿ "ವಿದ್ಯೆಯೆಂಬಾ ಪೆಸರ ಮರೆಯೊಳಾನ್ ಅವಿದ್ಯೆಯಂ ಪೋಷಿಸುವ ಗುರುವಾದೆನಲ್ತೆ!" ಎಂದು ಪಶ್ಚಾತ್ತಾಪ ಪಡುತ್ತಾರೆ. "ಬಿಂಕಕೆ ಕೈಗೊಳ್ಳುವುದದು ವಿದ್ಯೆಯೆ? ಅವಿದ್ಯೆ! ತವಿಪುದಾವುದೊ ಅಹಂಕಾರಮಂ ಅದು ವಿದ್ಯೆ" ಎನ್ನುವ ಸತ್ಯ ಅವರಿಗೆ ಅನುಭವವೇದ್ಯವಾಗಿದೆ. ಅಂತರ್ಮುಖಿಯಾದ ಅವರಿಗೆ ಅಹಂಕಾರದಿಂದ ಉದಿಸುವ ಕೀರ್ತಿಕಾಮನೆ ಎಷ್ಟು ಪೊಳ್ಳೆಂಬುದೂ ಅರ್ಥವಾಗುತ್ತದೆ—"ಈ ಜನ್ಮದೊಳ್ ಈ ಪೆಸರ್; ಮರುವುಟ್ಟೊಳಿನ್ನೊಂದುಪೆಸರ್." ಅಚಿರವಾದ ಒಂದು ಜನ್ಮದ ಹೆಸರಿಗಾಗಿ "ಕೆನ್ನೀರ ನೀರ್ವೊಯ್ದು ಸಾಕಿ ಸಲಹುವೆನಲ್ತೆ, ಈ ಪುಸಿಯ ಪೆಸರೆಂಬ ಕನಸು ಮರಮಂ." ಅವರ ಈ ಬಗೆಯಾದ ಪಶ್ಚಾತ್ತಾಪವನ್ನು ಕಂಡು ನಾವು ಅವರನ್ನು ಮೆಚ್ಚುತ್ತೇವೆ, ಗೌರವಿಸುತ್ತೇವೆ. ಅವರ ಅಹಂಕಾರದಿಂದ ಉದಿಸಿದ ಅರ್ಜುನನ ಅಹಂಕಾರವು ಕರ್ಮಪರಂಪರೆಯ ಸರಪಣಿಯನ್ನು ಬೆಳೆಸುವ ಎರಡನೆಯ ಕೊಂಡಿಯಾಗುತ್ತದೆ. ಆ ಕರ್ಮಪಾಶಕ್ಕೆ ಬದ್ಧ

ನಾದ ದ್ರೋಣನು ನಿಸ್ಸಹಾಯಕನಾಗಿ ವಿಧಿಯು ಸೆಳೆದತ್ತ ನಡೆಯುತ್ತಿದ್ದಾನೆ. ಆತನ ಈ ನಿಸ್ಸಹಾಯಕತೆಯನ್ನು ಕಂಡು ನಾವು ಕಸಿಕರಿಸುತ್ತೇವೆ, ಕಣ್ಣೀರಿಡುತ್ತೇವೆ. ಯಾವ ವಿಧಿ ಆತನನ್ನು ಸೆಳೆದೊಯ್ಯುತ್ತಿದೆಯೋ, ಅದೇ ವಿಧಿ ಆತನ ಬಾಯಲ್ಲಿ "ಬಟ್ಟೆಯಿರದೆಡೆ ಬಟ್ಟೆಯುರಸುತಿರ್ಪಯ್" ಎಂದು ಮಗನನ್ನು ಟೀಕೆಮಾಡಿಸುತ್ತದೆ. ಆ ಮಾತು ಮಗನಿಗೆ ಅನ್ವಯಿಸುವಂತೆ ತನಗೂ ಅನ್ವಯಿಸುವುದೆಂದು, ಆಡುವಂದು ಆತನು ಅರಿತಿದ್ದನೋ ಇಲ್ಲವೊ! ವಿಧಿಯ ಮುಸಕವನ್ನು, ಕರ್ಮದ ದಾರುಣತೆಯನ್ನು ಮಾಣಿಸಲು ಅತನಿಗೆ ಶಕ್ತಿಯಿಲ್ಲ. ಆತನು ಇತಿ ಕರ್ತವ್ಯತಾ ಮೂಢನಾಗಿದ್ದಾನೆ. ಆದ್ದರಿಂದಲೇ "ದೈವಮುಂ ನೆಮ್ಮಿ ಕೆಲಸಮಾಳ್ಪೆನ್" ಎಂದುಕೊಳ್ಳುತ್ತಾನೆ.

ಕರ್ಮ, ವಿಧಿ, ದೈವೇಚ್ಛೆ—ಈ ಮಾತುಗಳನ್ನು ಕೇಳಿದಾಗ ಗ್ರೀಕ್ ರುದ್ರ ನಾಟಕಗಳ ಜ್ಞಾಪಕ ಬರುವುದು ಸಹಜ. ಆದರೆ ಅಲ್ಲಿ ಆ ಮಾತುಗಳನ್ನು ಬಳಸುವುದಕ್ಕೂ ಇಲ್ಲಿ ಬಳಸುವುದಕ್ಕೂ ಪೂರ್ವಪಶ್ಚಿಮದಷ್ಟೇ ಅಂತರ. ಅಲ್ಲಿ 'ಕರ್ಮ'ದ ಪ್ರಸಕ್ತಿಯೇ ಇಲ್ಲವೆಂದು ಹೇಳಬಹುದು; ವಿಧಿ ಮತ್ತು ದೈವೇಚ್ಛೆಗಳು ಅಲ್ಲಿ ಅಭಿನ್ನ. ಜನ್ಮಾಂತರಗಳ ಪ್ರಸಕ್ತಿಯಿಲ್ಲದ ನಾಡಿನಲ್ಲಿ 'ಕರ್ಮ' ಎಂದಾಗ ಮಾನವಕೃತಿಯೆಂದಷ್ಟೇ ಅರ್ಥವಾದೀತು! ಈ ಕೃತಿಯಲ್ಲಿ ಎಡವಿದಾಗ ವಿಧಿ ತನ್ನ ಪ್ರತೀಕಾರಶಕ್ತಿಯೊಡನೆ ಮಾನವನನ್ನು ಇದಿರಿಸುತ್ತದೆ. ಅದರಿಂದ ಬರುವ ಶಿಕ್ಷೆ ಅನಿವಾರ್ಯ. ಮಾನವನು ಅಸ್ವತಂತ್ರನಾಗಿ ವಿಧಿಯ ಕೈಗೊಂಬೆಯಾಗಿ ಹೋಗುತ್ತಾನೆ. ವಿಧಿಯನ್ನು ತಡೆಗಟ್ಟುವುದು ದೈವಶಕ್ತಿಗೂ ಮೀರಿದುದು. ನಮ್ಮ ಸಾಹಿತ್ಯದರ್ಶನಗಳಲ್ಲಿಯಾದರೋ ಕರ್ಮ, ವಿಧಿ, ದೈವೇಚ್ಛೆಗಳು ಒಂದೇ ತತ್ತ್ವದ ಮೂರು ಮುಖಗಳಾದರೂ ಅವು ಮೂರೂ ಪರಸ್ಪರ ಭಿನ್ನವಾದುವು. ದೈವೇಚ್ಛೆ ಎಂಬುದು ಪೂರ್ಣದೃಷ್ಟಿಯ ಪ್ರತೀಕ. ಜಗತ್ತಿನಲ್ಲಿ ನಡೆಯುವ ಅಣೋರಣೀಯಾನ್ ಮಹತೋಮಹೀಯಾನ್ ಕಾರ್ಯಗಳೆಲ್ಲಕ್ಕೂ ದೈವೇಚ್ಛೆಯೇ ಕಾರಣ. ಆದರೆ ಖಂಡದೃಷ್ಟಿಯಲ್ಲಿ ಮಾನವನ ಕರ್ಮವೇ ಅವನ ಸುಖದುಃಖಕ್ಕೆ ಕಾರಣವಾಗುತ್ತದೆ. ಈ ಕರ್ಮಫಲಕ್ಕೆ ತಕ್ಕ ಸನ್ನಿವೇಶ ಸಂದರ್ಭಗಳನ್ನು ಒದಗಿಸತಕ್ಕುದು ವಿಧಿ. ಕರ್ಮ ವ್ಯಕ್ತಿಗತವಾದುದು; ವಿಧಿ ಮಾನವನ ಹೊರಗಿನ ಒಂದು ಶಕ್ತಿ. ದೈವೇಚ್ಛೆ (ದೈವಲೀಲೆ) ಎಂಬ ಮಾತಿನ ಅತ್ಯುಚ್ಚ ಅರ್ಥದಲ್ಲಿ ಅದು ನಿಯಮಾತೀತವಾದುದು. ಅಲ್ಲಿ ಸುಖದುಃಖವೆಂಬ ದ್ವೈತಭಾವವೇ ಇಲ್ಲ. ಎಲ್ಲವೂ ಪರಮಶಕ್ತಿಯೊಂದರ ಲೀಲೆ ಮಾತ್ರ. ಕರ್ಮ ಮತ್ತು ವಿಧಿಗಳು ಅತ್ಯಂತ ಬಲವತ್ತರವಾದವುಗಳಾದರೂ ಅನಿವಾರ್ಯಗಳೆಂದು ಹೇಳುವಂತಿಲ್ಲ. ಭಗವದುಪಾಸನೆಯಿಂದ ಇವುಗಳ ಉರುಬನ್ನು ತಡೆಗಟ್ಟಬಹುದು; ಇವುಗಳನ್ನು ನಿವಾರಿಸಿಕೊಳ್ಳಲೂಬಹುದು. ಮಾರ್ಕಂಡೇಯನು ಹದಿನಾರು ವರ್ಷಗಳಲ್ಲಿ ಸಾಯಬೇಕೆಂಬ ವಿಧಿಯನ್ನು ಶಿವಾನುಗ್ರಹ ನಿವಾರಿಸಿತು. ಆ ಉಪಾಸನಾಬಲವಿಲ್ಲದಾಗ ವಿಧಿ ಅಪ್ರತಿಹತವಾಗುತ್ತದೆ. ಈ ಭಾವವನ್ನು ಗ್ರಹಿಸಿಯೇ ನಾವಿಲ್ಲಿ ಕರ್ಮ, ವಿಧಿ, ದೈವೇಚ್ಛೆಗಳೆಂಬ ಮಾತುಗಳನ್ನು ಬಳಸಿಕೊಳ್ಳಬೇಕು. ದೈವೇಚ್ಛೆಯೆಂಬ ಪರಮಾರ್ಥಕ್ಕೆ

ಕರ್ಮ ವಿಧಿಗಳೆರಡೂ ಎರಡು ಬಾಹುಗಳಿದ್ದಂತೆ. ಅದನ್ನು ಉಪಯೋಗಿಸುವಂತೆ, ತಡೆಯುವುದಕ್ಕೂ ಅದು ಸಮರ್ಥವಾಗಿದೆ. ಈ ದೃಷ್ಟಿಯಿಂದ ನೋಡಿದಾಗ

ಕೈದುವಂ ಸಮೆಯುವಾತಂಗೆ ಅದನ್ ಮುರಿಯಲುಂ
ಸಮಯಕ್ಕೆ ತಗುವವೋಲದರ ತೀಕ್ಷ್ಣತೆಯನಿನಿತು
ಸಂಯಮಿಸಿ ದಿವ್ಯಲೀಲಾ ನಿಯಮಕನುಗೊಳಿಸಲುಂ

ಅನಿವಾರ್ಯಮಾದೊಡಾ ಕೈದುವಂ
ಮುಂದೆ ಬರ್ಪೊಂದನ್ಯ ರಣಲೀಲೆಗೋಸುಗಂ
ಒರೆಗಿಕ್ಕಿ ಬದಿಗಿರಿಸಲುಂ ತಿಳಿಯವೇಳ್ಕುಂ

ಎಂಬ ದ್ರೋಣರ ಮಾತು ಅರ್ಥಪೂರ್ಣವಾಗುತ್ತದೆ, ಭಾವಪೂರ್ಣವಾಗುತ್ತದೆ, ಧ್ವನಿಪೂರ್ಣವಾಗುತ್ತದೆ. ದ್ರೋಣರು ಏಕಲವ್ಯನನ್ನು ಕಂಡ ಮೇಲೆ ಪೆರ್‌ಬೆರಳನ್ನು ಬೇಡುವಂತಹ ಅಸಹ್ಯಕಾರ್ಯವನ್ನು ಕೈಕೊಂಡಾಗ ಅವರು ಹೇಳಿದುದೇನು ?

ಜೀವಿಗಳ ಕರ್ಮಜಟಿಲತೆ, ಏಕಲವ್ಯ, ಈ
ಕುಟಿಲ ಕಾರ್ಯಂಗಳಿಗೆ ನಮ್ಮನ್ ನಿಯೋಜಿಪುದು
ದೇವನಿಚ್ಛೆಯ ದಿವ್ಯಲೀಲಾ ಪ್ರಯೋಜನಕೆ

ದ್ರೋಣರ ಈ ಮಾತುಗಳೂ ಇದೇ ತತ್ತ್ವವನ್ನೇ ಸಾರುತ್ತಿವೆ.

ಇನ್ನು 'ಬೆರಳ್‌ಗೆ ಕೊರಳ್' ನಾಟಕದ ಕಡೆಯ ದೃಶ್ಯವಾದ 'ಯಜ್ಞ'ವನ್ನು ಕುರಿತು ಸ್ವಲ್ಪ ವಿವೇಚಿಸೋಣ. 'ಯಜ್ಞ'ವೆಂಬುದು ಮಾನವನು ಕೈಕೊಳ್ಳಬೇಕಾದ ನಿತ್ಯವಿಧಿ. ನಮ್ಮ ಸೃಷ್ಟಿಗೆ ಆದ್ಯಕಾರಣವಾದ ದೈವಕ್ಕೆ, ಪ್ರತ್ಯಕ್ಷಕಾರಣರಾದ ಪಿತೃಗಳಿಗೆ ದೇವಯಜ್ಞ, ಪಿತೃಯಜ್ಞವೆಂಬ ಹೆಸರಿನಿಂದ ಪೂಜೆಯನ್ನು ಸಲ್ಲಿಸುವಂತೆಯೇ ಜ್ಞಾನವನ್ನು ನೀಡಿದ ಗುರುವಿಗೂ ಈ ಯಜ್ಞ ಸಲ್ಲತಕ್ಕುದು. ಇದನ್ನು ಸಲ್ಲಿಸಿದಂದು ಅವನು ಕೃತಕೃತ್ಯನಾದಂತೆ. ಏಕಲವ್ಯನು ಇಲ್ಲಿ 'ಗುರುಯಜ್ಞ'ದಿಂದ ಕೃತಕೃತ್ಯನಾಗಿದ್ದಾನೆ.

ಅರ್ಜುನನ ಮತ್ಸರಾಗ್ನಿಯನ್ನು ಶಮನಗೊಳಿಸುವುದಕ್ಕಾಗಿ ದ್ರೋಣರು ಏಕಲವ್ಯನಲ್ಲಿ ಗುರುದಕ್ಷಿಣೆಯನ್ನು ಬೇಡಿದರು. ಶಿಷ್ಯನ ಗುರುಭಕ್ತಿ ಅನ್ಯಾದೃಶವಾದುದು. "ಸಮರ್ಪಿಸಿದೆನೆನ್ನ ಸರ್ವಸ್ವಮಂ ನಿನ್ನಡಿಗೆ. ಆವುದಾದೊಡಮದನ್ ಬೆಸಸು ನೀನ್" ಎಂದ ಆ ಶಿಷ್ಯನಲ್ಲಿ ಗುರು ಬೇಡಿದುದೇನು ? "ದಕ್ಷಿಣೆಗೆ ದಕ್ಷಿಣದ ಪೆರ್‌ಬೆರಳ್. ನಿನ್ನ ಬಿಲ್‌ಬಿಜ್ಜೆಗುಸಿರಪ್ಪ ಆ ಪೆರ್ಬೆರಳ್." ಎಂತಹ ಗುರುಭಕ್ತಿಗೆ ಯಾವ ಫಲ? ಇದು ಎಂತಹ ನ್ಯಾಯ ? ಇದು ಯಾವ ಧರ್ಮ ? ಇದಕ್ಕೆ ಉತ್ತರವನ್ನು ಕವಿ ಏಕಲವ್ಯನ ಬಾಯಲ್ಲಿ ಹೇಳಿಸಿದ್ದಾರೆ—"ಪೂರ್ಣಮಂ ಕೊಡದೆ ಪಡೆದಪೆನೆಂತು ಪೂರ್ಣಮಂ?" ಈ ಅಧ್ಯಾತ್ಮತತ್ತ್ವ ಅತ್ಯಂತ ಸರಳವಾದ ನುಡಿಗಳಲ್ಲಿ ಕಾಣಿಸಿಕೊಂಡಿದ್ದರೂ ಅಗಾಧ

ವಾದ ಅರ್ಥವನ್ನು ಒಳಗೊಂಡಿದೆ. ಕುವೆಂಪುರವರು ನಾಟಕದ ಕೊನೆಯ ಟಿಪ್ಪಣಿಯಲ್ಲಿ ಕೊಟ್ಟಿರುವ ಈ ಮಾತುಗಳು ಮೇಲಿನ ಸೂಕ್ತಿಗೆ ವಿವರಣೆಯಂತಿವೆ—"ಮಾನವ ತನ್ನದೆಂದು ಹೇಳಿಕೊಳ್ಳುವ ವಸ್ತು ಪ್ರಪಂಚದಲ್ಲಿ ಯಾವುದೂ ಇಲ್ಲ. ಅವನು ಸ್ವಾರ್ಥಕ್ಕಾಗಿ ಸಂಪಾದಿಸಿದ ಹಣ ಮೊದಲುಗೊಂಡು ಮುಕ್ತಿಗಾಗಿ ಮಾಡುವ ತಪಸ್ಸಿನ ತನಕ ಎಲ್ಲಕ್ಕೂ ಯಜ್ಞವೇ ಮೂಲ; ಕೊನೆಗೆ ಎಲ್ಲವೂ ಅದರಲ್ಲಿಯೇ ಲಯಹೊಂದಬೇಕು. ಒಟ್ಟಿನಲ್ಲಿ ಮಾನವನ ಸರ್ವಸಿದ್ಧಿ ಆ ಯಜ್ಞದಿಂದಲೇ ಲಭಿಸಬೇಕು. ಕೆರೆಯ ನೀರನ್ನು ಕೆರೆಗೆ ಚೆಲ್ಲುವಂತೆ ಯಜ್ಞದಿಂದ ಬಂದುದನ್ನು ಮತ್ತೆ ಯಜ್ಞರೂಪದಿಂದ ನಿವೇದಿಸದಿದ್ದರೆ ಮಾನವ ವಂಚಕನಾಗುತ್ತಾನೆ. ಅವನಿಗೆ ತನ್ನ ಸಾಧನೆಯ ಪರಮಪ್ರಯೋಜನ ಸಿದ್ಧಿಸುವುದಿಲ್ಲ. ಒಟ್ಟಿನಲ್ಲಿ ನಿಷ್ಕಾಮವಾದ ಸ್ವಾರ್ಪಣವೇ ಯಜ್ಞವೆಂದು ಹೇಳಬಹುದು."

ಗುರು ದ್ರೋಣನು ಗುರುದಕ್ಷಿಣೆಯನ್ನು ಬೇಡುವ ಮುನ್ನ ಅಗಾಧವಾದ ಮನೋವ್ಯಥೆಗೆ ಗುರಿಯಾಗುತ್ತಾನೆ. ತಾನು ನೀಡಿದ 'ಅಲ್ಪ'ದಿಂದ ಭೂಮವನ್ನೇ ಸಾಧಿಸಿರುವ ಆ ಶಿಷ್ಯಮಹಿಮೆಯನ್ನು ಬಾಯ್ತುಂಬ ಹೊಗಳುತ್ತಾನೆ. ತನ್ನ ಗುರುತನ ಕೇವಲ ನಿಮಿತ್ತಮಾತ್ರವೆಂದು ಅರಿತು "ನಮ್ಮ ಭಕ್ತಿಗೆ ಮೆಚ್ಚುವಾ ಸಚ್ಚಿದಾನಂದಮೆ ಜಗದ್ಗುರು, ಏಕಲವ್ಯ, ಬೇರೆ ಗುರುವುಂಟೆ" ಎಂದು ಶಿಷ್ಯನಲ್ಲಿ ತನ್ನ ನಿಮಿತ್ತತೆಯನ್ನು ನಮ್ರತೆಯಿಂದ ಹೇಳಿಕೊಳ್ಳುತ್ತಾನೆ. ತನ್ನ ಅಪೇಕ್ಷೆಯನ್ನು ಸಲ್ಲಿಸಲು ಸಿದ್ಧನಾಗಿರುವ ಶಿಷ್ಯನನ್ನು ಕುರಿತು "ಕಟುಕನಂ ಬೆಂಬಳಿವಿಡಿದು ಪೋಪ ಕುರಿಯಂತೆ ನಡೆಯದಿರ್, ಏಕಲವ್ಯ" ಎಂದು ಪ್ರತಿಬೋಧಿಸುತ್ತಾನೆ. ತಾನು ಕೇಳಬೇಕೆಂದಿರುವ ಕಾಣಿಕೆ ಎಷ್ಟು ಕೀಳಾದುದೋ ಅಷ್ಟೇ ಭಯಂಕರ ಪರಿಣಾಮವುಳ್ಳುದು. ಅದರಿಂದ ತಪ್ಪಿಸಿಕೊಳ್ಳುವುದಕ್ಕಾಗಿ ನಿರ್ದೋಷಿಯಾದ ಪಕ್ಷಿಯೊಂದನ್ನು ಶಬ್ದವೇಧಿಯಿಂದ ಸಂಹರಿಸುವಂತೆ ಶಿಷ್ಯನನ್ನು ಕೇಳುತ್ತಾನೆ. ಆದರೆ ಆ ಶಿಷ್ಯನ ಧರ್ಮಬುದ್ಧಿ ಗುರುವಿನ ದಾಕ್ಷಿಣ್ಯಕ್ಕಿಂತಲೂ ಹಿರಿದಾದುದು. ಅಪರಾಧಮಿಲ್ಲದಾ ಸಾಧುವಂ ಕೊಲಲ್ಕಲ್ತು, ಆಚಾರ್ಯ, ಆ ವಿದ್ಯೆಯಂ ನೀನಿತ್ತುದೆನಗೆ........ದಿವ್ಯ ವಿದ್ಯಾಬಲದಿ ಪಾಪಕಾರ್ಯವನೆಸಗೆ ಧರ್ಮಂ ಖತಚ್ಯುತನೆನಗೆ ತಾನುಗ್ರಮಕ್ಕುಂ.....ಆತ್ಮಹಾನಿಯಿಂ ಸರ್ವನಾಶಮಕ್ಕುಂ" ಎಂದು ಹೇಳುತ್ತಾನೆ. ಶಿಷ್ಯನ ನುಡಿಗಳಿಂದ ಗುರುವಿಗೆ ಅತ್ಯಂತ ಆನಂದವಾಗುತ್ತದೆ. "ಪುಣ್ಯವಂತನ್ ನೀನ್" ಎಂದು ಹೇಳಿ ಪಾಪದಿಂದ ನೀನು ಉದ್ಧಾರವಾದುದಲ್ಲದೆ ನನ್ನನ್ನೂ ಉದ್ಧರಿಸಿದೆಯೆಂದು ಶಿಷ್ಯನನ್ನು ಹೊಗಳಿ ಹರಸುತ್ತಾನೆ. ಶಿಷ್ಯನ ಈ ಉದಾತ್ತ ಧರ್ಮದೃಷ್ಟಿಯನ್ನು ಕಂಡು ಆತನಿಗೆ ಆನಂದವಾದಂತೆಯೇ ಅವನಿಂದ ತಾನು ಬೇಡಬೇಕಾಗಿರುವ ಗುರುದಕ್ಷಿಣೆಯನ್ನು ನೆನೆದು ಅಂತಃಸಂತಾಪ ಶತಾಧಿಕವಾಗುತ್ತದೆ.

ಕರ್ಮಲೇಪದಿಂದ ಕೂಡಿದ ಗುರು ದುಃಖಿಯಾಗಿರುವಷ್ಟೇ ಶುದ್ಧ ಚೇತನವಾದ ಶಿಷ್ಯ ಸಂತೋಷಚಿತ್ತನಾಗಿದ್ದಾನೆ. ಆತನು ಅತ್ಯಂತ ದುಃಖದಿಂದ ಬೇಡಿದ ಗುರುದಕ್ಷಿಣೆಯನ್ನು ಇವನು ಅತ್ಯಂತ ಸಂತೋಷದಿಂದ ಕೊಟ್ಟ. "ಸರ್ವಮುಂ ನಿನಗಾಂ

ಸಮರ್ಪಿಸಲ್ ಮನಂದಂದೆನೀ ಬೆರಳ್ ಅದೇನ್ ಪಿರಿದಲ್ತು" ಎಂಬುದು ಆ ಸತ್ವ ಮೂರ್ತಿಯ ಹೇಳಿಕೆ. ತನ್ನ ಬೆರಳನ್ನು ಕತ್ತರಿಸಿಕೊಡುವ ಮುನ್ನ ಹಿಂದಿನ ರಾತ್ರಿ ತಾನು ಕಂಡ ಒಂದು ಕನಸನ್ನು—ಭವಿಷ್ಯತ್ತನ್ನು ಪ್ರತಿಮಿಸುವ ಆ ದಿವ್ಯಸ್ವಪ್ನವನ್ನು—ಗುರುವಿಗೆ ವಿವರಿಸಿ ಹೇಳಿದ: ಹುಲಿಯೊಂದರೊಡನೆ ಹೋರಾಡುತ್ತಾ ನೆತ್ತರು ಚಿಮ್ಮು ವಂತೆ ಅದರ ಹೊಟ್ಟೆಯನ್ನು ಇರಿದ. ಒಡನೆಯೇ ಹುಲಿ ಮಾಯವಾಗಿ ಒಬ್ಬ ನೀಲ ದೇಹಿ ಅದರ ಸ್ಥಾನದಲ್ಲಿ ಕಾಣಿಸಿದ. "ಕುಣಿದುದು ನವಿಲ್ ತಲೆಯ ಮೇಲೆ. ಹೆಡೆ ಯೆತ್ತಿದುರಗಗಳ್ ತೋಳ್ಗಳೊಲ್ ತೂಗಿದುವು, ಭುಜದೇಶದಿಂ ಪ್ರೊಣ್ಮಿ." ಈ ಭಯಂ ಕರಾಕಾರವನ್ನು ಕಂಡು ನಡುಕಕ್ಕೆ ಬದಲು ಏಕಲವ್ಯನಲ್ಲಿ "ವೈರಂ ಮಾಣ್ದುದೆನಗೆ; ಸಂಚರಿಸಿತಾತ್ಮದೊಳ್ ಪೂಜ್ಯಭಾವಂ. ನಲಿದು ಕೈಮುಗಿದು ಕೇಳಿದೆನ್—'ನೀನಾರ್ ಮಹಾತ್ಮಾ'?" ಎಂದು. "ನಾನಿನ್ನ ಪರಮಾತ್ಮ" ಎಂಬುದು ಆ ನೀಲದೇಹಿಯ ಉತ್ತರ. ವಿಕಟಾಟ್ಟಹಾಸದಿಂದ ನಗುತ್ತಾ ಈ ನೀಲದೇಹಿ ಏಕಲವ್ಯನ ಕೊರಳನ್ನು ಕೇಳಿದನಂತೆ! "ಕೊಳ್ ಎನ್ನ ಸರ್ವಸ್ವಮಂ" ಎಂದು ಇವನು ಅವನ ಎದೆಯನ್ನು ತಬ್ಬಿಕೊಂಡನಂತೆ! ಹೀಗೆ ಪ್ರಾಣವನ್ನೇ ಬಲಿಯಾಗಿ ಕೊಡಲು ಸಿದ್ಧನಾದವನು ಒಂದು ಬೆರಳನ್ನು ಕೊಡಲಾರನೆ?" "ಕೊಳ್ ದಕ್ಷಿಣೆಯನ್ ಇದನ್: ಗೆಲ್ಗೆ ಧರ್ಮಂ! ಗೆಲ್ಗೆ ದೈವೇಚ್ಛೆ" ಎಂದು ಹೇಳಿ, ಹೆಬ್ಬೆರಳನ್ನು ಹಾಸುಬಂಡೆಯ ಮೇಲಿಟ್ಟು ಎಡ ಗೈಯ ಬಾಣದಿಂದ ಅದನ್ನು ಕತ್ತರಿಸಿಕೊಡುತ್ತಾನೆ.

ಏಕಲವ್ಯನು ಕಂಡ ಕನಸು ನನಸಾದಂತಾಯಿತು. ಆ ದಿವ್ಯಚೇತನನು ಕಂಡ ಕನಸು ನನಸಾಗದೆ ಹೇಗೆ ಹೋದೀತು? ಈ ಕನಸಿನಲ್ಲಿ ಕಾಣಬರುವ ಪ್ರತಿಮೆ ಎಂತಹ ಚೇತೋಮಯವಾಗಿದೆ! ಚೇತೋಹಾರಿಯಾಗಿದೆ. ತಲೆಯ ನವಿಲೂ ಸರ್ಪ ಬಾಹುಗಳೂ ನೀಲದೇಹವೂ ಜಗತ್ಕಾರಣನಾದ ಸಚ್ಚಿದಾನಂದನನ್ನು (ಶ್ರೀ ಕೃಷ್ಣ) ಪ್ರತಿಮಿಸುತ್ತಿವೆ. ಆ ದೇವಕಾರ್ಯಕ್ಕೆ ಏಕಲವ್ಯನು ಅರ್ಪಿತನಾಗಿ ಹೋಗಿದ್ದಾನೆ. ಲೌಕಿಕದೃಷ್ಟಿಯಲ್ಲಿ ಆತನು ಸಾಧಿಸಿದ ವಿದ್ಯೆಯೆಲ್ಲವೂ ವ್ಯರ್ಥವಾದಂತೆಯೇ. ಆದರೆ ಪೂರ್ಣದೃಷ್ಟಿಯುಳ್ಳ ಏಕಲವ್ಯ ಅದನ್ನು ಸಾರ್ಥಕವೆಂದು ಹೇಳುತ್ತಾನೆ—

ಕಲಿಕರದ ಕಾರ್ಮುಕದ ಹೆದೆಯೇರಿ
ಸಮರದೊಳ್ ಕಾದುವಾ ಕರ್ಮಮಯ ಕೈದುವೊಲೆ
ಬತ್ತಳಿಕೆಯಂ ಸೇರಿ, ಬೆನ್ನೇರಿ, ತಾಳ್ಮೆಯಿಂ
ತನ್ನ ಸೂಳಂ ಕಾಯ್ವ ಕೈದುವ ಅಕರ್ಮಮುಂ
ಸಾರ್ಥಕಂ ಮೇಣ್ ಕೃತಕೃತ್ಯಮಕ್ಕುಂ;

ಅದರಂತೆಯೇ ದೇವಯಜ್ಞದಲ್ಲಿ ತೊಡಗಿರುವ ತಾನು ಇನ್ನು ಮುಂದೆ ಕಾರ್ಯರಂಗದಿಂದ ವಿರಮಿಸಬೇಕಾಗಬಹುದು. ಆದರೇನು?

ಕಾಯ್ದುದುಂ ಕರ್ಮನೆಯೆ ಭಗವನ್ನಿಷಂಗಮಂ
ಸೇರ್ದ ಬಳಿಕಂ ! ಬತ್ತಳಿಕೆಯಂ ಸೇರಿ, ಶಿವನ
ಬೆನ್ನೇರ್ವುದಲ್ತೆ ಮುಖ್ಯಂ !

ಎಂಬುದು ಆ ಪರಮಜ್ಞಾನಿಯ ಸಂತೃಪ್ತ ವಚನರೂಪದ ಸಮಾಧಾನ.

ಹೆಬ್ಬೆರಳನ್ನು ಕತ್ತರಿಸಿಕೊಟ್ಟು, ನೆತ್ತರು ಸೋರುತ್ತಿರುವ ಗಾಯಕ್ಕೆ ಮದ್ದಿಕ್ಕಲೆಂದು ಏಕಲವ್ಯ ಅತ್ತ ಹೋಗುತ್ತಲೇ, ಇತ್ತ ದ್ರೋಣನು ಮಡುಗಟ್ಟಿ ನಿಂತಿದ್ದ ರಕ್ತದ ಮಧ್ಯದಲ್ಲಿ ಬೆರಳನ್ನು ನೋಡಲೆಂದು ಬಾಗಿದಾಗ, ತನ್ನ ಮುಖ ಅತ್ಯಂತ ವಿಕೃತವಾಗಿದ್ದಂತೆ ಕಾಣುತ್ತದೆ. ಅದನ್ನು ಕಂಡು ಬೆರಗಾಗುತ್ತಿರುವಷ್ಟರಲ್ಲಿ "ಖಡ್ಗಮುಷ್ಟಿಯ ಭೀಮಹಸ್ತವೊಂದೊಯ್ಯನೆರಗಿ ಕಳ್ತರಿಸಿತಾ ತನ್ನಪಡಿನೆಳಲ ಕೊರಳಂ.ಕೆಡೆದುರುಳ್ದುದು ಮಂಡೆ." ರುಂಡವಿಲ್ಲದ ಆ ಮುಂಡವನ್ನು ಕಾಣುತ್ತಲೆ ಆತನಿಗೆ ಏಕವಲ್ಯನ ಬೆರಳ್ ಗೆ ತನ್ನ ಕೊರಳ್ ಆಹುತಿಯಾಗುವುದೆಂಬ ಭವಿಷ್ಯದ್ಘಟನೆ ಅರ್ಥವಾದಂತಾಯಿತು.ಇದನ್ನು ಶಿಷ್ಯನಿಗೆ ಸೂಚಿಸುತ್ತಾ "ಅಂತೆ ಕರ್ಮದ ಪಾಂಗು: ಮರಿಗೆ ಮರಿ, ಮರಿಗೆ ಮರಿ: ಬೆರಳ್ ಗೆ ಕೊರಳ್" ಎಂದು ಹೇಳಿ, ಅವನನ್ನು ಹರಸಿ ದ್ರೋಣನು ಅತ್ತ ಹೋಗುತ್ತಲೇ ಇತ್ತ ಏಕವಲ್ಯನ ತಾಯಿ ಆಗಮಿಸುತ್ತಾಳೆ. ನಡೆದ ಅನರ್ಥವು ಗೋಚರಿಸುತ್ತಲೇ ಆಕೆಯ ಹೆತ್ತ ಹೊಟ್ಟೆ ಉರಿದುಹೋಗುತ್ತದೆ. ಸಂಕಟದಿಂದ ಉಕ್ಕಿದ ಕೋಪದಿಂದ ಆಕೆ

ಆರ್ಗೊ ಬಲಿ ನನ್ನ ಕಂದನ ಬೆರಳ್
ಬಲಿಯಕ್ಕೆ ಆ ಪಾಪಿಯ ಕೊರಳ್

ಎಂದು ಶಪಿಸುತ್ತಾಳೆ. ದ್ರೋಣರ ಕರ್ಮಕ್ಕೆ ಈ ಮಾತೃಶಾಪದ ವಿಧಿ ನೆರವಾಗಿ ನಿಂತಿತು. ಕರ್ಮವು ಮರಿಗೆ ಮರಿ ಇಕ್ಕುತ್ತಾ ಹೋಗಲು ತಕ್ಕ ಪ್ರಸೂತಿಕಾಗೃಹ ಭಾರತಯುದ್ಧದಲ್ಲಿ ಸಿದ್ಧವಾಯಿತು. ದ್ರುಪದನು ಮಾಡಿದ ಅವಹೇಳನಕ್ಕೆ ದ್ರೋಣರ ಅಹಂಕಾರರೂಪದ ಕರ್ಮ ದ್ರುಪದನ ಅಪಮಾನವನ್ನೆಸಗಿ, ಪ್ರತಿಫಲರೂಪವಾಗಿ ನಚ್ಚಿನ ಶಿಷ್ಯನ ಹೆಬ್ಬೆರಳನ್ನು ತಿಂದಿತು. ಈ ಬೆರಳಿಗೆ ಬದಲಾಗಿ ಅವರ ಕೊರಳನ್ನು ಕತ್ತರಿಸಿದ ಧೃಷ್ಟದ್ಯುಮ್ನ; ಕೊರಳಿಗೆ ಕೊರಳನ್ನು ಅವನು ತೆರಬೇಕಾಯಿತು; ಅಶ್ವತ್ಥಾಮನು ಅವನ ಕತ್ತನ್ನು ಕತ್ತರಿಸಿದ. ಇದಕ್ಕಾಗಿ ಅಶ್ವತ್ಥಾಮ ಶ್ರೀ ಕೃಷ್ಣನ ಶಾಪಕ್ಕೆ ಒಳಗಾಗಿ ಸಹಸ್ರಾರು ವರ್ಷಗಳು ಕಾಡುಮೇಡನ್ನು ಅಲೆಯಬೇಕಾಯಿತು. ಶ್ರೀ ಕೃಷ್ಣನ ಮೃತ್ಯುವೂ ಈ ಕರ್ಮ ಪರಂಪರೆಯ ಮರಿಯೋ ಏನೋ !

ಮಾತೃಶಾಪದ ಭೀಷಣತೆಯನ್ನು ಅರಿತ ಏಕಲವ್ಯ "ಆಗಬಾರದುದಾಯ್ತೆ ?" ಎಂದು ಸಂತಾಪಪಡುತ್ತಾ ತಾಯಿಯನ್ನು ಬೀಡಿಗೆ ಹಿಂದಿರುಗಿಸುತ್ತಾನೆ. ಗುರು

ಸ್ತವನದೊಡನೆ ಆರಂಭವಾದ ನಾಟಕವು ಗುರುಸ್ತವನದೊಡನೆ ಮುಕ್ತಾಯಗೊಳ್ಳುತ್ತದೆ.

ಕುವೆಂಪುರವರ ಪ್ರತಿಭೆ ಕಲ್ಪನಾಶಕ್ತಿಗಳೂ, ಅದರಿಂದ ನೈವಡೆದು ಬಂದಿರುವ ಸಂವಿಧಾನಕೌಶಲ ಪಾತ್ರ ಸೃಷ್ಟಿಗಳೂ ಕಾವ್ಯದ ಉದ್ದಕ್ಕೂ ಕಾಣಬರುವ ಅರ್ಥಪೂರ್ಣವಾದ, ಧ್ವನಿಪೂರ್ಣವಾದ ರಸಮಯ ಸಂಭಾಷಣೆಗಳೂ ಅಲ್ಲಲ್ಲಿ ಒಡಮೂಡಿರುವ ದಿವ್ಯ ಪ್ರತಿಮೆಗಳೂ, ಎಲ್ಲಕ್ಕೂ ಹೆಚ್ಚಾಗಿ ಅವರು ಕಾಣುತ್ತಿರುವ ನೂತನ ದರ್ಶನವೂ ಈ ದೃಶ್ಯಕಾವ್ಯವನ್ನು ಅದ್ವಿತೀಯವನ್ನಾಗಿ ಮಾಡಿವೆ.



# ರಕ್ತಾಕ್ಷಿ

ಎಸ್. ಎನ್. ಶಾಂತವೀರಪ್ಪ

(ಪಾತ್ರಪರಿಚಯ)

ರಕ್ತಾಕ್ಷಿಯಲ್ಲಿ ಬರುವ ಪಾತ್ರಗಳ ವಿಚಾರದಲ್ಲಿ ನಾಲ್ಕು ಮಾತು. ಒಂದೆರಡು ಆದರ್ಶ ಪಾತ್ರಗಳಿವೆ. ಉಳಿದವೆಲ್ಲಾ ಒಳ್ಳೆಯುದು ಮತ್ತು ಕೆಟ್ಟದ್ದನ್ನು ಒಳಗೊಂಡಿರುವುವು. ಆದರ್ಶಪಾತ್ರಗಳಲ್ಲಿ ಮೊದಲನೆಯ ಸ್ಥಾನವನ್ನು ಸೋಮಯ್ಯನಿಗೆ ಕೊಡಬಹುದು. ಹೀಗೆಂದ ಮಾತ್ರಕ್ಕೆ ಸೋಮಯ್ಯನಾಯಕನ ಸ್ಥಾನವನ್ನು ಆಕ್ರಮಿಸುವನೆಂದಲ್ಲ. ಸೋಮಯ್ಯ ಆದರ್ಶ ಸ್ನೇಹಿತ, ಆದರ್ಶಜೀವಿ. ಅವನಲ್ಲಿ ಮೂಢ ನಂಬಿಕೆಯಿಲ್ಲ. ಭೂತಪ್ರೇತಗಳಲ್ಲಿ ವಿಶ್ವಾಸವಿಲ್ಲ. ಭೂತವನ್ನು ನೋಡಿದೆನೆಂದು ಕೆಂಪಣ್ಣ ಹೇಳಿದರೂ ಅವನು ನಂಬುವುದಿಲ್ಲ. ಆದರೆ ತಾನೇ ಸ್ವತಃ ನೋಡಿದಮೇಲೆ ಹೆದರುತ್ತಾನೆ. ಅಲ್ಲದೆ ನಾಯಕ ತನ್ನ ತಂದೆಯ ಪ್ರೇತವನ್ನು ಹಿಂಬಾಲಿಸಿ ಹೊರಡಲು ಸ್ನೇಹಿತನ ಜೀವಕ್ಕಾಗಿ ಹೆದರಿ ಅವನನ್ನು ಹಿಡಿದು ಹಿಂದೆಳೆಯುತ್ತಾನೆ. ಹುಟ್ಟುವುದು ಮತ್ತು ಜೀವಿಸುವುದು ಇತರರ ಸೇವೆಗಾಗಿ ಎಂಬುದನ್ನು ಸಾಕ್ಷಾತ್ ನಡೆದು ತೋರಿಸಿದ ವ್ಯಕ್ತಿ ಹೊನ್ನಯ್ಯ. ಅವನಿಗೆ ತನ್ನ ಸ್ವಂತ ಆಸೆ ಆಕಾಂಕ್ಷೆಗಳಿಲ್ಲ. ಮನುಷ್ಯನ ಜೀವನ ಪರರ ಉಪಯೋಗಕ್ಕಾಗಿ ಎಂಬಂತೆ ನುಡಿದು, ಅದರಂತೆಯೇ ನಡೆದು ಆದರ್ಶವ್ಯಕ್ತಿಯಾಗುತ್ತಾನೆ. ಅವನಲ್ಲಿ ದ್ವೇಷ ಅಸೂಯೆಗಳಿಲ್ಲ, ಕಾಮವಾಸನೆ ಇಲ್ಲ. ಇಂಥ ವ್ಯಕ್ತಿಗಳು ವಿರಳ. ಹೊನ್ನಯ್ಯನ ಪಾತ್ರ ನಿಜವಾಗಿಯೂ ಜೀವಂತವಾದುದೇ ಮತ್ತು ಸಹಜವಾದುದೇ ಎಂಬ ಸಂದೇಹ ಬರುತ್ತದೆ. ಅವನಿಗೆ ಶತ್ರುಗಳೇ ಇಲ್ಲ. ಅವನು ಅತಿ ವಾಚಾಳಿಯಲ್ಲ. ಕೆಲಸದಲ್ಲಿ, ಇತರರ ಸೇವೆಯಲ್ಲಿ ನಂಬಿಕೆಯುಳ್ಳವನು ; ಧೈರ್ಯವಂತ ಮತ್ತು ಎದೆಗಾರ. ತಾನು ಸಾಯುವ ವೇಳೆಯಲ್ಲಿಯೂ ತನ್ನ ಸ್ನೇಹಿತ ಬಸವಯ್ಯ ಮತ್ತು ತನ್ನ ಸಹೋದರಿಯಂತಿದ್ದ ರುದ್ರಾಂಬೆಯವರಿಗೊದಗಿದ ದುರ್ಗತಿಗಾಗಿ ಸಂಕಟಪಡುತ್ತಾನೆ. ಇಡೀ ಕಾವ್ಯದಲ್ಲಿ ಬರುವ ಪಾತ್ರಗಳಲ್ಲೆಲ್ಲಾ ದೇಶಪ್ರೇಮದ ವಿಚಾರವನ್ನೆತ್ತುವವನು ಇವನೊಬ್ಬನೆ. ಬಸವಯ್ಯ ಲಿಂಗಣ್ಣರು, ಚಲುವಾಂಬೆ ನಿಂಬಯ್ಯರ ಮೇಲೆ ಸೇಡು ತೀರಿಸಿಕೊಳ್ಳಲು ಹೈದರನ ಸಹಾಯವನ್ನು ಪಡೆಯಲು ಹೊರಟಾಗ ಇವನೂ ಹೊರಡುತ್ತಾನೆ. ಆದರೆ ಬಸವಯ್ಯನ ಶವಸಂಸ್ಕಾರ ಮಾಡುವ ನೆಪದಿಂದ, ದೇಶಪ್ರೇಮಕ್ಕಾಗಿ ಸ್ನೇಹಿತನನ್ನು ಕೊಂದೆನೆಂದು ಹೇಳುತ್ತಾನೆ. ಈ ಯೋಚನೆ ಕೂಡ ಇತರರು ಯಾರಲ್ಲಿಯೂ ಬರದೆ ಇವನಲ್ಲಿಯೇ ಬರುವುದು ಒಂದು ಹೆಚ್ಚುಗಾರಿಕೆ. ಈ ಸಂದರ್ಭದಲ್ಲಿ ಷೇಕ್ಸ್‌ಪಿಯರ್ ಕವಿಯ ಜೂಲಿಯಸ್ ಸೀಸರ್ ನಾಟಕದಲ್ಲಿನ ಆದರ್ಶಪಾತ್ರವಾದ ಬ್ರೂಟಸ್‌ನ ಬಾಯಲ್ಲಿ ಬರುವ " ನಾನು ಸೀಸರನನ್ನು ಕಡಿಮೆ ಪ್ರೀತಿಸುವು

ದಿಲ್ಲ: ಆದರೆ ರೋಮನ್ನು ಹೆಚ್ಚು ಪ್ರೀತಿಸುತ್ತೇನೆ" ಎಂಬ ಮಾತು ಜ್ಞಾಪಕಕ್ಕೆ ಬರುತ್ತದೆ.

ಶಿವಯ್ಯನಿಂದ ಕೊಲೆಯಾದ ಸ್ನೇಹಿತನಿಗೆ ಅಂತ್ಯ ಸಂಸ್ಕಾರವನ್ನು ಸಲ್ಲಿಸಲು ಹೊನ್ನಯ್ಯ ಶತ್ರುಗಳ ಮಧ್ಯಕ್ಕೆ ಒಂಟಿಯಾಗಿ ಬಂದು, ಒಂದು ಕಡೆ ನಿಂಬಯ್ಯನ ಅನುಮಾನಕ್ಕೆ ಎಡೆಯಾಗಿ, ಮತ್ತೊಂದು ಕಡೆ ಕೊಲೆಗೇಡಿ ಎನ್ನಿಸಿಕೊಂಡು, ನಿಜವರಿಯದ ರುದ್ರಾಂಬೆಯ ಕರಾರಿಗೆ ಗುರಿಯಾಗುತ್ತಾನೆ. ಅವನು ನಂಬಿಕಾರ್ಹನಾದ, ಸುಶೀಲವಂತನಾದ ಸ್ನೇಹಿತ. ಇಲ್ಲಿ ಒಂದು ಒಡಕಿನ ಮಾತು–ಸತ್ತ ಸ್ನೇಹಿತನ ಎದೆಗೆ ಕತ್ತಿಯನ್ನು ಇರಿಯುವಷ್ಟು ಗಟ್ಟಿಮನಸ್ಸುಳ್ಳ ಅವನು ಶವವನ್ನು ಬಿಟ್ಟು ಲಿಂಗಣ್ಣನೊಡನೆ ಏಕೆ ಹೋಗಬಾರದಾಗಿತ್ತು, ಶಿವಯ್ಯನ ಕೃತ್ರಿಮದೊಡನೆ ಹೋರಾಡಲು ಲಿಂಗಣ್ಣನೊಬ್ಬನನ್ನೇ ಏಕೆ ಬಿಡಬೇಕಾಗಿತ್ತು ಎನಿಸುತ್ತದೆ. ಬಹುಶಃ ಸ್ನೇಹಿತನ ಶವ ದಿಕ್ಕಿಲ್ಲದವನ ಶವದಂತೆ ಕಮರಿಯಲ್ಲಿ ಬಿದ್ದು ಕೊಳೆಯುವುದು ಅವನ ಮನಸ್ಸಿಗೆ ನೋವನ್ನುಂಟುಮಾಡಿರಬಹುದು.

ನಾಟಕದ ಹೆಸರು ರಕ್ತಾಕ್ಷಿ ಎಂದಿದ್ದರೂ ಅದರ ನಾಯಕ ಬಸವಯ್ಯ. ಅವನು ಸ್ವಪ್ನಜೀವಿ. ಅದು ಅವನಿಗೆ ಗೊತ್ತು. ಅದಕ್ಕಾಗಿ ಇತರರು ತನ್ನನ್ನು ಅಸಡ್ಡೆಯಿಂದ ಕಾಣುತ್ತಿರುವರೆಂದು ಅವನು ತಿಳಿದಿರುತ್ತಾನೆ. ಹ್ಯಾಂಲೆಟ್‌ನಂತೆ ಅನಿಶ್ಚಯತೆಯೇ ಅವನ ಸೋಲಿಗೆ ಕಾರಣವಲ್ಲ. ಅವನು ಸಂದರ್ಭಗಳ ಸೆಳೆತಕ್ಕೆ ಸಿಕ್ಕಿ ಮಡಿಯುತ್ತಾನೆ. ಅವನು ಕೃತ್ರಿಮವನ್ನರಿಯದವನು, ಶಿವಯ್ಯನಲ್ಲಿಯೂ ಮೋಸವಿದೆ ಎಂದು ನಂಬುವುದಿಲ್ಲ. ಜನರಿಗೆ ಆತನನ್ನು ಕಂಡರೆ ತುಂಬ ಪ್ರೀತಿ, ಗೌರವ. ಅವನು ಹೊನ್ನಯ್ಯನ ನೆಚ್ಚಿನ ಸ್ನೇಹಿತ, ರುದ್ರಾಂಬೆಯ ಪ್ರೀತಿಗೆ ಪಾತ್ರನಾದವನು. ಬಸವಯ್ಯನಿಗೆ ತನ್ನ ತಂದೆಯಲ್ಲಿ ಅಮಿತ ಪ್ರೀತಿ. ಅವನ ಸಾವಿನಲ್ಲಿ ಏನೋ ಕೃತ್ರಿಮ ನಡೆದಿರಬೇಕೆಂದು ಮೊದಲಿನಿಂದಲೂ ಅನುಮಾನಿಸುತ್ತಾನೆ. ಚಲುವಾಂಬೆಯ ಅಶ್ಲೀಲಕ್ಕಾಗಿ ಜಿಗುಪ್ಸೆಪಟ್ಟುಕೊಳ್ಳುತ್ತಾನೆ. ದೈಹಿಕ ಮತ್ತು ಮಾನಸಿಕ ಶೀಲದಲ್ಲಿ ನಂಬಿಕೆಯುಳ್ಳ ಅವನಿಗೆ ತನ್ನ ಚಿಕ್ಕಮ್ಮನ ಪ್ರೇಮವ್ಯಾಪಾರ ಅಸಹ್ಯವಾಗಿ ತೋರುತ್ತದೆ. ಅವನು ಸುಂದರ ಪುರುಷ, ಅಪಾರ ಕಾಯಶಕ್ತಿಯುಳ್ಳವ-ಅಲ್ಲವಾಗಿದ್ದರೆ ಕಮರಿಯಲ್ಲಿ ಬಿದ್ದ ರಭಸಕ್ಕೆ ಪ್ರಾಣಹಾರಿ ಹೋಗಬೇಕಾಗಿತ್ತು-ಗಂಭೀರ ಸ್ವಭಾವಿ, ಆದರ್ಶರಾಜನಾಗಲು ಯೋಗ್ಯತೆಯುಳ್ಳವ. ಈ ಕಹಿಜೀವನದ ಅನಂತ ಸಮಸ್ಯೆಗಳನ್ನು ನೋಡಿ ಬೆದರುತ್ತಾನೆ. ತನ್ನಲ್ಲಿರುವಂತೆ ಪ್ರಪಂಚದಲ್ಲೆಲ್ಲಾ ಏಕೆ ನೀತಿ ನಿಯಮವಿಲ್ಲ ಎಂಬ ಹಿರಿಯ ಪ್ರಶ್ನೆ ಅವನನ್ನು ಕಾಡುತ್ತದೆ. ಶ್ರೇಷ್ಠ ಕವಿಯಲ್ಲಿರಬೇಕಾದ ಉತ್ತಮಗುಣಗಳು ಅವನಲ್ಲಿವೆ. ಅವನು ಪ್ರಕೃತಿ ಸೌಂದರ್ಯೋಪಾಸಕ. ಹಿರಿಯ ನೀತಿ ನಿಯಮಗಳಲ್ಲಿ ಅಚಲಭಕ್ತಿಯುಳ್ಳವ, ಆದರ್ಶ ಮಗ, ಆದರ್ಶ ಸ್ನೇಹಿತ, ಆದರ್ಶ ಪ್ರಣಯಿ. ಅಂಥವರಿಗೆ ಐಹಿಕ ಸೋಲು ಖಂಡಿತ. ಆ ಸೋಲಿನಲ್ಲಿಯೇ ಕಾವ್ಯದ ದುರಂತವಸ್ತು ಇರುವುದು. ಅರಳಿ ಲೋಕಕ್ಕೆ ಬೆಳಕು ಮತ್ತು ಸೌರಭವನ್ನು ನೀಡಲಿರುವ ಮೊಗ್ಗೊಂದು ರಕ್ಕಸ ಹಿಡಿತಕ್ಕೆ

ಸಿಕ್ಕಿ ಅಪ್ಪಚ್ಚಿಯಾದಂತೆ ಬಸವಯ್ಯನ ಜೀವನ ಘೋರಾರಣ್ಯದ ಪ್ರಪಾತದಲ್ಲಿ ಕೊನೆಗಾಣುತ್ತದೆ. ಅವನಿಗೆ ತನ್ನ ವಂಶದ ಪರಿಶುದ್ಧತೆಯಲ್ಲಿ ನಂಬಿಕೆ ಮತ್ತು ಆಸಕ್ತಿ ಹೆಚ್ಚು. ಆ ರತ್ನ ತನ್ನ ಚಿಕ್ಕಮ್ಮನ ನಡತೆಯಿಂದ ಮಾಸಿಹೋದುದಕ್ಕಾಗಿ ಆಕೆಯ ಮತ್ತು ನಿಂಬಯ್ಯನ ಮೇಲೆ ಸೇಡುತೀರಿಸಿಕೊಳ್ಳಲು ಬಯಸುತ್ತಾನೆ. ಪರರಾಜನನ್ನು ಕರೆಯಿಸಿ ಬಿದನೂರನ್ನು ಆಕ್ರಮಣಕ್ಕೀಡುಮಾಡಲು ಸಮ್ಮತಿಸುತ್ತಾನೆ.

ಬಸವಯ್ಯನಿಗೆ ಕಾಮುಕ ಜೀವನದಲ್ಲಿ ನಂಬಿಕೆಯಿಲ್ಲದಿದ್ದರೂ, ರುದ್ರಾಂಬೆಯ ಮೇಲಿನ ಅವನ ಪ್ರೀತಿ ಕೆಲ ಸಮಯಗಳಲ್ಲಿ ಕಾಮುಕವಾಗಿ ತೋರುತ್ತದೆ. ಹೊನ್ನಯ್ಯ ಅವಳ ಮನಸ್ಸನ್ನು ತಿರುಗಿಸಿ ತನ್ನ ವಶಮಾಡಿಕೊಂಡನೆಂದು ಶಿವಯ್ಯ ಹೇಳಿದ್ದನ್ನು ಮೊದಲು ನಂಬದಿದ್ದರೂ, ಅದು ನಿಜವಾದರೆ ಅವನನ್ನು ಶಿಕ್ಷೆಗೆ ಗುರಿಮಾಡುವೆನೆಂದೆನ್ನುತ್ತಾನೆ. ಅವನು ರುದ್ರಾಂಬೆಯನ್ನು ಅಚಲ ಮನಸ್ಸಿನಿಂದ ಪ್ರೀತಿಸುತ್ತಿದ್ದುದೇನೊ ನಿಜ. ಆದರೆ ಅವಳಿಗೆ ಪ್ರೀತಿಸ್ವಾತಂತ್ರ್ಯವನ್ನು ಎಂದಿಗೂ ಕೊಡೆನೆಂಬುದು ಅಷ್ಟು ಸಂಸ್ಕಾರಿಕವಲ್ಲ. ಅಲ್ಲದೆ ಅವನು ಕೊನೆಯವರೆಗೂ ಹೊಡೆದಾಡುವುದು ತನ್ನ ತಂದೆಯ ಪ್ರೇತದ ಸೇಡಿನ ದಾಹವನ್ನು ಇಂಗಿಸುವುದಕ್ಕಾಗಿ ಹೊರತು, ಅನಾಯಕವಾಗುತ್ತಿರುವ ರಾಜ್ಯವನ್ನು ಸರಿಪಡಿಸುವುದಕ್ಕಾಗಿಯಲ್ಲ. ಸಾಯುವಾಗ ಸಾಮಾನ್ಯವಾಗಿ ಹಿರಿಯ ವ್ಯಕ್ತಿಗಳು ದ್ವೇಷವನ್ನೆಲ್ಲಾ ಮರೆತು ತಮಗೆ ಕೆಡಕು ಮಾಡಿದವರಿಗೂ ಆಶೀರ್ವಾದ ನೀಡುವ ಮನಸ್ಸನ್ನು ತೋರಿಸುತ್ತವೆ, ಆದರೆ ಬಸವಯ್ಯನ ಕಡೆಯ ಮಾತುಗಳು ಇವು, "ನನ್ನ ತಂದೆಯನ್ನು ಕೊಂದ ಪಾಪಿಗಳಿಗೆತಗುಲುವ ಪ್ರಾಯಶ್ಚಿತ್ತವನೆ ಮಾಡುವಿರಾ ?" ಈ ಕಾರಣದಿಂದಲೇ ಹೊನ್ನಯ್ಯನಿಗೆ ಆದರ್ಶ ಪುರುಷರ ಪಂಕ್ತಿಯಲ್ಲಿ ಪ್ರಥಮಸ್ಥಾನ ಕೊಟ್ಟದ್ದು. ಅವನ ಕೊನೆಯ ಮಾತುಗಳಾದರೂ ಇವು "ನಾನು ಸಂತೋಷದಲ್ಲಿ ಸಾಯುವೆನು—ತುದಿಗೆಲ್ಲ ಸೊಗವಹುದು—ನೂರು ಜನ್ಮದ ಬೇವು ನೂರು ಜನ್ಮಕೆ ಬೆಲ್ಲ! ನೂರು ನಿಟ್ಟುಸಿರುಗಳು ಸೇರಿದರೆ ಒಂದು ನಗೆ ಹೊಮ್ಮುವುದು! ನೆಚ್ಚಿರಲಿ! ನೆಚ್ಚಿರಲಿ! ನೆಚ್ಚಿರಲಿ!" ದುಃಖದಿಂದ ಸುಖ ದುಃಖದಲ್ಲಿ ಶಾಂತಿಯಿಂದಿರಬೇಕು, ನಗೆಮೊಗ ತೋರಬೇಕು, ಇತರರಿಗೆ ಸಂದೇಶ ಕೊಡಬೇಕು, ಇದು ಕವಿಯಿಂದ, ಆದರ್ಶ ಪುರುಷನಿಂದ ಮಾತ್ರ ಸಾಧ್ಯ.

ಲಿಂಗಣ್ಣ ಬಸಪ್ಪನಾಯಕರ ಕಾಲದಿಂದಲೂ ಬಂದ ಮಂತ್ರಿ. ಹಳಬ ಮತ್ತು ಎಲ್ಲರ ಗೌರವಕ್ಕೂ ಪಾತ್ರನಾದವನು. ಯಾರೊಬ್ಬರೂ ಅವನ ವಿಷಯದಲ್ಲಿ ಕೆಟ್ಟುದ್ದನ್ನು ಹೇಳುತ್ತಿರಲಿಲ್ಲ. ಅವನು ಶಕ್ತ, ಸ್ವಾಮಿಭಕ್ತ ಮತ್ತು ರಾಜ್ಯದ ಏಳಿಗೆಯಲ್ಲಿ ನಿರಂತರವೂ ಆಸಕ್ತಿಯುಳ್ಳವ. ತನ್ನ ದೊರೆ ಮತ್ತು ರಾಜ್ಯದ ಕ್ಷೇಮಚಿಂತನೆ ಅವನಿಗೆ ಅತಿ ಹೆಚ್ಚು. ತನ್ನ ಪ್ರೀತಿಯ ಮಗಳಾದ ರುದ್ರಾಂಬೆ ಮತ್ತು ಬಸವಯ್ಯನ ಮದುವೆಗೆ ಅವನು ಒಪ್ಪಿದುದು ರಾಜ್ಯಾಭಿಲಾಷೆಯಿಂದಲ್ಲ, ಬಸವಯ್ಯನ ಗುಣಾತಿಶಯಗಳಿಗೆ

ಪಾರುಹೋಗಿ. ಲಿಂಗಣ್ಣನಿಗೆ ಛಲವಿದೆ, ದರ್ಪವಿದೆ ಆತ್ಮಬಲವಿದೆ, ಮೊದಮೊದಲು ಬಸವಯ್ಯನ ಅನುಮಾನ ಅವನಿಗೆ ಅರ್ಥವಾಗುವುದಿಲ್ಲ. ಒಂದು ಬಾರಿ ನಿಜಾಂಶ ತಿಳಿದನಂತರ ದುಷ್ಟ ನಿಗ್ರಹದಲ್ಲಿ ನಿರತನಾಗುತ್ತಾನೆ, ಚಲುವಾಂಬೆ ನಿಂಬಯ್ಯರಿಗೆ ಲಿಂಗಣ್ಣನೆಂದರೆ ಸಿಡಿಲ ಸುಳಿಯಂತೆ, ಲಿಂಗಣ್ಣ ಕೊನೆಯವರೆಗೂ ಹಠ ಸಾಧಿಸುತ್ತಾನೆ. ಅಪರಾಧಿಗಳನ್ನು ಶಿಕ್ಷಿಸುವ ಸಲುವಾಗಿ ಹೆಣಗುತ್ತಾನೆ. ಆದರೆ ಅವನ ಬಯಕೆಯ ಕಲಶಗಳು ಒಂದೊಂದಾಗಿ ಕುಸಿದು ಬೀಳುತ್ತವೆ. ಉತ್ತಮರಾಜನಾಗಲಿದ್ದ ಬಸವಯ್ಯ ಕಳಚಿ ಬೀಳುತ್ತಾನೆ. ಅವನ ಮುದ್ದು ಮಗಳು ಇರಿದುಕೊಂಡು ಪ್ರಾಣ ಬಿಡುತ್ತಾಳೆ. ಸೇಡು ತೀರಿಸಿಕೊಳ್ಳಲು ಹೊರಟ ಲಿಂಗಣ್ಣನಿಗೆ ಜ್ಞಾನೋದಯವಾಗಿ ಏನೂ ಬೇಡವಾಗುತ್ತದೆ. ಒಬ್ಬ ಕವಿಯಂತೆ ಒಬ್ಬ ಯತಿಯಂತೆ, ಯಾವುದೂ ಬೇಡವೆನ್ನುತ್ತಾನೆ. ಇಹಲೋಕ ವ್ಯಾಪಾರ ಸಮಸ್ಯೆಗಳ ಹೊರೆ ಅವನನ್ನು ಅಮುಕುತ್ತದೆ. ಅವನ ದುಃಖ ಇಮ್ಮಡಿಯಾಗುತ್ತದೆ. ಅಂತೆಯೇ ಜ್ಞಾನೋದಯವಾಗುತ್ತದೆ.

ರುದ್ರಾಂಬೆ ಎಲ್ಲಾ ವಿಧದಲ್ಲಿಯೂ ಬಸವಯ್ಯನಿಗಾಗಿಯೇ ಎಂದು ಕಡೆದು ಕಳುಹಿಸಿದ ಸ್ತ್ರೀಮೂರ್ತಿ. ಆಕೆ ಅತ್ಯಂತ ಸುಂದರಿ, ಸುಗುಣಗಳ ನೆಲೆವೀಡು, ತಂದೆಗೆ ಆದರ್ಶ ಮಗಳು, ಇನಿಯನಿಗೆ ಆದರ್ಶ ಪತ್ನಿ. ಪತಿಯ ಕಷ್ಟಸುಖಗಳಲ್ಲಿ ಭಾಗಿಯಾಗುವುದು ಅರ್ಧಾಂಗಿಯಾದ ತನ್ನ ಕರ್ತವ್ಯವೆಂದು ತಿಳಿದು ಅದರಂತೆ ನಡೆಯುತ್ತಾಳೆ. ಯಾವ ಸಂದರ್ಭದಲ್ಲಿಯೂ ಬಸವಯ್ಯನಲ್ಲಿಟ್ಟಿದ್ದ ತನ್ನ ಪ್ರೀತಿಯನ್ನು ಬದಲಾಯಿಸುವುದಿಲ್ಲ. ಅತ್ತ ತನ್ನ ತಂದೆ ಮತ್ತು ಇನಿಯರು ರಾಜ್ಯ ಸುವ್ಯವಸ್ಥೆಗಾಗಿ ಶ್ರಮಿಸುತ್ತಿರುವಾಗ, ತನ್ನನ್ನು ತಾನು ಕಾಪಾಡಿಕೊಂಡು ಆ ಮೂಲಕ ಅವರಿಗೆ ಸಹಾಯಮಾಡುವ ಸಲುವಾಗಿ ನಿಜವಾದ ಹುಚ್ಚಿಯಂತೆ ನಟಿಸುತ್ತಾಳೆ. ಶಿವಯ್ಯನ ಪೈಶಾಚಿಕ ಪ್ರೇಮವನ್ನು ಅರಿತು, ಅವನನ್ನು ಪ್ರೀತಿಸುವೆನೆಂದು ನಟಿಸಿ ತನ್ನ ತಂದೆ ಮತ್ತು ಬಸವಯ್ಯನನ್ನು ಸೆರೆಯಿಂದ ಬಿಡಿಸಿ ಅವರನ್ನು ಸಾವಿನ ದವಡೆಯಿಂದ ಪಾರುಮಾಡುತ್ತಾಳೆ. ತನ್ನ ಗಂಡನಾಗುವವನನ್ನು ಕೊಂದವನು ಹೊನ್ನಯ್ಯನೇ ಎಂದು ನಂಬಿ ಅವನನ್ನು ಇರಿಯುತ್ತಾಳೆ. ಅನಂತರ ನಿಜವನ್ನು ತಿಳಿದು ಸೊರಗಿ ಬೀಳುತ್ತಾಳೆ. ನೀಚರಾದ ನಿಂಬಯ್ಯ ಚಲುವಾಂಬೆಯರ ಕೊಠಡಿಯ ಬೀಗ ಹಾಕಿ ಅವನನ್ನು ಜೀವಸಹಿತ ಸುಡುತ್ತಾಳೆ. ಕೊನೆಯಲ್ಲಿ ಶಿವಯ್ಯನನ್ನು ತನ್ನ ಕಠಾರಿಯಿಂದ ಇರಿದು ಕೊಂದು ತಾನೂ ಇರಿದುಕೊಳ್ಳುತ್ತಾಳೆ. ಹೂವಿನೊಡನೆ ಆಟವಾಡಬೇಕಾಗಿದ್ದ ಅವಳ ಕೈಗಳು, ಪ್ರೇಮದ ಬೀಡಾಗಿದ್ದ ಅವಳ ಮನಸ್ಸು ಮತ್ತು ಹೃದಯ, ಉಕ್ಕಿನ ಕಾಠಿಣ್ಯತೆಯನ್ನು ಪಡೆದು ರಕ್ತದಲ್ಲಿ ಸ್ನಾನಮಾಡುತ್ತವೆ. ಸುಕೋಮಲೆಯಾದ ಅವಳು ಭಯಂಕರವಾದ ರಕ್ತಾಕ್ಷಿಯಾಗಿ ಪರಿಣಮಿಸುತ್ತಾಳೆ.

ಶಿವಯ್ಯ ಪರಮನೀಚ. ಆದರೆ ಅವನಲ್ಲಿ ಉತ್ತಮಗುಣಗಳಿಗೆ ಎಡೆಯಿಲ್ಲದೆ

ಇರಲಿಲ್ಲ. ಅವನು ರೂಪವಂತ, ಯುವಕ, ಹಣವಂತ. ರುದ್ರಾಂಬೆಯ ಸೌಂದರ್ಯಕ್ಕೆ ಮಾರುಹೋಗಿ ಅವಳನ್ನು ಪಡೆಯಲು ಯಾವ ಹೀನ ಕೃತ್ಯವನ್ನಾದರೂ ಮಾಡಲು ಸಿದ್ಧನಾಗುತ್ತಾನೆ. ಒಳ್ಳೆಯದನ್ನಾಗಲಿ, ಕೆಟ್ಟದ್ದನ್ನಾಗಲಿ ಮಾಡುವ ಕಾರ್ಯ ನೈಪುಣ್ಯತೆ ಈತನಲ್ಲಿದೆ. ರುದ್ರಾಂಬೆ ತನಗೆ, ರಾಜ್ಯ ನಿನಗೆ ಎಂದು ಆಸೆ ತೋರಿಸಿ ಸೋಮಯ್ಯನ ಬೆಂಬಲವನ್ನು ಸಂಪಾದಿಸುತ್ತಾನೆ. ಅಂತೆಯೇ ನಿಂಬಯ್ಯ ಚಲುವಾಂಬೆಯರಿಗೂ ಒಳ್ಳೆಯವನಾಗುತ್ತಾನೆ. ಮರುಘಳಿಗೆಯಲ್ಲಿ ರುದ್ರಾಂಬೆಯಿಂದ ಪ್ರೇರಿತನಾಗಿ ಬಂದು ಪ್ರಾಣಹೋದರೂ ಚಿಂತೆಯಿಲ್ಲವೆಂದು ಮನಸ್ಸುಮಾಡಿ ಬಸವಯ್ಯ ಮತ್ತು ಲಿಂಗಣ್ಣರನ್ನು ಬಿಡಿಸಲು ಏರ್ಪಾಡು ಮಾಡುತ್ತಾನೆ. ಅವನನ್ನು ಕೊಲ್ಲಲು ಕೈಯೆತ್ತಿ, ಮನಬಾರದೆ ಕಠಾರಿಯನ್ನು ಬಿಸುಡುತ್ತಾನೆ. ಶಿವಯ್ಯ ಕಟುಕನಾಗಿದ್ದರೆ ಹಿಂದು ಮುಂದು ನೋಡದೆ ಬಸವಯ್ಯನನ್ನು ತೀರಿಸಿಬಿಡಬಹುದಾಗಿತ್ತು. ಅವನನ್ನು ಎಬ್ಬಿಸಿ ಹೊರಗೆ ಕರೆತಂದು ಶಿವಮೊಗ್ಗೆಗೆ ಪ್ರಯಾಣಮಾಡುವಾಗ ರುದ್ರಾಂಬೆಯ ವಿಚಾರದಲ್ಲಿ ಬಸವಯ್ಯನ ಮನಸ್ಸನ್ನು ತಿಳಿದುಕೊಂಡು, ಅವನಿರುವವರೆಗೂ ರುದ್ರಾಂಬೆ ತನಗೆ ಗಗನ ಕುಸುಮವೇ ಎಂಬುದನ್ನರಿತು, ಅವನನ್ನು ಕಮರಿಗೆ ನೂಕಿ ಕೊಲ್ಲಲು ಮನಸ್ಸುಮಾಡುತ್ತಾನೆ. ಎಂಥಾ ಸನ್ನಿವೇಶಕ್ಕಾದರೂ ತಕ್ಷಣ ಉಪಾಯವನ್ನು ಹುಡುಕುವ ಶಕ್ತಿ ಅವನಲ್ಲಿದೆ. ಹಾಗೆ ಯೋಚಿಸಿದ ಕೂಡಲೇ ಅದನ್ನು ಕಾರ್ಯಗತ ಮಾಡುವ ಸ್ವಭಾವ ಅವನದು. ಒಂದು ಬಾರಿ ಅವನ ಕೈ ರಕ್ತವಾದನಂತರ ಅವನ ಹೀನಕೃತ್ಯಗಳು ಒಂದರಮೇಲೊಂದು ನಡೆಯುತ್ತವೆ. ಅನ್ಯಾಯದ ರೀತಿಯೇ ಅದು, ಒಂದು ಸರಪಳಿ ಇದ್ದಹಾಗೆ, ಒಂದು ಪಾಪಕೃತ್ಯದಿಂದ ಮತ್ತೊಂದಕ್ಕೆ ನೇರವಾದ ದಾರಿ.

ಚೆಲುವಾಂಬೆ ಬಸಪ್ಪನಾಯಕನ ಎರಡನೆ ಹೆಂಡತಿ. ರೂಪವತಿ ಮತ್ತು ಯುವತಿ. ಚಿಕ್ಕಂದಿನಿಂದಲೂ ನಿಂಬಯ್ಯನನ್ನು ಪ್ರೀತಿಸುತ್ತಿದ್ದಳು. ರಾಜ ತನ್ನ ದರ್ಪದಿಂದ ಅವಳನ್ನು ಬಲಾತ್ಕಾರವಾಗಿಯೇ ವರಿಸಿರಬೇಕು. ಅವಳ ಪ್ರೇಮ ಎಂದಿಗೂ ತನ್ನ ಪತಿಯ ಕಡೆಗೆ ತಿರುಗಲಿಲ್ಲ. ತನ್ನ ಪ್ರೇಮದ ದಾರಿಯಲ್ಲಿ ಅಡ್ಡಬಂದ ಬಂಡೆಯಾದ ಬಸಪ್ಪನಾಯಕನನ್ನು ನಿಂಬಯ್ಯನ ಸಹಾಯದಿಂದ ತೆಗೆದಳು. ಮೊದಮೊದಲು ದುಷ್ಕೃತ್ಯವೆಂದರೆ ಹಿಂಜರಿಯುತ್ತಿದ್ದವಳು ಆಮೇಲೆ ತನ್ನ ಸುಖ ಮತ್ತು ಸ್ಥಿರತೆಗಾಗಿ ಯಾವ ಕೃತ್ಯವನ್ನಾದರೂ ಮಾಡಲು ಹಿಂಜರಿಯಲಿಲ್ಲ. ಗಂಡನನ್ನು ಕೊಲ್ಲಿಸಿ, ಆಮೇಲೆ ಕಪಟ ಶೋಕವನ್ನು ವ್ಯಕ್ತಪಡಿಸುತ್ತಾಳೆ. ಕ್ರೂರಕೃತ್ಯಗಳನ್ನೆಸಗಿದ್ದ ಅವಳ ಮತ್ತು ನಿಂಬಯ್ಯನ ಶರೀರಗಳು ಬೆಂಕಿಯಲ್ಲಿ ಬೆಂದುಹೋದುದು ಬಹು ಅರ್ಥಗರ್ಭಿತವಾದ ವಿಚಾರ. ಕೆಟ್ಟದ್ದನ್ನು ಹೂಳುವುದಕ್ಕಿಂತ ಸುಡುವುದೇ ಕ್ಷೇಮ.

ನಿಂಬಯ್ಯ ಶಕ್ತಿವಂತ ಮತ್ತು ರಣಗಲಿ. ಆದರೆ ಚಲುವಾಂಬೆಯ ಸೌಂದರ್ಯಕ್ಕೆ ಬೆರಗಾಗಿ ಸ್ವಾಮಿದ್ರೋಹ ಮತ್ತು ದೇಶದ್ರೋಹ ಮಾಡುತ್ತಾನೆ. ಅವನು ಚಿಕ್ಕಂದಿ

ನಿಂದಲೂ ಚಲುವಾಂಬೆಯನ್ನು ಪ್ರೀತಿಸುತ್ತಿದ್ದನು. ಅವಳೂ ಅವನ ಪ್ರೇಮಕ್ಕೆ ನೆರವಾಗಿದ್ದಳು. ಅವಳು ತನ್ನ ಕೈತಪ್ಪಿ ಹೋದಂದಿನಿಂದ ನಿಂಬಯ್ಯನ ನಡತೆ ಅಧೋಗತಿಗೆ ಇಳಿಯುತ್ತದೆ. ಈ ವಿಚಾರದಲ್ಲಿ ಶಿವಯ್ಯ ಮತ್ತು ನಿಂಬಯ್ಯರಿಗೆ ಹೋಲಿಕೆಯಿದೆ. ತಾನು ಪ್ರೀತಿಸಿದವಳನ್ನು ಪಡೆಯಲು ಇಬ್ಬರೂ ರಕ್ತವನ್ನು ಚೆಲ್ಲುತ್ತಾರೆ. ದೇಶದಲ್ಲಿ ಅಶಾಂತಿ ಮೂಡುತ್ತದೆ. ರಾಜ್ಯಸೂತ್ರ ಸಡಿಲವಾಗುತ್ತದೆ. ರಾಜ್ಯ ಹೈದರಾಲಿಯ ವಶವಾಗುತ್ತದೆ. ಅಷ್ಟಾದರೂ ನಿಂಬಯ್ಯ ಮುಂದಿಟ್ಟ ಹೆಜ್ಜೆಯನ್ನು ಹಿಂತೆಗೆಯುವುದಿಲ್ಲ. ಲೋಕದಲ್ಲಿ ಅವನಿಗೆ ಚಲುವಾಂಬೆಗಿಂತ ಮಿಗಿಲಾದ ವಸ್ತುವೇ ಇಲ್ಲ. ಅಂತೆಯೇ ಅವಳ ಸಂಗಡ ಜ್ವಾಲೆಗಳೊಡನೆ ಹೋರಾಡಿ ಮಡಿಯುತ್ತಾನೆ. ಅವನಲ್ಲಿದ್ದ ಒಂದೆರಡು ಒಳ್ಳೆಯ ಗುಣಗಳೂ ಮಾಸಿ ಕೊಳೆಯಾಗುತ್ತವೆ.



# ಕಾದಂಬರಿಯಲ್ಲಿ ಕಾದಂಬರಿಕಾರ

ಸೋ. ಕೆಂ. ರಾಮಣ್ಣ

THE progress of an artist is a continual self-sacrifice, a continual extinction of personality. Poetry is not a turning loose of emotion, but an escape from emotion; it is not the expression of personality, but an escape from personality.*

* * * *

ಕೃತಿಯಲ್ಲಿ ಕೃತಿಕಾರನ ವ್ಯಕ್ತಿತ್ವ ಇದೆಯೆ ಇಲ್ಲವೆ ಇರಬೇಕೆ ಇರಬಾರದೆ ಎಂಬ ಚರ್ಚೆ ಬಹಳ ಕಾಲದಿಂದ ನಡೆದಿದೆ. ಟಿ. ಎಸ್. ಇಲಿಯಟ್ ಮೊದಲಾದ ಅರ್ವಾಚೀನ ಸಾಹಿತ್ಯ ಮಾರ್ಗಾವಲಂಬಿಗಳು ಕೃತಿಯಲ್ಲಿ ಕರ್ತೃವಿನ ವ್ಯಕ್ತಿತ್ವವಾಗಲಿ ಅಥವಾ ಅವನ ಜೀವನಕ್ಕೆ ಸಂಬಂಧಿಸಿದ ಯಾವ ವಿಷಯವೇ ಆಗಲಿ ಪ್ರತ್ಯಕ್ಷವಾಗಿಯೊ ಅಥವಾ ಪರೋಕ್ಷವಾಗಿಯೊ ಸ್ವಲ್ಪವೂ ಇರಕೂಡದೆನ್ನುತ್ತಾರೆ. ಟಿ. ಎಸ್. ಇಲಿಯಟ್ ತನ್ನ ವಾದವನ್ನು ಕೆಳಕಂಡಂತೆ ಸಮರ್ಥಿಸುತ್ತಾನೆ.

ಕವಿ ಕೃತಿಯಲ್ಲಿ ಹೇಳುವುದು ತನಗೆ ಸಂಬಂಧಿಸಿದ ಕಥೆ ಅಥವಾ ಅನುಭವ, ಆಲೋಚನೆಗಳನ್ನಲ್ಲ. ಸಾಹಿತ್ಯ ಸೃಷ್ಟಿಗೆ ಕವಿಯ ಸ್ವಾನುಭವ, ರಸಾನುಭವ, ಸ್ಫೂರ್ತಿ ಮತ್ತು ಪ್ರತಿಭೆ ಆಧಾರವು ಪ್ರೇರಕವು ಆದರೂ ಅದರ ರಚನೆಯಲ್ಲಿ 'ತನ್ನ ತನ'ವನ್ನು ಇಲ್ಲಗೈದು ಲೋಕಕ್ಕೆಲ್ಲ ಅನ್ವಯಿಸುವ, ಓದುಗರಿಗೆಲ್ಲ ಸಮಾನವಾದ ಅನುಭವ ಮತ್ತು ಭಾವನೆಗಳಿಗೆ ಮಾತ್ರ ಅಭಿವ್ಯಕ್ತಿ ಕೊಡಬೇಕು ಕವಿ. ಕವಿಯ ಅನುಭವ ಮತ್ತು ಭಾವಗಳೇ ಕೃತಿರಚನೆಗೆ ಪ್ರೇರಕ ಆಧಾರಗಳಾಗಿದ್ದರೂ ಅದು ಅವನ ಅನುಭವಗಳನ್ನೆ ತಿಳಿಸುವುದಿಲ್ಲ. ಅವನ ಅನುಭವ ಮತ್ತು ಅವನು ನೋಡಿದ ಘಟನೆಗಳು ಅವನ ದೃಷ್ಟಿಯಿಂದ ಎಷ್ಟೇ ರಮ್ಯವಾಗಿರಲಿ, ಎಷ್ಟೇ ಮುಖ್ಯವಾಗಿರಲಿ, ಕೃತಿಯ ದೃಷ್ಟಿಯಿಂದ ಗೌಣ. ಕೃತಿಯಲ್ಲಿ ಮುಖ್ಯವಾದ ಸಂಗತಿಗಳು ಅವನಿಗೆ ಅಮುಖ್ಯವಾಗಿರಬಹುದು ಅಥವಾ ಅವನ ವ್ಯಕ್ತಿತ್ವಕ್ಕೆ ದೂರವಾಗಿರಬಹುದು. ಕವಿಯ ಜೀವನಕ್ಕೆ ಸಂಬಂಧಿಸಿದ ಕೆಲವು ವಿಶಿಷ್ಟ ಘಟನೆಗಳಿಂದ ಉಂಟಾದ ವೈಯಕ್ತಿಕ ಭಾವಗಳಿಂದ

---

* Selected Essays—T. S. Eliot, page 17 and 21.

ಕವಿ ಗಮನಾರ್ಹನಾಗುವುದಿಲ್ಲ ಅಥವಾ ಕುತೂಹಲಕಾರಿಯಾಗುವುದಿಲ್ಲ.* ಕೃತಿ ರಚನೆಯಲ್ಲಿ ಅರಿವು ಮತ್ತು ಜಾಗರೂಕತೆ ಕವಿಗೆ ಅವಶ್ಯ. ಎಲ್ಲಿ ತಾನು ಜಾಗೃತನಾಗಿರಬೇಕೋ ಅಲ್ಲಿ ಅಜಾಗರೂಕನಾಗಿಯೂ ಎಲ್ಲಿ ಅಜಾಗರೂಕನಾಗಿರಬೇಕೋ ಅಲ್ಲಿ ಜಾಗೃತನಾಗಿಯೂ ಇರುತ್ತಾನೆ ಕುಕವಿ. ಈ ಎರಡು ದೋಷಗಳೂ ಅವನನ್ನು ವೈಯಕ್ತಿಕನಾಗಿರುವಂತೆ ಮಾಡುತ್ತವೆ.† ಕಾವ್ಯ ಕೇವಲ ವೈಯಕ್ತಿಕ ಭಾವಭಿವ್ಯಕ್ತಿಯಲ್ಲ; ಅದು ಭಾವಗಳಿಂದ ವಿಮೋಚನೆ.‡ ವ್ಯಕಿತ್ವದ ಅಭಿವ್ಯಕ್ತಿಯಲ್ಲ; ವ್ಯಕ್ತಿತ್ವವಿಮೋಚನೆಯೆ ಕಾವ್ಯ. ಕಾವ್ಯಪ್ರಪಂಚದ ಭಾವ ಅವೈಯಕ್ತಿಕ. ತನ್ನತನವನ್ನು ಇಲ್ಲಗೈದು ತಾನು ರಚಿಸುವ ಕೃತಿಗೆ ಕವಿ ಪೂರ್ಣವಾಗಿ ವಶನಾಗದಿದ್ದರೆ ವ್ಯಕ್ತಿತ್ವದೂರನಾಗುವುದು ಅಸಾಧ್ಯ.

ಆಶೆ ಆಕಾಂಕ್ಷೆ, ಅಭಿರುಚಿ, ಆದರ್ಶ, ಅನುಭವ, ಮನೋಭಾವ, ಇಷ್ಟಾನಿಷ್ಟ, ಸುಖದುಃಖವೇ ಮೊದಲಾದ ಕವಿಯು ಜೀವನಕ್ಕೆ ಸಂಬಂಧಿಸಿದ ಯಾವ ವಿಷಯವೇ ಇರಲಿ ಅವನ್ನು ಬದಿಗೊತ್ತಿ ತನಗೂ ಸಹೃದಯರಿಗೂ ಸಮಾನವಾದ ಭಾವಗಳಿಗೆ ಮಾತ್ರ ಅಭಿವ್ಯಕ್ತಿ ಈಯಬೇಕು. ಹಸು ತಾನು ತಿಂದ ಆಹಾರಕ್ಕೆ ರೂಪುಗುಣ ಮೊದಲಾದುವುಗಳಿಂದ ಭಿನ್ನವಾದ ಹಾಲನ್ನು ಕೊಡುವಂತೆ ಕವಿಯು ಪ್ರತಿಭಾಮೂಷಯಿಂದ ರಸಾನುಭವಕಾರಿಯಾದ ಕಾವ್ಯ ಮಾತ್ರ ಹೊರಹೊಮ್ಮಬೇಕು. ಕವಿ ಶ್ರೇಷ್ಠನಾದಷ್ಟೂ ಸುಖದುಃಖಗಳನ್ನು ಅನುಭವಿಸುವ ಪಾತ್ರಗಳನ್ನು ಸೃಷ್ಟಿಸುವ ಅವನ ಮನಸ್ಸು ಅವುಗಳಿಂದ ಪ್ರತ್ಯೇಕವಾಗಿರುತ್ತದೆ, ವ್ಯಕ್ತಿತ್ವ ದೂರವಾಗಿರುತ್ತದೆ. ಧ್ಯಾನಜೀವಿಯೂ ವಿಶೇಷಾನುಭೂತಿಯುಳ್ಳವನೂ ಆದ ಕವಿಯು ಮಾತ್ರ ಕೃತಿಯಲ್ಲಿ ತನ್ನ ವ್ಯಕ್ತಿತ್ವದಿಂದಲೂ ವೈಯಕ್ತಿಕ ಭಾವಗಳಿಂದಲೂ ದೂರನಾಗಬಲ್ಲ.+

* * * *

---

* 'It is not in his personal emotions, the emotions provoked by particular events in his life, that the poet is in any way remarkable or interesting,— p. 20. T. S. Eliot.'

† In fact, the bad poet is usually unconscious where he ought to be conscious and conscious where he ought to be unconscious. Both errors tend to make 'personal', page 21. T. S. Eliot.

‡ Poetry is not a turning loose of emotion, but an escape from emotion, p. 21. T. S. Eliot.

\+ Only those who have personality and emotions know what it means to want to escape from these things, p. 21. T. S. Eliot.

Every man's work whether it be literature or music or pictures or architecture or anything else, is always a portrait of himself, and the more he tries to conceal himself the more clearly his character appear in spite of it*

ಪ್ರಾಚೀನ ಮಾರ್ಗಾವಲಂಬಿಯಾದ ಸ್ಯಾಮುಯಲ್ ಬಟ್ಲರನು ಸಾಹಿತ್ಯ, ಸಂಗೀತ, ಚಿತ್ರ, ಶಿಲ್ಪ ಮೊದಲಾದ ಎಲ್ಲಾ ಕಲಾಭೂಮಿಕೆಗಳಲ್ಲಿಯೂ ಕೃತಿಕಾರನ ವ್ಯಕ್ತಿತ್ವ ಮೈದೋರುತ್ತದೆ. ಕಲಾವಿದನು ತನ್ನನ್ನು ತಾನು ಎಷ್ಟೆಷ್ಟು ಇಲ್ಲಗೈಯಲು ಪ್ರಯತ್ನಿಸಿದರೂ ಅವನ ವಿಶಿಷ್ಟತೆ ಅಷ್ಟಷ್ಟು ಹೆಚ್ಚಾಗಿ ವ್ಯಕ್ತವಾಗುತ್ತದೆ ಎನ್ನುತ್ತಾನೆ.

ವಿಮರ್ಶಾತ್ಮಕ ದೃಷ್ಟಿಯಿಂದ ಪರಿಶೀಲಿಸಿದರೆ ಕೃತಿಯಲ್ಲಿ ಕವಿಯ ವ್ಯಕ್ತಿತ್ವ ಇಲ್ಲದಿರುವುದು ಅಸಾಧ್ಯ. ಜಗತ್ತಿನ ಕೃತಿಗಳನ್ನು ತೆಗೆದುಕೊಂಡರೆ ಬಹುಸಂಖ್ಯೆಯ ಕೃತಿಗಳಲ್ಲಿ ಕವಿಯ ವಿಶಿಷ್ಟತೆ ಕಂಡುಬರುತ್ತದೆ; ಅಲ್ಲದೆ ಶ್ರೇಷ್ಠ ಕೃತಿಗಳಲ್ಲೂ ಕಂಡುಬರುವುದು ಗಮನಾರ್ಹ ಸಂಗತಿ. ವ್ಯಕ್ತಿತ್ವ ಇರಬಾರದೆಂದು ಪ್ರತಿಪಾದಿಸಿದ ಟಿ. ಎಸ್. ಇಲಿಯಟನೇ ಕಾರ್ಯತಃ ತನ್ನ ಕೃತಿಗಳಲ್ಲಿ ಅದನ್ನು ಸಾಧಿಸಿಲ್ಲ. “ಆ್ಯಶ್ ವೆಡ್‌ನೆಸ್‌ಡೇ” (Ash Wednesday) ಎಂಬ ಅವನ ಇತ್ತೀಚಿನ ಕವನದಲ್ಲಿ ರೋಮನ್ ಕ್ಯಾಥಲಿಕ್ ಪಂಥದಲ್ಲಿ ಅವನಿಗಿರುವ ಮನೋಧರ್ಮ ಪ್ರಕಟವಾಗಿದೆ.

'An introduction to Literature' ಎಂಬ ವಿಮರ್ಶಾತ್ಮಕ ಗ್ರಂಥದಲ್ಲಿ ವಿಲಿಯಮ್ ಹೆಡ್‌ಸನ್ನನು ಕೃತಿಯಲ್ಲಿ ವ್ಯಕ್ತಿತ್ವ ಇದ್ದೇ ಇದೆ ಎಂದು ಪ್ರತಿಪಾದಿಸುತ್ತಾನೆ. ಅವನ ಪ್ರಕಾರ ಕೃತಿಯಿಂದ ಕವಿ ದೂರವಿರುವುದು ಸಾಧ್ಯವಿಲ್ಲ. † “ಒಂದು ಮನೋಧರ್ಮದಿಂದ ನೋಡಿದ ಜೀವನವೇ ಕಲೆ”–ಎಂಬ ಫ್ರೆಂಚ್ ಭಾಷೆಯ ಸೂಕ್ತಿ ಉಚಿತವಾಗಿದೆ. ಏಕೆಂದರೆ ತನ್ನ ವಿಷಯವಾಗಿ ಕಲಾವಿದ ಜಗತ್ತಿಗೆ ಹಿಡಿದ ಕನ್ನಡಿ ಅವಶ್ಯವಾಗಿ ಅವನ ವ್ಯಕ್ತಿತ್ವದ ಕನ್ನಡಿಯೇ ಆಗಿದೆ” ‡ ಒಂದು ಮಹಾಕೃತಿ ಕವಿಯ ಜ್ಞಾನ ಮತ್ತು ಹೃದಯದಿಂದ ಹುಟ್ಟಿದೆ, ಅದರ ಪುಟಗಳಲ್ಲಿ

---

* From 'The way of all Flesh'—Samuel Butler, p. 63.

† No poet can ever completely eliminate from his work—W. Hudson. p. 103.

‡ The French epigram hits the mark—'Art is life seen through a temperament', for the mirror which the artist holds up to the world about him is of necessity the mirror of his own personality :—An introduction to Literature, p. 15.

ಅವನೇ ಅಂತರ್ಗತನಾಗಿದ್ದಾನೆ, ಅವನ ಬಾಳಿನಲ್ಲಿ ಅವು ಸಮಭಾಗಿಯಾಗಿವೆ, ಅವನ ವ್ಯಕ್ತಿತ್ವದೊಡನೆ ಸಹಜವಾಗಿವೆ.* ಕವಿಯ ಲೋಕಾನುಭವಗಳು ಅವನ ಮನಸ್ಸಿನ ಮೇಲೆ ಹೇಗೆ ಪ್ರಭಾವ ಬೀರಿವೆ ಮತ್ತು ಅವು ಹೇಗೆ ಅವನ ವೈಶಿಷ್ಟ್ಯದ ಮೂಲಕ ನಿರೂಪಿತವಾಗಿವೆ ಎಂಬುದನ್ನು ನಾವು ನೋಡುತ್ತೇವೆ.† ವ್ಯಕ್ತಿಯ ಮಹತ್ವದಮೇಲೆ ಕೃತಿಯ ಮಹತ್ವ ನಿಲ್ಲುತ್ತದೆ. ಶಾಶ್ವತವಾದ ಸಾಹಿತ್ಯಕ್ಕೆ ಸ್ವಾನುಭವವೇ ಮೂಲ.‡

ಸಾಹಿತ್ಯವನ್ನು ವ್ಯಕ್ತಿನಿಷ್ಠ ಲೋಕನಿಷ್ಠ ಎಂದು ವಿಭಾಗಿಸಬಹುದು. ಕವಿ ತನ್ನ ಆತ್ಮದ ವಿಪುಲೈಶ್ವರ್ಯಕ್ಕೆ ಪ್ರವೇಶಿಸಿ ತನ್ನ ರಸಾನುಭವ, ಆಲೋಚನೆ ಇವುಗಳಿಂದ ಸ್ಫೂರ್ತಿಪಡೆದು ರಚಿಸುವ ಸಾಹಿತ್ಯ ವ್ಯಕ್ತಿನಿಷ್ಠವಾದುದು. ಪ್ರಪಂಚದ ಕ್ರಿಯೆಗಳೊಡನೆ ಒಂದಾಗಿ ಅವುಗಳಿಂದಲೇ ಪಡೆದ ರಸಾನುಭವಗಳಿಂದ ಸ್ಫೂರ್ತಿಪಡೆದು ತನ್ನ ವ್ಯಕ್ತಿತ್ವವನ್ನು ಆದಷ್ಟು ಇಲ್ಲಗೈದು ರೂಪಿಸುವ ಸಾಹಿತ್ಯ ಲೋಕನಿಷ್ಠ. ವ್ಯಕ್ತಿನಿಷ್ಠ ಕೃತಿಗಳಲ್ಲಿ ಕವಿಯ ವ್ಯಕ್ತಿತ್ವ ಕೆಲವೆಡೆ ಬರಬಹುದು ಅಥವಾ ಅನೇಕ ಕಡೆ ಬರಬಹುದು ಅಥವಾ ಆದ್ಯಂತ ಬರಬಹುದು. ಲೋಕನಿಷ್ಠವಾದುವುಗಳಲ್ಲಿ ವ್ಯಕ್ತಿನಿಷ್ಠದಲ್ಲಿರುವಂತೆ ನೇರವಾಗಿ ಪ್ರತ್ಯಕ್ಷವಾಗಿ ಗೋಚರವಾಗದೆ ಕ್ವಚಿತ್ತಾಗಿ, ಅಪ್ರತ್ಯಕ್ಷವಾಗಿ; ಸೂಕ್ಷ್ಮವಾಗಿ ಪರಿಶೀಲಿಸಿದಾಗ ಮಾತ್ರ ವ್ಯಕ್ತವಾಗುವಂತೆ ಗುಪ್ತವಾಗಿರಬಹುದು.

ಸಾಹಿತ್ಯದ ಉಳಿದ ಪ್ರಭೇದಗಳಲ್ಲಿ ಬರಬಹುದು ಎಂದು ಒಪ್ಪಿದರೂ ನಾಟಕದಲ್ಲಿ ವ್ಯಕ್ತಿತ್ವ ಇರಕೂಡದು ಎಂದು ಅನೇಕ ವಿಮರ್ಶಕರ ಅಭಿಪ್ರಾಯ. ಆದರೆ ನಾಟಕದಲ್ಲೂ ಕ್ವಚಿತ್ತಾಗಿ ಕಂಡು ಬರುವುದು ಲಕ್ಷ್ಯಾರ್ಹ. ಉದಾಹರಣೆಗೆ 'ಟೆಂಪೆಸ್ಟ್' ನಾಟಕದಲ್ಲಿ 'ಪ್ರಾಸ್ಪರೋ'ವಿನ ಪಾತ್ರದಲ್ಲಿ ಷೇಕ್ಸ್‌ಪಿಯರ್‌ನ ವ್ಯಕ್ತಿತ್ವ ಅಡಗಿದೆಯೆಂದು ವಿಮರ್ಶಕರ ಅಭಿಪ್ರಾಯವಾಗಿದೆ. ಕಥೆ, ಕಾದಂಬರಿ, ಭಾವಗೀತೆ ಮತ್ತು ಲಘುಕಾವ್ಯಗಳಲ್ಲಿ ಕಾಣುವಷ್ಟು ಅಧಿಕಪ್ರಮಾಣದಲ್ಲಿ ಮಹಾಕಾವ್ಯ, ನಾಟಕಗಳಲ್ಲಿ ಕಾಣದಿದ್ದರೂ ಒಂದಲ್ಲ ಒಂದು ರೀತಿಯಿಂದ ಕೃತಿಯಲ್ಲಿ ವ್ಯಕ್ತಿತ್ವ ಇದ್ದೇ ಇದೆಯೆಂದು ಒಪ್ಪಬಹುದು. ಈ ದೃಷ್ಟಿಯಿಂದ ಮಹಾ ಕಾದಂಬರಿ 'ಕಾನೂರು ಹೆಗ್ಗಡಿತಿ'ಯಲ್ಲಿ ಕಾದಂಬರಿಕಾರರ ವ್ಯಕ್ತಿತ್ವ ಎಷ್ಟು ಮಟ್ಟಿಗೆ, ಹೇಗೆ, ಎಲ್ಲೆಲ್ಲಿ ಮೂಡಿದೆ ಎಂಬುದನ್ನು

---

* A great Book is born of the brain and heart of its author; he has put himself into its pages; they partake of his life, and are instinct with his individuality, P. 15.

† We observe how the world of experience impressed him and how it is interpreted through his personality. P. 17.

‡ Personal Experience is the basis of all real literature. P. 15.

ವಿವೇಚಿಸುವುದು ಈ ಲೇಖನದ ಉದ್ದೇಶ.

* * * *

ವ್ಯಕ್ತಿತ್ವವೆಂದರೆ ವ್ಯಕ್ತಿಯ ವಿಶಿಷ್ಟಗುಣ ಅಥವಾ ವೈಶಿಷ್ಟ್ಯ ಅಥವಾ ಶೀಲ ಸ್ವಭಾವ. ಅದನ್ನು ಬಾಹ್ಯ ಮತ್ತು ಆಂತರಿಕ ವೈಶಿಷ್ಟ್ಯ ಎಂದು ವಿಭಾಗಿಸಬಹುದು. ನಡೆ ನುಡಿ, ವೇಷ ಭೂಷಣ, ಅಂದ ಚೆಂದ ಮೊದಲಾದುವು ಬಾಹ್ಯಗುಣಗಳು. ಆಶೆ ನಿರಾಶೆ, ಅಭಿರುಚಿ, ಆದರ್ಶ,ತಾಳ್ಮೆ, ಸಹನೆ, ಶಾಂತಿ, ಸಹಾನುಭೂತಿ, ಕೋಪ ತಾಪ, ಕಾಮ ಕ್ರೋಧ, ರಾಗದ್ವೇಷ, ಮದ ಮಾತ್ಸರ್ಯ ಮೊದಲಾದುವು ಆಂತರಿಕ ಗುಣಗಳು. ಈ ಎರಡು ವಿಧದ ಗುಣಗಳು ಕೃತಿಯಲ್ಲಿ ಸಮವಾಗಿರಬಹುದು, ಹೆಚ್ಚು ಕಡಮೆಯಾಗಿ ರಬಹುದು ಅಥವಾ ಯಾವುದಾದರೂ ಒಂದೇ ಇರಬಹುದು. ಸಾಮಾನ್ಯವಾಗಿ ಆಂತ ರಿಕ ವೈಶಿಷ್ಟ್ಯಗಳು ಬಹು ಕೃತಿಗಳಲ್ಲಿ ಕಂಡುಬಂದಿವೆ.

ಒಂದು ಕೃತಿಯಲ್ಲಿ ವ್ಯಕ್ತಿತ್ವವಿದೆಯೆಂದು ಹೇಳಬೇಕಾದರೆ ಕವಿಯ ಮತ್ತು ಅವನ ಇತರ ಕೃತಿಗಳ ನಿಕಟ ಪರಿಚಯವಿರಬೇಕು ಓದುಗನಿಗೆ; ಕೃತಿಯಲ್ಲಿ ಪಾತ್ರ ಚಿತ್ರಣ ಸಜೀವವಾಗಿದ್ದು, ಘಟನೆ ಸನ್ನಿವೇಶಗಳು ನೈಜವಾಗಿ ಜೀವನಕ್ಕೆ ಸಮೀಪ ವಾಗಿದ್ದು ಅದನ್ನು ಓದಿದಾಗ ಅಥವಾ ಓದಿಯಾದ ಮೇಲೆ ಇದು ಉತ್ಪ್ರೇಕ್ಷೆಯಲ್ಲ ಅಥವಾ ಕಲ್ಪನೆಯಲ್ಲ, ಎಲ್ಲಾ ವಾಸ್ತವವಾಗಿದೆ ಎನ್ನುವಂತಿದ್ದು ಯಾವುದೋ ಪಾತ್ರ ದಲ್ಲಿ ಅಥವಾ ಘಟನೆಯಲ್ಲಿ ಕವಿಯ ಒಲವು, ನಿಲವು, ಪಕ್ಷಪಾತ ಪ್ರತ್ಯಕ್ಷವಾಗಿಯೊ, ಅಪ್ರತ್ಯಕ್ಷವಾಗಿಯೋ, ಐಚ್ಛಿಕವಾಗಿಯೊ, ಅನೈಚ್ಛಿಕವಾಗಿಯೊ, ಋಜುವಾಗಿಯೊ, ಇಂಗಿತವಾಗಿಯೊ ವ್ಯಕ್ತವಾಗುವಂತಿರಬೇಕು. ಜೊತೆಗೆ ಕವಿಯನ್ನು ನೋಡಿ ಅವನ ಜೀವನ ವೃತ್ತಾಂತವನ್ನು ಸ್ವಲ್ಪಮಟ್ಟಿಗಾದರೂ ತಿಳಿದುಕೊಂಡಿರುವುದು ಅಗತ್ಯ. ಇಲ್ಲದಿದ್ದರೆ ಎಲ್ಲವೂ ಊಹಾಪ್ರಪಂಚಕ್ಕೆ ಸೇರುತ್ತದೆ.

ತನಗಾದ ಅನುಭವ, ಕಷ್ಟ ಸುಖಗಳನ್ನು ಹಿತೈಷಿಗಳೊಡನೆ ತೋಡಿಕೊಂಡು ಎದೆ ಹಗುರಮಾಡಿಕೊಳ್ಳುವುದು ಮನುಷ್ಯನ ಒಂದು ವಿಶಿಷ್ಟಗುಣ. ಹಾಗೆಯೇ ಕವಿಯೂ ತನ್ನ ಭಾವನೆಗಳಿಗೆ ಅಭಿವ್ಯಕ್ತಿಕೊಟ್ಟು ಸಹೃದಯರಿಗೆ ನೀಡಿ ಎದೆ ಹಗುರ ಮಾಡಿಕೊಳ್ಳುತ್ತಾನೆ. ಆ ಭಾವ ಆತನ ಹೃದಯಾಂತರಾಳದಿಂದ ಆವಿರ್ಭವಿಸುವುದ ರಿಂದ ಅವನ ವ್ಯಕ್ತಿತ್ವವೂ ಸೇರುತ್ತದೆ; ಮಗು ತಂದೆತಾಯಿಯರ ಎಲ್ಲಾ ಗುಣ ಗಳನ್ನೊ ಅಥವಾ ಕೆಲವು ಗುಣಗಳನ್ನೊ ಪಡೆಯುವಂತೆ. ತನ್ನ ಭಾವಾನುಭವಗಳಿಗೆ ಕಾಲ್ಪನಿಕ ಕಾಲ ದೇಶ ನಾಮಗಳನ್ನು ಕೊಟ್ಟು ನಿರೂಪಿಸುತ್ತಾನೆ, ಕೆಲವು ಸಾರಿ, ಮತ್ತೆ ಕೆಲವು ಸಾರಿ ತನ್ನ ಜೀವನವನ್ನೇ ವಸ್ತುವಾಗಿ ಇಟ್ಟುಕೊಂಡು ತನ್ನನ್ನೇ ಪಾತ್ರ ವಾಗಿಟ್ಟು ಬೇರೆ ಬೇರೆ ಹೆಸರನ್ನಿತ್ತು ನಿರೂಪಿಸುತ್ತಾನೆ. ಅಂದರೆ ಕವಿ ತನ್ನ ಮತ್ತು ತನ್ನ ಸುತ್ತಮುತ್ತಲಿನ ವಿಷಯವನ್ನು ಪ್ರತಿಕೃತಿಸಲು ಹೊರಟಾಗ ವ್ಯಕ್ತಿತ್ವ ಪ್ರಕಾ ಶನ ಅನಿವಾರ್ಯ. ಪ್ರತಿಮಾವಿಧಾನದಲ್ಲೂ ಇದಕ್ಕೆ ಅವಕಾಶವಿದೆ. ತನ್ನ ಕಲ್ಪನೆಗೆ ಕಾಲ್ಪನಿಕ ರೂಪ ಕೊಡುವಾಗ ಪ್ರತಿಮಾ ವಿಧಾನವನ್ನೂ ಒಡ್ಡುತ್ತಾನೆ. ತಾನು ಹಾಗ

ಗಬೇಕು ಹೀಗಾಗಬೇಕೆಂಬ ನಿರಂತರ ಬಯಕೆಗೆ ಪ್ರತಿಮಾವಿಧಾನ ತೃಪ್ತಿಯೀಯುತ್ತದೆ. ಕೆಲವೆಡೆ ಕವಿಯೇ ಉದ್ದೇಶಪೂರ್ವಕವಾಗಿ ವ್ಯಕ್ತಿತ್ವವನ್ನು ಪ್ರಕಟಗೊಳಿಸುತ್ತಾನೆ. ಕೆಲವೆಡೆ ಅವನು ದೀರ್ಘಕಾಲ ಸಾಹಿತ್ಯ ರಚನೆಯಲ್ಲಿ ನಿರತನಾಗಿದ್ದರೆ ಅವನ ಅರಿವಿಲ್ಲದೆಯೇ ಪ್ರಕಟವಾಗುತ್ತದೆ, ಅಥವಾ ಎಚ್ಚರಿಕೆಯಿಂದ ವ್ಯಕ್ತಿತ್ವ ದೂರನಾಗಲು ಎಷ್ಟು ಪ್ರಯತ್ನಿಸಿದರೂ ಎಲ್ಲೊ, ಯಾವಾಗಲೊ ಒಂದೆಡೆ ನುಸುಳಿಕೊಳ್ಳುತ್ತದೆ. ಸಾಮಾನ್ಯವಾಗಿ ಕವಿಯ ಮೊದಲನೆಯ ಕೃತಿಗಳಲ್ಲಿ ವ್ಯಕ್ತಿತ್ವ ಹೆಚ್ಚಾಗಿ ಕಂಡುಬರುತ್ತದೆ. ಏಕೆಂದರೆ ಮೊದಲು ಮೊದಲು ತನ್ನ ಮತ್ತು ತನ್ನ ಸುತ್ತಲಿನ ವಿಷಯವನ್ನೇ ಚಿತ್ರಿಸಲು ಹೊರಡುವುದರಿಂದ. ಕ್ರಮೇಣ ಆತನ ಶಕ್ತಿ ವಿಕಾಸವಾದಂತೆ, ಅನುಭವ, ಅಭ್ಯಾಸ ಹೆಚ್ಚಾದಂತೆ ಲೋಕವಸ್ತುವನ್ನು ಬಣ್ಣಿಸಲು ಹೊರಡುತ್ತಾನೆ.

ಮನುಷ್ಯನ ಆಶೆ, ಆಕಾಂಕ್ಷೆ, ಅಭಿಪ್ರಾಯಗಳನ್ನು ತಿಳಿಸುವ ಮಾಧ್ಯಮ, ಭಾಷೆ. ಇದೇ ಭಾಷೆಯ ಗುರಿ ಮತ್ತು ಪ್ರಯೋಜನ. ಹಾಗೆಯೇ ಪ್ರಯೋಜನ ಬೇರೆಯಾದರೂ ಸಾಹಿತ್ಯದ ಉಗಮಕ್ಕೆ ವ್ಯಕ್ತಿತ್ವ ಪ್ರಕಾಶನವೇ ಕಾರಣವೆಂದರೆ ಅನುಚಿತವಲ್ಲ. ಸಾಮಾನ್ಯವಾಗಿ ಲೇಖಕ ಪುರುಷನಾದರೆ ಪುರುಷಪಾತ್ರದಲ್ಲಿ, ಸ್ತ್ರೀಯಾದರೆ ಸ್ತ್ರೀ ಪಾತ್ರದಲ್ಲಿ ವ್ಯಕ್ತಿತ್ವ ಮೈದೋರುತ್ತದೆ. ವ್ಯಕ್ತಿತ್ವ ತ್ರಿಕಾಲಗಳಿಗೂ ಸಂಬಂಧಿಸಿರಬಹುದು. ಕವಿ ಕಥಾ ನಿರೂಪಣೆಗೆ ತೊಡಗಿದರೆ ಭೂತಕಾಲದ ವ್ಯಕ್ತಿಗುಣ, ಆತ ಭಾವ ಜೀವಿಯಾಗಿ ಪುರೋಗಾಮಿಯಾಗಿದ್ದರೆ ಮುಂದೇನಾಗಬೇಕೆಂಬ ಭವಿಷ್ಯದಾಶೆ ಪ್ರತಿಮಾವಿಧಾನದಲ್ಲಿ ಪ್ರಕಟವಾಗುತ್ತದೆ. ಮುಂದೆ ತಾನು ಹಾಗಾಗಬೇಕೆಂಬ ನಿರಂತರ ಬಯಕೆಯೇ ಇದಕ್ಕೆ ಕಾರಣ.

* * * *

ಕಾನೂರು ಹೆಗ್ಗಡಿತಿಯನ್ನು ಓದುವಾಗ, ಓದಿಯಾದ ಮೇಲೆ ಕಾದಂಬರಿಕಾರರ ಪರಿಚಯವುಳ್ಳ, ಅವರ ದರ್ಶನಲಾಭವನ್ನು ಪಡೆದಿರುವ ಅಥವಾ ಅವರ ಇತರ ಕೃತಿಗಳನ್ನು ಅಭ್ಯಾಸಿಸಿರುವ ಸಹೃದಯರಿಗೆ ಅವರ ವಿಶಿಷ್ಟ ಗುಣಗಳಲ್ಲಿ, ಆದರ್ಶಗಳಲ್ಲಿ ಕೆಲವು ಹೂವಯ್ಯನ ಪಾತ್ರದಲ್ಲಿ ಮೂಡಿರುವುದು ಕಂಡುಬರುತ್ತದೆ. ಹೂವಯ್ಯ ಕಾದಂಬರಿಕಾರರ ಪ್ರತಿಕೃತಿ ಸ್ವಲ್ಪಮಟ್ಟಿಗೆ ಮತ್ತು ಬಹುಮಟ್ಟಿಗೆ ಪ್ರತಿಮಾಕೃತಿಯೆಂದು ಜಲಕ್ಕನೆ ಓದುಗರ ಚಿತ್ತಕ್ಕೆ ಸ್ಫುರಿಸುತ್ತದೆ. ಹಾಗಾಗುವುದಕ್ಕೆ ಕುವೆಂಪುರವರ ಎಲ್ಲ ಅಲ್ಲದಿದ್ದರೂ ಕೆಲವು ವಿಶಿಷ್ಟ ಗುಣಗಳಾದರೂ ರೂಪು ತಾಳಿರುವುದೇ ಕಾರಣ. ಹೂವಯ್ಯ ಮತ್ತು ಕಾದಂಬರಿಕಾರರ ರೂಪ ಸಾದೃಶ್ಯ ಖಚಿತವಾಗಿದೆಯೆನ್ನಬಹುದು. "......ಒಬ್ಬನು ಎತ್ತರವಾಗಿ ತೆಳ್ಳಗಿದ್ದನು......ಕ್ರಾಪು ಪೊದೆಪೊದೆಯಾಗಿ ತಲೆಯನ್ನೆಲ್ಲ ಒಂದು ತೆರನಾದ ಧೀರ ಸ್ವಚ್ಛಂದತೆಯಿಂದ ಆವರಿಸಿತ್ತು........ಆತನ ಕಣ್ಣುಗಳು ಅಷ್ಟೇನೂ ಅತಿಶಯ ವಿಸ್ತಾರವಾಗಿರದಿದ್ದರೂ ಉಜ್ವಲವಾಗಿ ಮರ್ಮಭೇದೀ ದೃಷ್ಟಿಯುತವಾಗಿ, ಯೋಗಿಯ ನಯನಗಳಂತೆ ಅಂತರ್ಮುಖವಾಗಿ ತಿಳಿದವರಲ್ಲಿ ಗೌರವ ಭಾವವನ್ನೂ ತಿಳಿಯದವರಲ್ಲಿ ಮೋಹವನ್ನೂ ಉದ್ರೇಕಿಸುವಂತಿದ್ದುವು. ಮೂಗು

ಉದ್ದವಾಗಿ ಶುಕಚಂಚುವಿನಂತೆ ಬಾಗಿತ್ತು....ಅದರ ಮೇಲಿದ್ದ ಒಂದು ನಸುಹಸುರಾದ ನರವು ಸೌಂದರ್ಯಕ್ಕೆ ಸಬಲತೆ ಗಾಂಭೀರ್ಯಗಳನ್ನು ಕೊಡುವಂತಿತ್ತು........ಗಲ್ಲವು ಸಣ್ಣಗೆ ದುಂಡಗೆ ಮೊನಚಾಗಿದ್ದು ಕಠೋರ ಸಾಧನೆಯನ್ನೂ ಒಂದು ವಿಧವಾದ ಹಠ ವನ್ನೂ ಮನಸ್ಸಿಗೆ ತರುತ್ತಿತ್ತು. ಒಟ್ಟಿನಲ್ಲಿ ಪೌರುಷ, ಆಧ್ಯಾತ್ಮಿಕತೆ, ಅಂತರ್ಮು ಖತೆ, ರಸಿಕತೆ, ಮೇಧಾಶಕ್ತಿ–ಇತರರಿಗೆ ಕಷ್ಟವಿಲ್ಲದಿದ್ದರೂ ತನಗೇ ಕಷ್ಟಕರವಾಗಬಹು ದಾದ ಹಠಭಾವ, ಇವುಗಳಿಂದ ಮೆರೆಯುತ್ತಿದ್ದ ಆತನು ಭವ್ಯವ್ಯಕ್ತಿಯಾಗಿದ್ದನು...." ಬಹುಶಃ ಇನ್ನೊಬ್ಬ ಲೇಖಕ ಇಷ್ಟು ಖಚಿತವಾಗಿ, ಸಮರ್ಪಕವಾಗಿ, ನಿರ್ದುಷ್ಟವಾಗಿ ಬಾಹ್ಯವರ್ಣನೆ ಮಾಡಲಾರ! ಅಥವಾ ಛಾಯಾಗ್ರಾಹಿಯೂ ಮಾಡಲಾರದು. ಇಪ್ಪತ್ತೈದು ವರ್ಷಗಳ ಹಿಂದಿನ ಕಾದಂಬರಿಕಾರರ ತದ್ರೂಪವೇ ಇದು. ಅದೇ ಬಳ್ಳಿ ಗುರುಳು, ಶುಕಚಂಚು, ನಸುಹಸುರಾದ ನರ, ಪೌರುಷ, ಆಧ್ಯಾತ್ಮಿಕತೆ, ಅಂತರ್ಮು ಖತೆ, ರಸಿಕತೆ, ಮೇಧಾಶಕ್ತಿ ಮೊದಲಾದುವು ಇಂದಿಗೂ ಇವೆ. ಧ್ಯಾನ, ತಪಸ್ಸು, ಆತ್ಮ ಸಾಧನೆಗಳಿಂದ ರಸಋಷಿಯಾದ ಕಾದಂಬರಿಕಾರರಿಗೂ 'ಐದು ದಿನಗಳ ನಿರಂತರ ತಪಸ್ಸು, ಗಭೀರ ಧ್ಯಾನಗಳಿಂದ ಆತ್ಮಸಾಧನೆಯ ಮಾರ್ಗದಲ್ಲಿ ಮತ್ತಷ್ಟು ಮುಂದು ವರಿದ ಹೂವಯ್ಯ'ನಿಗೂ ಎಂಥ ಸಾಮ್ಯ! "ಆತನು ನಡೆದರೆ ಪರ್ವತವೆ ಚಲಿಸಿದಂತಾ ಗುತ್ತಿತ್ತು; ನುಡಿದರೆ ಸಮುದ್ರವೆ ನುಡಿದಂತಾಗುತಿತ್ತು; ನೋಡಿದರೆ ನೀಲಾಕಾಶವೇ ನೋಡಿದಂತಾಗುತ್ತಿತ್ತು!"* ಇಲ್ಲಿ ತಮ್ಮ ನಡೆ, ನುಡಿ, ನೋಟವನ್ನು ಹೂವಯ್ಯನಿಗೆ ಆರೋಪಿಸಿದ್ದಾರೆನ್ನಬಹುದು. ಇವರನ್ನು ನೋಡಿದಾಗ ನೋಟಕರಿಗೆ ಇದೇ ಭಾವ ಉಂಟಾಗುತ್ತದೆ.

ನಿಸರ್ಗಪ್ರೇಮಿ ಕಾದಂಬರಿಕಾರರು. ನಿಸರ್ಗದ ಮಡಿಲಿನಲ್ಲಿ ಹುಟ್ಟಿ ಬೆಳೆದು, ಅದರಲ್ಲೆ ಆಡಿ ಆನಂದಿಸಿ, ಅದರಲ್ಲೆ ಒಂದಾಗಿ ಬೆಳೆದ ಕವಿ–ಹೃದಯ ಪ್ರಕೃತಿಯನ್ನು ಮನದಣಿಯ ಮನಮುಟ್ಟುವಂತೆ ಹಾಡಿದೆ. ಇವರಂಥ ಉಜ್ವಲ ಪ್ರಕೃತಿ ಪ್ರೇಮಿ ಯನ್ನು ನೋಡಬೇಕಾದರೆ ನಾವು ಇಂಗ್ಲಿಷ್ ಸಾಹಿತ್ಯಕ್ಕೇ ಪ್ರಯಾಣ ಬೆಳೆಸಬೇಕು. ವರ್ಡ್ಸ್‌ವರ್ತ್ ನಿಸರ್ಗಪ್ರೇಮಿ. ಆತ ಹೇಗೆ ನಿಸರ್ಗವನ್ನು ತನ್ನ ಗುರುವಾಗಿ ಸ್ವೀಕರಿ ಸಿದನೊ ಹಾಗೆ ಇವರೂ ಸ್ವೀಕರಿಸಿದ್ದಾರೆ. ಗಗನ ಚುಂಬಿಯಾದ ಮಲೆಯ ಸಾಲು, ತರತರದ ಫಲಪುಷ್ಪಭರಿತವಾದ ಮರ ಬಳ್ಳಿ; ಇಂಚರಗೈಯುವ ಬಗೆಬಗೆಯ ಬಣ್ಣದ ಮಿಂಚುಳ್ಳಿ, ಕಾಜಾಣ, ಪಿಕಳಾರ; ಭಯಂಕರ ವನ್ಯಜಂತುಗಳಿಗೆ ಹಕ್ಕೆಯಾಗಿ, ಕ್ರೀಡಾಂಗಣವಾಗಿ, ಸದಾ ಸಜೀವವಾಗಿ, ರುದ್ರರಮಣೀಯವಾಗಿರುವ ಕಾನು, ಋತು ಧರ್ಮಾನುಸಾರವಾಗಿ ಬಣ್ಣದ ಬೆಡಗನ್ನು ಬೀರುವ ಬಾನು, ಗಭೀರ ನೀರವ ಕಂದರಗಳು, ದಿಟ್ಟಿಹೋಗುವವರೆಗೆ ಹಬ್ಬಿ ಮಲೆಯುವ ವನಪ್ರದೇಶವನ್ನು ವೀಕ್ಷಿಸಲು ಕೋಡೆತ್ತಿ ನಿಂತಿರುವ ನವಿಲುಗಲ್ಲು, ಕವಿಶೈಲ ಮೊದಲಾದ ರಮಣೀಯೋತ್ತುಂಗ ಸ್ಥಳ

---

*ಕಾನೂರು ಹೆಗ್ಗಡಿತಿ ಪುಟ ೬೨೭

ಗಳಲ್ಲಿ ಉದಯಾಸ್ತಗಳನ್ನು ವೀಕ್ಷಿಸಿ, ವಿಹರಿಸಿ ಸ್ಫೂರ್ತಿಪಡೆದು ರಸಾತ್ಮಕರಾದ ಕಾದಂಬರಿಕಾರರಂತೆ ಹೂವಯ್ಯನೂ ನಿಸರ್ಗಪ್ರೇಮಿ, ಸೌಂದರ್ಯೋಪಾಸಕ. ಅವನಿಗೆ ಸೊಬಗಿನ ಬೀಡಾದ ಮಲೆನಾಡು ಪ್ರಿಯವಾಗಿದೆ, ಆತ್ಮೀಯವಾಗಿದೆ. ಕಾದಂಬರಿಕಾರರ ರಸಹೃದಯವನ್ನು ಸೆರೆಹಿಡಿದ ಸ್ವರ್ಗೀಯವಾದ ಆ ನಿಸರ್ಗದ ರುದ್ರರಮಣೀಯತೆ ಹೂವಯ್ಯನ ಹೃದಯವನ್ನೂ ಸೆರೆಹಿಡಿದಿರುವುದು ಸೋಜಿಗವಲ್ಲ. ಅನೇಕ ಉದಯಾಸ್ತಗಳನ್ನು ಅನೇಕ ಭೂಮಿಕೆಗಳಲ್ಲಿ ಸಂದರ್ಶಿಸಿ, ಆನಂದಿಸಿ, ಶ್ರೀಮಂತವಾದ, ಲೋಕದ ಕಷ್ಟಕಾರ್ಪಣ್ಯಗಳನ್ನು ಮರೆತು ಸೌಂದರ್ಯಾನುಭೂತಿಯಲ್ಲಿ ಮೈಮರೆತು ಭಾವಸಮಾಧಿಗೇರಿ ಆನಂದಸ್ವರೂಪಿಯಾದ ಕವಿಹೃದಯ ಹೂವಯ್ಯನಲ್ಲಿಯೂ ಮನೆಮಾಡಿಕೊಂಡಿದೆ. ಹೂವಯ್ಯ ಸೌಂದರ್ಯೋಪಾಸಕ, ಏಕಾಂತಪ್ರೇಮಿ ಕಾದಂಬರಿಕಾರರಂತೆ. ನಿಸರ್ಗದ ವೈಭವವನ್ನು ದರ್ಶಿಸಿ ಹೃಷ್ಟರೋಮನಾಗಿ ಮೈಮರೆದು ಆನಂದಾಶ್ರುವನ್ನು ಮಿಡಿಯುವನು. "ನಾನು ಕಣ್ಣೀರು ಕರೆದಿದ್ದೇನೆ, ಸೀತೆ. ಸಂಧ್ಯಾ ಸೌಂದರ್ಯವನ್ನು ನೋಡಿದಾಗ ನಿನಗೆ ಕಣ್ಣೀರು ಬರಲಿಲ್ಲ ಎಂದು ಹೇಳಿದೆಯಲ್ಲವೆ? ನನಗೆ ಕಣ್ಣೀರು ಬಂದಿದೆ....ಅಷ್ಟೇ ಅಲ್ಲ ಬೆಟ್ಟದ ನೆತ್ತಿಯ ಮೇಲೆ ನಿಂತು ಕಣ್ಣುಹೋಗುವವರೆಗೂ ಹಬ್ಬಿರುವ ದೊಡ್ಡ ಕಾಡುಗಳನ್ನು ನೋಡಿದಾಗ ಕಣ್ಣೀರು ಕರೆದಿದ್ದೇನೆ. ಪೂರ್ವ ದಿಗಂತದಲ್ಲಿ ಸೂರ್ಯಬಿಂಬವು ಕೆಂಪು ಕುಂಕುಮದಲ್ಲಿ ಮಿಂದು ಮೂಡುತ್ತಿದ್ದಾಗ ನೋಡಿ ಕಣ್ಣೀರು ಕರೆದಿದ್ದೇನೆ!....ಮಹಾತ್ಮರ ಕಥೆಗಳನ್ನು ಓದುತ್ತಾ ಕಣ್ಣೀರು ಕರೆದಿದ್ದೇನೆ!"* ಎಂದು ಸೀತೆಗೆ ತನ್ನ ಕಣ್ಣೀರಿಗೆ ಕಾರಣವನ್ನು ವಿವರಿಸುವ ಛದ್ಮವೇಷಧಾರಿಯಾದ ಕಾದಂಬರಿಕಾರರಲ್ಲವೆ ಹೂವಯ್ಯ ಎನ್ನಬಹುದು. ಸೀತೆಯ ಮದುವೆಯಾದ ಮಾರನೆಯ ಮುಂಜಾನೆ ಹೂವಯ್ಯ ಪರ್ವತ ಶೃಂಗಕ್ಕೆ ಹೋಗುತ್ತಾನೆ......"ಹೂವಯ್ಯನ ಹೃದಯ ಆನಂದ ಸ್ಪಂದಿತವಾಯ್ತು. ಹೊಸ ಚೇತನ ಎದೆಯಲ್ಲಿ ಮಿಂಚಿನಂತೆ ಸಂಚರಿಸಿತು. ಚೈತ್ರಪ್ರಕೃತಿಯ ಹುಚ್ಚಿನ ಕಿಚ್ಚು ಅವನೆದೆಗೆ ತಗುಲಿದಂತಾಯ್ತು. ಉಷಃಕಾಲ, ಅರುಣೋದಯ, ಸೂರ್ಯೋದಯಗಳ ಸಂಪತ್ತನ್ನು ಕಳೆದುಕೊಳ್ಳುವ ದಾರಿದ್ರ್ಯಕ್ಕೆ ಬೆದರಿ, ಬೇಗ ಬೇಗನೆ ಬೆಟ್ಟದ ನೆತ್ತಿಯ ಹಾಸುಬಂಡೆಯ ಉತ್ತುಂಗ ವೇದಿಕೆಗೆ ಏರಿ, ಏದುತ್ತ, ಆನಂದಪರವಶನಾಗಿ ದಿಟ್ಟಿಸುತ್ತ ನಿಂತನು....ಆ ಮೈಮರೆಯಿಸುವ ದೃಶ್ಯದರ್ಶನದ ಅನಂತ ಆಹ್ವಾನವನ್ನು ಕೃತಜ್ಞತೆಯಿಂದ ಸ್ವೀಕರಿಸಿ ಹೂವಯ್ಯನ ಆತ್ಮ ರೆಕ್ಕೆ ಬಿಚ್ಚಿ ಗರಿಗೆದರಿ ಹಾರಲು ಅನುವಾಯಿತು....ಹಾಸುಬಂಡೆಯ ಮೇಲೆ ಪದ್ಮಾಸನ ಹಾಕಿ ಕುಳಿತು-ಎವೆಯಿಕ್ಕದಾದನು."† ಕಾದಂಬರಿಕಾರರು ತಮ್ಮ ಜೀವಿತದ ಒಂದು ಸೂರ್ಯೋದಯ ದರ್ಶನದ ರಮಣೀಯ ನಿದರ್ಶನವನ್ನು ಹೇಳುವಂತಿದೆ!

ಸೌಂದರ್ಯಾನುಭೂತಿ, ಆ ಸೌಂದರ್ಯದಲ್ಲಿ ಭಗವಂತನ ಸುಂದರ ರೂಪನ್ನು

* ಪುಟ ಕಾನೂರು ಹೆಗ್ಗಡಿತಿ ೧೭೧-೧೭೨ †ಪುಟ ೪೭೯

ಕಂಡು ಆನಂದದಿಂದ ಪರವಶನಾಗಿ ಭಾವಸಮಾಧಿಗೇರುವುದು ಸಾಮಾನ್ಯ ಜನರಲ್ಲಿ ಕಾಣದ ಆಧ್ಯಾತ್ಮಿಕನೂ, ಅಂತರ್ಮುಖನೂ, ರಸಿಕನೂ ಆದ ಕವಿ, ಕಲಾವಿದ, ಯೋಗಿಯಲ್ಲಿ ಮಾತ್ರ ಕಾಣುವ ಒಂದು ವಿಶಿಷ್ಟಗುಣ. ಕಾದಂಬರಿಕಾರರ ಈ ಅಸಾಮಾನ್ಯ ಗುಣ ಹೂವಯ್ಯನಲ್ಲಿ ಮೈದೋರಿದೆ. ಭಾವೋತ್ಕರ್ಷದಿಂದ ರಸಸಮಾಧಿಸ್ಥರಾಗುವ ಕಾದಂಬರಿಕಾರರಂತೆ ಭಾವಸಮಾಧಿಗೇರುತ್ತಾನೆ ಹೂವಯ್ಯ, ಅನೇಕ ಸಾರಿ. ಕಳ್ಳಂಗಡಿಯ ಜಗುಲಿಯಲ್ಲಿ ಕುಳಿತ ಹೂವಯ್ಯ ಮುಂಗಾರ ಮಳೆಯ ರೌದ್ರನರ್ತನ, ಭೀಷಣ ಭವ್ಯತೆಯನ್ನು ನೋಡಿ ಉನ್ಮನಸ್ಕನಾದ. ಅವನ ಮನಸ್ಸು 'ಭವ್ಯ ಪ್ರಕೃತಿಯ ರಮಣೀಯತೆಯಲ್ಲಿ ಲೀನವಾಯಿತು.' ಗಾಡಿ ಹೂಡಿ ಎಲ್ಲರೂ ಎದ್ದಾಗ "ಅವನಿನ್ನೂ ಪರವಶತೆಯಿಂದ ನಿಸ್ಪಂದನಾಗಿ ಕುಳಿತಿದ್ದನು. ಕಣ್ಣುಗಳಿಂದ ನೀರು ಸುರಿಯುತ್ತಿತ್ತು. ಮುಖವು ಕೆಂಪೇರಿತು....ಪ್ರಕೃತಿ ಸೌಂದರ್ಯ ದರ್ಶನದಿಂದ ಭಾವಪರವಶನಾಗಿದ್ದಾನೆ ಎಂಬುದು ಉಳಿದವರಾರಿಗೂ ಗೊತ್ತಾಗುವಂತಿರಲಿಲ್ಲ." * ಆದ್ದರಿಂದಲೇ ಅವನ ಭಾವಸಮಾಧಿ ಅನೇಕರೂಪ ತಾಳುತ್ತದೆ. ಅಂದಿನಿಂದ ಹೂವಯ್ಯನ ಭಾವಸಮಾಧಿ 'ಮೈಮೇಲೆ ಬರುವುದು', 'ದೆವ್ವ ಹಿಡಿಯುವುದು', 'ಮೂರ್ಛೆರೋಗ' ಎಂಬ ನಾನಾ ವಿಕಾರ ರೂಪಗಳನ್ನು ತಾಳಿ, ಬಾಯಿಂದ ಬಾಯಿಗೆ, ಕಿವಿಯಿಂದ ಕಿವಿಗೆ ಬಿದ್ದು, ಹಬ್ಬತೊಡಗಿತು." † ತಮ್ಮ ವಿಷಯದಲ್ಲಿ ಹಬ್ಬಿರಬಹುದಾದ ನಿಜವಾದ ವಾರ್ತೆಯನ್ನೇ ಇಲ್ಲಿ ಹೂವಯ್ಯನ ವ್ಯಕ್ತಿತ್ವಕ್ಕೆ ಕಟ್ಟುವ ಪ್ರಯತ್ನ ನಡೆದಿದೆ ಎನ್ನಿಸದಿರದು. ಶ್ಯಾಮಯ್ಯಗೌಡರು ಸಿಂಗಪ್ಪಗೌಡರಿಗೆ—"ನೀವೇನೋ ಹೇಳುತ್ತೀರಿ. ಆದರೆ ಹೂವಯ್ಯ ಏನೋ ಒಂದು ತರಹ ಸಂನ್ಯಾಸಿಯಾಗಿ ಬಿಟ್ಟಿದ್ದಾನೆ! ಬೈರಾಗಿಗೆ ಮಗಳು ಕೊಟ್ಟಂತಾದ್ರೆ? ಅಲ್ಲದೆ ಅವನಿಗೆ ಆಗಾಗ ಮೂರ್ಛೆರೋಗ ಬೇರೆ ಬರ್ತದಂತೆ" ‡ ಎಂದು ಹೇಳುವ ಮಾತೂ "ರುಷಿ ಆಗ್ಬೇಕಂತಾ ಮಾಡೀರಂತೆ! ಹೌದ್ರೇನಯ್ಯಾ" ಎಂದು ಬೈರನು ಹೂವಯ್ಯನನ್ನು ಕೇಳುವ ಮಾತೂ ಕಾದಂಬರಿಕಾರರ ಸಂಬಂಧಿಕರು ಮತ್ತು ಅವರ ಮನೆಯ ಆಳೊಬ್ಬ ಅವರನ್ನು ಕುರಿತು ಆಡಿದ ಮಾತಾಗಿರಬಹುದೆ! ತಾರುಣ್ಯದಲ್ಲಿ ಅವರ ಕವಿಸಹಜ ವೈಶಿಷ್ಟ್ಯಗಳನ್ನು ಕುರಿತು ಜನರು ಹೀಗಾಡಿದ್ದೂ ಸತ್ಯವೆ! ಭಾವವಶರಾದಾಗ ಬಾಹ್ಯಲೋಕವನ್ನು ಮರೆತು ಕೂರುವುದಕ್ಕೆ ದೃಷ್ಟಾಂತವಾಗಿ ಅವರ ಬಾಳಿನ ಒಂದು ರಸವತ್ತಾದ ಘಟನೆಯನ್ನು ಹೇಳಬಹುದು. ಒಂದು ಮಧ್ಯಾಹ್ನ ಅವರು ಕೃತಿರಚನೆಯಲ್ಲಿ ನಿರತರಾಗಿದ್ದಾಗ ಪರವಶರಾಗಿ ಮರವಟ್ಟು ಕುಳಿತಿದ್ದರಂತೆ. ಬಾಗಿಲು ಹಾಗೇ ತೆರೆದಿತ್ತು. ಕಳ್ಳನೊಬ್ಬ ಕಾದು ಹೊಂಚಿ ಒಳನುಗ್ಗಿ ಅವರ ಪೆನ್ನು, ಗಡಿಯಾರ ಮತ್ತು ಬೆಳ್ಳಿಯ ಸಾಮಾನುಗಳನ್ನು ಹೊತ್ತುಕೊಂಡು ಹೋದನು. ಅದರ ಸುಳಿವೂ ಗೊತ್ತಾಗಲಿಲ್ಲ, ಅನನ್ಯಮನಸ್ಕರಾಗಿದ್ದ ಅವರಿಗೆ. ಬಹುಶಃ ಕಳ್ಳನೂ ಅವರಿಗೆ ಮೂರ್ಛೆರೋಗ ಬಂದಿದೆಯೆಂದು ಭಾವಿಸಿದನೋ

---

* ಪುಟ ೧೯೩ † ಪುಟ ೧೯೩ ‡ ಪುಟ ೪೦೫

ಏನೊ ! ಆದರೆ ಕಳ್ಳ ಬೇರೆಲ್ಲೋ ಕಳ್ಳತನ ಮಾಡುವಾಗ ಸಿಕ್ಕಿಬಿದ್ದ ಕದ್ದಮಾಲಿನೊಡನೆ. ಆಗ ವಿಷಯ ತಿಳಿದು ಅವರು ಕೋರ್ಟಿನಲ್ಲಿ ಸಾಕ್ಷಿ ನುಡಿದು ತಮ್ಮ ಸಾಮಾನುಗಳನ್ನು ಹಿಂದಕ್ಕೆ ಪಡೆದರು. ಅವರೊಡನೆ ಸಂಪರ್ಕವಿದ್ದು ಅವರೊಡನೆ ತಿರುಗಾಡಲು ಹೋದಾಗ ಅವರು ಹೇಗೆ ಅಸ್ತರವಿಯನ್ನು, ರಾಗರಂಜಿತ ವ್ಯೋಮರಮ್ಯತೆಯನ್ನು ನೋಡಿ ಪರವಶರಾಗುವುದನ್ನು ಕಾಣುವ ಸೌಭಾಗ್ಯ ಪಡೆದಿರುವ ಸಹೃದಯರಿಗೆ ಶ್ರೀಯುತರ ಈ ವಿಶಿಷ್ಟಗುಣವೇ ಹೂವಯ್ಯನಲ್ಲಿ ಮೂರ್ತಿಗೊಂಡಿದೆಯೆಂದು ಸಂದೇಹವಾಗುತ್ತದೆ.

ಪ್ರೌಢಶಾಲೆಯ ವಿದ್ಯಾರ್ಥಿಯಾಗಿದ್ದಾಗಲೇ ಕಾದಂಬರಿಕಾರರು ಸಾಹಿತ್ಯಾಭಿರುಚಿಯನ್ನು ಬೆಳೆಸಿಕೊಂಡು ಅನೇಕ ಉದ್ದಾಮ ಕಾವ್ಯಗಳನ್ನು ಓದಿ ರಸಾಸ್ವಾದನೆಗೈದುದು ಮಾತ್ರವಲ್ಲ ಕೃತಿರಚನೆಗೂ ತೊಡಗಿದ್ದರು. ಆಗ ಅವರ ಮೆಚ್ಚಿನ ಕವಿಗಳು ವರ್ಡ್ಸ್‌ವರ್ತ್, ಆರ್ನಾಲ್ಡ್, ಮಿಲ್ಟನ್, ಷೇಕ್ಸ್‌ಪಿಯರ್ ಮೊದಲಾದವರು. ಸರಸ್ವತಿ ಅವರಿಗೆ ಪ್ರಸನ್ನಳಾಗಿದ್ದಳು. ಆ ವಯಸ್ಸಿನಲ್ಲೆ ಅವರು ಕನ್ನಡ, ಅದಕ್ಕಿಂತ ಹೆಚ್ಚಾಗಿ ಇಂಗ್ಲಿಷ್ ಸಾಹಿತ್ಯಗಳನ್ನು ಆಳವಾಗಿ ಅಭ್ಯಸಿಸಿ ವಿದ್ವತ್ತನ್ನೂ ಸಂಪಾದಿಸಿದ್ದರು. ಕಾಲೇಜ್ ವಿದ್ಯಾಭ್ಯಾಸವನ್ನು ಮುಗಿಸುವಷ್ಟರಲ್ಲಿ ಅವರ ದೈವದತ್ತ ಸ್ಫೂರ್ತಿ, ಪ್ರತಿಭೆ ವಿಕಾಸವಾಗಿ ಕಾವ್ಯಕುಸುಮವನ್ನು ಧರಿಸಿತು. ತರುಣ ಕವಿ ದಿನದಿನವೂ ಪ್ರಬುದ್ಧಮಾನರಾಗಿ ಮಹಾಕವಿ ಪಟ್ಟಕ್ಕೇರತೊಡಗಿದರು. ಹೂವಯ್ಯನೂ ಸಾಹಿತ್ಯಪ್ರೇಮಿ, ಕವಿಶಿಷ್ಯ. ಮಹಾಪುರುಷರ ಜೀವನಚರಿತ್ರೆ, ಕಾವ್ಯಗಳನ್ನು ಓದಿದ ಅವನ ಹೃದಯ ರಸಾತ್ಮಕವಾಗಿದೆ, ಶ್ರೀಮಂತವಾಗಿದೆ, ದುಗುಡ, ಬೇಸರ, ನಿರಾಶೆಗಳಲ್ಲಿ ಬೆಕಕುಕಂಡು ಸುಖಿಯಾಗಿದೆ. ಲೇಖಕರಂತೆ ಅವನೂ ಧ್ಯಾನಜೀವಿ. ಮನೆ ಪಾಲಾಗಿ ವಿದ್ಯಾಭ್ಯಾಸ ನಿಂತರೂ ಅವನ ಕಲಾಭಿರುಚಿ, ಸಾಹಿತ್ಯಾಭಿರುಚಿ ಕುಗ್ಗುವುದಿಲ್ಲ. ಉತ್ತಮ ಗ್ರಂಥಗಳ ರಾಶಿಯನ್ನು ಬೆಂಗಳೂರಿನಿಂದ ತರಿಸಿ ಮನೆಯಲ್ಲಿ ವಿದ್ಯಾದೇವತೆಯನ್ನು ಆರಾಧಿಸುತ್ತಾನೆ. ವರ್ಡ್ಸ್‌ವರ್ತ್, ಆರ್ನಾಲ್ಡ್‌ರ ಕಾವ್ಯಸಂಪತ್ತಿನಲ್ಲಿರುವ ಕಾದಂಬರಿಕಾರರ ಒಲವು 'ವರ್ಡ್ಸ್‌ವರ್ತ್—ಮ್ಯಾಥೂ ಆರ್ನಾಲ್ಡ್' ಎಂಬ ಅಧ್ಯಾಯದಲ್ಲಿ ಚಿತ್ರಿತವಾಗಿದೆ ಎನ್ನಬಹುದು.

ಕಾದಂಬರಿಕಾರರು ಉಜ್ವಲ ದೇಶಪ್ರೇಮಿಗಳು. ವಿದ್ಯಾರ್ಥಿ ದೆಸೆಯಿಂದಲೂ ಸ್ವದೇಶಿ ವಸ್ತ್ರಧಾರಿಗಳು. ನುಡಿ ಮತ್ತು ನಾಡಿನ ಮೇಲಿರುವ ಅವರ ಒಲವು ಅನುಪಮವಾದುದು. ಹೆರರ ಕ್ರೂರ ಆಡಳಿತಕ್ಕೆ ಸಿಕ್ಕಿ ಎಲ್ಲಾ ಕ್ಷೇತ್ರಗಳಲ್ಲಿಯೂ ಚೈತನ್ಯಶೂನ್ಯವಾದ, ದಾರಿದ್ರ್ಯಕ್ಕೆ ನೆಲೆಯಾದ ತಾಯ್ನಾಡಿನ ದೀನ ಸ್ಥಿತಿಯನ್ನು ಕಣ್ಣಾರೆ ಕಂಡು ಎಷ್ಟು ಕಂಬನಿ ಮಿಡಿದಿದ್ದಾರೊ ! ಅದರ ಗತವೈಭವವನ್ನು ನೆನೆದು ಎಷ್ಟು ಉಮ್ಮಳಿಸಿದ್ದಾರೊ ! ಯಾವ ಸ್ವಾತಂತ್ರ್ಯಚಳುವಳಿಯಲ್ಲಿಯೂ ಅವರು ಪ್ರಮುಖ ಪಾತ್ರ ವಹಿಸದಿದ್ದರು ಗ್ರಾಮೋದ್ಧಾರ ಮೊದಲಾದ ರಚನಾತ್ಮಕ ಕಾರ್ಯಗಳಲ್ಲಿ ನಿರತರಾಗಿ ತಮ್ಮ ಕೈಲಾದ ಸೇವೆ ಸಲ್ಲಿಸಲು ಹಂಬಲಿಸಿದರು. ಮಲೆನಾಡಿನ ಜನರ ಮೂಢನಂಬಿಕೆ

ಮತ್ತು ಮೌಢ್ಯವನ್ನು ತೊಲಗಿಸಲು ಮತ್ತು ಅವರಲ್ಲಿ ಸಾಹಿತ್ಯಾಭಿರುಚಿಯನ್ನು ಹುಟ್ಟಿಸಲು ಕಾದಂಬರಿಕಾರರು ತಮ್ಮ ಓರಗೆಯವರು ಮತ್ತು ಜೊತೆಗಾರರೊಡನೆ ಸೇರಿಕೊಂಡು ಒಂದು "ಯುವಕ ಸಂಘ" ವನ್ನು ಸ್ಥಾಪಿಸಿದ್ದರು. ಅಲ್ಲಲ್ಲಿ ಸಭೆಗಳನ್ನು ಏರ್ಪಡಿಸಿ ಭಾಷಣ ಮತ್ತು ಕಾವ್ಯವಾಚನವನ್ನು ನಡೆಸುತ್ತಿದ್ದರು. 'ಯುವಕ ಸಂಘ' ಹತ್ತಾರು ವರ್ಷಗಳ ಕಾಲ ರಚನಾತ್ಮಕ ಕಾರ್ಯದಲ್ಲಿ ತೊಡಗಿತ್ತು. ಅಲ್ಲಿದೆ ನೂರಾರು ಮಂದಿ ನೂರಾರು ವೇದಿಕೆಗಳಲ್ಲಿ ನಿಂತು ಮಾಡುವ ಭಾಷಣದ ಕೆಲಸಕ್ಕಿಂತ ಅಮೋಘವಾದ ಶಾಶ್ವತವಾದ ಕಾರ್ಯವನ್ನು, ಹೇಡಿಯ ಎದೆಯಲ್ಲೂ ಕೆಚ್ಚೇಳಿಸುವ ದೇಶಪ್ರೇಮ ಗೀತೆಗಳ ಮೂಲಕ ಮಾಡಿದ್ದಾರೆ, ಮಾಡುತ್ತಿದ್ದಾರೆ. ಕೇಕಾನೂರಿಗೆ ಹೋದಮೇಲೆ ಹೂವಯ್ಯನು ಹರಿಕತೆಯನ್ನು ಹೇಳುತ್ತೇನೆಂದು ಹಳ್ಳಿಗರನ್ನು ಒಟ್ಟುಗೂಡಿಸಿ ಅವರ ಮೂಢ ನಂಬಿಕೆಯನ್ನು ಖಂಡಿಸುವನು. ಮಹಾಪುರುಷರ ಚರಿತ್ರೆಯನ್ನು ಓದಿ ಅವರಂತೆ ತಾನೂ ಆಗಲು ಹೂವಯ್ಯ ಹಾದಿ ಬಟ್ಟೆ ಹುಡುತ್ತಾನೆ. ಕಾನೂರಿನಲ್ಲಿ ಪತ್ರಿಕೆಯನ್ನು ಓದಿ—"ಮುಖ್ಯವಾಗಿ ಭಾರತೀಯರ ಸ್ವರಾಜ್ಯ ಸಂಪಾದನೆಯ ಪ್ರಯತ್ನ, ಸಂಕಟಗಳು, ರಾಷ್ಟ್ರನಾಯಕರ ಆಂದೋಲನಕಾರಕ ಉಪನ್ಯಾಸಗಳು, ಬ್ರಿಟಿಷರ ದಬ್ಬಾಳಿಕೆಯ ನಡತೆಗಳು, ದಕ್ಷಿಣ ಆಫ್ರಿಕಾದಲ್ಲಿ ಭಾರತೀಯರ ಮೇಲೆ ನಡೆಯುತ್ತಿದ್ದ ಅತ್ಯಾಚಾರಗಳು, ಮುಖಂಡರ ದಸ್ತಗಿರಿಗಳು—ಇವುಗಳೆಲ್ಲವನ್ನೂ ಓದುತ್ತ ಓದುತ್ತ ಅವನ ಆತ್ಮವು ಸಂಕಟಕ್ಕೀಡಾಯಿತು........ಹೂವಯ್ಯನಿಗೆ ಲಜ್ಜೆ, ಶೋಕ, ಜುಗುಪ್ಸೆ, ಮುನಿಸು, ಆಸೆ—ಎಲ್ಲವೂ ಉಂಟಾದುವು....ಹಿಂದೆ ಮಹಾಪುರುಷರ ಜೀವನ ಚರಿತ್ರೆಗಳನ್ನು ಓದಿದಾಗ ತಾನೂ ಅವರಂತಾಗಬೇಕೆಂದು ಕಟ್ಟಿದ್ದ ಹೊಂಗನಸಿನ ಹಡಗು ಯಾವುದೋ ಅಜ್ಞಾತವಾದ ಮರಳು ದಿಣ್ಣೆಗೆ ಢಿಕ್ಕಿಹೊಡೆದು ನಡೆಗೆಟ್ಟು ನಾಶವಾಗುವುದರಲ್ಲಿದೆಯಲ್ಲಾ! ಹೇ ಜಗದೀಶ್ವರ, ಇದರಿಂದ ಪಾರಾಗುವ ಹೃದ್ಬಲವನ್ನೂ, ಮಹಾಕಾಂಕ್ಷೆಯನ್ನು ಸಾಧಿಸುವ ದೃಢ ಮನಸ್ಸನ್ನೂ ದಯಪಾಲಿಸು"* ಎಂದು ಮೊರೆಯಿಡುತ್ತಾನೆ. ಹೂವಯ್ಯ ಮತ್ತು ಕಾದಂಬರಿಕಾರರ ಆಕಾಂಕ್ಷೆ ಒಂದೇ. ಆದರೆ ಅದನ್ನು ಕಾದಂಬರಿಕಾರರು ಲೇಖನಿಯ ಮೂಲಕ ಕೈಗೊಂಡರೆ ಹೂವಯ್ಯ ರಚನಾತ್ಮಕ ಮಾರ್ಗದಲ್ಲಿ ಮಾಡುತ್ತಾನೆ. ಅರ್ಧಸಂಸ್ಕೃತ, ಅಸಂಸ್ಕೃತ, ಅನಾಗರಿಕ ಹಳ್ಳಿಗರ ಹೃದಯದಲ್ಲಿ ಜ್ಞಾನ ಜ್ಯೋತಿಯನ್ನು ಬೀರುತ್ತಾನೆ. ಕಾಡಿಗೆ ನಾಗರಿಕತೆ ಕಾಲಿಟ್ಟು ಅನೇಕ ಬದಲಾವಣೆಗಳಾಗುತ್ತವೆ. "ಕಾನೂರಿನಲ್ಲಿ ಹೂವಯ್ಯನ ಪ್ರಯತ್ನದಿಂದ ಬೇಲರೂ ಸೇರೆಗಾರ ಸೋಮಯ್ಯಶೆಟ್ಟರೂ ಗಟ್ಟದವರೂ ಕುರಿಮಂದೆಯಂತೆ ಬಿಡಾರಗಳನ್ನು ಕಟ್ಟಿಕೊಂಡು ಹಂದಿಯಂತೆ ವಾಸಮಾಡುವುದಕ್ಕೆ ಬದಲಾಗಿ ಸುವ್ಯವಸ್ಥಿತವಾದ ಸಣ್ಣ ಸಣ್ಣ ಮನೆಗಳಲ್ಲಿ ಆದಷ್ಟು ಚೊಕ್ಕಟವಾಗಿ ಬದುಕುತ್ತಿದ್ದರು. ಕಾಯಿಲೆ ಬಂದರೆ ಜೋಯಿಸರಲ್ಲಿಗೆ ಹೋಗುವುದಕ್ಕೆ ಬದಲಾಗಿ ಆಸ್ಪತ್ರೆಗೆ ಹೋಗುವುದನ್ನು ಕಲಿತಿದ್ದರು."†

---

*ಪುಟ ೩೨೧ †ಪುಟ ೬೨೮

ರಸಿಕತೆ ಕವಿಗೆ ನೈಸರ್ಗಿಕ. ಹೂವಯ್ಯನೂ ರಸಿಕ. ಕೆಳ ಕಾನೂರಿನ ಮನೆ ಇವನ ಕೈಯಲ್ಲಿ ಹೊಸರೂಪ ತಾಳುತ್ತದೆ. ತನ್ನ ಕಲಾಭಿರುಚಿ ರಸಿಕತೆಯನ್ನು ಮನೆಯ ಅಲಂಕಾರ ಕಾರ್ಯದಲ್ಲಿ ತೋರಿಸುತ್ತಾನೆ. "ನೂರಾರು ಚಿತ್ರಪಟಗಳು ಗೋಡೆಯನ್ನಲಂಕರಿಸಿದುವು. ಜಗುಲಿಯ ನಡುವೆ ಕುರ್ಚಿಮೇಜುಗಳನ್ನಿಟ್ಟು, ಅದಕ್ಕೆ ಸಮೀಪವಾಗಿ ಬೀರುವನ್ನಿಟ್ಟು, ಗ್ರಂಥರಾಶಿಯನ್ನು ಅಂದವಾಗಿ ಜೋಡಿಸಿದನು."* ಅವನ ಪ್ರಯತ್ನದಿಂದ ಹುಲ್ಲುಮನೆ ಪರ್ಣಕುಟಿಯಾಗುವುದು.

ಹೂವಯ್ಯನಂತೆ ಕಾದಂಬರಿಕಾರರೂ ತಮ್ಮ ತಾಯಿತಂದೆಗಳಿಗೆ ಒಬ್ಬರೇ ಮಗ. ತಂದೆಯನ್ನು ಬಾಲ್ಯದಲ್ಲಿಯೇ ಕಳೆದುಕೊಂಡರು. ತಂದೆಯಲ್ಲಿದ್ದ ಅವರ ಪೂಜ್ಯ ಭಾವನೆ ಹೂವಯ್ಯನಲ್ಲಿ ಕಾಣಿಸಿಕೊಂಡಿದೆಯೆನ್ನಬಹುದು. "ನಮ್ಮ ತಂದೆ ಗೌರವಿಸಿದ ನಿಮ್ಮನ್ನು ನಾನೂ ಗೌರವಿಸುತ್ತೇನೆ" ಎಂದು ಹೂವಯ್ಯ ವೆಂಕಪ್ಪ ಜೋಯಿಸರಿಗೆ ಹೇಳುತ್ತಾನೆ.

ಕಾದಂಬರಿಕಾರರ ತಾಯಿಯವರು ಮಗನನ್ನು ಬಹಳ ಅಕ್ಕರೆಯಿಂದ ಸಲಹಿದರು. ಅವರ ಪುತ್ರವಾತ್ಸಲ್ಯ ಅಪಾರವಾದುದು. ಮಗನ ಶ್ರೇಯಸ್ಸೇ ಅವರ ಉಸಿರು. ಮಗ ಅಸದೃಶವಾದ, ಶಾಶ್ವತವಾದ ಕೀರ್ತಿ ಸಂಪಾದಿಸಿ ಲೋಕ ಪ್ರಸಿದ್ಧರಾಗುವಷ್ಟರಲ್ಲೆ ಆ ಮಹಾಮಾತೆ ಕಣ್ಣುಮುಚ್ಚಿಕೊಂಡರು. ತಮ್ಮ ಮಾತೃವಾತ್ಸಲ್ಯ, ಅದರ ಹಿರಿಮೆ ಗರಿಮೆಗಳನ್ನು ನಾಗಮ್ಮನವರ ಪಾತ್ರದಲ್ಲಿ ತೋಡಿಕೊಂಡಿದ್ದಾರೆನ್ನಬಹುದು. ನಾಗಮ್ಮನವರ ಒಬ್ಬನೇ ಮಗ ಹೂವಯ್ಯ. ಹೂವಯ್ಯನ ತಂದೆ ಸುಬ್ಬಯ್ಯ ಗೌಡರು ಹಿಂದೆಯೇ ರೇಷ್ಮೆ ಕಾಯಿಲೆಯಿಂದ ಮೃತರಾಗಿದ್ದರು. "ಹುಟ್ಟಿದಂದಿನಿಂದಲೂ ಹೂವಯ್ಯನ ಮೇಲೆ ನಾಗಮ್ಮನವರಿಗೆ ಅತಿ ಅಕ್ಕರೆ....ಒಟ್ಟು ಕುಟುಂಬದಲ್ಲಿರುವ ತಾಯಂದಿರು ಮಾಡಬಾರದ ಕೆಲಸಗಳನ್ನೂ ಮಗನ ಮೇಲಣ ಒಲ್ಮೆಗಾಗಿ ಮಾಡುತ್ತಿದ್ದರು. ಮಗನಿಗೆ ಪ್ರತ್ಯೇಕವಾಗಿ ತುಪ್ಪ, ಬೆಣ್ಣೆ, ಮೊಸರು ಹುರಿದ ಕೋಳಿ ಮೊಟ್ಟೆ, ಹುರಿತುಂಡು ಮೊದಲಾದುವುಗಳನ್ನು ಕದ್ದಿಟ್ಟು ಕೊಡುತ್ತಿದ್ದರು.....ಅವರಿಗೆ ಹೂವಯ್ಯನೇ ಪ್ರಪಂಚ, ಪ್ರಪಂಚವೇ ಹೂವಯ್ಯ ಆಗಿತ್ತು." ಹೂವಯ್ಯನಿಗೆ ಬೆನ್ನು ನೋವಾದ ಸುದ್ದಿಯನ್ನು ಕೇಳಿದ ನಾಗಮ್ಮನವರ ಶೋಕ ವರ್ಣನಾತೀತ. "ಪುತ್ರ ಕ್ಷೇಮಕಾತುರರಾದ ನಾಗಮ್ಮ 'ಭಗವಂತ, ಭಗವಂತ, ನನ್ನ ಮಗನನ್ನು ಕಾಪಾಡು ನನಗೆ ದಿಕ್ಕಿಲ್ಲ' ಎಂದು ಗುಟ್ಟಾಗಿ ಅಳುತ್ತಿದ್ದರು." ಅವರು ಮರಣೋನ್ಮುಖರಾಗಿ 'ಅಪ್ಪಾ ನಾನೇನೋ ಹೋಗ್ತೀನಿ ನಿನ್ನ ಗತಿ ಏನು?' ಎಂದು ದುಃಖಿಸಿದರೂ ಸಾಯುವ ಸಮಯದಲ್ಲಿ ಮಗನನ್ನು ಪ್ರೀತಿಯಿಂದ ನೋಡುತ್ತಾ ಸಂತೋಷದಿಂದ ಕಣ್ಣುಮುಚ್ಚಿಕೊಂಡರಂತೆ."

ಕವಿಸಹಜವಾದುದು ಕಾದಂಬರಿಕಾರರ ನಡೆನುಡಿ. ಯಾವುದಾದರೂ ವಿಷಯ

---

*ಪುಟ ೩೬೨

ವನ್ನು ಮಾತನಾಡುವಾಗ ಅಥವಾ ತರಗತಿಯಲ್ಲಿ ಪಾಠಮಾಡುವಾಗ ಭಾವೋದ್ರೇಕ ವಶರಾಗಿ ಕಾವ್ಯವಾಣಿಯಿಂದ ಮಾತನಾಡುವುದು ಅವರ ವಿಶಿಷ್ಟಗುಣ. ಆಗ ಅದನ್ನು ಕೇಳುವವರ ಆತ್ಮ ಗರಿಗೆದರಿ ಗಗನಗಾಮಿಯಾಗುತ್ತದೆ. ಸೀತೆಯೊಡನೆ ಹೂವಯ್ಯ ಗಹನ ವಿಷಯಗಳನ್ನು ಸರಳವಾಗಿ ಹೇಳುವಂತೆ ಹೇಳುವುದೂ ಅವನಿಗೆ ಸಹಜ. ಹೂವ ಯ್ಯನ ಮಾತನ್ನು ಕೇಳುತ್ತ "ಮನೋಹರವಾದ ನೂತನ ಪ್ರಪಂಚವನ್ನು ಸಂದರ್ಶಿ ಸಲು ಪ್ರಯಾಣ ಬೆಳಸುವ ಯಾತ್ರಿಕನಿಗಾಗುವ ಉಲ್ಲಾಸದ ಅನುಭವ" ಸೀತೆಗಾ ದಂತೆ ಕೇಳುವವರಿಗೂ ಆಗದಿರದು. ಬುದ್ಧನ ಕಥೆಯನ್ನು ಕೇಳುವವರು ಕಣ್ಣೀರು ಮಿಡಿಯುವಂತೆ ಹೂವಯ್ಯ ಹೇಗೆ ನಿರೂಪಿಸುವನೋ ಹಾಗೆ ಕವಿತಾವೇಶದಿಂದ ಶ್ರೀ ಮಂತ ಕಾವ್ಯವಾಣಿಯಲ್ಲಿ ಮಾತನಾಡಬಲ್ಲರು. ಆಗ ಮೊದಲೇ ಕೆಂಪಾದ ಅವರ ಮುಖ ಭಾವೋತ್ಕರ್ಷದಿಂದ ಅದೇ ಅಭ್ಯಂಜನ ಸ್ನಾನ ಮಾಡಿ ಬಂದವರಂತೆ ಆರಕ್ತ ವಾಗುತ್ತದೆ.

ಬಾಲ್ಯದಿಂದಲೂ ಕಾದಂಬರಿಕಾರರು ಶಾಂತ ಚಿತ್ತರು, ಏಕಾಂತ ಪ್ರಿಯರು. ತಮ್ಮ ಅಭ್ಯಾಸ, ಪ್ರಾರ್ಥನೆ. ಧ್ಯಾನವಾಯಿತು ತಾವಾಯಿತು. ನಿಷ್ಪ್ರಯೋಜಕವಾದ ಗೊಡ್ಡು ಹರಟೆಯಲ್ಲಿ ಕಾಲ ಕಳೆದವರಲ್ಲ ಅಥವಾ ಬಾಳಿನ ಒಂದು ಚಣವನ್ನೂ ಅಕಾ ರಣವಾಗಿ ಕಳೆಯುವವರಲ್ಲ. ಸೋಮಾರಿತನಕ್ಕೂ ಅವರಿಗೂ ಬಹುದೂರ. ಅವರ ಮೌನ ಭೂಮಿಯ ಅಂತರಾಳದಲ್ಲಿ ಕ್ರಿಯಾಶೀಲವಾದ ಅಗ್ನಿರಸ ಪ್ರವಹಿಸುತ್ತಿರುತ್ತದೆ. ಕಾಲದ ಬೆಲೆಯರಿತು ಪ್ರತಿಯೊಂದು ಕೆಲಸಕ್ಕೂ ತಕ್ಕ ಕಾಲವನ್ನು ವಿನಿಯೋಗಿಸು ತ್ತಾರೆ. ಯಾವ ವೈಪರೀತ್ಯಕ್ಕೂ ಎಡೆಗೊಡುವುದಿಲ್ಲ. ಸುಸಂಸ್ಕೃತವೂ ಪರಿಷ್ಕೃತವೂ ಆದ ಅವರ ನಡೆನುಡಿಯಲ್ಲಿ ಶ್ರೀಮದ್‌ಗಾಂಭೀರ್ಯ, ಮುಖದಲ್ಲಿ ಸೌಮ್ಯಮಂದ ಹಾಸ, ಪೌರುಷ, ಆಧ್ಯಾತ್ಮಿಕತೆ, ಅಂತರ್ಮುಖತೆ, ರಸಿಕತೆ, ಮೇಧಾಶಕ್ತಿ, ಚಿತ್ತದೃಢತೆ, ಭವ್ಯತೆ ಮತ್ತು ದಿವ್ಯತೆ ಎದ್ದು ಕಾಣುತ್ತವೆ. ಈ ಅಸದೃಶ ಗುಣಗಳು, ಲಕ್ಷಣಗಳು ಹೂವಯ್ಯನಲ್ಲಿಯೂ ಮನೆಮಾಡಿವೆ. ಸೌಮ್ಯಮೂರ್ತಿಯಾದ ಆತನೂ ನಿಸ್ಸಂಗಿ, ಗಂಭೀರ ಸರಸಿ. ನಿರಾಡಂಬರವ್ಯಕ್ತಿಯಾದ ಅವನಿಗೆ 'ಸರಳ ಸೌಂದರ್ಯವೇ ಒಂದು ಗಂಭೀರ ಭೋಗವಾಗಿದೆ'. ಧ್ಯಾನಜೀವಿ ಕಾದಂಬರಿಕಾರರು. ಆದ್ದರಿಂದಲೇ ಅವರ ಭಾವನಾಬ್ಧಿಯಿಂದ ಹೊಮ್ಮಿದ ಕೃತಿರತ್ನಗಳು ಹಲವಾರು. ಸದಾ ಧ್ಯಾನಜೀವಿಯಾದ ಅವರಿಗೆ ಲೌಕಿಕ ವ್ಯವಹಾರದ ಕ್ಷುದ್ರತೆ, ನೀಚತೆಯಲ್ಲಿ ಜಿಗುಪ್ಸೆ, ವಿಮನಸ್ಸು. ಹಾಗೆಯೇ "ಅತಿ ಭಾವಜೀವಿಯಾಗಿದ್ದ ಹೂವಯ್ಯನಿಗೆ ಪ್ರಪಂಚದ ವ್ಯವಹಾರದ ಒರಟುತನವಿನ್ನೂ ಅನುಭವಕ್ಕೆ ಬಂದಿರಲಿಲ್ಲ. ಅದರಲ್ಲಿಯೂ ಅವನಿಗೆ ತಿಳಿದಿದ್ದ ಪ್ರಣಯ ಪ್ರಪಂಚವೆಂದರೆ ಕಾವ್ಯದ ಕಿನ್ನರಜಗತ್ತು." ಭಾವನಾ ಪ್ರಪಂಚದಲ್ಲಿ ವಿಹ ರಿಸಿ ಲೌಕಿದ ಜೀವನದ ವ್ಯವಹಾರವನ್ನು ಎದುರಿಸಬೇಕಾಗಿ ಬಂದಾಗ ಅವನಿಗಾದ ಹತಾಶೆಗೆ ಪಾರವಿದೆಯೆ! ಮತ್ತೆ ಅವನು ಭಾವಜೀವಿಯಾಗುವತನಕ ನಿರಾಶೆ ಕವಿ ಯುವುದು.



ಸ್ವಾಭಾವಿಕವಾಗಿ ಮಲೆನಾಡಿಗರು ಮೃಗಯಾವ್ಯಸನಿಗಳು. ಪುಟ್ಟಣ್ಣನಂಥ ಒಳ್ಳೆಯ ಈಡುಗಾರರು ಹಳ್ಳಿಹಳ್ಳಿಗೂ ಇದ್ದಾರೆ. ನಾಗರೀಕ ಪ್ರಪಂಚಕ್ಕೆ ದೂರರಾದ ಅವರಿಗೆ ಬೇಟೆ ಒಂದು ಮನರಂಜನೆಯಾಗಿದೆ, ಅವಶ್ಯಕ ಕ್ರೀಡೆಯಾಗಿದೆ. ಬೇಟೆಯಲ್ಲಿ ಕಾದಂಬರಿಕಾರರು ಆಸಕ್ತರು. ಬೇಟೆಯ ಮತ್ತು ನಿಸರ್ಗ ಸೌಂದರ್ಯಾಸ್ವಾದನೆಯ ನೆವದಲ್ಲಿ ಕೋವಿಯನ್ನು ಹೆಗಲಿಗೇರಿಸಿ ಪುಟ್ಟಣ್ಣನಂಥ ಬೇಟೆಗಾರರೊಡನೆ ಕಾಡು ಕಣಿವೆಗಳಲ್ಲಿ ಹಗಲೆಲ್ಲಾ ದಣಿವಿಲ್ಲದೆ ಅಲೆದಿರಬಹುದು. ತಾವೇ ಬೇಟೆಗಾರರಾಗಿಲ್ಲ ದಿದ್ದರೆ ಕೃಷ್ಣಪ್ಪನ ಹುಲಿ ಶಿಕಾರಿ; ಪುಟ್ಟಣ್ಣನ ಕಣೇಹಂದಿಯ ಬೇಟೆಯ ವರ್ಣನೆ ನಿಸ್ಸಾರವಾಗುತ್ತಿತ್ತು. ಹೂವಯ್ಯನೂ ಬೇಟೆಗಾರ. ಬೆಂಗಳೂರಿಂದ ಇಪ್ಪತ್ತೈದು ರೂಪಾಯಿ ಕೊಟ್ಟು 'ಟೈಗರ್' ನಾಯಿ ತಂದಿದ್ದ. ಪುಟ್ಟಣ್ಣನೊಡನೆ ನಾಲ್ಕಾರು ಸಾರಿ ಬೇಟೆಗೆ ಹೋಗಿದ್ದ. ಒಮ್ಮೆ ಒಂದು ಮಿಗವನ್ನೂ ಹೊಡೆದುರುಳಿಸಿದ್ದ. ಆದರೆ ಮುಂದೆ ತತ್ವಜೀವಿಯಾಗಿ ಶಿಕಾರಿಬಿಟ್ಟುದನ್ನು "ಮೊದಲಿಗೆ ಬೇಟೆ ಅಂದರೆ, ಪ್ರಾಣ ಬಿಡ್ತಿದ್ದರಲ್ಲಾ? ಈಗ ಅದರ ತಂಟೆಗೇ ಹೋಗೋದಿಲ್ಲ" ಎಂದು ಪುಟ್ಟಣ್ಣ ಓಬಯ್ಯ ನೊಡನೆ ಹೇಳುತ್ತಾನೆ. ಮನೆ ಪಾಲಾದಾಗ ಪುಟ್ಟಣ್ಣ ಹೂವಯ್ಯನ ಪಕ್ಷ ಸೇರಲು ಹೂವಯ್ಯನೂ ಪುಟ್ಟಣ್ಣನಂತೆ ಬೇಟೆಗಾರನಾಗಿದ್ದುದೂ ಒಂದು ಕಾರಣವಲ್ಲವೆ!

ಸದಾ ಸೌಮ್ಯಮೂರ್ತಿಯೂ ತೇಜೋಮಯರೂ ಪ್ರಸನ್ನವದನರೂ ಆದ ಕಾದಂಬರಿಕಾರರಿಗೆ ಕೋಪ ಬರುವುದು ಅಪೂರ್ವ. ಅವರ ಹೃದಯ ಕುಸುಮದಂತೆ ಕೋಮಲವಾದುದು. ವಜ್ರದಂತೆ ಕಠೋರವೂ ಆಗಬಲ್ಲುದು. ಹಾಗೆಯೇ ಸದಾ ವಿನ ಯಿಯೂ ಹಸನ್ಮುಖಿಯೂ ಸೌಮ್ಯಸುಂದರಮೂರ್ತಿಯೂ ಆದ ಹೂವಯ್ಯ ಕೋಪ ಗೊಂಡಾಗ ಅವನ ಎದುರಿಗೆ ಉಳಿದವರಿರಲಿ "ಮೀಸೆ ಹುರಿಮಾಡಿ, ಕಣ್ಣು ಕೆಂಪಗೆ ಮಾಡಿಕೊಂಡು ರಭಸದಿಂದ ಅನಾಗರಿಕವಾಗಿ ವರ್ತಿಸುತ್ತಿದ್ದ ಚಂದ್ರಯ್ಯಗೌಡರೂ" ಹೆದರಬೇಕಾಗುತ್ತದೆ. ಬೈರಸಿಗೆ ಪಡಿಕೊಡಲು ಸೇರೆಗಾರರು ನಿರಾಕರಿಸಿದಾಗ "ಓದು ತ್ತಿದ್ದ ಗ್ರಂಥವನ್ನು ಕೈಯಲ್ಲಿ ಹಿಡಿದು ಸರೋಷಭಂಗಿಯಿಂದ ಹೂವಯ್ಯನು ವೇಗ ವಾಗಿ ನಡೆದುಬಂದು 'ಪುಟ್ಟಣ್ಣಾ, ಅಲ್ಲಿಂದೇಳು' ಎಂದು ಭೀಷಣಧ್ವನಿಯಿಂದ ನುಡಿ ದನು. ಅವನ ಕಣ್ಣು ಕಿಡಿಕಿಡಿಯಾಗಿದ್ದುದು ಆ ಬೈಗುಗಪ್ಪಿನಲ್ಲಿಯೂ ಎಲ್ಲರಿಗೂ ಗೊತ್ತಾಗುವಂತಿತ್ತು." "ಆ ಭೀಷ್ಮವ್ಯಕ್ತಿತ್ವದ ಮುಂದೆ ಸೇರೆಗಾರರು ಕುಗ್ಗಿ ಹೋಗಿ"* ಸುಮ್ಮನೆ ಪಡಿ ಅಳೆದು ಕೊಟ್ಟರು.

ಯಾವ ಸಂಗ ಮಹಿಮೆಯಿಂದಲೋ ಕಾದಂಬರಿಕಾರರು ನಶ್ಯ ಹಾಕುತ್ತಿದ್ದರು. ಅದು ದೀರ್ಘಾಭ್ಯಾಸವಾಗಿದ್ದಿತು. ಆ ಚಟ ಎಷ್ಟು ತೀವ್ರವಾಗಿತ್ತೆಂದರೆ ಒಮ್ಮೆ ನಶ್ಯ ತೀರಿಹೋದಾಗ ತಮ್ಮ ವಿದ್ಯಾ ಗುರುಗಳಿಂದಲೇ ಕೇಳಿ ಅವರ ಡಬ್ಬಿಯಿಂದಲೇ ಒಂದು ಚಿಟಿಕೆ ತೆಗೆದುಕೊಂಡು ಏರಿಸಿಬಿಟ್ಟರಂತೆ! ಆದರೆ ಆ ಅಭ್ಯಾಸ ಕೆಲವು ದಿನ ಮಾತ್ರ

---

*ಪುಟ ೨೦೪

ಬೆನ್ನು ಹತ್ತಿ ಪೀಡಿಸಿತಂತೆ. ಸಂಯಮಿಗಳಾದುದರಿಂದ ಕೆಲವು ದಿನಗಳಲ್ಲಿ ಅದರ ಹಾನಿಯನ್ನರಿತು ಬಿಡಲು ಪ್ರಯತ್ನಿಸಿ ಮೊದಲು ಮೊದಲು ಸೋಲಾದರೂ ಜಯ ಶಾಲಿಗಳಾದರು. ಸಾಹಿತ್ಯಾರಾಧನೆ ಚಟವೆನ್ನುವುದಾದರೆ ಅದನ್ನು ಬಿಟ್ಟು ಮತ್ತೆ ಯಾವ ಚಟಕ್ಕೂ ಇಂದು ದಾಸರಲ್ಲ. ಯಾವ ಚಟವೇ ಆಗಲಿ ಅವರನ್ನೇ ಓಲೈಸ ಬೇಕು. ಹೂವಯ್ಯನೂ ನಶ್ಯ ಹಾಕುತ್ತಿದ್ದು ಪ್ರಯಾಸದಿಂದ ಬಿಟ್ಟಿದ್ದ. ನಾಗಮ್ಮ ನವರು ಎಂದಾದರೊನ್ಮೆ ಕುಡಿಯುವುದನ್ನು ಕಂಡು ರೇಗಿದ "ಹೂವಯ್ಯ ತಾನು ನಶ್ಯ ಹಾಕುವುದನ್ನು ಬಿಡಲು ಪ್ರಯತ್ನಿಸಿದಾಗ, ತನಗಾಗಿದ್ದ ಸೋಲುಗಳನ್ನೂ, ಸಂಕಟಗಳನ್ನೂ ನೆನೆದು ತನ್ನ ತಾಯಿಯ ಅಷ್ಟರಮಟ್ಟಿನ ಸೋಲೂ ಮಹಾಜಯ ವೆಂದೇ ಭಾವಿಸಿ, ಸಹಾನುಭೂತಿಯಿಂದ ಹಿಗ್ಗಿದನು."*

ಸಾಮಾನ್ಯಜನರ ದೃಷ್ಟಿಯಲ್ಲಿ ಮುಖ್ಯವಾದ ಹಣ, ಗೌರವ, ಪ್ರತಿಷ್ಠೆ, ಪದವಿ ಗಳ ಬಗ್ಗೆ ಕಾದಂಬರಿಕಾರರು ವಿರಕ್ತರು. ಅವರ ಭಾಗ್ಯಕ್ಕೆ ಕೀರ್ತಿ ಶನಿ ಇದ್ದಂತೆ. ಆದರೆ ಆ ಕೀರ್ತಿಶನಿಯನ್ನು ಆಚೆಗೆ ತೊಲಗಿಸಲು ಎಷ್ಟೆಷ್ಟು ಪ್ರಯತ್ನಿಸಿದರೂ,ಇಂದುಗೆ ಮೇಘ ಕವಿದರೂ ಲೋಕಕ್ಕೆ ತಂಪು ತಪ್ಪದಂತೆ ಅವರ ಕೀರ್ತಿಚಂದ್ರಿಕೆ ಪ್ರಸರಿಸಿದೆ. ಅಲಭ್ಯವಾದುದಕ್ಕೆ ಆಶಿಸಿ ನಿರಾಶರಾಗುವವರಲ್ಲ. ತಮ್ಮ ಪಾಲಿಗೆ ಬಂದುದರಲ್ಲೆ ತೃಪ್ತರಾಗುವ ತೃಪ್ತಾತ್ಮರು. ಸುಖದಲ್ಲಿ ಹಿಗ್ಗಿ ಕಷ್ಟದಲ್ಲಿ ಕುಗ್ಗುವುದಿಲ್ಲ. ಯಾವ ಲೌಕಿಕ ಚಿಂತೆಯನ್ನು ಅಂಟಿಸಿಕೊಳ್ಳದ ಪರಮಸುಖಜೀವಿ. ಲೌಕಿಕ ಸುಖ ದುಃಖಗಳಿಂದ ನಿರ್ಲಿಪ್ತರು. ಪೂರ್ವಜನ್ಮದ ಸಂಸ್ಕಾರದಿಂದ ಬಂದ ಆಧ್ಯಾತ್ಮಿಕತೆ ಅವರನ್ನು ವರಿಸಿದೆ. ತಾವು ಕಷ್ಟಪಟ್ಟರೂ ಇತರರಿಗೆ ಕೆಡಕು ಮಾಡದ, ತಮಗೇ ಎಲ್ಲವೂ ಬೇಕೆಂಬ ದುರಾಶೆಯಿಲ್ಲದ ಮಹಾಜೀವ. ಗುರುಕೃಪೆ ಭಗವತ್‌ಕೃಪೆಗಲ್ಲದೆ ಹೆರರ ಕೃಪೆಗೆ ಕೈಯೊಡ್ಡುವವರಲ್ಲ. ತಮಗೆ ಅನ್ಯಾಯವಾದರೂ, ಕಿರುಕುಳವಾದರೂ ದೈವೇಚ್ಛೆಯೆಂದು ಸುಮ್ಮನಿದ್ದುಬಿಡುವ ಪ್ರಕೃತಿಯವರು. ಇನ್ನೊಬ್ಬರ ಕಣ್ಣಿನಲ್ಲಿ ದೊಡ್ಡವನಾಗಬೇಕು, ಇನ್ನೊಬ್ಬರ ಮೆಚ್ಚಿಗೆಯನ್ನು ಸಂಪಾದಿಸಬೇಕು, ಅವರ ಕೃಪೆಗೆ ಪಾತ್ರನಾಗಬೇಕು ಎಂಬ ಹಂಬಲವಿಲ್ಲ. ಇವೆಲ್ಲ ನಶ್ವರ, ಹುಲ್ಲುಬೆಂಕಿಯಂತೆ, ಶರತ್ಕಾಲದ ಮುಗಿಲಂತೆ, ಮಿಂಚಿಲ್ಲ, ಮಳೆಯಿಲ್ಲ! ಒಬ್ಬ ಕೆಡಬೇಕಾದರೂ ಅಥವಾ ಉದ್ಧಾರವಾಗಬೇಕಾದರೂ ಈಶ್ವರೇಚ್ಛೆ ಇದ್ದೇ ತೀರಬೇಕು. ಹೂವಯ್ಯನಾದರೂ ಎಂಥ ವಿರಕ್ತ! "ಇವನಂತೂ ಬಸವನಂತಾ ಮನುಷ್ಯ! ಸನ್ನೇಸಿಹಾಂಗೆ ಏನೂ ಬ್ಯಾಡ ಅಂತಾನೆ!" ಎಂದು ನಾಗಮ್ಮನವರೆ ಹೇಳುತ್ತಾರೆ ಕಾನೂರು ಮನೆ ಪಾಲಾದಾಗ. ಪರಮಸಾತ್ವಿಕನಾದ ಹೂವಯ್ಯ "ಅವರ ಅನ್ಯಾಯ ಅವರಿಗೇ ಇರಲಿ! ನಮಗೆ ಹೊಟ್ಟೆಗೆ ಬಟ್ಟೆಗೆ ಸಿಕ್ಕಿದರಾಯ್ತು! ಅದೂ ಅಲ್ಲದೆ ಚಿನ್ನ ತುಂಬಿಕೊಂಡು ಸುಖ ಪಟ್ಟೋರು ಪ್ರಪಂಚದಲ್ಲಿ ಬಹಳ ಜನ ಇಲ್ಲ"† ಎಂದು ಧೀರವಾಣಿಯಿಂದ ಹೇಳುತ್ತಾನೆ.

---

* ಪುಟ ೪೫೬ † ಪುಟ ೩೩೨

ತಮ್ಮ ಜೊತೆಯವರ ಯೋಗಕ್ಷೇಮವನ್ನು ವಿಚಾರಿಸಿಕೊಳ್ಳುವುದು ಮತ್ತು ಅಗತ್ಯವಾದಾಗ ನೆರವು ನೀಡುವುದು ಕಾದಂಬರಿಕಾರರ ಒಂದು ಹಿರಿಯ ಗುಣ. ಅವರೊಡನೆ ಎಂದಾದರೂ ಎಲ್ಲಾದರೂ ಪ್ರವಾಸ ಹೋದವರಿಗೆ ಇದು ಸಂವೇದ್ಯ. ಹೂವಯ್ಯನ ಸೇವಾ ಬುದ್ಧಿ ಮೆಚ್ಚುವಂತಹುದು. ನಾಗಮ್ಮನವರ, ಸೀತೆಯ ಸೇವೆ ಮಾಡುತ್ತಾನೆ. ಬಾಡುಗಳ್ಳ ಸೋಮ ಕುಡಿದು ಪೆಟ್ಟು ತಿಂದು ಮನೆಗೆ ಬಂದಾಗ ಆತ್ಮೀಯತೆಯಿಂದ ಅವನ ಗಾಯಗಳಿಗೆ ಔಷಧಿ ಹಚ್ಚಿ ಶುಶ್ರೂಷ ಮಾಡುತ್ತಾನೆ, ಆಳೆಂಬ ಭೇದಭಾವವಿಲ್ಲದೆ. ಚಂದ್ರಯ್ಯಗೌಡರ ಕಿರುಕುಳವನ್ನು ತಡೆಯಲಾರದೆ ಸೀತೆ ಕೆಳ ಕಾನೂರಿಗೆ ಬಂದಾಗ ಹೂವಯ್ಯ ಅವಳ ಸೇವೆ ಮಾಡುತ್ತಾನೆ, ರಾತ್ರಿಯೆಲ್ಲಾ ಮಗ್ಗಲಲ್ಲಿ ಕುಳಿತು.

ಕೆಲವು ಸಂಪ್ರದಾಯಗಳು ಮಲೆನಾಡಿನವರಲ್ಲಿ ಬಹಳಕಾಲದಿಂದಲೂ ಬೇರೂರಿವೆ. ಕಳ್ಳು ಕುಡಿಯುವುದು ಮತ್ತು ಭೂತರಾಯನನ್ನು ಪೂಜಿಸುವುದು ಅಲ್ಲಿಯ ಸಾರ್ವತ್ರಿಕ ಪದ್ಧತಿ. ಒಂದೇಸಮನೆ ಎಡೆಬಿಡದೆ ಹೊಯ್ಯುವ ಜಡಿಮಳೆ, ನಾಗರಿಕ ಪ್ರಪಂಚದಿಂದ ಬೇರ್ಪಡಿಸಿ ಕಣ್ಕಾಣುವವರೆಗೆ ಹಬ್ಬಿರುವ ಕಾನು, ಭಯಂಕರವಾದ ವನ್ಯಮೃಗ, ವಿಷಸರ್ಪ; ಆಬಾಲವೃದ್ಧರನ್ನೂ ಪೀಡಿಸುವ ಮಲೇರಿಯ ಇವುಗಳಲ್ಲಿ ಯಾವುದಕ್ಕೆ ಹೆದರದಿದ್ದರೂ ಭೂತರಾಯನಿಗೆ ಹೆದರುತ್ತಾರೆ, ವಿಶೇಷಪೂಜೆ ಸಲ್ಲಿಸುತ್ತಾರೆ. ಹಾಗೆ ಹೆದರದಿದ್ದರೆ ವರ್ಷವರ್ಷವೂ ಹರಕೆಯನ್ನು ಸಲ್ಲಿಸದಿದ್ದರೆ ಆ ಭೂತಗಣ ಹಿಂಸಿಸದೆ ಬಿಡುವುದಿಲ್ಲ. ಯಾವ ದೈಹಿಕ ವಿಕಾರಕ್ಕೂ ಭೂತರಾಯನೇ ಕಾರಣ. ಭೂತಗಳಲ್ಲಿ ಹಲವಾರು. ಅವು ಯೋಗ್ಯತಾನುಸಾರ ವಿರೋಧಿಗಳನ್ನು ಶಿಕ್ಷಿಸುತ್ತವೆ. ಭಕ್ತರನ್ನು ರಕ್ಷಿಸುತ್ತವೆ. ಹಿಂದಿನಿಂದಲೂ ಬೆಳೆದುಬಂದ ನಂಬಿಕೆ ಇದು. ಯಾವ ಮುಂಡಾಸದ ಗೌಡನೂ ಇದರಿಂದ ಹೊರತಲ್ಲ. ಉಳಿದ ವಿಷಯಗಳಲ್ಲಿ ಅವರು ಅನಾಸಕ್ತರಾದರೂ ಭೂತಪೂಜೆಯಲ್ಲಿ ನಿಷ್ಣಾತರು. ಜನರ ಮೌಢ್ಯವನ್ನು ಉಪಯೋಗಿಸಿಕೊಂಡು ಹೊಟ್ಟೆ ಹೊರೆಯುವ ವೆಂಕಪ್ಪ ಜೋಯಿಸರಂಥ ಮೇಲು ಸಮಾಜದವರು ಹಲವಾರು ಮಂದಿ. ಚಂದ್ರಯ್ಯಗೌಡರಂಥ ಅವರ ಶಿಷ್ಯರಿರುವವರೆಗೆ ಅವರಿಗೆ ಕೊರತೆಯಿಲ್ಲ. ಉಣಲುಡಲು ಯಾವ ಕೊರತೆಯಿಲ್ಲದಿದ್ದರೂ ಭೂತರಾಯನ ಭಯ ಅವರನ್ನು ಕಿತ್ತು ತಿನ್ನುತ್ತದೆ. ಜನ್ಮತಃ ಆಧ್ಯಾತ್ಮವ್ಯಕ್ತಿಯೂ ಸಾತ್ವಿಕ ಭಕ್ತರೂ ಆದ ಕಾದಂಬರಿಕಾರರಿಗೆ ಇಂಥ ವಿಷಯಗಳಲ್ಲಿ ಕಿಂಚಿತ್ತೂ ನಂಬಿಕೆಯಿಲ್ಲ. ಇಳಿವಯಸ್ಸಿನಲ್ಲಿ ಹರೆಯದ ಹೆಣ್ಣನ್ನು ಮದುವೆಯಾಗಿ ಸಂಶಯಗ್ರಸ್ತರಾದ ಚಂದ್ರಯ್ಯಗೌಡರು ಮನೋವಿಕಾರದಿಂದ ಮತಿಹೀನರಾಗಿ ಇದು ಭೂತರಾಯನ ಚೇಷ್ಟೆ ಎನ್ನುವುದು, ನಾಗಮ್ಮನವರು ಕೈಯಮೇಲೆ ಗುಳ್ಳೆ ಎದ್ದಾಗ 'ದೆಯ್ಯಬಂದು ಆಯಸ್ಸನ್ನು ಮೂಸಿನೋಡಿಕೊಂಡು ಹೋಗಿದೆ' ಎನ್ನುವುದು ಅಜ್ಞಾನವಲ್ಲವೆ! ಇದರ ಪರಿಣಾಮ ಮಂತ್ರಮಾಟ ಮಾಡುವ ಸೋಗುಹಾಕಿದ ವೆಂಕಪ್ಪಜೋಯಿಸರ ಉದರ ಪೋಷಣೆ. ಈ ಮೂಢನಂಬಿಕೆಗಳಲ್ಲಿ ಹೂವಯ್ಯನಿಗೆ ನಂಬಿಕೆಯಿಲ್ಲ. ಅವನ ದೃಷ್ಟಿಯಲ್ಲಿ ಭೂತರಾಯ

ನಿಗೆ ಹರಕೆ ಸಲ್ಲಿಸುವುದು ಮೌಢ್ಯದ ಪರಮಾವಧಿ. ಆತ ಅಂಜುಬುರುಕನಾಗಿದ್ದರೆ ಬಲೀಂದ್ರ ಹೋತವನ್ನು ರಕ್ಷಿಸುತ್ತಿರಲಿಲ್ಲ. ತನಗೆ ಬರಬೇಕಾದ 'ಆಯಾರ' ತಪ್ಪಿದ ಭೂತ ಅವನ ಮೇಲೆ ಮುನಿಯದಿರುವುದು ಆಶ್ಚರ್ಯ. ಹೂವಯ್ಯ ಜನರ ಅಜ್ಞಾನವನ್ನು ನಿವಾರಿಸಲು ಎಷ್ಟು ಪ್ರಯತ್ನಪಟ್ಟರೂ ಮೊದಲು ಸಾಕಷ್ಟು ಕೃತಕೃತ್ಯನಾಗುವುದಿಲ್ಲ. ಕೆಲವು ವೇಳೆ ನಂಬಿಕೆಯುಳ್ಳವರ ತೃಪ್ತಿಗಾಗಿ ತಾನೂ ಉಳಿದವರಂತೆ ವರ್ತಿಸುತ್ತಾನೆ. ಗಂಗ ರಕ್ತಕಾರಿ ಬಿದ್ದಾಗ ಭೈರನ ಧೈರ್ಯಕ್ಕಾಗಿ ಅವನ ಇಷ್ಟಾನುಸಾರ ಪುಟ್ಟಣ್ಣನ ಕೈಯಲ್ಲಿ ಭೂತರಾಯನಿಗೆ 'ತಪ್ಪು' ಹೇಳಿಸುತ್ತಾನೆ. ಈ ಹಗರಣಕ್ಕೆ ಕಾರಣನಾದ ತಮ್ಮ ಆಳು ಸಿಂಗನನ್ನು ವಹಿಸಿಕೊಂಡು ಮಾತನಾಡಿದಾಗ "ತಾನೂ ದೆವ್ವದ ಶಕ್ತಿಯನ್ನು ಚಂದ್ರಯ್ಯಗೌಡರ ಮೇಲೆ ಪ್ರಯೋಗಿಸುತ್ತೇನೆ ಎಂದೂ ಹೂವಯ್ಯ ಹೇಳಿಬಿಟ್ಟನು"! * ದೆವ್ವದಲ್ಲಿಯೇ ನಂಬಿಕೆಯಿಲ್ಲದವನಿಗೆ ದೆವ್ವದ ಶಕ್ತಿ ಕರಗತವಾಗುವುದು ಹೇಗೆ? ಒಂದು ತತ್ವಕ್ಕಾಗಿ ಹೋತವನ್ನು ಬಲಿಗೊಡದಿದ್ದ ಅವನು ಮುಂದೆ ಮರಣೋನ್ಮುಖಳಾದ ತಾಯಿಯ ಸಮಾಧಾನಕ್ಕಾಗಿ ಬಲಿಗೊಡಲು ಒಪ್ಪುತ್ತಾನೆ. ಇದರಿಂದ ಅವನು ಪಿಶಾಚಾರಾಧಕನೆಂದು ಹೇಳಲಾಗದು. ಕಾನೂರಿನ ದೆಯ್ಯದ ಹರಕೆಯ ದಿನ ಹೂವಯ್ಯ ಉಪ್ಪರಿಗೆಯಲ್ಲಿ ಒಬ್ಬನೇ ಕುಳಿತು ಭಗವದ್ಗೀತೆಯನ್ನು ಓದುತ್ತಿದ್ದನು. "ಆರ್ಯ ಧರ್ಮದ ಉತ್ತಮ ಆದರ್ಶವೇನು? ಹಿಂದೂಗಳೆಂದು ಹೇಳಿಕೊಳ್ಳುವ ಈ ಮಂದಿ ಮಾಡುತ್ತಿರುವ ಕಾರ್ಯ ಕಲಾಪಗಳೇನು? ಉಪನಿಷತ್ತು ಭಗವದ್ಗೀತೆಗಳ ಮಹೋನ್ನತ ದಿವ್ಯದರ್ಶನವೆಲ್ಲಿ? ಈ ಮಂದಿ ಕೈಗೊಂಡಿರುವ ಪಿಶಾಚಾರಾಧನೆಯೆಲ್ಲಿ? ಇದನ್ನೆಲ್ಲ ತಿದ್ದುವ ಬಗೆ ಹೇಗೆ?" ಎಂದು ಯೋಚಿಸುತ್ತಿರುವಾಗ ಕೈಯಲ್ಲಿದ್ದ ಗೀತಾಶಾಸ್ತ್ರದ ಕಡೆಗೆ ನೋಡಿದನು. ಈ ಶ್ಲೋಕವು ಕಣ್ಣಿಗೆ ಬಿತ್ತು.

ಯಾಂತಿ ದೇವವ್ರತಾ ದೇವಾನ್ ಪಿತೃನ್ ಯಾಂತಿ ಪಿತೃ ವ್ರತಾಃ |
ಭೂತಾನಿ ಯಾಂತಿ ಭೂತೇಜ್ಯಾ ಯಾಂತಿ ಮದ್ಯಾಜನೋಪಿ ಮಾಮ್ ||†

ದೇವತೆಗಳನ್ನು ಪೂಜಿಸುವವರಿಗೆ ದೇವಲೋಕ ಲಭಿಸುತ್ತದೆ. ಪಿತೃ ಪೂಜಕರು ಪಿತೃ ಲೋಕವನ್ನೈದುತ್ತಾರೆ, ಭೂತ ಪ್ರೇತ ಪೂಜಕರು ಆ ಭೂತಪ್ರೇತಗಳ ಲೋಕವನ್ನೇ ಸೇರುತ್ತಾರೆ. ನನ್ನ ಪೂಜಕರು ನನ್ನಲ್ಲಿಗೆ ಬರುತ್ತಾರೆ.

ಯಜಂತೇ ಸಾತ್ವಿಕಾ ದೇವಾನ್ ಯಕ್ಷ ರಕ್ಷಾಂಸಿ ರಾಜಸಾಃ |
ಪ್ರೇತಾನ್ ಭೂತಗಣಾಂಶ್ಚನ್ಯೇ ಯಜಂತೇ ತಾಮಸಾ ಜನಾಃ ||‡

ಸಾತ್ವಿಕರು ದೇವತೆಗಗಳನ್ನು ಪೂಜಿಸುತ್ತಾರೆ. ರಾಜಸರು ಯಕ್ಷ ರಾಕ್ಷಸರನ್ನು ಪೂಜಿಸುತ್ತಾರೆ. ತಾಮಸ ಜನರು ಪ್ರೇತಭೂತಗಳನ್ನು ಪೂಜಿಸುತ್ತಾರೆ. "ಹೇ ಭಗವಾನ್, ಈ ಜನರ ಮನಸ್ಸನ್ನು ನಿನ್ನಕಡೆಗೆ ತಿರುಗಿಸಲು ನನಗೆ ಶಕ್ತಿಯನ್ನು ಕೃಪೆಮಾಡು," ಎಂದು ಹೂವಯ್ಯ ಪ್ರಾರ್ಥಿಸುತ್ತಾನೆ. ತಮ್ಮ ಸುತ್ತಮುತ್ತಲಿನ ಅನಾಗರಿಕ ಅಸಂ

* ಪುಟ ೩೫೨ † ಕಾನೂರು ಹೆಗ್ಗಡಿತಿ ಪುಟ ೨೪೮ ‡ ಕಾನೂರು ಹೆಗ್ಗಡಿತಿ ಪುಟ ೨೪೮

ಸ್ಕೃತ ಜನರ ಉದ್ಧಾರಕಕ್ಕಾಗಿ ಕಾದಂಬರಿಕಾರರು ಭಗವಂತನಿಗೆ ಮಾಡಿದ ಆತ್ಮದ ಮೊರೆ ಯಿರಬಹುದೆ ಇದು ? ವಿದ್ಯಾರ್ಥಿದೆಸೆಯಲ್ಲಿ ಕಾದಂಬರಿಕಾರರು ಸಂಸ್ಕೃತ ಭಾಷೆಯನ್ನು ಅಭ್ಯಸಿಸಿದ್ದರು. ಭಗವದ್ಗೀತೆ ಉಪನಿಷತ್ತುಗಳಲ್ಲಿ ಗಾಢ ಭಕ್ತಿಯಿತ್ತು. ಅವು ಅವರ ಮೆಚ್ಚಿನ ಗ್ರಂಥವಾಗಿದ್ದುವು. ಅವುಗಳಲ್ಲಿದ್ದ ಅವರ ಒಲವು ಅದರಲ್ಲಿ ಉಕ್ತವಾಗಿರುವ ನೀತಿಯನ್ನು ಕಾರ್ಯತಃ ಅನುಷ್ಠಾನಕ್ಕೆ ತರಲು ಅವರು ರೂಪಿಸಿಕೊಂಡ ಮನೋ ಧರ್ಮವನ್ನು ಹೂವಯ್ಯನ ಬಾಯಲ್ಲಿ ಆಡಿಸಿದ್ದಾರೆ ಎನ್ನಬಹುದು.

ಮೊದಲಿನಿಂದಲೂ ಕಾದಂಬರಿಕಾರರು ಪರಮ ಆಶಾವಾದಿಗಳು. ಅವರ ಹೃದಯವನ್ನು ಬಗ್ಗಡಗೊಳಿಸುವ ಅನೇಕ ಸಂಗತಿಗಳು ಜರುಗಿದರೂ ಅವರೆಂದೂ ಹತಾಶರಾಗಲಿಲ್ಲ. ಅವರು ವಿದ್ಯಾರ್ಥಿಗಳಾಗಿದ್ದಾಗ ಅನೇಕ ಸಾರಿ ಕಾಯಿಲೆಯಾಗಿ ಮಲಗಿದರು. ಪಡಬಾರದ ಕಷ್ಟಗಳನ್ನು ಅನುಭವಿಸಿದರು. ಆದರೂ ಧೈರ್ಯದಿಂದ ತಾವು ಹಿಡಿದ ಧ್ಯೇಯಪಥವನ್ನು ಬಿಡದೆ ಹತಾಶೆ ಎದೆಯಲ್ಲಿ ಹೆಡೆಯಾಡಿದರೂ ಸಮಾಧಾನಗೈದು ಕಾರ್ಯಶೀಲರಾದರು ಆಶಾವಾದಿಗಳಾದುದರಿಂದ. ಆದ್ದರಿಂದಲೇ ಅವರಿಗೆ ಜಗತ್ತೆಲ್ಲ ಆನಂದಮಯವಾಯಿತು ; ದುಃಖವೂ ಮಧುರವಾಯಿತು.

ಅನೇಕ ದುಃಖಗಳು ಬರುತ್ತವೆ ಹೂವಯ್ಯನ ಪಾಲಿಗೆ. ಅವುಗಳ ನಿವಾರ ಣೋಪಾಯವನ್ನು ಹುಡುಕುವಷ್ಟರಲ್ಲಿ ಹೊಸ ದುಃಖ, ಹೊಸ ಸಮಸ್ಯೆಗಳು ಕವಿಯು ತ್ತವೆ. ಅವನ್ನು ಎದುರಿಸಲಾರದ ಅವನ ಆತ್ಮ ಜರ್ಝರಿತವಾಗಿ ನಿರಾಶೆಗೆ ಪಕ್ಕಾದಾಗ ಅವನ ಚೇತನ ಎಚ್ಚತ್ತು ಅವನ್ನು ಕೊಡವಿ ಸಚೇತನವಾಗಿ ಮುಂಬರಿಯುತ್ತದೆ ಆಶಾಪಥದಲ್ಲಿ. ಅವನ ಬಾಳಿನಲ್ಲಿ ನಿರಾಶಾವಾದಕ್ಕೂ ಆಶಾವಾದಕ್ಕೂ ಒಂದು ಸ್ಪರ್ಧೆ ಏರ್ಪಟ್ಟಂತಿದೆ. ಕಡೆಗೆ ಆಶಾವಾದಕ್ಕೆ ಗೆಲುವು ನಿಶ್ಚಯ. ಅವನ ಮನ ಮುರಿಯುವ ಪ್ರಸಂಗಗಳು ಒಂದೆರಡಲ್ಲ, ಹಲವಾರು. ಸೀತೆಗೆ ಮದುವೆ ನಿಶ್ಚಯವಾದುದು ಸೀತೆಯ ಮನಸ್ಸಿಗೆ ಮಾತ್ರ ಮೊದಲನೆಯ ಸಿಡಿಲಾಗಲಿಲ್ಲ, ಹೂವಯ್ಯನಿಗೂ ಆಯಿತು. ಸೀತೆಗಾದಷ್ಟೇ ದುಃಖ ಅವನಿಗೂ ಆಯಿತು. ಪ್ರೇಮ ಸೀತೆಯಲ್ಲಿ ಅತಿರೇಕಕ್ಕೆ ಹೋಗಿ ಉನ್ಮಾದದಲ್ಲಿ ಪರ್ಯವಸಾನವಾದರೆ ಹೂವಯ್ಯ ಅದನ್ನು "ತನ್ನ ಹೃದಯ ಗಹ್ವರದಲ್ಲಿ ಯಾರಿಗೂ ಅರಿಯದಂತೆ ಸೆರೆಹಾಕಿದ್ದನು". "ಪ್ರಕೃತಿಯನ್ನು ವಂಚಿಸುವ ಸಾಹಸದಲ್ಲಿ ಆತ್ಮವಂಚನೆ ಮಾಡಿಕೊಳ್ಳುತ್ತಿದ್ದನು." ಧ್ಯಾನಜೀವಿಯಾದ "ಅವನ ಎದೆಯ ಉದ್ಯಾನಕ್ಕೆ ಕಿಡಿ ಕೂತು ಹೊತ್ತಿ ಹೊಗೆಯುತ್ತಿತ್ತು. ಲೋಕವೂ ಜೀವನವೂ ಮಾಯೆ, ನಶ್ವರ, ಮೋಸ, ದುಃಖಮಯ ಎಂಬ ಭಾವವು ಮೊಳೆದೋರುತ್ತಿತ್ತು. ಮೊದಲು ಸಮುಲ್ಲಸಿತ ಆಶಾವಾದಿಯಾಗಿದ್ದವನು ಹತಾಶೆಯಿಂದ ನಿರಾಶಾವಾದಿ ಯಾಗುತ್ತಿದ್ದನು, "ಬಾಳಿನಲ್ಲಿ ಜಿಗುಪ್ಸೆ ಕಾಲಿಡುತ್ತಿತ್ತು." ಕೃಷ್ಣಪ್ಪನ ವಿಕಾರ ಶವ ವನ್ನು ನೋಡಿದಮೇಲೆ "ಹೂವಯ್ಯನ ಮನಸ್ಸಿನಲ್ಲಿ ಕೆಲವು ದಿನಗಳಿಂದ ಮೂಡಿದ್ದ ನಿರಾಶಾಭಾವವು ಮತ್ತೂ ಪ್ರಬಲತರವಾಯಿತು. ಹಿಂದೆ ಅವನ ದೃಷ್ಟಿಗೆ ಸೌಂದ ರ್ಯದ ಬೀಡಾಗಿ ತೋರುತ್ತಿದ್ದ ವಿಶ್ವವು ಕ್ರೂರ ನಿರಾಚೆಯ ಕರ್ಮಶಾಲೆಯಂತೆ

ಕುರೂಪವಾಗಿ ತೋರತೊಡಗಿತು."ಸರ್ವಂ ಕ್ಷಣಿಕಂ,ಸರ್ವಂ ದುಃಖಂ ದುಃಖಂ, ಸರ್ವಂ ಶೂನ್ಯಂ ಶೂನ್ಯಂ" ಎಂಬುದಾಗಿ ಆತನೋದಿದ್ದ ಬೌದ್ಧಮತದ ಮೂಲಸಿದ್ಧಾಂತಗಳು, ಇಂದು ಸತ್ಯವಾಗಿ ಪ್ರತ್ಯಕ್ಷವಾಗಿ ತೋರಿದುವು....ಮೊದಲು ತಾನು ಹೆಮ್ಮೆಯಿಂದ ಹೇಳಿಕೊಳ್ಳುತ್ತಿದ್ದ

ದೇವಸಿಹನು ವ್ಯೋಮದಲ್ಲಿ
ಎಲ್ಲ ಕ್ಷೇಮ ಭೂಮಿಯಲ್ಲಿ

ಎಂಬರ್ಥದ ಆಶಾವಾದಿ ಬ್ರೌನಿಂಗ್ ಕವಿಯ ಪದ್ಯದ ಚರಣಗಳು ಎಷ್ಟು ಜಳ್ಳು ಎಂಬುದು ಸಾಕ್ಷಾತ್ತಾಗಿ ಗೊತ್ತಾಯಿತು...." * ಇದು ಕೆಲವು ಕಾಲ ಮಾತ್ರ. "ದೃಢ ಚಿತ್ತದಿಂದಲೂ ಏಕಾಗ್ರತೆಯಿಂದಲೂ ಜ್ಞಾನ ಭಕ್ತಿ ವೈರಾಗ್ಯಗಳನ್ನು ಸಂಪಾದಿಸಿ, ಈಶ್ವರನ ಕೃಪೆಯಿಂದ ನಾಡಿನ ಜನರಿಗೆ ಬೆಳಕನ್ನು ನೀಡಿ, ಜೀವನವನ್ನು ಸಾರ್ಥಕ ಮಾಡಿಕೊಳ್ಳುತ್ತೇನೆ" ಎಂದು ನಿಶ್ಚಯಿಸಿದ. ಜಗತ್ತಿನ ಮಹಾಪುರುಷರ ಆಲೋಚನಾ ಪ್ರಪಂಚದ ಸಾನ್ನಿಧ್ಯ, ವಿದ್ಯೆಯ ಸಂಸ್ಕೃತಿ, ಮನಸ್ಸಿನ ಸಂಯಮ, ಉದ್ಧಾರಕ್ಕೆ ಒಂದು ಎಲ್ಲೆಯನ್ನು ಕಲ್ಪಿಸದೆ, ನಿರಂತರವೂ ಮೇಲೇರಿ ಮುಂದುವರಿಯಬೇಕೆಂಬುವ ಉತ್ಕಟಾಕಾಂಕ್ಷೆ, ತೀವ್ರ ವ್ಯಾಕುಲತೆ, ಉದ್ದಾಮ ರಸಕಾವ್ಯಗಳ ಪರಿಚಯ, ಪ್ರಾರ್ಥನೆ, ಧ್ಯಾನ—ಇವುಗಳ ಆಧಾರವೂ ಅಮೃತವೂ ಸಹಾಯಕ್ಕೆ ಬಾರದಿದ್ದರೆ ಹೂವಯ್ಯನ ವ್ಯಕ್ತಿತ್ವ, ಪೆಟ್ಟು ತಗುಲಿದ ವಿಗ್ರಹದಂತೆ ಒಡೆದು ಚೂರುಚೂರಾಗಿ ವಿಕಾರವಾಗಿ, ನಶಿಸುತ್ತಿತ್ತು. † "ಇತ್ತೀಚೆಗೆ ಹೂವಯ್ಯ ಆತ್ಮದ ಸಾಧನೆಯಲ್ಲಿ ಹೆಚ್ಚು ಹೆಚ್ಚು ನಿರತನಾಗಿದ್ದನು. ಹೀಗೆ ಪ್ರಣಯದಲ್ಲಿ ನಿರಾಶೆ ಹೊಂದಿದ್ದ ಹೂವಯ್ಯನ ಆತ್ಮ ವಿವಿಧ ಕಾರ್ಯಮಾರ್ಗಗಳಲ್ಲಿ ಸಾಹಸಪೂರ್ಣವಾಗಿ ಯಾತ್ರೆ ಹೊರಟಿದ್ದಿತು. ಆದರೆ ನಿರಾಶೆ ನಿರಾಶೆಯಾಗಿಯೇ ಇದ್ದು ಬಿಡಲಿಲ್ಲ. ಕ್ರಮಕ್ರಮೇಣ ಅದು ಅವನಾತ್ಮದ ಮಹಾಮಂಗಳಾರತಿಯ ಪರಿಮಳಿತ ಪಾವನಜ್ಯೋತಿಯನ್ನು ಪ್ರೋಷಿಸುವ ಕರ್ಪೂರವಾಗುತ್ತಿತ್ತು" ‡ ಆದರೂ ಸೀತೆಯ ಪ್ರೇಮರಾಹು ಅವನನ್ನು ಎಲ್ಲಿ ಹೋದರೂ ಏನು ಮಾಡಿದರೂ ಬಿಡದೆ ಹಿಂಬಾಲಿಸುತ್ತಿತ್ತು. ಮುಂದೆ ಬುದ್ಧದೇವನ ಕೃಪಾಮಹಿಮೆಯ ಪ್ರಸಾದಾಂಗನಾದ ಹೂವಯ್ಯನ ಆತ್ಮೋದ್ಧಾರವಾಯಿತು.

ಸಾತ್ವಿಕ ದೈವಭಕ್ತರು ಕಾದಂಬರಿಕಾರರು. ಎಷ್ಟು ಸಾಧ್ಯವೋ ಅಷ್ಟು ಮಾಡಿ ಉಳಿದುದನ್ನು ದೈವೇಚ್ಛೆಗೆ ಬಿಡುತ್ತಾರೆ. "ತೃಣಮಪಿ ನಚಲತಿ ತೇನ ವಿನಾ" ಎಂಬುದು ಅವರ ದೃಢನಂಬಿಕೆ. ಜನ್ಮತಃ ಆಧ್ಯಾತ್ಮಿಕವ್ಯಕ್ತಿ. ಅದಕ್ಕೆ ಪ್ರೋಷಕವಾಗಿ ಆಧ್ಯಾತ್ಮಿಕ ಗ್ರಂಥಗಳ ಮತ್ತು ವ್ಯಕ್ತಿಗಳ ಪರಿಚಯವೂ ಸಾಕಷ್ಟು ಆಗಿತ್ತು. ಅನಾರೋಗ್ಯಕರವಾದ ವಾತಾವರಣ ಮತ್ತು ಆಹಾರದಿಂದ ಅವರು ಒಮ್ಮೆ ರೋಗಗ್ರಸ್ತರಾದಾಗ ಮೈಸೂರಿನ ಶ್ರೀ ರಾಮಕೃಷ್ಣಾಶ್ರಮದ ಸ್ವಾಮಿಜಿಯೊಬ್ಬರು—

*ಕಾನೂರು ಹೆಗ್ಗಡಿತಿ ಪುಟ ೨೯೧ † ಪುಟ ೪೭೭ ‡ ಪುಟ ೪೭೮

ಸ್ವಾಮಿ ಸಿದ್ಧೇಶ್ವರಾನಂದಜಿ–ಈಗ ಅವರು ಫ್ರಾನ್ಸ್‌ದೇಶದಲ್ಲಿ ಪ್ಯಾರಿಸ್ಸಿನ ಶ್ರೀ ರಾಮ ಕೃಷ್ಣಾಶ್ರಮದ ಅಧ್ಯಕ್ಷರಾಗಿದ್ದಾರೆ–ಅವರನ್ನು ಆಶ್ರಮಕ್ಕೆ ಕೊಂಡೊಯ್ದರು. ಹಿಂದಿ ನಿಂದಲೂ ಸಂಸ್ಕಾರರೂಪವಾಗಿ ಬಂದಿದ್ದ ಆಧ್ಯಾತ್ಮಿಕತೆ ಅಂತರ್ಮುಖತೆಯನ್ನು ಮುಂದುವರಿಸಲು ಸದವಕಾಶ ದೊರೆತಂತಾಯಿತು.

ಮೊದಲಿನಿಂದಲೂ ಶ್ರೀರಾಮಕೃಷ್ಣ ಪರಮಹಂಸರು ಅವರ ಆದರ್ಶ ಗುರು. ಪ್ರಾರ್ಥನೆ, ಧ್ಯಾನ ಅವರ ದಿನಚರಿಯ ಕಾರ್ಯಕ್ರಮಗಳಾಗಿದ್ದುವು. ಆಶ್ರಮಕ್ಕೆ ಹೋದಮೇಲೆ ದೀಕ್ಷೆಯನ್ನು ಸ್ವೀಕರಿಸಿದರು. ಶ್ರೀರಾಮಕೃಷ್ಣ ಪರಮಹಂಸರು ಅವರ ಆಧ್ಯಾತ್ಮಿಕ ಗುರುಗಳಾದರು. ಹೂವಯ್ಯನೂ ದೈವಭಕ್ತ. ಪ್ರಪಂಚದ ಎಲ್ಲ ಆಗು ಹೋಗುಗಳಿಗೂ ಈಶ್ವರ ಸಂಕಲ್ಪವೇ ಕಾರಣ ಎಂದು ನಂಬಿದ್ದಾನೆ. ಓದು ನಿಲ್ಲಿಸಬೇಕಾಗಿ ಬಂದಾಗ "ಈಶ್ವರೇಚ್ಛೆ ಹಾಗೆಯೇ ಇದ್ದರೆ ಮನೆಯಲ್ಲಿಯೇ ಗ್ರಂಥಗಳ ಸಹಾಯದಿಂದ ವಿದ್ಯಾದೇವತೆಯನ್ನು ಆರಾಧಿಸಬಹುದು" ಎಂದು ಸಮಾಧಾನ ಮಾಡಿಕೊಂಡನು. ಸೀತೆ ಮದುವೆಯಾದಾಗಲೂ ಅದು ಈಶ್ವರೇಚ್ಛೆಯೆಂದೇ ತನ್ನ ಕದಡಿದ ಬಗೆಯನ್ನು ಸ್ಥಿಮಿತಕ್ಕೆ ಪ್ರಯತ್ನದಿಂದ ತಂದುಕೊಳ್ಳುವನು. ದಿನವೂ ಪ್ರಾರ್ಥನೆ ಮಾಡುತ್ತಿದ್ದ ಅವನು ಪ್ರಾರ್ಥನೆಯ ಅವಶ್ಯಕತೆಯನ್ನು ಅದರಿಂದ ಪ್ರಾಪ್ತವಾಗುವ ದಿವ್ಯಾನಂದ ವನ್ನು ಸೀತೆಗೆ ಹೇಳುತ್ತಾನೆ. ಸಮಯ ಸಿಕ್ಕಾಗಲೆಲ್ಲ ಕಾನಿನ ನಡುವೆ, ಗಿರಿನೆತ್ತಿಯ ಮೇಲೆ ಧ್ಯಾನಮಾಡುತ್ತಾನೆ. ಭಗವದ್ಗೀತೆ ಅವನ ನೆಚ್ಚಿನ ಗ್ರಂಥ. ಬಿಡುವಾದಾಗ ಲೆಲ್ಲ ಅದನ್ನು ಓದುವನು.

ಪತ್ರಂ ಪುಷ್ಪಂ ಫಲಂ ತೋಯಂ ಯೋಮೇ ಭಕ್ತ್ಯಾಪ್ರಯಚ್ಛತಿ |
ತದಹಂ ಭಕ್ತ್ಯುಪಹೃತಮಶ್ನಾಮಿ ಪ್ರಯತಾತ್ಮನಃ ||

ಒಂದು ಎಲೆಯನ್ನಾಗಲಿ ಒಂದು ಹೂವನ್ನಾಗಲಿ ಒಂದು ಹಣ್ಣನ್ನಾಗಲಿ ನನಗೆ ಯಾವನಾದರೂ ಭಕ್ತಿಯಿಂದ ನಿವೇದಿಸಿದರೆ ಅದನ್ನು ಆನಂದದಿಂದ ಸ್ವೀಕರಿಸುತ್ತೇನೆ. "ಭಗವಾನ್, ಕಂಬನಿಯ ನೈವೇದ್ಯವು ಎಲ್ಲಕ್ಕಿಂತಲೂ ಶ್ರೇಷ್ಠವಾದುದಲ್ಲವೆ?" ಎಂದುಕೊಂಡು ತೊಯ್ದು ಕಪೋಲವನ್ನು ಒರಸಿಕೊಳ್ಳುತ್ತಾನೆ. ತಾವು ದೇವರಿಗೆ ಅರ್ಪಿಸಿದ ಕಂಬನಿಯ ನೈವೇದ್ಯವನ್ನು ಇಲ್ಲಿ ಲೇಖಕರು ಹೇಳುತ್ತಿದ್ದಾರೆನ್ನು ವಂತಿದೆ. ಪ್ರಕೃತಿಯ ಪ್ರತಿಯೊಂದು ವಸ್ತು ಪ್ರತಿಯೊಂದು ವ್ಯಾಪಾರದಲ್ಲಿಯೂ ಭಗವಂತನ ಸೌಂದರ್ಯ ಕಾಣುತ್ತಾನೆ ಹೂವಯ್ಯ ಲೇಖಕರಂತೆ. ಸೀತೆಯ ಮದುವೆ ಯಾದ ಮಾರನೆಯ ಬೆಳಗ್ಗೆ ಬೆಟ್ಟದ ನೆತ್ತಿಯ ಹಾಸುಬಂಡೆಯ ಉತ್ತುಂಗ ವೇದಿಕೆಯ ಮೇಲೆ ಪದ್ಮಾಸನ ಹಾಕಿ ಕುಳಿತು ಉದಯದೃಶ್ಯವನ್ನು ನಿಷ್ಪಂದನಾಗಿ ನೋಡತೊಡ ಗುವನು. "ವರ್ಣನೆಗೆ ಅಸಾಧ್ಯವಾಗಿ ಬಣ್ಣಗಳ ಮೆರವಣಿಗೆ ಪ್ರಾರಂಭವಾಯಿತು. ಹೂವಯ್ಯನ ದೃಷ್ಟಿಗೆ ಭಾವಮಾತ್ರನಾಗಿದ್ದ ಭಗವಂತನ ಸೌಂದರ್ಯ ರೂಪುಗೊಂಡು ತನ್ನೆದುರು ಪ್ರತ್ಯಕ್ಷವಾಗುತ್ತಿದ್ದಂತೆ ಅನುಭವವಾಗಿ ಮೈಪುಲಕಿತವಾಗಿ, ಹೃದಯ

ರಸಾರ್ದ್ರವಾಗಿ, ಕಣ್ಣು ಹನಿತುಂಬಿತು........ಆನಂದಸ್ವರೂಪಿಯಾದ ಭಗವಂತ ಸೌಂದರ್ಯರೂಪಿಯಾಗಿ ಮೈದೋರಿ ಹೂವಯ್ಯನ ಆತ್ಮದಲ್ಲಿ ರಸವಾಗಿ ಪ್ರವಹಿಸಿದನು. ....ಆನಂದವನ್ನು ಅನುಭವಿಸುತಿದ್ದನೋ? ಆನಂದವೇ ಆಗಿದ್ದನೋ? ಏನೋ? ಎಂತೋ?...." "ಪ್ರಾರ್ಥನೆ ಧ್ಯಾನ ಅವನ ದಿನಚರಿಯ ಕಾರ್ಯಕ್ರಮವಾದುವು. ಬುದ್ಧದೇವ ಆದರ್ಶ ಗುರುವಾದನು. ಅವನನ್ನೇ ಅನುಸರಿಸಲು ಪ್ರಯತ್ನಿಸುತ್ತಿದ್ದನು" ...."ಗುರುದೇವ ನನ್ನನ್ನು ಕೈಹಿಡಿದೆತ್ತಿಕೋ. ಉದ್ಧಾರಮಾಡು. ನಿನ್ನ ಮಹಾಗುಣ ಗಳಲ್ಲಿ ಒಂದಿನಿತನ್ನಾದರೂ ದಯಪಾಲಿಸಿ ನನ್ನ ಜೀವನವನ್ನು ಸಾರ್ಥಕ ಮಾಡು"— ಎಂದು ಅನವರತ ಬೇಡುವನು. ಗುರುವಿನ ಮಹಿಮಾಸ್ಪದ ಕೃಪಾಕಟಾಕ್ಷದಿಂದ ಅವನ ಉತ್ಕಟಾಕಾಂಕ್ಷೆ ಫಲಿಸುವುದು. ಬೇಟೆಯೆಂದರೆ ಪ್ರಾಣಬಿಡುತ್ತಿದ್ದ ಹೂವಯ್ಯ ಅಹಿಂಸಾವ್ರತಧಾರಿಯಾಗುವನು. 'ಕಾನು ಬೈಲಿನ ನೆತ್ತಿ'ಯಲ್ಲಿ ಮಂದಿರವೊಂದನ್ನು ಕಟ್ಟಿ ಬುದ್ಧದೇವನ ಮೂರ್ತಿಯನ್ನು ಸ್ಥಾಪಿಸಿ ಕರ್ಮಯೋಗಿಯಾಗಿ ಅಲ್ಲಿಯೇ ವಾಸಿಸತೊಡಗುವನು. ತಾನು ಮಾತ್ರ ಉದ್ಧಾರವಾದುದಲ್ಲದೆ ಸೀತೆಯನ್ನೂ ಅಲ್ಲಿನ ಜನರನ್ನೂ ಉದ್ಧರಿಸುತ್ತಾನೆ.

ಕಾದಂಬರಿಕಾರನು ಪ್ರಧಾನವಾಗಿ ತಾನು ನೋಡಿದ ತನ್ನ ಸುತ್ತಮುತ್ತಲಿನ ಹಲವಾರು ವ್ಯಕ್ತಿಗಳನ್ನೂ ಚಿತ್ರಗಳನ್ನೂ ದೃಷ್ಟಿಯಲ್ಲಿಟ್ಟುಕೊಂಡು ಒಂದು ಪಾತ್ರವನ್ನು ರೂಪಿಸುತ್ತಾನೆ. ಅವನು ಚಿತ್ರಿಸುವುದು ವ್ಯಕ್ತಿಯನ್ನಲ್ಲ, ವರ್ಗರೂಪವನ್ನು. ಹಾಗೆ ವರ್ಗರೂಪವನ್ನು ಚಿತ್ರಿಸುವಾಗ 'ಅವನ ತನವೂ' ಸ್ವಲ್ಪಮಟ್ಟಿಗೆ ಸೇರಿಕೊಳ್ಳುತ್ತದೆ ಎನ್ನಬಹುದು. 'ಕಾನೂರು ಹೆಗ್ಗಡಿತಿ'ಯಲ್ಲಿ ಕಾದಂಬರಿಕಾರರು ತಮ್ಮ ಸಮಾಜದಲ್ಲಿ ನೋಡಿದ ಹಲವಾರು ವ್ಯಕ್ತಿಗಳ ಗುಣಗಳನ್ನೊಳಗೊಂಡ ಒಂದು ವರ್ಗರೂಪ ಹೂವ ಯ್ಯನ ಪಾತ್ರ. ಜೊತೆಗೆ ಕಾದಂಬರಿಕಾರರ ಪೂರ್ವಜೀವನದ ಕೆಲವು ಅಂಶಗಳೂ ಮೈದೋರಿದೆಯೆನ್ನಬಹುದು. ಕೆಲವು ಅಂಶಗಳಲ್ಲಿ ಹೂವಯ್ಯನಿಗೂ ಕಾದಂಬರಿಕಾರ ರಿಗೂ ಅಲ್ಪಸಾಮ್ಯ ಕಂಡು ಬರುವಂತೆ ಅನೇಕ ಪೂರ್ಣ ವೈಷಮ್ಯವೂ ಕಂಡುಬರುತ್ತದೆ ಎಂಬುದನ್ನು ಮರೆಯಬಾರದು. ಅಲ್ಲದೆ ಇಪ್ಪತ್ತು ವರ್ಷಗಳ ಹಿಂದಿನ ಕಾದಂಬರಿ ಕಾರರಿಗೂ ಇಂದಿನ ಕುವೆಂಪುರವರಿಗೂ ವ್ಯಕ್ತಿತ್ವದಲ್ಲಿ ತುಂಬ ವ್ಯತ್ಯಾಸವಿರುವುದು ಗಣ ನೀಯವಾದ ಸಂಗತಿ.



# ಸಂನ್ಯಾಸಿ ಮತ್ತು ಇತರ ಕಥೆಗಳು

**ಎಸ್. ವಿ. ಪರಮೇಶ್ವರ ಭಟ್ಟ**

'ಸಂನ್ಯಾಸಿ ಮತ್ತು ಇತರ ಕಥೆಗಳು' ಶ್ರೀ ಕುವೆಂಪು ಅವರ ಕಥಾಸಂಕಲನ. ಇದರಲ್ಲಿ ಒಂಭತ್ತು ಕಥೆಗಳಿವೆ. ಈ ಸಂಕಲನ ಮೊದಲು ಪುಸ್ತಕರೂಪದಲ್ಲಿ ಪ್ರಕಟವಾದುದು ೧೯೩೭ರಲ್ಲಿ. ಈ ಇಪ್ಪತ್ತು ವರುಷಗಳಲ್ಲಿ ಈ ಸಂಕಲನ ಮತ್ತೆ ಎರಡುಬಾರಿ ಪುನಃ ಮುದ್ರಣಗೊಂಡಿದೆ. ಈ ಸಂಕಲನದ ಕಥೆಗಳಲ್ಲಿ ಒಂದೊಂದನ್ನೂ ಅದು ಪ್ರಕಟವಾಗಿರುವ ಕ್ರಮದಲ್ಲಿ ತೆಗೆದುಕೊಂಡು ಅವರ ಸ್ವಾರಸ್ಯವನ್ನು ಸ್ವಲ್ಪದರಲ್ಲಿಯೇ ತಿಳಿಸುವುದು ನನ್ನ ಉದ್ದೇಶ.

೨

ಮೊದಲನೆಯ ಸಂಕಲನದ ಮೊದಲ ಕಥೆ 'ಸಂನ್ಯಾಸಿ'. ರಮೇಶ ಒಬ್ಬ ಯುವಕ, ಅವನಿಗೆ ಮದುವೆ ಇಷ್ಟವಿರಲಿಲ್ಲ, ವಿರಕ್ತಿ ಮಾರ್ಗವೇ ಅವನ ಧ್ಯೇಯ. ಆತನ ತಂದೆ ತಾಯಿಗಳು ಆತನು ಎಲ್ಲಿ ಸಂನ್ಯಾಸಿಯಾಗಿ ಬಿಡುವನೋ ಎಂಬ ಹೆದರಿಕೆಯಿಂದ ಆತನಿಗೆ ಬಲಾತ್ಕಾರವಾಗಿ ಇಂದಿರೆ ಎಂಬ ಹುಡುಗಿಯನ್ನು ತಂದು ಮದುವೆ ಮಾಡುವರು. ರಮೇಶನು ಹೇಳದೆ, ಕೇಳದೆ ಮನೆಯಿಂದ ಹೊರಬೀಳುವನು. ಗುರುವನ್ನು ಹುಡುಕಿಕೊಂಡು ಊರಿಂದೂರಿಗೆ ಅಲೆದು ಪ್ರಯಾಗಕ್ಷೇತ್ರಕ್ಕೆ ಬಂದು ಸ್ವಾಮಿ ಪ್ರೇಮಾನಂದರ ಶಿಷ್ಯನಾಗಿ ಸಂನ್ಯಾಸ ಸ್ವೀಕಾರ ಮಾಡಿ, ಸಾಧನಾಪರನಾಗುವನು. ಇತ್ತ ಇಂದಿರೆಯ ಬಾಳು ಮರುಭೂಮಿಯಾಗುವುದು. ಮಗನ ಅಗಲಿಕೆಯ ಕೊರಗಿನಲ್ಲಿ ಕೆಲದಿನಗಳಲ್ಲಿಯೇ ಇಂದಿರೆಯ ಅತ್ತೆ ಮಾವ ತೀರಿಕೊಳ್ಳುವರು. ಇಂದಿರೆ ಧೈರ್ಯಗುಂದದೆ ಸಂನ್ಯಾಸಿಯ ವೇಷ ಧರಿಸಿ ಅಲೆದಲೆದು ಕಡೆಗೆ ತಾನೂ ದೈವವಶಾತ್ ಅದೇ ಪ್ರೇಮಾನಂದರ ಬಳಿ ಶಿಷ್ಯಳಾಗಿ ನೆಲಸುವಳು. ಈಗ ರಮೇಶನಿಗೆ 'ಚೈತನ್ಯ' ಎಂಬ ಹೆಸರಾದರೆ ಇಂದಿರೆಗೆ 'ಮುಕುಂದ' ಎಂಬ ಹೆಸರು, ಗಂಡುಉಡುಗೆ ಗಂಡುಹೆಸರು.

ಚೈತನ್ಯ, ಮುಕುಂದರು ಜೀವದ ಗೆಳೆಯರಾಗುವರು. ಚೈತನ್ಯನಿಗೆ ಮುಕುಂದನಲ್ಲಿ ಅನಿರ್ವಚನೀಯ ಪ್ರೇಮ, ಮುಕುಂದನಿಗೆ ಚೈತನ್ಯನಲ್ಲಿ ಅಪೂರ್ವ ಗೌರವ. ಮುಕುಂದವೇಷದ ಇಂದಿರೆ ಚೈತನ್ಯನೊಡನೆ ಸ್ನೇಹ, ವಿಶ್ವಾಸ, ಸಲಿಗೆ ಇವು ಒಂದು ಪ್ರಮಾಣದಲ್ಲಿ ಬೆಳೆಯುವವರೆಗೆ ಕಾದಿದ್ದು ಆ ಬಳಿಕ ಒಮ್ಮೆ ಯಾರೂ ಇಲ್ಲದ ವೇಳೆ ಗುರುವಿನ ಬಳಿ ಬಂದು ತಾನು ತನ್ನ ನಿಜವೇಷವನ್ನು ತೋರಿ ತಾನು ಬಂದ ಉದ್ದೇಶವನ್ನು ತಿಳಿಸಿ ತನಗೆ ತನ್ನ ಪತಿಯನ್ನು ಮರಳಿ ಕೊಡಬೇಕೆಂದು ಪತಿಭಿಕ್ಷೆ ಬೇಡು

ವಳು. ಗುರು ತನ್ನ ಅನುಜ್ಞೆ, ಆಶೀರ್ವಾದಗಳನ್ನು ನೀಡುವರು. ಮುಕುಂದ, ಚೈತನ್ಯನ ಕಡೆಗೆ ಧಾವಿಸುವನು. ನಿರ್ಜನ ಸ್ಥಳದಲ್ಲಿ ಗಂಗಾ ಯಮುನಾ ಸಂಗಮದ ಎಡೆಯಲ್ಲಿ ಬೆಳದಿಂಗಳ ರಾತ್ರಿಯಲ್ಲಿ ಸೃಷ್ಟಿ ಸೌಂದರ್ಯವನ್ನು ಸವಿಯುತ್ತಿದ್ದ ಚೈತನ್ಯನನ್ನು ಇಂದಿರೆ ಸಂಧಿಸಿ ತನ್ನ ಸೋಗನ್ನು ಕಿತ್ತೊಗೆದು ಪರಿಪರಿಯಾಗಿ ಅಲ್ಪರಿದು ಪ್ರಣಯ ಭಿಕ್ಷೆಯನ್ನು ಪತಿರಾಯನಲ್ಲಿ ಬೇಡುವಳು. ಚೈತನ್ಯಸಂನ್ಯಾಸಿಯ ಹೃದಯ ಕರಗುವುದಿಲ್ಲ. ಇಂದಿರೆಯ ಅಳು ನಿಲ್ಲುವುದೂ ಇಲ್ಲ. ಆ ವೇಳೆಗೆ ಗುರು ಅಲ್ಲಿಗೆ ಬಂದು ಇಬ್ಬರನ್ನೂ ಸಮಾಧಾನಪಡಿಸಿ ಚೈತನ್ಯನ ಪ್ರೇಮ, ಕೃಪೆ, ಇವು ಇಲ್ಲದೆ ಇಂದಿರೆಯ ಬದುಕು ಉದ್ಧಾರವಾಗದು ಎಂದು ಬುದ್ಧಿ ಹೇಳುವರು. ರಮೇಶ ಇಂದಿರೆಯನ್ನು ಅಪ್ಪುವನು. ಇದು ಕಥೆಯ ವಸ್ತು.

ಗುರು–ಮುಕುಂದ, ಮುಕುಂದ–ಚೈತನ್ಯ ಇವರ ಸಂಭಾಷಣೆಯ ಮೂಲಕವಾಗಿಯೇ ಕಥೆಯ ವಸ್ತು ಸುರುಳಿಬಿಚ್ಚಿಕೊಳ್ಳುತ್ತದೆ. ಅರ್ಥಪೂರ್ಣವಾದ ಪುಟ್ಟ ಪುಟ್ಟ ಮಾತುಗಳ ಚಕಮುಕಿ ಹಾರುವ ಈ ಸಂಭಾಷಣೆ ಬಿಕ್ಕಟ್ಟಾಗಿದೆ, ಸ್ವಾರಸ್ಯವಾಗಿದೆ. ಗುರುಗಳ ಕರುಣಾರ್ದ್ರವೂ, ಗಭೀರವೂ, ಆದ ಸ್ವಭಾವವು, ಚೈತನ್ಯನ ಅಚಂಚಲವೂ ಸುಸ್ಥಿರವೂ ಆದ ನಿಲುವೂ, ಮುಕುಂದನ (ಇಂದಿರೆ) ಭಾವೋದ್ವೇಗಪೂರ್ಣವಾದ ಸ್ನಿಗ್ಧವೂ ಮಧುರವೂ ಆದ ಪ್ರೇಮಮಯವಾದ ಹೃದಯವೂ ಅವರವರು ಆಡುವ ಮಾತುಗಳಲ್ಲಿ ಚೆನ್ನಾಗಿ ಪರಿಚಯವಾಗುತ್ತದೆ ನಮಗೆ.

ಸಂಭಾಷಣೆಯಲ್ಲಿ ಒಂದು ಸೊಗಸಿರುವಂತೆ ವಸ್ತುಸಂವಿಧಾನದಲ್ಲಿಯೂ ಒಂದು ಸೊಗಸಿದೆ ಈ ಕಥೆಯನ್ನು ಮೂರು ಭಾಗಗಳಲ್ಲಿ ಹೇಳಲಾಗಿದೆ. ಮೊದಲ ಭಾಗದಲ್ಲಿ ಚೈತನ್ಯ–ಮುಕುಂದ ಇವರ ಸಂವಾದವಿದೆ. ಎರಡನೆಯ ಭಾಗದಲ್ಲಿ ಮುಕುಂದ–ಗುರು ಇವರ ಸಂವಾದವಿದೆ. ಮೂರನೆಯ ಭಾಗದಲ್ಲಿ ಮತ್ತೆ ಚೈತನ್ಯ–ಗುರು ಇವರ ಸಂವಾದವಿದೆ. ಇನ್ನು ಯಾರಾದರೂ ಸಾಮಾನ್ಯದರ್ಜೆಯ ಕತೆಗಾರರಾಗಿದ್ದರೆ ಎರಡನೆಯ ಭಾಗದ ವಿಷಯವನ್ನು ಮೊದಲು ಹೇಳಿ ಆ ಬಳಿಕ ಒಂದು ಮೂರರ ವಿಷಯವನ್ನು ಹೇಳುತ್ತಿದ್ದರು. ನ್ಯಾಯವಾಗಿ ಕಥೆ ಇರಬೇಕಾಗಿದದ್ದೇ ಆದರೆ ಕಲೆಯ ದೃಷ್ಟಿಯಿಂದ ಈ ರೀತಿ ತುಂಬ ಸೊಗಸಾಗಿದೆ. ಹೀಗೆ ಸಂನ್ಯಾಸಿಯ ಸೋಗಿನ, ಮುಕುಂದ ವೇಷ ತೆಗೆದು ಸ್ತ್ರೀಯಾಗಿ ನಿಲ್ಲುವ ರೀತಿ ತುಂಬ ನಾಟಕೀಯವಾಗಿದೆ.

ಕಥೆಯ ಆರಂಭದಲ್ಲಿ ಬರುವ ಚಂದ್ರನ ಬೆಳದಿಂಗಳಿನಲ್ಲಿ ರಮಣೀಯವಾಗಿ ತೋರುವ ಗಂಗಾ ಯಮುನಾ ಸಂಗಮದ ಪ್ರಕೃತಿಸೌಂದರ್ಯದ ವರ್ಣನೆ ತುಂಬ ಹಿತವಾಗಿದೆ. ಗಂಗೆ ಮತ್ತು ಯಮುನೆ ಇವರ ಸಂಗಮ ಇಂದಿರೆ ರಮೇಶರ ಸಂಗಮಕ್ಕೆ ಎಂತಹ ಉಚಿತವಾದ ಹಿನ್ನೆಲೆ! ಗುರುದೇವನ ಗಾಂಭೀರ್ಯ, ಚೈತನ್ಯನ ದೃಢತೆ ಮುಕುಂದನ ನಿರ್ಮಲಪ್ರೇಮ ಇವುಗಳೆಲ್ಲವನ್ನು ಬೆಳಗುವ ಆ ಬೆಳದಿಂಗಳು ಎಷ್ಟು ಅರ್ಥಪೂರ್ಣ !!

೩

ಎರಡನೆಯ ಕಥೆ 'ಕ್ರಿಸ್ತನಲ್ಲ, ಪಾದ್ರಿಯ ಮಗಳು!' ಕ್ರೈಸ್ತಪಾದ್ರಿಗಳನ್ನೂ ಕ್ರಿಸ್ತಮತ ಪ್ರಚಾರಕರನ್ನೂ ಕಂಡರೆ ಸ್ವಲ್ಪವೂ ಸಹಿಸದವನೊಬ್ಬನು ಅವರ ಹಾವಳಿಯನ್ನು ಅಡಗಿಸಿ ಹಿಂದೂ ಮತದ ನ್ಯೂನತೆಗಳನ್ನು ತೊಡೆದು ಮತಾಂತರ ಗೊಂಡವರನ್ನು ಮರಳಿ ಶುದ್ಧಿಗೊಳಿಸಿ ಹಿಂದೂಮತಕ್ಕೆ ಸೇರಿಸಿಕೊಂಡು ಹಿಂದೂ ಧರ್ಮವನ್ನು ಬೆಳಗಬೇಕೆಂದು ವೇದಾಂತಕೇಸರಿಯಾಗಿ ಕನಲಿ ದುಡಿದ ವಿದ್ಯಾವಂತ ಧರ್ಮಯೋಧನೊಬ್ಬನು ಕಡೆಗೆ ಹೇಗೆ ಒಬ್ಬ ಪಾದ್ರಿ ಹೂಡಿದ ಒಳಸಂಚಿಗೆ ಬಲಿಯಾಗಿ ಅವನ ಮಗಳ ಮೋಹಪಾಶದಲ್ಲಿ ಸಿಲುಕಿ ಹಾಗೂ ಕೆಟ್ಟ, ಹೀಗೂ ಕೆಟ್ಟ ಎಂಬ ಸ್ಥಿತಿಗೆ ಇಳಿದು ಸಾವುಬಾಳು ಬಾಳುವ ಬೀದಿಯ ನಾಯಿಯಂತಾಗಿ ಅನಾಮಿಕನಾಗಿ ಹೋದನೆಂಬುದನ್ನು ಕುವೆಂಪು ಇಲ್ಲಿ ಮನ ಮರುಗುವಂತಹ ರೀತಿಯಲ್ಲಿ ಚಿತ್ರಿಸಿದ್ದಾರೆ. ಕಥೆಗಾರ ಚಂದು ಮತ್ತು ವೇದಾಂತಕೇಸರಿ ಯೋಗಿನ್ (ಇದು ಅವನ ಅಡ್ಡ ಹೆಸರು) ಇಬ್ಬರೂ ಸಹಪಾಠಿಗಳು. ಮಹಾರಾಜ ಕಾಲೇಜಿನಲ್ಲಿ ಒಟ್ಟಿಗೆ ಓದುತ್ತಿದ್ದವರು. ವಿದ್ಯಾರ್ಥಿದೆಸೆಯಲ್ಲಿಯೇ ಯೋಗಿನ್ ತನ್ನ ನಡೆ ನುಡಿ ವಿದ್ಯಾಬುದ್ಧಿಗಳಿಂದ ಅಧ್ಯಾಪಕರ ಮತ್ತು ವಿದ್ಯಾರ್ಥಿಗಳ ಮೆಚ್ಚಿಕೆಗೆ ಪಾತ್ರನಾಗಿದ್ದನು. ಅವನ ಶೀಲ, ಘನತೆ, ಬುದ್ಧಿ, ಶಕ್ತಿ, ಅಮಲತೆ, ಪ್ರತಿಭೆ, ತೇಜಸ್ಸು ಇವು ಎಲ್ಲರ ಗೌರವವನ್ನೂ ಅವನಿಗೆ ಸಂಪಾದಿಸಿಕೊಟ್ಟಿದ್ದವು. ಸದಾ ಬ್ರಹ್ಮಚಾರಿಯಾಗಿರುತ್ತೇನೆ, ದೇಶಸೇವೆಗೆ ಜನ್ಮವನ್ನು ಮೀಸಲಿಡುತ್ತೇನೆ, ಇದೇ ನನ್ನ ಆದರ್ಶ ಎಂದು ಆತ ಸಾರುತ್ತಿದ್ದನು. ಓದು ಮುಗಿದಮೇಲೆ ಮಿತ್ರರು ಬೇರೆಬೇರೆಯಾದರು. ಎಂಟು ವರ್ಷಗಳು ಉರುಳಿದವು. ಕೊನೆಗೊಮ್ಮೆ ಚಂದು ಮಲೆನಾಡಿನ ಸೌಂದರ್ಯವನ್ನು ಸವಿಯಲೆಂದು ಪ್ರವಾಸ ಹೊರಟಾಗ, ಆಗುಂಬೆಗೆ ಹೋಗುವ ದಾರಿಯಲ್ಲಿ ಮೋಟಾರು ಸ್ವಲ್ಪ ಹೊತ್ತು ಒಂದು ಊರಿನಲ್ಲಿ ನಿಂತಿತು. ಆಗ ಒಬ್ಬ ವ್ಯಕ್ತಿ ಚಂದುವಿನ ಗುರುತು ಹಿಡಿದು ಬಳಿಗೆ ಬಂದು ಮಾತನಾಡಿಸಿದನು. ಚಂದುವಿಗೆ ಮಾತ್ರ ವ್ಯಕ್ತಿಯ ಗುರುತು ಸಿಗಲಿಲ್ಲ. ಆ ವ್ಯಕ್ತಿ ಸೊರಗಿ ಕೃಶವಾಗಿದ್ದನು. ಮುಖ ತೇಜೋಹೀನವಾಗಿದ್ದಿತು. ಅವನ ಉಡುಪು ತೀರ ಕೊಳಕಾಗಿತ್ತು. ಮಾತು ಬೆಳೆಯುತ್ತಾ ಬಂದಂತೆ ಆ ತನ್ನ ಸಹಪಾಠಿ, ಆ ವೇದಾಂತ ಕೇಸರಿ, ಆ ಯೋಗಿನ್, ಆ ಅವನೇ ಈ ಇವನು ಎನ್ನುವುದು ಚಂದುವಿಗೆ ಗೊತ್ತಾಯಿತು. ಅಂತಹ ಸಿಂಹ ಇಂತಹ ಶುನಕ ಆದ ಬಗೆ ಹೇಗೆ ಎಂಬುದನ್ನು ತಿಳಿದುಕೊಳ್ಳಬೇಕೆಂಬ ಕುತೂಹಲ ಕೆರಳುವ ವೇಳೆಗೆ ಮೋಟಾರು ಹೊರಡಲು ಸಿದ್ಧವಾಯಿತು. ಆಕಸ್ಮಿಕವಾಗಿ ನೋಡಿದ ಗೆಳೆಯನನ್ನು ಅನಿವಾರ್ಯವಾಗಿ ಅಗಲಬೇಕಾಯಿತು. ಮುಂದೆ ವಿಹಾರಯಾತ್ರೆ ಮುಗಿದು ಚಂದು ಊರಿಗೆ ಬಂದಮೇಲೆ ಒಂದು ದಿನ ಅಂಚೆಯಲ್ಲಿ ಒಂದು ಕಾಗದ ಬಂತು. ಆ ಕಾಗದ ಯೋಗಿನ್ ಬರೆದದ್ದು. ದಾರುಣವಾದ ತನ್ನ ಆತ್ಮವೃತ್ತಾಂತವನ್ನು ಆತ ಅದರಲ್ಲಿ ಬರೆದಿದ್ದ. ತಾನು ಎಂ. ಎ. ಆದ ಮೇಲೆ ಊರಿಗೆ

ಬಂದದ್ದು, ಮದುವೆ ಆಗುವುದಿಲ್ಲ ಎಂದು ಮನೆಯವರಿಗೆ ಹೇಳಿದ್ದು, ನೌಕರಿಗೂ ಸೇರದೆ ಉಳಿದದ್ದು, ದೇಶಸೇವೆಯ ಹಂಬಲದಿಂದ ದುಡಿದದ್ದು, ಜನರ ಮನ್ನಣೆ ದೊರಕಿದ್ದು, ಕ್ರೈಸ್ತಪಾದ್ರಿಗಳ ವಿರುದ್ಧ ಪ್ರಚಾರಕಾರ್ಯ ಕೈಗೊಂಡದ್ದು. ಒಬ್ಬ ಪಾದ್ರಿ ಮಾಯೆಯನ್ನು ಕರೆತರುವಂತೆ ಅವನ ಮಗಳನ್ನು ತಂದು ತನ್ನ ಎದುರು ನಿಲ್ಲಿಸಿದ್ದು, ಅವಳ ಮೋಹದ ಬಲೆಗೆ ಬಿದ್ದದ್ದು, ಅವಳಿಗಾಗಿ ತಾನು ಕ್ರೈಸ್ತಮತಾವಲಂಬಿಯಾದದ್ದು, ತನ್ನಲಿದ್ದ ದುಡ್ಡು ಕರಗಿದನೋಲೆ ತನ್ನನ್ನು ಮದುವೆಯಾಗದೆ ಅವಳು ಬೇರೊಬ್ಬನೊಡನೆ ಓಡಿಹೋದದ್ದು, ಆ ಬಳಿಕ ತನಗೆ ದುರ್ಗತಿ ಒದಗಿದ್ದು—ಈ ವಿವರಗಳೆಲ್ಲವೂ ಆ ಕಾಗದದಲ್ಲಿದ್ದುವು. ಚಂದು ಕಾಗದ ಓದಿ ನಿಟ್ಟುಸಿರು ಬಿಟ್ಟು ಮುಳುಗುತ್ತಿರುವ ಸೂರ್ಯನ ಬಿಂಬವನ್ನು ನೋಡುತ್ತ ಗೆಳೆಯನ ಆತ್ಮವಿನಾಶದ ನೆನಪಿನಿಂದ ಎದೆನೊಂದು ಮನಶ್ಶಾಂತಿಗಾಗಿ ಅಡ್ಡಾಡಲು ಹೊರಡುತ್ತಾನೆ. ಮನಸ್ಸು ಭಾರವಾಗಿಯೇ ಉಳಿಯುತ್ತದೆ. ಇದು ಕಥೆ.

ಎರಡು ಜನ್ಮಗಳಷ್ಟು ಅಜಗಜಾಂತರವಿರುವ ಯೋಗಿನ್ನನ ವಿದ್ಯಾರ್ಥಿದೆಸೆಯ ಊರ್ಧ್ವಮುಖದ ಚಿತ್ರವನ್ನೂ ಅದರ ಮುಂದಣ ದೆಸೆಯ ಅಧೋಮುಖದ ಚಿತ್ರವನ್ನೂ ಕಥೆಗಾರರು ಮಾರ್ಮಿಕವಾಗಿ ಕೊಟ್ಟಿದ್ದಾರೆ. ಒಂದು ಚಿತ್ರವನ್ನು ಇನ್ನೊಂದರೊಡನೆ ಹೋಲಿಸಿದಾಗ ಕರುಳು ಹಿಂಡಿದಂತಾಗುತ್ತದೆ. ಋಣಕ್ಕೆ ಉತ್ಕರ್ಷವನ್ನು ಸಾಧಿಸಿರುವ ಈ ಸಂವಿಧಾನ ವಿಶಿಷ್ಟವಾದದ್ದು. ತನ್ನ ಕಾಗದವನ್ನು ಆತ್ಮಕತೆಯ ರೀತಿಯಲ್ಲಿ ತನ್ನ ಬೀಳುಗತಿಯನ್ನು ತಾನೇ ವರ್ಣಿಸಿಕೊಳ್ಳುವಂತೆ ಕಥೆಯನ್ನು ಅಳವಡಿಸಿರುವುದು ವಾಚಕರಿಂದ ನಿಟ್ಟುಸಿರ ಕಾಣಿಕೆ ಸೆಳೆಯುವ ಸಂವಿಧಾನ ಚಾತುರ್ಯಕ್ಕೆ ಇನ್ನೊಂದು ಉದಾಹರಣೆ ಅಷ್ಟೆ. ಮುಳುಗುತ್ತಿರುವ ಸೂರ್ಯನನ್ನು ನೋಡಿ ಗೆಳೆಯನ ಆತ್ಮವಿನಾಶದ ನೆನಪು ಮರುಕಳಿಸಿತೆಂದು ಹೇಳುತ್ತ ಮುಂದೆ ಎರಡು ಮಾತಿನಲ್ಲಿ ಮುಗಿವ ಈ ಮುಕ್ತಾಯ ತುಂಬ ಮಾರ್ಮಿಕ!

'ಈಶ್ವರನೂ ನಕ್ಕಿರಬೇಕು' ವಿನೋದ ಪ್ರಧಾನವಾದ ಕಥೆ. ನಾಗರಾಜ ಮೂವತ್ತರ ತರುಣ. ಓದುವಾಗ ಭಿಕ್ಷಾನ್ನ. ಆಮೇಲೆ ರೆವೆನ್ಯೂ ಇಲಾಖೆಯಲ್ಲಿ ಮಾಹೆಯಾನ ಅರವತ್ತರ ಗುಮಾಸ್ತೆ. ಇನ್ನೂ ಮದುವೆ ಇಲ್ಲ. ಸ್ವಲ್ಪ ಕುರೂಪಿ, ಜೊತೆಗೆ ಒಂದು ಕಿವಿಯೇ ಊನ ಅವನಿಗೆ. ಯಾರೂ ಹೆಣ್ಣು ಕೊಡಲು ಮುಂದೆ ಬರಲಿಲ್ಲ. ಮದುವೆಯ ಹಂಬಲವೋ ದಿನದಿನಕ್ಕೆ ಹೆಚ್ಚುತ್ತ ಹೋಯಿತು. ಹೀಗಿರುವಾಗ ಒಮ್ಮೆ ವೃತ್ತ ಪತ್ರಿಕೆಯಲ್ಲಿ ನಾಗರಾಜ 'ವರ ಬೇಕಾಗಿದಾನೆ' ಎಂಬ ಜಾಹಿರಾತು ಓದಿದ. ಹುಡುಗಿಯ ಸಾಕುತಂದೆ ಶಾಮರಾಯರಿಗೆ ಪತ್ರ ಬರೆದದ್ದೂ ಆಯಿತು. ಹುಡುಗಿ ಧಾರವಾಡದವಳು: ಶಾಮರಾಯರಿಗೆ ದೂರದ ಸಂಬಂಧ. ಆಕೆ ದಿಕ್ಕಿಲ್ಲದ ತಬ್ಬಲಿ. ಹೆಸರು ಲಲಿತ. ಆದರೆ ರೂಪು ಅಷ್ಟಕ್ಕಷ್ಟೆ. ಆಕೆಯ ಎಡಗೈ ಮೋಟು, ಡೊಂಕು; ಕೆಲಸಕ್ಕೆಬಾರದ ಕೊಂಬೆಯಂತೆ ಮೈಗೆ ಅಂಟಿತ್ತು. ಇದರಿಂದಾಗಿ ಅವಳನ್ನು ಮದುವೆಯಾಗಲು ಯಾವ ಗಂಡೂ ಮುಂದೆ ಬಂದಿರಲಿಲ್ಲ. ಈಗ ಜಾಹೀರಾತಿನ ಗಾಳಕ್ಕೆ ಬಿದ್ದ ನಾಗ

ರಾಜನನ್ನು ಕಂಡು ಸಾಕು ತಂದೆಗೆ ಆನಂದವಾಯಿತು; ಮಾರೋಲೆ ಬರೆದು ಒಪ್ಪಿಗೆ ಇತ್ತು, ಆತನ ಭಾವಚಿತ್ರ ಬೇಕೆಂದರು. ನಾಗರಾಜನಿಗೆ ಹಿಗ್ಗೋ ಹಿಗ್ಗು. ತನ್ನ ಕಿವಿಯ ಊನ ಕಾಣದಂತೆ ಉಪಾಯವಾಗಿ ಫೋಟೋ ತೆಗಿಸಿ ಅದನ್ನು 'ಟಚ್' ಮಾಡಬೇಕೆಂದು ತಸ್ಬೀರುಗಾರನಿಗೆ ಅಂಗಲಾಚಿಕೊಂಡು, ಆ ಸಿದ್ಧಗೊಂಡ ಸುಂದರ ಭಾವಚಿತ್ರವನ್ನು ನಾಗರಾಜ ಕಳುಹಿಸಿದ. ಶಾಮರಾಯರ ಕಡೆಯಿಂದಲೂ ಸಾಲಂಕೃತ ವಧುವಿನ ಅದೇ ತೆರನಾದ ತಸ್ಬೀರು ನಾಗರಾಜನಿಗೆ ಬಂದಿತೆಂದು ಹೇಳಬೇಕಾಗಿಲ್ಲ. ಮದುವೆ ಜರುಗಿತು. ನಾಗರಾಜ ಲಲಿತೆಯರ ಸಂಸಾರ ಕಾಲಕ್ರಮದಲ್ಲಿ ಮೈಸೂರಿನಲ್ಲಿ ಆರಂಭವಾಯಿತು. ಸಂಸಾರ ಹೂಡಿದ ಮೊದಲ ದಿನ, ಹುಣ್ಣಿಮೆ ರಾತ್ರಿ. ಮಲಗುವ ಮನೆಯಲ್ಲಿ ನಾಗರಾಜ ಲಲಿತೆಯರು ಇಬ್ಬರೇ ಇದ್ದಾರೆ. ಲಲಿತಮ್ಮ ಮೆಲ್ಲನೆ ಕೈಮೇಲಿನ ಸೆರಗು ಓರೆಮಾಡಿದಳು. ನಾಗರಾಜ ಆಕೆಯ ವಕ್ರವಾದ ಕೈ ನೋಡಿ ಚಕಿತನಾಗದೆ ತನ್ನ ತಲೆಯುಡುಪು ಕಳಚಿದನು. ಇಬ್ಬರ ಮನಸ್ಸೂ ಶಾಂತವಾಯಿತು. ನಾಗರಾಜನು ನಕ್ಕನು, ಲಲಿತಮ್ಮನೂ ನಕ್ಕಳು, ಚಂದ್ರ ತಾರೆ ಬಾನ್ದೇವಿಯರೂ ನಕ್ಕರು. ನಾಗರಾಜ ಲಲಿತೆಯರ ಆ ಗೋಡೆಯ ಮೇಲಣ ಸರ್ವಾಂಗ ಸುಂದರ ತಸ್ಬೀರುಗಳೂ ನಕ್ಕವು. ಈಶ್ವರನೂ ನಕ್ಕಿರಬೇಕು—ಇದು ಕಥೆ.

ಈ ಕಥೆಯ ಸರ್ವ ಸ್ವಾರಸ್ಯವೂ ಇದರ ಹಾಸ್ಯಪೂರ್ಣವಾದ ಶೈಲಿಯಲ್ಲಿ, ನಿರೂಪಣೆಯಲ್ಲಿ ಇದೆ. ಕತೆಗಾರರು ನಾಗರಾಜ ಶಾಮರಾಯರಿಗೆ ಬರೆದ ಕಾಗದವನ್ನು ವಿವರಿಸುವಾಗ ನಾಗರಾಜ 'ವಯಸ್ಸನ್ನು ಮಾತ್ರ ಮುವ್ವತ್ತರಿಂದ ಇಪ್ಪತ್ತೈದಕ್ಕೆ ಇಳಿಸಿಬಿಟ್ಟನು' ಎನ್ನುತ್ತಾರೆ. ಲಲಿತೆ ಶಾಮರಾಯರಿಗೆ ಏನಾಗಬೇಕೆಂಬುದನ್ನು ಹೇಳುವಾಗ 'ಆಕೆ ಅವರ ಹೆಂಡತಿಯ ತಂಗಿಯ ಗಂಡನ ತಮ್ಮನ ಪತ್ನಿಯ ನಾದಿನಿ' ಎನ್ನುತ್ತಾರೆ. ಇಂತಹ ಮಾತುಗಳು ಕಥೆಯಲ್ಲಿ ಚೆಲ್ಲಿ ಸೂಸಿವೆ. ವಾರಭವಿಷ್ಯ ಚೆನ್ನಾಗಿಲ್ಲ ಎಂದು ಪತ್ರಿಕೆ ಹರಿದರೆ ಭವಿಷ್ಯ ತಿದ್ದಿದ ಹಾಗಾಯಿತೆ? ತಸ್ಬೀರಿನಲ್ಲಿ ಕಿವಿ ಊನ ಮುಚ್ಚಿದರೆ ನಿಜಸ್ಥಿತಿ ಹೇಗೆ ಮರೆಮಾಚೀತು? ನಾಗರಾಜನಿಗೆ ಉತ್ಸಾಹದಲ್ಲಿ ಇದು ಗೊತ್ತಾಗಲಿಲ್ಲ. ಇವನ ಒಳಸಂಚಿಗೆ ವಿಧಿ ಸರಿಯಾಗಿ ಮತ್ತೊಂದು ಒಳಸಂಚು ಹೂಡಿತು. ಮೋಟುಗೈ ಹೆಣ್ಣನ್ನು ಗಂಟುಹಾಕಿತು. ಮೋಸಕ್ಕೆ ಪ್ರತಿಮೋಸ. ಇದೇ ಅಲ್ಲವೆ ವಿಧಿ ವಿಲಾಸ! ಇಬ್ಬರೂ ತಮ್ಮ ತಮ್ಮ ಊನವನ್ನು ಮರೆಮಾಚಲೆಂದು ಹವಣಿಸಿದರು. ವಿಧಿ ಅವರಿಬ್ಬರೂ ಮದುವೆಯಾದಮೇಲೆ ಗುಟ್ಟು ರಟ್ಟಾಗುವಂತೆ ಮಾಡಿತು. ಕೊನೆಗೆ ಇಬ್ಬರಲ್ಲಿಯೂ ಊನವಿದ್ದುದರಿಂದಲೇ ತೃಪ್ತಿ. ತಮ್ಮ ತಮ್ಮ ಹಂಚಿಕೆಗೆ ತಮಗೇ ನಗು. ತಮ್ಮ ಜೋಡಿಗೆ ತಮಗೇ ನಗು! ಈ ಕವಲ ಆಟ ಕಂಡು ಆಡಿದ ಇವರೇ ಹೀಗೆ ನಕ್ಕರೆ ಇವರ ಆದ್ಯಂತವೆಲ್ಲವನ್ನೂ ಬಲ್ಲ, ಇವರನ್ನು ಪಾತ್ರಧಾರಿಗಳನ್ನಾಗಿ ಆಡಿಸಿದ ಆ ಸೂತ್ರಧಾರ ಇನ್ನೆಷ್ಟು ನಗಬೇಡ! ಎಲ್ಲ ನಕ್ಕರು. ಆದರೆ ಈಶ್ವರನ ನಗೆಯ ಅರ್ಥವೇ ಬೇರೆ! ಹಿಂದಿನ ಎರಡು ಕಥೆಗಳಲ್ಲಿ ಪರಮಗಂಭೀರವಾದ ಆವರಣವಿದ್ದರೆ ಇಲ್ಲಿ ಪರಮ ವಿನೋದದ ಆವರಣ ಕಟ್ಟಿದೆ.

‘ಆರಾಣೆ ಮೂರು ಕಾಸು’ ಕರ್ನೂಲಿನ ನವಾಬನೊಬ್ಬನ ಕಥೆ. ಲಕ್ಷಾಧಿಕಾರಿಯಾಗಿದ್ದ ನವಾಬ ಕಣ್ಣು ಮುಚ್ಚಿ ಕಣ್ಣು ಬಿಡುವುದರಲ್ಲಿ ಹೇಗೆ ಭಿಕ್ಷಾಧಿಕಾರಿಯಾದ, ಕೊನೆಗೆ ಕಾಲ ಒದಗಿ ಬಂದಾಗ ಮತ್ತೆ ಹೇಗೆ ಲಕ್ಷಾಧಿಕಾರಿಯೇ ಆದ ಎಂಬ ವಿಷಯವನ್ನು ಕುರಿತ ಒಂದು ಕಥೆ ಇದು.

ಕಥೆ ಸಿಪಾಯಿದಂಗೆ ಕಾಲದ್ದು. ಮಾಧವರಾಯರು ಕತೆಗಾರರ ಸ್ನೇಹಿತರು. ರಾಯರ ತಾತ ಕರ್ನೂಲು ಬಳಿ ಅಧಿಕಾರಿಯಾಗಿದ್ದರು. ರಾಯರ ಮನೆತನಕ್ಕೂ ನವಾಬರ ಮನೆತನಕ್ಕೂ ತುಂಬ ಕೇವಲ. ನವಾಬರ ಮನೆತನಕ್ಕೆ ಅನೇಕ ಶ್ರೀಮಂತರು ಸಾಲಕೊಟ್ಟಿದ್ದರು. ರಾಯರ ತಂದೆಯೂ ಸಾಲ ಕೊಟ್ಟಿದ್ದರು. ಎಷ್ಟು ಕೊಟ್ಟಿದ್ದರು ಎನ್ನುವುದಕ್ಕೆ ದಾಖಲೆ ಇರಲಿಲ್ಲ. ಸುಮಾರು ನಲ್ವತ್ತು ಸಾವಿರ ರೂಪಾಯಿನಷ್ಟು ಸಾಲ ಕೊಟ್ಟಿದ್ದರೆಂದು ವದಂತಿ. ರಾಯರಿಗೆ ಹನ್ನೊಂದು ವರ್ಷ; ತಂದೆ ತೀರಿಕೊಂಡರು. ಅತ್ತ ಸರಕಾರ ಅದಲು ಬದಲಾಗಿ ಈಸ್ಟ್ ಇಂಡಿಯಾ ಕಂಪೆನಿ ಹೋಗಿ ಬ್ರಿಟಿಷ್ ಸರಕಾರ ಅಸ್ತಿತ್ವಕ್ಕೆ ಬಂತು. ಹೈದರಾಬಾದಿನ ಕೆಲವು ಪ್ರಾಂತಗಳು ಬ್ರಿಟಿಷ್ ಸರ್ಕಾರಕ್ಕೆ ಹೋದವು. ಇವುಗಳಲ್ಲಿ ಕರ್ನೂಲು ಒಂದು. ನವಾಬರ ಜಹಗೀರಿ ಇಂಗ್ಲಿಷರ ಆಡಳಿತಕ್ಕೆ ಸೇರಿತು. ಇಂಗ್ಲಿಷ್ ಸರ್ಕಾರದವರು ನವಾಬರಿಗೆ ಸೇರಿದ ಸ್ವಲ್ಪ ಜಾಗವನ್ನು ಹದಿನೈದು ಸಾವಿರ ಕೊಟ್ಟು ಕೊಂಡುಕೊಳ್ಳಬಯಸಿದರು. ಅದೇ ಜಾಗದ ಮೇಲೆ ಅನೇಕರಿಗೆ ಕಣ್ಣಿತ್ತು. ಒಬ್ಬ ವಕೀಲ ಎರಡು ಮೂರು ಸಾವಿರಕ್ಕೆ ಜಾಗವನ್ನು ಒಳಗೆ ಹಾಕಿಕೊಳ್ಳಬೇಕೆಂದು ಹವಣಿಸಿದ್ದ. ಈಗ ನವಾಬ ಅದನ್ನು ಸರ್ಕಾರಕ್ಕೆ ಮಾರುವುದನ್ನು ನೆನೆದು ವಕೀಲನಿಗೆ ನವಾಬನ ಮೇಲೆ ದ್ವೇಷ ಹುಟ್ಟಿತು. ಸರ್ಕಾರ ಕರಾರು ಪತ್ರ ತಯಾರು ಮಾಡಿಸಲೋಸುಗ ನವಾಬನ ರಿಕಾರ್ಡುಗಳನ್ನು ತರಿಸಿ ಅದೇ ವಕೀಲನಿಗೆ ಕಳುಹಿಸಿಕೊಟ್ಟಿತು. ವಕೀಲನಿಗೆ ಸಮಯ ಸಿಕ್ಕಿತು. ಆಗಿನ ನವಾಬ ಹಿಂದಣ ನವಾಬನ ಧರ್ಮಪತ್ನಿಯ ಮಗನಲ್ಲ ಎಂಬುದನ್ನು ತಿಳಿದು ಸಂಗತಿಯನ್ನು ಸರ್ಕಾರಕ್ಕೆ ವರದಿ ಮಾಡಿದ. ಸರ್ಕಾರ ನವಾಬನಐಶ್ವರ್ಯವನ್ನೆಲ್ಲವನ್ನೂ ಕೂಡಲೇ ಕಿತ್ತುಕೊಂಡಿತು. ವಾರಸುದಾರರು ಕೋರ್ಟು ಮೂಲಕ ಆಸ್ತಿಪಡೆಯಬಹುದೆಂದು ತಿಳಿಸಿಬಿಟ್ಟಿತು. ಲಕ್ಷಾಧಿಕಾರಿ ಕ್ಷಣಮಾತ್ರದಲ್ಲಿ ಭಿಕ್ಷಾಧಿಕಾರಿ ಆದ. ನಿಲ್ಲಲು ನೆಲೆ ಇಲ್ಲ, ಕುಡಿಯಲು ಗಂಜಿ ಇಲ್ಲ; ಉಡಲು ಅರಿವೆ ಇಲ್ಲ; ನವಾಬ ಹೆಂಡಿರು ಮಕ್ಕಳೊಡನೆ ಇಂಥ ದುರವಸ್ಥೆಗೆ ಸಿಲುಕಬೇಕಾಯಿತು. ಕಡೆಗೆ ಸ್ನೇಹಿತ ವಕೀಲ ಶಂಕರರಾಯರು ಅವನ ಪರ ಸರಕಾರಕ್ಕೆ ಅರ್ಜಿಹಾಕಿದರು. ಕೋರ್ಟಿನಲ್ಲಿ ಕೇಸು ಗುಣವಾಗಲಿಲ್ಲ, ಮೇಲಿನ ಕೋರ್ಟಿಗೆ ಅಪೀಲು ಹೋದರು. ಹೀಗೆ ಹತ್ತುಹನ್ನೆರಡು ವರ್ಷ ಸಂದು ಹೋದವು. ಈ ವೇಳೆಗೆ ಮಾಧವರಾಯರು ಮದರಾಸಿನಲ್ಲಿ ಎಂ. ಎ. ಮುಗಿಸಿ ಬೆಂಗಳೂರಿನಲ್ಲಿ ನೂರುರೂಪಾಯಿಯ ನೌಕರಿಗೆ ನಿಂತರು. ಒಮ್ಮೆ ಮಾಧವರಾಯರು ಕರ್ನೂಲಿಗೆ ಹೋದಾಗ ಶಂಕರರಾಯರ ಮನೆಯಲ್ಲಿ ಭಿಕ್ಷುಕನೊಬ್ಬನನ್ನು ಕಂಡರು. ಅವನೇ ಕರ್ನೂಲಿನ ನವಾಬನೆಂಬುದನ್ನು

ಶಂಕರರಾಯರಿಂದ ತಿಳಿದರು. ಆತ ಪ್ರೀವಿಕೌನ್ಸಿಲ್ಲಿಗೆ ಅರ್ಜಿಹಾಕಬೇಕಾಗಿದೆಯೆಂದೂ ಅದಕ್ಕೆ ಎಂಟುನೂರಐವತ್ತು ರೂಪಾಯಿ ಬೇಕಾಗಿದೆ ಎಂದೂ ಅಷ್ಟು ಹಣ ಕೊಟ್ಟು ತನ್ನನ್ನು ಉದ್ಧಾರಮಾಡಬೇಕು ಎಂದೂ ಮಾಧವರಾಯರನ್ನು ಬೇಡಿದ. ರಾಯರು ಅಷ್ಟು ಹಣಕ್ಕೆ ಒಂದು ಚೆಕ್ ಬರೆದು ಅವನ ಕೈಗೆ ಕೊಟ್ಟರು. ಮುಂದೆ ಎರಡು ವರುಷಗಳ ಮೇಲೆ ರಾಯರು ಮದರಾಸಿಗೆ ರೈಲಿನಲ್ಲಿ ಪ್ರಯಾಣಮಾಡುತ್ತಿದ್ದಾಗ ಗುಂತಕಲ್ಲಿನ, ನಿಲ್ದಾಣದಲ್ಲಿ ನವಾಬನನ್ನು ಗುರುತಿಸಿದರು. ಅವನ ಕೇಸು ಏನಾಯಿತೆಂದು ವಿಚಾರಿಸಿದರು. ನವಾಬ ಅದರ ಆಸೆ ತನಗೆ ಇಲ್ಲನೆಂದೂ ತನಗೆ ಹಸಿವಾಗುತ್ತಿದೆ ತಿನ್ನಲು ಏನಾದರೂ ಕೊಡಿಸಿ ಎಂದೂ ಹೇಳಿದ. ರಾಯರು ಹೋಟೆಲಿಗೆ ಕರೆದುಕೊಂಡು ಹೋಗಿ ಆ ತಿರುಕ ನವಾಬನಿಗೆ ಆರಾಣೆ ತಿಂಡಿ ಕೊಡಿಸಿದರು. ರೈಲು ಹೊರಡುವ ಹೊತ್ತಿನಲ್ಲಿ ನವಾಬ ತನ್ನ ಮಕ್ಕಳಿಗೆ ಕಡಲೆ ಕೊಡಿಸುವುದಕ್ಕಾಗಿ ಮೂರು ಕಾಸು ಬೇಡಿದ. ರಾಯರು ಕೊಟ್ಟರು. ರೈಲು ಚಲಿಸಿತು. ಇದಾದ ಎಷ್ಟೋ ದಿನಗಳ ಮೇಲೆ ರಾಯರಿಗೆ ಒಂದು ತಂತಿ ಬಂತು. ನವಾಬನಿಗೆ ಕೇಸು ಜಯವಾದ ಸುದ್ದಿ ಅದು. ಮರುದಿನ 'ಹಿಂದೂ' ಪತ್ರಿಕೆಯಲ್ಲಿ ಗರೀಬ ಲಕ್ಷಾಧಿಕಾರಿಯಾದ ಸುದ್ದಿಯ ವಿವರ ಇತ್ತು. ಆಮೇಲೆ ರಾಯರಿಗೆ ಕರ್ನೂಲಿಗೆ ಬರಬೇಕೆಂದು ಕರೆ ಬಂತು. ರಾಯರು ಹೋದರು. ನವಾಬನ ಆತಿಥ್ಯ ನಡೆಯಿತು. ಊಟ ಉಪಚಾರ ಆದಮೇಲೆ ನವಾಬ ಎಂಟುನೂರಐವತ್ತುರೂಪಾಯಿ ಆರಾಣೆ ಮೂರುಕಾಸನ್ನು ರಾಯರ ಮುಂದೆ ತಂದಿಟ್ಟ. ರಾಯರು ರೂಪಾಯಿಗಳಷ್ಟನ್ನೂ ತೆಗೆದುಕೊಂಡು ಈ 'ಆರಾಣೆ ಮೂರು ಕಾಸು ಏನು' ಎಂದರು. ನವಾಬ ಇದು ಗುಂತಕಲ್ಲಿನಲ್ಲಿ ಕೊಡಿಸಿದ ತಿಂಡಿಯ ಹಣ ಎಂದನು. ಸ್ವಲ್ಪ ಹೊತ್ತಿನಮೇಲೆ ಒಳಗೆ ಹೋಗಿ ಬಂದ ನವಾಬ 'ನಿಮ್ಮ ತಂದೆಯವರಲ್ಲಿ ಮಾಡಿದ ಸಾಲವನ್ನೂ ಎಂದರೆ ಲೆಕ್ಕಪತ್ರ ಸಿಕ್ಕಿರುವ ಹನ್ನೆರಡು ಸಾವಿರವನ್ನೂ ಇಷ್ಟರಲ್ಲಿಯೇ ತೀರಿಸುತ್ತೇನೆ' ಎಂದೂ ಮಾತನಾಡಿದ. ಅದರ ಬಗ್ಗೆ ತಿಂಗಳು ತಿಂಗಳೂ ಬಡ್ಡಿ ಸಲ್ಲಿಸುವುದಾಗಿಯೂ ಹೇಳಿದ. ಮುಂದೆ ಅದರಂತೆಯೇ ನಡೆದುಕೊಂಡ.

ಕಥೆ ಇಷ್ಟು. ಈ ಕಥೆಯನ್ನು ಕತೆಗಾರರಿಗೆ ಮಾಧವರಾಯರು ಹೇಳಿದರೆಂಬಂತೆ ಒಕ್ಕಣೆ ಇದೆ. ಮೇಲಿನ ಸ್ಥೂಲವಾದ ಕಥಾವಸ್ತುವಿನ ಸಂಗ್ರಹದಲ್ಲಿ ಮುಖ್ಯವಾದ ಒಂದು ಅಂಶ ಕೈಬಿಟ್ಟಿದೆ. ಮಾಧವರಾಯರು ಈ ಕಥೆ ಹೇಳುವಾಗ ಹೆಜ್ಜೆ ಹೆಜ್ಜೆಗೂ ತಾವು ಧರ್ಮಿಷ್ಠರಲ್ಲ, ಮೃದು ಸ್ವಭಾವದವರಲ್ಲ, ಪರಾರ್ಥಿಗಳಲ್ಲ, ತಾವು ನವಾಬನಿಗೆ ಹಣಕೊಟ್ಟದ್ದು ತಮ್ಮ ಇಚ್ಛೆಯಿಂದ ಅಲ್ಲ, ಊಟಹಾಕಿಸಿದ್ದು ಹೆಮ್ಮೆಗೆ. ಮೂರು ಕಾಸು ಕೊಟ್ಟದ್ದು ಅವನು ತೊಲಗಲಿ ಎಂದು ಇತ್ಯಾದಿಯಾಗಿ ಹೇಳಿದ್ದಾರೆ. 'ನಾವು ಪರೋಪಕಾರ ಮಾಡುವುದು ನಮ್ಮ ಹೆಮ್ಮೆಗೆ, ಹೊರತು ಪರರ ಉಪಕಾರಕ್ಕಲ್ಲ' ಎಂದು ನುಡಿದಿದ್ದಾರೆ. ನವಾಬನಿಗೆ ತಾವು ನೀಡಿದ ಸಹಾಯದ ಹಿಂದೆ ತಮ್ಮ ಮನಸ್ಸಿನಲ್ಲಿದ್ದ ಅಳುಕು, ಸಂದೇಹ, ಅಲ್ಪತನ ಇವನ್ನು ತೋಡಿಕೊಂಡಿದ್ದಾರೆ. ಆದರೂ ಕಥೆ ಓದಿದ ಮೇಲೆ ಕಥೆಗಾರರೇ ಹೇಳುವಂತೆ 'ನಮಗೆ ಮಾಧವ

ರಾಯರನ್ನು ಹೊಗಳಬೇಕೋ,ನವಾಬನನ್ನು ಹೊಗಳಬೇಕೋ ಗೊತ್ತಾಗಲಿಲ್ಲ' ಎನಿಸುತ್ತದೆ. ಮಾಧವರಾಯನ ದಾಕ್ಷಿಣ್ಯವೊ, ಪ್ರತಿಷ್ಠೆಯೊ, ಸ್ವಾರ್ಥವೊ ಹಣ ಕೊಟ್ಟರಲ್ಲ! ಇವನು ಆ ಕಾಲಕ್ಕೆ ಕೊಡದಿದ್ದರೆ ಅವನು ಗೆಲ್ಲುವುದುಂಟೆ? ಇವರ 'ಔದಾರ್ಯ' ದೊಡ್ಡದು. ನವಾಬ ಅದನ್ನು ಆ ಆರಾಣೆ ಮೂರು ಕಾಸಿನೊಡನೆ ಹಿಂದಿರುಗಿಸಿದನಲ್ಲ! ಜೊತೆಗೆ ಹಿಂದಣ ಹನ್ನೆರಡು ಸಾವಿರವನ್ನೂ ಕೊಡುವನಲ್ಲ! ಅವನ 'ಪ್ರಾಮಾಣಿಕತನ'ವೂ ದೊಡ್ಡದೇ. ಅದು ಎಂಟುನೂರ ಐವತ್ತು ರೂಪಾಯಿ ಆದರೆ ಇದು ಆರಾಣೆ ಮೂರು ಕಾಸು. ಇದು ಆರಾಣೆ ಮೂರು ಕಾಸಾದರೆ ಅದು ಎಂಟುನೂರ ಐವತ್ತು ರೂಪಾಯಿ. ಎಂತಹ ಸೋಜಿಗ ಇದು! ಲಕ್ಷಾಧಿಕಾರಿ ಭಿಕ್ಷಾಧಿಕಾರಿಯಾಗಿ ಮರಳಿ ಲಕ್ಷಾಧಿಕಾರಿಯಾದ ಕಥಾವಸ್ತುವಿನ ಹೆಸರು 'ಆರಾಣೆ ಮೂರು ಕಾಸು!' ಕುತೂಹಲವನ್ನು ಕೆರಳಿಸುವ ನಾಮಕರಣದ ನವವಿಧಾನ ಬೇರೆ ಇಲ್ಲಿದೆ.



'ಯಾರೂ ಅರಿಯದ ವೀರ' ಸುಬ್ಬೇಗೌಡರ ಜೀತದ ಆಳು ಲಿಂಗನ ಸಾಹಸವನ್ನು ವರ್ಣಿಸುವ ಕಥೆ. ಆಷಾಢಮಾಸದ ಒಂದು ರಾತ್ರಿ ಮೇಲ್ಮಳೆಯ ಪರಿಣಾಮವಾಗಿ ತುಂಗಾನದಿಯಲ್ಲಿ ನೀರು ಕ್ಷಣಕ್ಷಣಕ್ಕೆ ಏರುತ್ತ ಬಂತು. ಗುಡುಗು, ಮಿಂಚು, ಸಿಡಿಲು, ಮಳೆ ಇವುಗಳಿಂದ ರಾತ್ರಿ ಹುಚ್ಚೆದ್ದು ಭೈರವಿಯಾಯಿತು. ನದಿಯ ಮಾರಿನೆರೆಯು ಸುಬ್ಬೇಗೌಡರ ಅಂಗಳಕ್ಕೆ ನುಗ್ಗಿತು. ಆಗ ಆ ಅರ್ಧರಾತ್ರಿಯಲ್ಲಿ ಸುಬ್ಬೇಗೌಡರು ತಮ್ಮ ಹೆಂಡತಿ ಮಕ್ಕಳು ಪರಿವಾರದೊಡನೆ ದೋಣಿ ಏರಿ ಆಚೆ ದಡ ಸೇರಲು ಸಜ್ಜಾದರು. ಅವರ ಆಳು ಲಿಂಗ ಮೊದಲಿನಿಂದ ಕೊನೆಯವರೆಗೂ ಈ ಕೆಲಸದಲ್ಲಿ ದಣಿಗೆ ನೆರವಾದ. ದೋಣಿ ಸಣ್ಣದು. ಪರಿವಾರ ಹೆಚ್ಚು. ಗಾಳಿ ಜೋರಾಯಿತು, ದೋಣಿ ಏಳುತ್ತ ಬೀಳುತ್ತ ತೂರಾಡುತ್ತ ಇನ್ನೇನು ಮುಳುಗುವುದೋ ಎನ್ನುವಂತೆ ಆಯಿತು. ದೋಣಿಗೆ ಭಾರ ಹೆಚ್ಚಾಯಿತೆಂದು ಗೌಡರು ಜೊತೆಯಲ್ಲಿ ತಂದಿದ್ದ ಎರಡು ಅಮೂಲ್ಯವಾದ ಪೆಟ್ಟಿಗೆಗಳನ್ನು ಹೊಳೆಗೆ ಎಸೆದರು. ಆದರೂ ದೋಣಿ ಉಯ್ಯಾಲೆಯಾಡುವುದು ನಿಲ್ಲಲಿಲ್ಲ, ಲಿಂಗ ತಾನು ಹೊಳೆಗೆ ಹಾರಿ ಭಾರವನ್ನು ಕಡಮೆಮಾಡಿ ದಣಿಯನ್ನೂ ಅವರ ಹೆಂಡಿರುಮಕ್ಕಳನ್ನೂ ಬದುಕಿಸುವ ಯೋಚನೆ ಮಾಡಿದ. ಒಡನೆಯೇ ಅದೇ ದೋಣಿಯಲ್ಲಿದ್ದ—ಚಿಕ್ಕಂದಿನಲ್ಲಿಯೇ ತಾಯಿಯನ್ನು ಕಳೆದುಕೊಂಡಿದ್ದ—ತನ್ನ ಮಗ ನಾಗನ ನೆನಪು ಬಂದಿತು. ಆದರೆ ಅದು ಕ್ಷಣಮಾತ್ರ. ಒಡನೆಯೇ ವೀರನಿರ್ಧಾರಮಾಡಿದ ಲಿಂಗ ಹುಟ್ಟನ್ನು ದೋಣಿಯಲ್ಲಿಟ್ಟು ಹೊಳೆಗೆ ಹಾರಿಬಿಟ್ಟ. ಕಗ್ಗತ್ತಲು, ಮಳೆ, ಗಾಳಿ, ನದಿಯ ಆರ್ಭಟ! ಒಬ್ಬರ ಮುಖ ಒಬ್ಬರಿಗೆ ಕಾಣದು! ಯಾವ ಸದ್ದೂ ಯಾರಿಗೂ ಕೇಳಿಸದು! ಭಾರ ಕಡಮೆ ಆಯಿತು. ದೋಣಿ ಸುರಕ್ಷಿತವಾಗಿ ದಡ ಸೇರಿತು, ಪರಿವಾರ ಆ ದಡದ ನೆಂಟರ ಮನೆ ಮುಟ್ಟಿತು.

ಆಮೇಲೆಯೇ ಲಿಂಗ ಕಣ್ಮರೆಯಾದ ಸಂಗತಿ ಎಲ್ಲರಿಗೂ ತಿಳಿಯಿತು. ಎಲ್ಲರ ಕಣ್ಣಿನಲ್ಲೂ ನೀರು. ಆ ಬಡಪಾಯಿ ನಾಗನಂತೂ ಗಟ್ಟಿಯಾಗಿ ಅಳತೊಡಗಿದ. ಎಲ್ಲರೂ ಸಮಾಧಾನದ ಮಾತುಗಳಾಡಿದರೂ ಹುಡುಗ ಅಳು ನಿಲ್ಲಿಸಲಿಲ್ಲ. ಬೆಳಗಾದ ಮೇಲೆ ಸ್ವಲ್ಪ ಹೊತ್ತಿಗೆ ಲಿಂಗ ಒದ್ದೆಮುದ್ದೆಯಾಗಿ ಮಳೆ ಚಳಿಗಳಿಗೆ ನಡುಗುತ್ತ ಗೌಡರಲ್ಲಿಗೆ ಬಂದ. ಹಿಂದಿನ ರಾತ್ರಿ ದೋಣಿ ತಲೆಕೆಳಗಾದ ಹಾಗೆ ಆದಾಗ ತಾನು ಮುಗ್ಗುರಿಸಿದು ದಾಗಿಯೂ, ಆಮೇಲೆ ಎದ್ದು ಬಂದುದಾಗಿಯೂ ಲಿಂಗ ಹೇಳಿದ. ನಿಜಸಂಗತಿ ಮರೆಮಾಚಿದ, ಎಲ್ಲರಿಗೂ ಪರಮಾನಂದವಾಯಿತು. ಮಕ್ಕಳಿಗಂತೂ ಲಿಂಗನ ಬರವು ತುಂಬ ಸಂತೋಷದ ಸಂಗತಿ. ಹೀಗೆ ಆ ರಾತ್ರಿ ಲಿಂಗ ತನ್ನ ನಿಸ್ವಾರ್ಥವಾದ ಬಲಿದಾನದ ಸಾಹಸದಿಂದ ಎಲ್ಲರನ್ನೂ ಬದುಕಿಸಿದ. ಆ ಪುಣ್ಯದಿಂದ ತಾನೂ ಬದುಕಿ ಬಂದ. ಇಲ್ಲದಿದ್ದರೆ. ಎಲ್ಲರೂ ಸಾಯುತ್ತಿದ್ದರು. ತಾನೂ ಸಾಯುತ್ತಿದ್ದ.

ಈ ಕಥೆಯಲ್ಲಿ ಮೆಚ್ಚತಕ್ಕದ್ದು ಲಿಂಗನ ಪಾತ್ರ. ಕೊನೆಗೂ ಅವನ ಸಾಹಸವನ್ನು ಮರೆಮಾಚುವುದರಲ್ಲಿ ಅವನ ಹಿರಿಮೆ ಇದೆ. ಇನ್ನು ಯಾರಾದರೂ ಆಗಿದ್ದರೆ ಗೌಡ ರಿಗೂ ಅವರ ಸಮೀಪದವರಿಗೂ ಜೀವದಾನದ ಹಿರಿಮೆ ತನ್ನದೆಂದು ಪ್ರಕಟಿಸಿ ಪ್ರತಿ ಫಲವನ್ನು ನಿರೀಕ್ಷಿಸುತ್ತಿದ್ದರು. ಲಿಂಗ ಹಾಗೆ ಮಾಡಲಿಲ್ಲ. ಇದು ಅವನ ನಿರ್ವ್ಯಾಜ ಪ್ರೇಮಕ್ಕೆ ನಿದರ್ಶನ. ಅವನ ಪಾತ್ರ ಇದರಿಂದ ಉಜ್ವಲವಾಗಿ ಬೆಳಗಿದೆ. ಇಂತಹ ಸೇವೆಗೆ ಭಗವಂತನೇ ಪ್ರತಿಫಲ ಕೊಟ್ಟಿದ್ದಾನೆ. ಅವನ ಜೀವ ಉಳಿಸಿ ಎಂಬ ಧ್ವನಿ ಕಥೆಯಲ್ಲಿ ಸೂಚಿತವಾಗುತ್ತದೆ. ಲಿಂಗನ ಪೂರ್ವ ವೃತ್ತಾಂತವನ್ನು ಕೆಲವೇ ಮಾತು ಗಳಲ್ಲಿ ಕವಿ ಕೊಟ್ಟು ವಾಚಕರ ಕರುಣೆಯ ಕೆರೆಯ ತೂಬು ತೆಗೆದಿದ್ದಾರೆ. ಗೌಡರ ಮಕ್ಕಳಿಗೆ ಆತ ಹೇಳುವ ಜೈಲು ಶಿಕ್ಷೆಯ ವೃತ್ತಾಂತ ಎಷ್ಟು ಕರುಣಾಮಯವಾಗಿದೆ! ಕೇಳುವ ಮಕ್ಕಳು ಎಷ್ಟು ನಿರ್ಮಲರೋ, ಮುಗ್ಧರೋ ಹೇಳುವ ಲಿಂಗನೂ ಅಷ್ಟೆ ನಿರ್ಮಲ, ಅಷ್ಟು ಮುಗ್ಧ. ಲೋಕ ಮಾತ್ರ ದುಷ್ಟ ಶಿಕ್ಷೆ ವಿಧಿಸಿತು. ಈ ಕಥೆಯಲ್ಲಿ ಬರುವ ಮಳೆ, ನರ-ಕತ್ತಲು ಇವುಗಳ ವರ್ಣನೆ ಕಥೆಯ ವಸ್ತುವಿನ ಗಾಂಭೀರ್ಯಕ್ಕೆ ಉಚಿತವಾದ ಹಿನ್ನೆಲೆಯನ್ನು ಒದಗಿಸಿದೆ.

೭

'ಹೋಳಿಗೆ ಪ್ರತಿಜ್ಞೆ'ಯಲ್ಲಿ ಕತೆಗಾರರ ಗೆಳೆಯರೊಬ್ಬರು ಚಿಕ್ಕಂದಿನಲ್ಲಿ ತಮ್ಮ ಊರಿನಲ್ಲಿ ನಡೆದ ಒಂದು ಘಟನೆಯನ್ನು ವಿವರಿಸಿ ಹೋಳಿಗೆ ಏಕೆ ತಿನ್ನುವುದಿಲ್ಲ ಎಂದು ಹೇಳಿದ ಸಂಗತಿ ಇದೆ. ಈ ಗೆಳೆಯರಿಗೆ ಹೋಳಿಗೆ ತುಂಬ ಇಷ್ಟ. ಒಮ್ಮೆ ಹೋಳಿಗೆ ಯನ್ನು ಜೇಬು ತುಂಬ ತುಂಬಿಕೊಂಡು ಶಾಲೆಗೆ ಹೋದರು. ಛಡಿ ಏಟು, ಫರಂಗಿ ಮಣೆ, ಮೂರು ನಾಮದ ಮೆರವಣಿಗೆ ಇವುಗಳು ಮಾಮೂಲಾಗಿದ್ದ ದಿನಗಳು ಅವು. ಜೊತೆಗೆ ಇವರ ಶಾಲೆಯಲ್ಲಿ ಪ್ರತ್ಯಕ್ಷ ಯಮನಂತಹ ಗುಂಡಪ್ಪ ಮೇಷ್ಟರು ಬೇರೆ.

ಯಾವುದೋ ಪ್ರಶ್ನೆಗೆ ಏನೋ ಉತ್ತರ ಹೇಳಹೋಗಿ ಈ ಗೆಳೆಯರ ಪಕ್ಕದ ಹುಡುಗ 'ಇವರ ಜೇಬಿನಲ್ಲಿ ಹೋಳಿಗೆ ಇದೆ' ಎಂದು ಮೇಷ್ಟರಿಗೆ ತಿಳಿಸಿದ. ಹೀಗೆ ಚಾಡಿಹೇಳಿದ್ದಕ್ಕೆ ಪ್ರತಿಫಲವಾಗಿ ಆ ಹುಡುಗ ಛಡಿ ಏಟು, ಫರಂಗಿ ಮುಣೆಗಳ ಶಿಕ್ಷೆ ಅನುಭವಿಸಿ ಸ್ವಸ್ಥಾನಕ್ಕೆ ಮರಳಿದ. ಅವನಿಗೆ ಶಿಕ್ಷೆ ಆಗುತ್ತಿದ್ದಾಗ ಹೋಳಿಗೆ ತುಂಬಿಕೊಂಡಿದ್ದ ಗೆಳೆಯರು ತಮ್ಮ ಗತಿಯನ್ನು ನೆನೆದು ಕ್ಷಣಕಾಲ ಸ್ತಂಭೀಭೂತರಾದರು. ಕೊನೆಗೆ ಒಂದು ಯೋಚನೆ ಹೊಳೆದು ಪಕ್ಕದವನ ಜೇಬಿಗೆ ಅವನಿಗೆ ಅರಿವಾಗದಂತೆ ಇದ್ದ ಬಿದ್ದ ಹೋಳಿಗೆಯನ್ನೆಲ್ಲ ತೆಗೆದು ಬೇಗ ಬೇಗ ತುಂಬಿದರು. ಮೇಷ್ಟರಿಂದ ಕರೆ ಬಂದಾಗ ನಿರ್ಭಯವಾಗಿ ಪರಿಸ್ಥಿತಿಯನ್ನು ಎದುರಿಸಿದರು. ಆದರೆ ಪಕ್ಕದವನು ಗಟ್ಟಿಯಾಗಿ ಅಳತೊಳಗಿ ತನ್ನ ಜೇಬಿನಲ್ಲಿ ಯಾರೋ ಹೋಳಿಗೆ ತುಂಬಿದ್ದಾರೆ ಎಂದು ರಾದ್ಧಾಂತ ಮಾಡಿದಾಗ ಗುಟ್ಟು ರಟ್ಟಾಯಿತು. ಗೆಳೆಯರಿಗೆ ಹೋಳಿಗೆ ಸವಿ ಮೇಷ್ಟರ ಮೂಲಕ ಚೆನ್ನಾಗಿ ಪರಿಚಯವಾಯಿತು. ಅದೇ ಕಾರಣವಾಗಿ ಅಂದಿನಿಂದ ತಮಗೆ ಪ್ರಿಯವಾದ ಹೋಳಿಗೆಯನ್ನು ತಿನ್ನುವುದೇ ಇಲ್ಲ ಎಂದು ಪ್ರತಿಜ್ಞೆ ಮಾಡಿಬಿಟ್ಟರು. ಈ ಸಂಗತಿ ಗೆಳೆಯರು ಏಳೆಂಟು ವರ್ಷದ ಹುಡುಗರಾಗಿದ್ದಾಗ ನಡೆದದ್ದು. ಕತೆಗಾರರಿಗೆ ಈ ಸಂಗತಿ ತಿಳಿದದ್ದು ಗೆಳೆಯರು ಎಪ್ಪತ್ತರ ಮುದುಕರಾದಾಗ! 'ಹುಡುಗರಾದರೇನು? ಬಲ್ಲವರಾದರೇನು? ಪ್ರತಿಜ್ಞೆ ಪ್ರತಿಜ್ಞೆಯೇ' ಎಂದ ಗೆಳೆಯರ ಮಾತು ಅರ್ಥಪೂರ್ಣವಾಗಿದೆ. ಪ್ರತಿಜ್ಞೆಯನ್ನು ಪರಿಪಾಲಿಸುವ ಮನೋಭಾವದಿಂದ ಧರ್ಮಬುದ್ಧಿ ಬಲಗೊಂಡಿತೆಂದು ಗೆಳೆಯರು ಹೇಳಿದ ಮಾತು ಮನೋಜ್ಞವಾಗಿದೆ. 'ಮಹಿಮೆ ಕಾರ್ಯಗಳಲ್ಲಲ್ಲ; ಕಾರ್ಯಮಾಡಿಸುವ ಚಿತ್ತವೃತ್ತಿಯಲ್ಲಿದೆ' ಎಂಬ ತತ್ತ್ವ ಈ ಕಥೆಯಲ್ಲಿ ಮೂಡಿದೆ.

೮

'ಮಾಯದ ಮನೆ' ಒಂದು ವಿಚಿತ್ರವಾದ ಕಥೆ. ಡಾಖಾ ನಗರದ ವೈದ್ಯ ಸುರೇಂದ್ರ ಬಾಬು ತುಂಬ ಸ್ವಾರ್ಥಿ. ಧನ ಪಿಶಾಚಿ ಹಿಡಿದವನಂತೆ ವರ್ತಿಸುತ್ತಿದ್ದ. ದುಡ್ಡು ದುಡ್ಡು ದುಡ್ಡು! ಅದಿಲ್ಲದ ಮಾತೇ ಇಲ್ಲ. ಬಡಬಗ್ಗರಿಗೆ ಯಾವ ಸಹಾಯವೂ ಇಲ್ಲ. ಇಂತಹ ವೈದ್ಯ ಒಮ್ಮೆ ಅರ್ಧ ರಾತ್ರಿಯಲ್ಲಿ ಹಣದಾಸೆಯಿಂದ ವಿಪಿನಚಂದ್ರ ಬಾಬುವಿನ ಮನೆಗೆ ಪ್ರಸವವೇದನೆಯಿಂದ ನರಳುತ್ತಿದ್ದ ಅವನ ಹೆಂಡತಿಯನ್ನು ನೋಡಿ ಔಷಧೋಪಚಾರ ನಡೆಸಲು ಹೋಗುತ್ತಾನೆ. ದಕ್ಷಿಣ ಮೋಷಂಡಿಯಲ್ಲಿ ವಿಪಿನ ಚಂದ್ರನ ಮನೆ ಎಂದು ಕೇಳಿದಾಗ ವೈದ್ಯನ ಎದೆ ನಡುಗಿತು. ಅಲ್ಲಿ ಒಂದು ಮನೆ 'ಭೂತಗಳ ಬೀಡು' ಎಂಬುದನ್ನು ವೈದ್ಯ ಕೇಳಿಬಲ್ಲ. ಆದರೂ ಹಣದ ಮೇಲಣ ಆಸೆ! ಎದೆಗೆಡದೆ ಹೋದ ವೈದ್ಯ ಆ ನಿಶಿರಾತ್ರಿಯಲ್ಲಿ! ವೈದ್ಯ ರೋಗಿಯನ್ನು ಪರೀಕ್ಷಿಸಿ ತನ್ನ ಬಳಿ ಸಹಾಯಕಳಾಗಿದ್ದ ಶಶಿಮುಖಿ ಎಂಬ ವೈದ್ಯಳನ್ನು ಬರಹೇಳಬೇಕೆಂದು ತಿಳಿಸಿದ.

ಆಕೆಯೂ ಬಂದಳು. ರೋಗಿಯನ್ನು ಪರೀಕ್ಷಿಸಲು ಮಂಚದ ಬಳಿ ಹೋದಳು. ಮುಸುಕು ತೆಗೆದಳು! ಆದರೆ ಅಲ್ಲಿ ರೋಗಿ ಇರಲಿಲ್ಲ. ನಿಮಿಷಾರ್ಧದಲ್ಲಿ ಮಂಚವು ಮಾಯವಾಯಿತು. ವಿಪಿನ ಬಾಬುವಿನ ಮನೆ, ಭೋಗೋಪಕರಣಗಳೂ ಮಾಯ ವಾದುವು! ಮನೆಗೆ ಮನೆಯೇ ಮಾಯವಾಯಿತು. ಸಾವಿರಾರು ಜನ ಒಂದೇ ಸಾರಿಗೆ ಗಹಗಹಿಸಿ ನಗುವಂತೆ ಶಬ್ದ ಕೇಳಿಸಿತು. ದೀಪ ಆರಿ ಕತ್ತಲು ಕವಿದು ಆಮೇಲೆ ಸುರೇಂದ್ರ ಶಶಿಮುಖಿಯರು ಬೆಳ್ಳಗಾದರು. ಅವರ ಎದೆ ಅವರ ಬಾಯಿಗೆ ಬಂದಿತು. ನೆತ್ತರು ಹೆಪ್ಪುಗಟ್ಟಿತು. 'ವೈದ್ಯರೇ ಫೀಜು, ವೈದ್ಯರೇ ಫೀಜು' ಎಂದು ಕೂಗುತ್ತ ಸಾವಿರಾರು ಹಸ್ತಗಳು ಹಣದ ತೈಲಿಯನ್ನು ಬಿಚ್ಚಿ ಝಣಝಣನೆ ಸುರಿದುವು. ಸುರೇಂದ್ರ ಶಶಿಮುಖಿಯರು ಗಟ್ಟಿಯಾಗಿ ಕಿರಿಚಿ ಮೂರ್ಛೆ ಹೋದರು. ನೆರೆಹೊರೆಯವರು ಗದ್ದಲ ಕೇಳಿ ಮೂರ್ಛಿತರಾದವರನ್ನು ಎತ್ತಿಕೊಂಡು ಹೋದರು.

ಕಥೆಯು ಆವರಣ ಪ್ರಧಾನವಾಗಿದೆ. ವರ್ಣನೆಯಲ್ಲಿ ಬರುವ ಒಂದೊಂದು ಮಾತು ಭಯಾನಕ ಸನ್ನಿವೇಶವನ್ನು ಮೈಮರೆವಂತೆ ಚಿತ್ರಿಸುತ್ತದೆ. ಧನಪಿಶಾಚಿಗ್ರಸ್ತನಾದ ವೈದ್ಯನಿಂದ ವೈದ್ಯರು ಪಾಠ ಕಲಿಯಬಹುದು.

೬

'ದೆವ್ವದ ಕಾಟ' ಅಪೂರ್ವವಾದ ಒಂದು ಕಥೆ. ರಂಗರಾಯ ಮಲೆನಾಡಿನ ಒಬ್ಬ ಜಮೀನುದಾರ. ಅವನ ಜಮೀನು, ವಾಸದ ಮನೆ, ಕೃಷಿ ಜೀವನದ ಇತರ ಸಲಕರಣೆಗಳು ಎಲ್ಲವೂ ನವಿಲೂರಿನಲ್ಲಿ ಇದ್ದುವು. ಆತ ತನ್ನ ಸಂಸಾರದೊಂದಿಗೆ ತೀರ್ಥಹಳ್ಳಿಯ ಪೇಟೆಯ ಮನೆಯಲ್ಲಿ ವಾಸವಾಗಿದ್ದ. ನವಿಲೂರಿನ ಜಮೀನು ರಖಾ ವಲಿಗೆ ಮುತ್ತಣ್ಣ ಎಂಬ ತೈನಾತಿಯೊಬ್ಬ ಇದ್ದ. ಮುತ್ತಣ್ಣ ರಾಜಪ್ರತಿನಿಧಿಯಂತೆ ರಂಗರಾಯನ ಪರವಾಗಿ ನವಿಲೂರಿನಲ್ಲಿದ್ದು ಧಣಿಯ ಜಮೀನು ಸಂಬಂಧದ ಆಗುಹೋಗು ಗಳನ್ನು ನೋಡಿಕೊಳ್ಳುತ್ತಿದ್ದ. ಹೀಗಿರುವಾಗೊಮ್ಮೆ ತುಂಗಾ ನದಿಯ ಮಾರಿನೆರೆಯಲ್ಲಿ ರಂಗರಾಯನ ಪೇಟೆಯ ಮನೆ ಕೊಚ್ಚಿಹೋಯಿತು. ರಂಗರಾಯ ನವಿಲೂರಿಗೆ ಮರ ಳಿದ. ಮುತ್ತಣ್ಣನೇ ಖುದ್ದು ಅವನನ್ನು ಕರೆದುಕೊಂಡು ಬಂದ. ರಂಗರಾಯ ಮನೆಯ ಆಡಳಿತ, ಜಮೀನಿನ ಅಚ್ಚುಕಟ್ಟು ಇವುಗಳನ್ನೆಲ್ಲ ನೋಡಿ ಮುತ್ತಣ್ಣನನ್ನು ತುಂಬ ಹೊಗಳಿದ. ಸ್ವಲ್ಪ ದಿನಗಳಲ್ಲಿಯೇ ಒಂದು ಘಟನೆ ನಡೆಯಿತು. ರಾತ್ರಿಹೊತ್ತು ರಂಗರಾಯನ ಮನೆಯಮೇಲೆ ಕಲ್ಲುಗಳು ಬೀಳಲು ಪ್ರಾರಂಭಿಸಿದವು. ದಿನಗಳೆದಂತೆ ಕಲ್ಲಿನ ಮಳೆಗರೆಯಾಟ ಹೆಚ್ಚಿತು. ಮುತ್ತಣ್ಣ, ರಂಗರಾಯ ಇರುಳೆಲ್ಲ ಕಾದರು, ಗಸ್ತು ತಿರುಗಿದರು. ವಿಷಯ ಪತ್ತೆಯಾಗಲಿಲ್ಲ. ದೂರು ಪೋಲೀಸರವರೆಗೂ ಹೋಯಿತು. ರಂಗರಾಯ ಹೆಂಡಿರು ಮಕ್ಕಳನ್ನು ಮರಳಿ ಪೇಟೆಯ ಬಿಡಾರಕ್ಕೆ ಕಳುಹಿಸಿದನು. ಪೋಲೀಸರು ಬಂದರು. 'ಮುತ್ತಣ್ಣನ ಮೇಲೆ ನಿಮಗೆ ಗುಮಾನಿಯೇ' ಎಂದು ರಂಗ

ರಾಯನನ್ನು ಕೇಳಿದರು. 'ನವಿಲೂರು ರಂಗರಾಯರ ಮೇಲೆ ಗುಮಾನಿಯೇ ಎಂದೇ ಕೇಳಿ' ಎಂದು ರಂಗರಾಯ ಮಾತು ತಿರುಗಿಸಿದ. ಪೋಲೀಸರು ಹಳ್ಳಿಯವರನ್ನು ಸಹಾಯಕ್ಕೆ ಕರೆದುಕೊಂಡು ಆ ರಾತ್ರಿ ಕಳ್ಳರ ತಪಾಸಿಗೆ ನಿಂತರು. ಶಿಲಾವರ್ಷ ಪ್ರಾರಂಭವಾಯಿತು. ಮಧ್ಯರಾತ್ರಿಯಲ್ಲಿ ಮುತ್ತಣ್ಣ ಗುಂಡುಹಾರಿಸಿದ. ಕಳ್ಳನನ್ನು ಕಂಡು ಹೊಡೆದೆ-ಬನ್ನಿ ಎಂದು ಕರೆದ. ಜನ ಗುಂಪುಗೂಡಿ ಮುತ್ತಣ್ಣನನ್ನು ಅನುಸರಿಸಿದರು. ರಕ್ತ ಹಸಿಹಸಿಯಾಗಿ ಸೋರಿಹೋಗಿದ್ದ ದಾರಿ ಹಿಡಿದು ನಡೆದರು. ಒಂದು ತೊರೆಯವರೆಗೂ ರಕ್ತದ ಗುರುತು ಇದ್ದು ಆಮೇಲೆ ಕಾಣಿಸದಾಗಿತ್ತು. ಕಳ್ಳ ಏಟು ತಗಲಿ ಓಡಿಹೋದ; ಎಲ್ಲೋ ಬಿದ್ದು ಸತ್ತುಹೋದ ಎಂದು ನಿಶ್ಚಿಂತೆಯಿಂದ ಜನ ಮರಳಿದರು. ಆದರೆ ಮರುದಿನವೂ ಕಲ್ಲಿನ ಕಾಟ ತಪ್ಪಲಿಲ್ಲ. ದಿನವೂ ಕಾದರು. ಬೆದರು ಗುಂಡು ಹೊಡೆದರು. ಪೋಲೀಸರು ಬಂದರು ಹೋದರು. ಗುಲ್ಲು ಹೆಚ್ಚಿತು. ಕಳ್ಳರು ಸಿಗಲಿಲ್ಲ. ಹೀಗಿರುವಾಗ ಒಂದು ರಾತ್ರಿ ಕಾವಲು ಕಾಯುತ್ತಿದ್ದ ಹೊಲೆರ ಮಾದ ಯಾರೋ ದೂರದಲ್ಲಿ ಸುಳಿಯುತ್ತಿದ್ದುದನ್ನು ಕಂಡು ಯಾರದು ಎಂದು ಎರಡು ಮೂರು ಸಾರಿ ಕೂಗಿ ಉತ್ತರ ಬಾರದಿದ್ದುದರಿಂದ ಢಂ ಎನ್ನಿಸಿಬಿಟ್ಟ. ಪರಿಚಿತ ಧ್ವನಿ ಕಿರಿಚಿಕೊಂಡುದು ಕೇಳಿಸಿತು. ಓಡಿ ನೋಡಿದರೆ ಮುತ್ತಣ್ಣ-ರಂಗರಾಯ ಕಾವಲಿನವನನ್ನು ಗದರಿಸಿ ಮುತ್ತಣ್ಣನಿಗೆ ಚಿಕಿತ್ಸೆ ನಡೆಸಿದ, ಬೆಂಗಳೂರು ವಿಕ್ಟೋರಿಯಾ ಆಸ್ಪತ್ರೆಗೆ ಕರೆದುಕೊಂಡು ಹೋದ. ಈ ನಡುವೆ ನವಿಲೂರಿನಲ್ಲಿ ಶಿಲಾವರ್ಷವಾಗಲಿಲ್ಲ. ಗಾಯ ಗುಣವಾದ ಮೇಲೆ ಮುತ್ತಣ್ಣನೊಡನೆ ರಂಗರಾಯ ಮರಳಿದ. ಮತ್ತೆ ಕಲ್ಲಿನ ಮಳೆ ಪ್ರಾರಂಭ. ದೆವ್ವದ ಕಾಟ ಎಂದು ಜೋಯಿಸರ ಮಾತಿನಂತೆ ಮಂತ್ರ ತಂತ್ರಗಳು ನಡೆದುವು. ಪ್ರಯೋಜನವಾಗಲಿಲ್ಲ. ಕೊನೆಗೊಮ್ಮೆ ಕಸಬ ಪೋಲೀಸ್ ಇನ್‌ಸ್ಪೆಕ್ಟರಿಗೆ ಮಹಮದ್ ಹುಸೇನ್ ಸಾಹೇಬರು ಖುದ್ದಾಗಿ ಬಂದರು. ರಾತ್ರಿ ಗಸ್ತು ಪ್ರಾರಂಭವಾಯಿತು. ಮನೆಯಮೇಲೆ ಕಲ್ಲು ಬಿತ್ತು. ಇನ್‌ಸ್ಪೆಕ್ಟರಿಗೆ ಥಟ್ಟನೆ ಪ್ರತಿಭೆ ಮಿಂಚಿತು. ಎಲ್ಲರನ್ನೂ ನಿಂತಲ್ಲಿಯೇ ನಿಲ್ಲುವಂತೆ ಆಜ್ಞೆ ಮಾಡಿದರು. ಎಲ್ಲರ ಜೇಬುಗಳನ್ನೂ ಜಪ್ತಿ ಮಾಡಿದರು. ನಾಗಣ್ಣನ ಜೇಬಿನಲ್ಲಿ ಏನೂ ಇರಲಿಲ್ಲ. ಮುತ್ತಣ್ಣನ ಸರದಿ ಬಂತು. ಆತ ಬೆಳ್ಳಗೆ ಬೆವರಿದ. ಅವನ ಜೇಬಿನಲ್ಲಿ ಕಲ್ಲಿನ ರಾಶಿ ಇತ್ತು. ಇನ್‌ಸ್ಪೆಕ್ಟರು ರಂಗಣ್ಣನಿಗೆ ತೋರಿಸಿದರು. ರಂಗರಾಯ ಪೇಟೆಯ ಮನೆಯಲ್ಲಿದ್ದಾಗ ಈ ರಾಜ ಪ್ರತಿನಿಧಿ ಕಂಡುಕೊಂಡಿದ್ದ ಗ್ರಾಮ ಚಕ್ರಾಧಿಪತ್ಯದ ರುಚಿ ಬಲವಾಗಿ ಬಿಟ್ಟಿತ್ತು. ಮಾರಿ ನೆರೆ ಬಂದಮೇಲೆ ರಂಗರಾಯ ಸ್ವಗ್ರಾಮದಲ್ಲಿಯೇ ನೆಲೆಸಿದರೆ ತನ್ನ ಸ್ವಾತಂತ್ರ್ಯಕ್ಕೆ ಊನ ಎಂದು ಕಲ್ಲುಬೀರಿ ಕಲ್ಲುಕುಟಿಗ ದೆವ್ವನ ಕಾಟ ಎಂಬ ಬೆದರಿಕೆ ಹಾಕಿ ರಂಗರಾಯನನ್ನು ಮರಳಿ ಪೇಟೆಗೆ ಅಟ್ಟಲು ಈ ಹಂಚಿಕೆ ಹೂಡಿದ್ದ ಮುತ್ತಣ್ಣ. ಇಂತಹ ಕಲ್ಲು ಕುಟಿಗನ ಆಟ ಮಹಮದ್ ಹುಸೇನ ಸಾಹೇಬರ ಮುಂದೆ ನಡೆಯಲಿಲ್ಲ. ಸಾಹೇಬರು ಗೋಮುಖವ್ಯಾಘ್ರನ ಗುಟ್ಟು ರಟ್ಟುಮಾಡಿದರು. ರಂಗರಾಯ ಮೂಗಿನ ಮೇಲೆ ಬೆರಳಿಟ್ಟ. ಉಂಡಮನೆಗೆರಡು ಬಗೆಯುವ ಈ ದ್ರೋಹಿಯೇ ಕಲ್ಲುಕುಟಿಗ.

ಕಥೆ ಕೊನೆಯುವರೆಗೂ ಏರೇರಿಕೆಯಲ್ಲಿ ವಾಚಕರ ಕುತೂಹಲವನ್ನು ಕೆರಳಿಸುತ್ತದೆ. ಮುಕ್ತಾಯದ ರಮ್ಯ ವಿಸ್ಮಯ ಅಕೃತಕವಾಗಿದೆ, ಕಲಾತ್ಮಕವಾಗಿದೆ. ಇಲ್ಲಿಯೂ ಕತ್ತಲೆಯ ವರ್ಣನೆ ಕಥೆಯ ಆವರಣಕ್ಕೆ ಪುಷ್ಟಿಕೊಟ್ಟಿದೆ. ಪ್ರಕೃತಿಯ ಹೊರಗಣ ಕತ್ತಲನ್ನು ಕತೆಗಾರರು ವರ್ಣಿಸಿದ್ದಾರೆ. ಮುತ್ತಣ್ಣನ ಹೃದಯದೊಳಗಣ ಕತ್ತಲನ್ನು ನಮ್ಮ ಊಹೆಗೇ ಬಿಟ್ಟಿದ್ದಾರೆ.

## ೧೦

'ಶ್ರೀಮನ್ಮೂಕವಾಗಿತ್ತು' ಹಳೆಯಪೈಕದ ರಂಗನನ್ನೂ ಅವನ ಎಮ್ಮೆ ಮತ್ತು ಅದರ ಕರುವನ್ನು ಕುರಿತ ಕಥೆ. ರಂಗ ಒಬ್ಬ ಬಡರೈತ. ಸ್ವಂತ ಜಮೀನು ಇಲ್ಲ. ಗಡಿ ಗುತ್ತಿಗೆ ಮಾಡಿಕೊಂಡು ಒಕ್ಕಲು ಸಾಗು ಮಾಡುತ್ತಾನೆ. ರಂಗನಿಗೆ ಒಂದು ಹುಲ್ಲಿನ ಜೋಪಡಿ ಇದೆ. ಏಳೆಂಟು ಕಾಲ್ನಡೆ ಇವೆ. ಒಬ್ಬಳು ಹೆಂಡತಿ, ಒಬ್ಬ ಮಗ ಇದ್ದಾರೆ. ಇಷ್ಟು ಅವನ ಪರಿಚಯಕ್ಕೆ ಸಾಕು. ಒಂದು ದಿನ ರಾತ್ರಿ ರಂಗ ಊಟಕ್ಕೆ ಕುಳಿತಾಗ ಕೊಟ್ಟಿಗೆಯಲ್ಲಿ ಕಟ್ಟಿದ್ದ ಎಮ್ಮೆಯ ಎಳಗರು ಒಂದು ಕೂಗಿತು. ರಂಗ ಊಟ ಬಿಟ್ಟು ಎದ್ದ. ಕೊಟ್ಟಿಗೆಗೆ ಹೋದ. ತಾಯಿ ಬಾರದೆ ಕೂಗುವ ಕರು ನೋಡಿ ಸಂಕಟವಾಯಿತು. ಹಾಲು ತರಿಸಿ ನಳಗದಲ್ಲಿ ಹೊಯ್ಯಲು ಪ್ರಯತ್ನಿಸಿದ. ಕರು ಕುಡಿಯಲಿಲ್ಲ. ಹುಲಿಯ ಹಾವಳಿ ನೆನೆದು ರಂಗ ಹೆದರಿದ. ತಾಯಿ ಹುಲಿಯ ಬಾಯಿಗೆ ತುತ್ತಾಯಿತೋ ಏನೋ ಎಂದು ನೊಂದ. ಆ ಕ್ಷಣವೇ ಒಂದು ದೊಂದಿ ಹಿಡಿದು ಅದರ ಬೆಳಕಿನಲ್ಲಿ ರಂಗ ರಾತ್ರಿಯೇ ಎಮ್ಮೆ ತಪಾಸಿಗೆ ಹೊರಟ. ಕತ್ತಲೆ, ಸಾಲದ್ದಕ್ಕೆ ಮಳೆ ಬೇರೆ. ರಂಗನೋ ಎದೆಗೆಡದೆ ರಾತ್ರಿಯೆಲ್ಲಾ ಆರಸಿದ. ಗದ್ದೆ ತೋಟ ಕಾಡುಮೇಡು ಬೆಟ್ಟದರಿ ಎಲ್ಲ ತೊಳಲಿದ. ಚೌಕಿ ಮನೆಗೆ ನಡೆದ. ಬೆಳಗಾಗುವ ಹೊತ್ತಿಗೆ ಕೀರನಕೇರಿಗೆ ಹೋದ. ಶಂಕರಶಾಸ್ತ್ರಿಗಳನ್ನು ನಿಮಿತ್ತ ಕೇಳಿದ. ಮತ್ತೆ ಎಮ್ಮೆ ಅರಸುತ್ತ ಹೊರಟ. ಕೊನೆಗೆ ನಾಲೂರು ನಾಗಣ್ಣಗೌಡರ ಮನೆಕೊಟ್ಟಿಗೆಯಲ್ಲಿ ಎಮ್ಮೆ ಕಟ್ಟಿಹಾಕಿದ್ದಾರೆಂದೂ, ಅದು ಅವರ ಅಗೇಡಿ ತಿಂದಿದ್ದರಿಂದ ದೊಡ್ಡಿಗೆ ಹೊಡೆಯುವರೆಂದೂ, ಅವರ ಮನೆಯಾಳು ಹೇಳಿದಾಗ ಗೌಡರನ್ನು ಕಾಣಲು ರಂಗ ಓಡಿದ. ಗೌಡರ ಮನೆಯಲ್ಲಿ ದೊಡ್ಡ ಗಲಿಬಿಲಿ. ಅವರ ಕಿರಿಯಮಗ ವಾಸು ಕಾಯಿಲೆ ಮಲಗಿದ್ದ. ಆ ಏಳೆಂಟು ವರುಷದ ಹುಡುಗ ಬಹು ನರಳುತ್ತಿದ್ದ. ಆಗಾಗ ತನ್ನ ಸತ್ತ ತಾಯಿಯನ್ನು ನೆನೆದು ಕರೆಯುತ್ತಿದ್ದ. ಇದನ್ನು ನೋಡಿ ರಂಗನಿಗೆ ತನ್ನಎಳಗರು ಅದರ ತಾಯಿಗಾಗಿ ಮರುಗುವ ಚಿತ್ರ ಕಣ್ಣೆದುರು ಸುಳಿಯಿತು. ರಂಗ ಎಳಗರುವಿಗೂ ಮರುಗಿದ. ವಾಸುವಿಗೂ ಮರುಗಿದ. ರಂಗ ಸಮಯ ಕಾದು ನಾಗಣ್ಣಗೌಡರ ದೊಡ್ಡ ಮಗನೊಡನೆ ತನ್ನ ಎಮ್ಮೆ ಬಿಟ್ಟು ಕೊಡಬೇಕೆಂದು ಅಂಗಲಾಚಿದ. ಆತ ಆಗುವುದಿಲ್ಲ ಎಂದ ದೂರು ದೊಡ್ಡದಣಿಗೆ ಮುಟ್ಟಿತು. ಗೌಡರು ಎಳಗರುವಿನ ಸಮಾಚಾರ ಕೇಳಿ ತಮ್ಮ ಮಗನ ಕಡೆ ನೋಡಿ

ಕೇಂಬಸಿಗರೆದರು. ವಾಸು ಇಷ್ಟಕ್ಕಿಷ್ಟ ಹಾಗೇ, " ಪಾಪ, ಎಳೆಗರು! ಎಮ್ಮೆ ಹೊಡದು ಕೊಂಡು ಹೋಗು ರಂಗಾ" ಎಂದ. ನಾಗಣ್ಣಗೌಡರು " ಹೊಡಕೊಂಡು ಹೋಗಲಿ ಇವನೆಮ್ಮೆ ತೋರಿಸು " ಎಂದು ಆಳಿಗೆ ಹೇಳಿದರು. ರಂಗ 'ದೇವರೇ ಇವರನ್ನು ಉಳಿಸು' ಎಂದುಕೊಂಡು ಎಮ್ಮೆಯೊಡನೆ ಹೊರಟ. ಅದೇ ವೇಳೆಗೆ ಜೋಯಿ ಸರು ಮಂತ್ರಿಸಿಕೊಟ್ಟ ವಿಭೂತಿಯನ್ನು ಆಳೊಬ್ಬನು ತಂದ. ಗೌಡರು ವಿಭೂತಿಯನ್ನು ವಾಸುವಿನ ಹಣೆಗೆ ಇಟ್ಟರು. ಬಾಯಿಗೂ ಹಾಕಿದರು. ಇತ್ತ ರಂಗ ಎಮ್ಮೆಯೊಡನೆ ಉತ್ಸಾಹದಿಂದ ಮನೆ ಸೇರಿದಾಗ ನಡುಹಗಲಾಗಿತ್ತು. ಕೊಟ್ಟಿಗೆಯಲ್ಲಿ ಕರು ಮೂಲೆ ಯಲ್ಲಿ ಬಿದ್ದಿತ್ತು. ಉಸಿರು ಮಾತ್ರ ಆಡುತ್ತಿತ್ತು. ಕರುವನ್ನು ಎತ್ತಿಕೊಂಡು ರಂಗ ಎಮ್ಮೆಯ ಕೆಚ್ಚಲ ಬಳಿ ಹಿಡಿದ. ಎರಡು ಮೂರು ಬಾರಿ ಕರು ಬಾಯಿ ಚಪ್ಪರಿಸಿತು. ಕೈಬಿಟ್ಟ ರಂಗ. ಕರು ನೆಲಕ್ಕೆ ಬಿತ್ತು. ಎಮ್ಮೆ ಅದನ್ನು ಮೂಸಿ ನೆಕ್ಕಿತು. ಅತ್ತ ವಾಸುವಿಗೆ ಅದೇ ಸಮಯಕ್ಕೆ ಜ್ವರ ಇಳಿಯಿತು. ಗೌಡರು ಜೋಯಿಸರ ವಿಭೂತಿಯ ಮಹಿಮೆಯನ್ನು ಹೊಗಳಿದರು. 'ನೋಡಿದಿರೋ ನಮ್ಮ ಜೋಯಿಸರ ವಿಭೂತಿ ಮಹಿಮೆ! ಹುಡುಗಗೆ ಜ್ವರಬಿಟ್ಟೇ ಹೋಗಿದೆ' ಎಂದರು. ದೂರದ ಕರೆಯೂರಿನಲ್ಲಿ ತನ್ನ ಮುದ್ದು ಕರುವನ್ನು ಮೂಸಿ ನೆಕ್ಕುತ್ತಿದ್ದ ಮೂಗು ಪ್ರಾಣಿಯ ಆನಂದದ ಆಶೀರ್ವಾದ ವಿಭೂತಿ ಅದನ್ನಾಲಿಸಿ ಶ್ರೀಮನ್ಮೂಕವಾಗಿತ್ತು! ಇದು ಕಥೆ.

ರಂಗನ ನಿಷ್ಕಲ್ಮಷವಾದ ಹೃದಯ ಕಥೆಯ ಶ್ರೀಮಂತಿಕೆಯನ್ನು ಹೆಚ್ಚಿಸಿದೆ. ಎಳಗುರುವಿನ ದುಃಖದ ಆಳ ತಾಯಿಯನ್ನು ಕಳೆದುಕೊಂಡ ವಾಸುವಿಗೇ ವೇದ್ಯ ಎನ್ನುವ ಅಂಶ ಸೂಚಿತವಾಗಿರುವ ರೀತಿ ಸುಂದರವಾಗಿದೆ. ರಂಗನ ಹರಕೆ, ಎಮ್ಮೆಯ ಆನಂದ ಇವು ಸಾಮಾನ್ಯವೇನಲ್ಲ. ರಂಗ 'ದೇವರೇ ಇವರನ್ನು ಉಳಿಸು' ಎಂದಾ ದರೂ ಹೇಳಿದ ಬಾಯಿಯಿದ್ದದ್ದರಿಂದ. ಆ ಮೂಕಪ್ರಾಣಿ ಬಾಯಿಲ್ಲದೆ ಏನನ್ನೂ ಹೇಳಲಾಗಲಿಲ್ಲ. ಆದರೇನು! ಅದರ ಕರುಳ ಒಲವು ರಂಗನದಕ್ಕಿಂತ ಕಡಿಮೆಯದೇನೂ ಅಲ್ಲ. ಅದರ ಶ್ರೀಮನ್ಮೌನದಲ್ಲಿ ಚಿರಕೃತಜ್ಞತೆಯ, ಅನಂತ ಋಣ ಸಮರ್ಪಣೆಯ ಭಾವ ಭಾರವಾಗಿತ್ತು. ಅದರ ಒತ್ತಡ ವರ್ಣನಾತೀತ. ಇದನ್ನು ಕತೆಗಾರರು ಕಲಾ ತ್ಮಕವಾಗಿ ಸೂಚಿಸಿದ್ದಾರೆ. ಜೋಯಿಸರ ವಿಭೂತಿ ಮೇಲುಕಣ್ಣಿಗೆ ತೋರುವ ಕಾರಣ, ಒಳಗಣ್ಣಿಗೆ ಬೇರೆ ಋತವೇ ಹೊಳೆಯುತ್ತದೆ. ತನ್ನನ್ನು ಕೃಪೆಗೈದು ಬಿಡುಗಡೆಮಾಡಿದ ಆ ಮಗುವನ್ನು ಮಾತು ಬಾರದ ತಾಯಿಯೊಮ್ಮೆ ಆಶೀರ್ವಾದಿಸಿತು. ಆ ಆಶೀರ್ವಾ ದದ ಫಲವಾಗಿ ಹುಡುಗ ಬದುಕಿದ.

೧೧

ಈ ಹಿಂದೆ ಕಥೆಗಳನ್ನು ಬಿಡಿಬಿಡಿಯಾಗಿ ಪ್ರಸ್ತಾಪ ಮಾಡಿದ ಸಂದರ್ಭದಲ್ಲಿ ಈ ಕಥೆಗಳಲ್ಲಿರುವ ವರ್ಣನೆಗಳನ್ನು ಕುರಿತು ಒಂದೆರಡು ಮಾತುಗಳನ್ನು ಹೇಳಿದೆ. 'ಸಂನ್ಯಾಸಿ'ಯಲ್ಲಿ ಬರುವ ಬೆಳದಿಂಗಳ ವರ್ಣನೆ,' ಯಾರೂ ಅರಿಯದ ವೀರ'ದಲ್ಲಿ ಬರುವ ಮಳೆಗಳ ಮಾರಿಸೆರೆಗಳ ವರ್ಣನೆ, 'ದೆವ್ವದ ಕಾಟ'ದಲ್ಲಿ ಬರುವ ಕತ್ತಲೆಯ ವರ್ಣನೆ ಇವು ಮೋಹಕವಾಗಿವೆ, ಧ್ವನಿಪೂರ್ಣವಾಗಿವೆ; ಸಣ್ಣ ಕಥೆಗಳಲ್ಲಿ ವರ್ಣನೆ ಎಷ್ಟಿರಬೇಕು, ಯಾಕಿರಬೇಕು ಎನ್ನುವುದಕ್ಕೆ ಈ ಕಥೆಗಳನ್ನು ಓದಬೇಕು. ಇಂತಹ ವರ್ಣನೆಗಳಿಂದ ಇತರ ಕಥೆಗಳಿಗೆ ಒಳ್ಳೆಯ ಮೆರುಗು ಬಂದಿದೆ.

ಕಥೆಯಲ್ಲಿ ನಿರೂಪಣಾ ಕೌಶಲ ಬಹಳ ಮುಖ್ಯ. ಈ ಕೌಶಲದ ಒಂದು ಮುಖ ಬರವಣಿಗೆಯ ಸೊಗಸಿನಲ್ಲಿದೆ, ಮಾತುಗಾರಿಕೆಯ ಬೆಡಗಿನಲ್ಲಿದೆ. ಈ ಸೊಗಸು ಈ ಬೆಡಗು ಇವರ ಕಥೆಗಗಲ್ಲಿ ರೇಶ್ಮೆಯ ಕರವಸ್ತ್ರದ ಮೇಲಣ ಕಸೂತಿಹೂವಿನಂತೆ ಬಹಳ ಆಕರ್ಷಕವಾಗಿ ಬಂದಿದೆ. "ಆ ಚಂದ್ರಕಾಂತಿಯಲ್ಲಿ ಆ ರಾತ್ರಿಯ ಮಹಾಶಾಂತಿಯಲ್ಲಿ ಗಂಗೆ ಯಮುನೆಯರ ಆ ದಿವ್ಯ ಸಂಗಮಸ್ಥಳದಲ್ಲಿ ಆ ವಿಶಾಲವಾದ ಶ್ವೇತ ಸೈಕತ ರಾಶಿಯಲ್ಲಿ ಅನಂತವು ಶಾಂತವನ್ನೂ ಅವ್ಯಕ್ತವು ವ್ಯಕ್ತವನ್ನೂ ದಿಟ್ಟಿಸುವ ಹಾಗೆ ಚೈತನ್ಯನು ಇಂದಿರೆಯನ್ನು ಎವೆ ಇಕ್ಕದೆ ನೋಡಿದನು." "ಒಡೆದ ಹಡಗಿಗೆ ದಡವೇನು? ಕಡಲೇನು? ನನಗೀಗ ಹಾಳಿನ ದುಮ್ಮಾನವೇ ಬಾಳಿನ ಸುಮ್ಮಾನಕ್ಕಿಂತಲೂ ಹಿತಕರ." "ಅನುರಾಗ ಅಂಕುರಿಸಿತೆಂದರೆ ಕೋಡಗ ಕೂಡ ಕಣ್ಣಿನ ಮುದ್ದಾಗುವುದೇನೂ ಆಶ್ಚರ್ಯವಲ್ಲ." "ರೈಲು ದೂರ ದೂರ ಸರಿದ ಹಾಗೆಲ್ಲಾ ಸಿಂಗನು ಮರೆಯಾಗಿ ಆರಾಣೆ ಮೂರು ಕಾಸು ಆದನು." "ದೋಣಿಯ ನಡುವೆ ಇದ್ದ ಲಾಟೀನಿನ ಬೆಳಕು ಕಗ್ಗತ್ತಲೆಗೆ ಹೆದರಿ ಮೂಲೆ ಸೇರಿತೋ ಏನೋ ಎನ್ನುವ ಹಾಗೆ ತನ್ನ ಸುತ್ತಲೂ ಒಂದಡಿಯ ಭಾಗವನ್ನು ಮಾತ್ರ ಬೆಳಗುತ್ತಿದ್ದಿತು." "ನಿಜವಾದ ಕರ್ಮಯೋಗಿಗಳೆಂದರೆ ಬಾಲಕರ ಜೇಬುಗಳು." "ತಲೆಗೆ ಸುತ್ತಿದ್ದ ಅವನ ಕೆಂಪು ವಸ್ತ್ರ ಅವನು ದಕ್ಷಿಣ ಕನ್ನಡ ಜಿಲ್ಲೆಯವನೆಂಬುದನ್ನು ಸಾರಿ ಹೇಳುವಂತಿತ್ತು." "ಕಗ್ಗತ್ತಲಲ್ಲಿ ಬಟ್ಟೆಗೆಟ್ಟ ದಾರಿಹೋಕರಂತೆ ತಾರೆಗಳು ಬಾನೆಡೆಯೊಳಲ್ಲಲ್ಲಿ ಮಿಣುಕುತ್ತಿದ್ದುವು." "ಮನುಷ್ಯರಾಗಿದ್ದರೆ ಸರ್ವಾಂತರ್ಯಾಮಿಗಳಾದ ಪೋಲೀಸಿನವರಿಂದ ತಪ್ಪಿಸಿಕೊಳ್ಳುವರೆ?" "ಸುತ್ತಲೂ ಪಸರಿಸಿದ ಎತ್ತರವಾದ ಗಿರಿವನಗಳ ನಡುವೆ ಇರುವ ಕೆರೆಯೂರ ಕಣಿವೆಯಲ್ಲಿ ಸಣ್ಣದಾದ ಹುಲ್ಲಿನ ಮನೆಯೊಂದು, ಬೇಟೆನಾಯಿಗಳ ಕೈಗೆ ಸಿಕ್ಕದೆ ತಪ್ಪಿಸಿಕೊಂಡು ಪೊದೆಯಲ್ಲಿ ಅಡಗಿದ ಮೊಲದಂತೆ, ಮರಗಳ ಗುಂಪಿನ ನಡುವೆ ತಲೆಮರೆಸಿಕೊಂಡಿತ್ತು."— ಇಂತಹವು ಕೆಲವು ಉದಾಹರಣೆಗಳು ಶೈಲಿಯ ಸೊಗಸಿಗೆ.

ದೊಂದಿ, ಎಡೆ, ಕಂತ್ರಿನಾಯಿ, ಒಳ್ಳೆ, ನೊಳಗ, ತುಡು, ಕಾಲ್ನಡೆ, ಕರ್ವೆಳಗು ಪುಂಗಪ್ಪು, ಕಂಬಳಿ ಕೊಪ್ಪೆ, ಮುರುಪಿನ ಬಲೆ, ಕೆಂದೂಳು, ಬಿದರುಗುಂಡು, ಕದಿಸಿ,

ಮಬ್ಬುದಸಿ, ಪುಟ್ಟಗಂಟು, ಕೆಸರಲಿಗೆ ಮುಂತಾದ ಪದಗಳು (ಇವುಗಳಲ್ಲಿ ಗ್ರಾಮ್ಯ ಪದಗಳಿವೆ, ಪ್ರಾದೇಶಿಕಪದಗಳಿವೆ, ನೂತನಕವಿ ಪ್ರಯೋಗದ ರಮ್ಯಪದಗಳಿವೆ.) ಅಲ್ಲಲ್ಲಿ ಗದ್ಯದಲ್ಲಿ ಹುದುಗಿ ಭಾವಪ್ರಕಾಶನಕ್ಕೆ ಅರ್ಥಸ್ಪಷ್ಟತೆಗೆ ನೆರವು ನೀಡುತ್ತಿರುವುದರಿಂದ ಶೈಲಿ ಕಾಂತಿಯುಕ್ತವಾಗಿದೆ, ಸತ್ವಪೂರ್ಣವಾಗಿದೆ. ಹಾಸ್ಯವನ್ನೂ, ಗಾಂಭೀರ್ಯವನ್ನೂ ಬರವಣಿಗೆಯಲ್ಲಿ ಸೊಗಸಾಗಿ ಈ ಕತೆಗಾರರು ಪ್ರಕಟಪಡಿಸಿದ್ದಾರೆ. ವಸ್ತುವಿಗೆ ಅನುಗುಣವಾದ ನಿರೂಪಣಾ ಶೈಲಿ ಇಲ್ಲಿ ಇದೆ. ಕಥೆಗಳ ಆರಂಭ, ಬೆಳವಣಿಗೆ, ಮುಕ್ತಾಯ ಇವು ಕಲಾತ್ಮಕವಾಗಿ ಬಂದಿವೆ. ಕವಿಯ ಪ್ರಪಂಚ ಜ್ಞಾನ ಮಾನವ ಸ್ವಭಾವದ ವರ್ಣನೆಯಲ್ಲಿ ಎದ್ದು ಕಾಣುತ್ತದೆ. ಜನದ ಬಾಳುವೆಯನ್ನು ಕಂಡು ಕೇಳಿ ತಿಳಿದು ನುಡಿಯುವ ಹಿರಿಮೆ ಇಲ್ಲಿದೆ.

ಈ ಕಥೆಗಳ ಸಂಕಲನಕ್ಕೆ ನಮ್ಮ ಶ್ರೇಷ್ಠ ಕತೆಗಾರರೂ, ಹಿರಿಯರಾದ ಶ್ರೀನಿವಾಸರು ಸೊಗಸಾದ ಮುನ್ನುಡಿ ಬರೆದು ಕಥೆ ಬರೆಯುವುದನ್ನು ಶ್ರೀ ಪುಟ್ಟಪ್ಪನವರು ಎಲ್ಲಾದರೂ ಕಡಮೆ ಮಾಡಿದರೆ ನಮ್ಮ ಸಾಹಿತ್ಯಕ್ಕೆ ಬಹಳ ನಷ್ಟವಾಗುವುದೆಂದು ಅಭಿಪ್ರಾಯಪಟ್ಟಿದ್ದಾರೆ. ಈ ಅಭಿಪ್ರಾಯ ಈ ಕಥೆಗಳನ್ನು ಓದಿದ ಎಲ್ಲರೂ ಒಪ್ಪತಕ್ಕದ್ದೇ. ಈ ಸಂಕಲನದ ತರುವಾಯ "ನನ್ನ ದೇವರು ಮತ್ತು ಇತರ ಕಥೆಗಳು" ಎಂಬ ಇನ್ನೊಂದು ಸಂಕಲನ ಬಂದಿದ್ದರೂ ವಾಚಕರಿಗೆ ತೃಪ್ತಿಯಾಗಿಲ್ಲ. ಶ್ರೀ ಕುವೆಂಪುರವರ ಲೇಖಣಿಯಿಂದ ಮೇಲಿಂದಮೇಲೆ ಮುಂದೆಯೂ ಕಥೆಗಳು ಪ್ರಕಟವಾಗುತ್ತವೆ ಎಂದೂ ಕುವೆಂಪು ಕಥೆಗಳು ನಮ್ಮ ಸಾರಸ್ವತ ಸಂಪತ್ತನ್ನು ಹೆಚ್ಚಿಸುತ್ತವೆ ಎಂದೂ ನಿರೀಕ್ಷಿಸಿದರೆ ತಪ್ಪೇನಿದೆ?





# ಚಿತ್ರಾಂಗದಾ

**ಪ. ವಿ. ಚಂದ್ರಶೇಖರ**

ಚಿತ್ರಾಂಗದೆಯ ಕಥೆ ಬಹು ವಿಚಿತ್ರವಾದ ಕಥೆ. ಅದು ವ್ಯಾಸಭಾರತದ ಮಹಾ ಸಾಗರದಲ್ಲಿ ಬಿಂದುರೂಪವಾಗಿ ಬರುತ್ತದೆ. ಅಲ್ಲಿ ಚಿತ್ರಾಂಗದೆ ಬರೀ ಹೆಸರಾಗಿ ಬರುತ್ತಾಳೆಯೇ ವಿನಃ ಕಥೆಯಾಗಿ ಬರುವುದಿಲ್ಲ. ಅನಂತರ ಅನೇಕ ಕವಿಗಳು ಅಷ್ಟನ್ನೇ ಇಡಿಯಾಗಿ ತೆಗೆದುಕೊಂಡು ತಮ್ಮ ತಮ್ಮ ಮನೋಭಾವಕ್ಕನುಗುಣವಾಗಿ ಚಿತ್ರಿಸಿದರು. ಹಾಗೆ ಚಿತ್ರಿಸಿದ ಕವಿ ಠಾಕೂರರ ಮತ್ತು ಲಕ್ಷ್ಮೀಶರ ಪ್ರಭಾವ ಈ ಕನ್ನಡ ಕಾವ್ಯ 'ಚಿತ್ರಾಂಗದಾ'ದ ಮೇಲೆ ಸ್ವಲ್ಪ ಇರುವುದರಿಂದ ಅವನ್ನು ಮೊದಲು ಸೂಕ್ಷ್ಮವಾಗಿ ಅವಲೋಕಿಸೋಣ.

ಕವಿ ರಬೀಂದ್ರನಾಥ ಠಾಕೂರರು ತಮ್ಮ ನಾಟಕ 'ಚಿತ್ರ'ದಲ್ಲಿ ಚಿತ್ರಾಂಗದೆಯ ಪೂರ್ವಜೀವನವನ್ನು ಮಾತ್ರ ಚಿತ್ರಿಸಿದ್ದಾರೆ. ಕವಿ ಕು. ವೆಂ. ಪು. ಹೇಳುವಂತೆ ಅಲ್ಲಿ ಆಕೆಯನ್ನು ಶೃಂಗಾರದ ಪರಿಪೂರ್ಣತೆಯಲ್ಲಿ ಚಿರಸ್ಥಾಯಿಯನ್ನಾಗಿ ಮಾಡಿ ಅರ್ಜುನನ ತಾರುಣ್ಯದ ಸಂಯಮರಹಿತ ವ್ರತಭ್ರಷ್ಟತೆಗೆ ಪ್ರಾಯಶ್ಚಿತ್ತ ವಿಹೀನವಾದ ಭೋಗಕಿರೀಟವನ್ನಿಕ್ಕಿ ಪ್ರೇಮದ ಮಂಗಳಾರತಿ ಎತ್ತಿ ಕಾವ್ಯವನ್ನು ಮುಗಿಸಿದ್ದಾರೇನೋ ಎನ್ನಿಸುತ್ತದೆ—ಚಿತ್ರಾಂಗದೆಯ ಬಾಳನ್ನು ಸಮಗ್ರವಾಗಿ ನೋಡಿದಾಗ. ಅನಂತರ, ಲಕ್ಷ್ಮೀಶನ ಕಾವ್ಯವನ್ನು ನೋಡಿದರೆ ಅರ್ಜುನನ ತಾರುಣ್ಯದ ಸಂಯಮರಹಿತ ವ್ರತಭ್ರಷ್ಟತೆಗೆ ಪ್ರಾಯಶ್ಚಿತ್ತರೂಪವಾಗಿ ಅವನ ತಲೆ ಅವನ ಮಗನಿಂದಲೇ ಕಡಿಯಲ್ಪಡುತ್ತದೆ. ಕೂಡಲೇ ಕೃಷ್ಣನ ಮಹಿಮೆಯಿಂದ ಅದು ಸೇರಲ್ಪಟ್ಟು ಅರ್ಜುನ ಬದುಕುವಂತಾಗುತ್ತದೆ. ಅದರಿಂದ, ಅಲ್ಲಿ ಅರ್ಜುನನಿಗೆ ತಲೆ ಹೋದ ಪ್ರಸಂಗ ಅವನಿಗಾದ ಪ್ರಾಯಶ್ಚಿತ್ತ ಎನ್ನುವುದಕ್ಕಿಂತ ಶ್ರೀ ಕೃಷ್ಣಮಹಿಮೆಯ ದಿಗ್ವಿಜಯ ಎಂದು ಹೇಳಬಹುದು. ಈ ದೃಷ್ಟಿಯಿಂದಲೇ ಕಾವ್ಯ ರಚಿತವಾಗಿರುವುದರಿಂದ ಚಿತ್ರಾಂಗದೆ ಅರ್ಜುನ—ಬಭ್ರುವಾಹನರ ಕಾಳಗದ ವರ್ಣನೆಯ ನಡುವೆ ಪ್ರಾಸಂಗಿಕವಾಗಿ ಮಾತ್ರ ಬರುತ್ತಾಳೆ. ಅಲ್ಲಿ ಬರುವ ಆಕೆಯ ಚಿತ್ರವನ್ನು ಉತ್ತರ ಚಿತ್ರಾಂಗದಾ ಎಂದು ಕರೆಯಬಹುದು.

ಆದರೆ, ಕು. ವೆಂ. ಪು. ರವರ ಈ 'ಚಿತ್ರಾಂಗದಾ' ದಲ್ಲಿ ಆಕೆಯ ಸಮಗ್ರ ಚಿತ್ರ ಬರುತ್ತದೆ. ಅದನ್ನು ನಾವು ವಿಮರ್ಶನ ದೃಷ್ಟಿಯಿಂದ ಎರಡು ಭಾಗಗಳಾಗಿ ಮಾಡಬಹುದು. ಅರ್ಜುನ-ಚಿತ್ರಾಂಗದಾ ಇವರ ಮಧುಮಯ ಪ್ರಣಯ ಪ್ರಸಂಗವನ್ನು ಕೇಂದ್ರವಾಗಿಟ್ಟುಕೊಂಡು 'ಪೂರ್ವ ಚಿತ್ರಾಂಗದಾ', ಪ್ರಣಯ ಪ್ರಸಂಗಕ್ಕೆ ಹಿಂದೆ; 'ಉತ್ತರ ಚಿತ್ರಾಂಗದಾ', ಪ್ರಣಯ ಪ್ರಸಂಗಕ್ಕೆ ಮುಂದೆ ಎಂದು.

ಈ 'ಪೂರ್ವ ಚಿತ್ರಾಂಗದೆ'ಯನ್ನು ಚಿತ್ರಿಸುವ ಕೆಲವು ಸನ್ನಿವೇಶಗಳಿಗೆ ಈ ಕಾವ್ಯ ಠಾಕೂರರ ಕೃತಿಗೆ ಋಣಿಯಾಗಿದೆ. ಮದನನು ವರವನ್ನೀಯುವುದರಲ್ಲಿಯೂ, ಆತನಿಗೂ ಚಿತ್ರಾಂಗದೆಗೂ ನಡೆಯುವ ಸಂಭಾಷಣೆಯಲ್ಲಿಯೂ ಓದುಗರು ಅದನ್ನು ಚೆನ್ನಾಗಿ ಗುರುತಿಸಬಹುದು. ಆದರೆ, ಅನೇಕ ಭಾವಗಳೂ, ಅನೇಕ ವಾಕ್ಯಗಳೂ ಠಾಕೂರರ ಪ್ರಭಾವದಿಂದ ಮೂಡಿದ್ದರೂ ಅವರ 'ಚಿತ್ರಾ'ದಿಂದ ಬೇರೆಯಾಗಿ ದ್ದಾಳೆ ಈ ಚಿತ್ರಾಂಗದೆ. 'ಉತ್ತರ ಚಿತ್ರಾಂಗದೆ'ಯ ಚಿತ್ರದಲ್ಲಿ ಲಕ್ಷ್ಮೀಶನ ಋಣ ಅಷ್ಟು ಮೇಲೆದ್ದು ಕಾಣದಿದ್ದರೂ ಮೇಧಾವಿಯಾದ ಓದುಗನಿಗೆ ಗೋಚರಿಸುತ್ತದೆ. ಆದರೆ, ಇಲ್ಲಿ ಲಕ್ಷ್ಮೀಶನ ಕೃತಿಯಲ್ಲಿರುವಂತೆ ಅತಿ ಮಾನುಷ ಪೌರಾಣಿಕತೆಯಿಂದ ಪಾರಾಗುವ ಅನುಕೂಲವಿಲ್ಲ. ಅದರಿಂದ ಚಿತ್ರಾಂಗದೆಗೆ ವ್ಯಕ್ತಿತ್ವ ಬಂದು ಠಾಕೂರರ ಕೃತಿಯಲ್ಲಿರುವಂತೆ ಬರೀ ಅರ್ಜುನನ ಪ್ರೇಯಸಿ ಚಿತ್ರೆಯಾಗದೆ, ಲಕ್ಷ್ಮೀಶನ ಕಾವ್ಯದಲ್ಲಿ ಪ್ರಾಸಂಗಿಕವಾಗಿ ಬರುವ ಬಭ್ರುವಾಹನನ ತಾಯಿ ಮಾತ್ರ ಆಗದೆ, ಮಣಿಪುರದ ರಾಣಿ ಚಿತ್ರಾಂಗದೆಯಾಗಿ ಕಣ್ಣಿಗೆ ಕಟ್ಟುತ್ತಾಳೆ; ಮನಕ್ಕೆ ಮುಟ್ಟುತ್ತಾಳೆ. ಅದರಿಂದ ಕಾವ್ಯ ಮಾನವೀಯತೆಯಿಂದ ತುಂಬಿದ ಕಥೆಯಾಗಿ ಅರಳಿಬಂದಿದೆ. ಕಾಮ ಪ್ರೇಮಕ್ಕೆ ತಿರುಗಿ, ಪತಿಯ ತಪ್ಪಿಗೆ ಪ್ರಾಯಶ್ಚಿತ್ತರೂಪವಾಗಿ ತನ್ನನ್ನು ತಾನೇ ಸಮರ್ಪಣೆ ಮಾಡಿದ ತ್ಯಾಗಶೀಲ, ಧ್ಯಾನಪೂರ್ಣ, ಅಮೃತ ಚರಿತೆಯಾಗಿದೆ. ಅದರಿಂದ ಈ ಕಾವ್ಯ ಠಾಕೂರರ ಮತ್ತು ಲಕ್ಷ್ಮೀಶರ ಕೃತಿಗಳ ಗಣಿತ ಕರ್ಮವಲ್ಲ—ಅವುಗಳಿಂದ ಮೂಡಿ ಸೃಷ್ಟಿ ಯಾದ ಕಲಾಕೃತಿ.

೨

ಚಿತ್ರಾಂಗದೆ ಮಣಿಪುರದ ರಾಜ ಚಿತ್ರವಾಹನನ ಮಗಳು. ಚಿತ್ರವಾಹನನಿಗೆ ಈಶ್ವರನ ವರದಿಂದ ತನ್ನ ಸಂತತಿಯಲ್ಲಿ ಗಂಡುಹುಟ್ಟಲಿ ಎಂದಿದ್ದರೂ ಹುಟ್ಟಿದ ಮಗು ಹೆಣ್ಣಾಯಿತು. ಹುಟ್ಟಿನಲ್ಲೇ ಈ ಬಗೆಯ ವೈಚಿತ್ರ್ಯತೋರಿ ಹುಟ್ಟಿದ ಈ ಹೆಣ್ಣು ಹೆಣ್ಣಾಗಿ ಬೆಳೆದಳೇ? ಇಲ್ಲ, ಗಂಡಾಗಿ ಬೆಳೆದಳು. ವೀರ ಕ್ಷತ್ರಿಯ ಕುಮಾರನಿಗೆ ಉಚಿತವಾದ ವಿದ್ಯೆಗಳನ್ನು ಕಲಿತು 'ರಣಕಲಾ ಪಂಡಿತೆ'ಯಾದಳು. ವಾತಾವರಣದ ಸಂಸರ್ಗದಿಂದ ಹಾಗೂ ಕಲಿತ ವೀರೋಚಿತ ವಿದ್ಯೆಯ ಪ್ರಭಾವದಿಂದ ವೇಷದಲ್ಲಿ ಆವೇಶ ದಲ್ಲಿ, ಬಿಜ್ಜೆಯಲ್ಲಿ ಬಿಲ್ಲಾಟದಲ್ಲಿ, ವೀರತನದಲ್ಲಿ ಕೆಚ್ಚೆದೆಯ ಕಜ್ಜದಲ್ಲಿ, ಲಜ್ಜೆಯರಿ ಯದ ಧೀರಚರ್ಯೆಯಲ್ಲಿ ನೃಪಕುಮಾರನೆ ತಾನು ಎಂಬಂತೆ ಬೆಳೆದಳು. ಇದರಿಂದ ಇವಳಲ್ಲಿ ಹೆಣ್ಣುತನದ ಲಜ್ಜೆ, ಮಾರ್ದವಗಳಿಗೆ ಬದಲಾಗಿ ಗಂಡುತನದ ಪೌರುಷ, ಅಹಂಕೃತಿಗಳು ನೆಲೆಯಾದವು. ಷೋಡಶ ಕಲಾಪೂರ್ಣೆಯಾದ ಷೋಡಶಿಯಾದರೂ ಆ ವಯಸ್ಸಿಗೆ ತಕ್ಕ ಪ್ರಣಯ ರಹಸ್ಯವಾಗಲೀ, ಜಾಣ್ಮೆಯಾಗಲೀ ತಿಳಿಯದ ಮುಗ್ಧೆ ಯಾಗಿದ್ದಳು. ಬೇಕಾದರೆ ರಣರಂಗದಲ್ಲಿ ನುಗ್ಗಿ ಹಗೆಗಳೆದೆ ಬಿರಿಯುವಂತೆ ಕೂರ್ಮ

ನೆಯ ಬಾಣಗಳನ್ನು ಪ್ರಯೋಗಿಸುವ ಬಲ್ಮೆ ತಿಳಿದಿದ್ದಿತೇ ಹೊರತು "ಲಲನೆಯರ ಕಡೆ ಗಣ್ಣ ನೋಟಗಳ ಜಾಣ್ಮೆ" ತಿಳಿದಿರಲಿಲ್ಲ.

ಇಂತಹ ವೀರವನಿತೆ ಒಮ್ಮೆ ಬೇಟೆಗೆಂದು ಕಾಡಿಗೆ ಹೋಗುತ್ತಾಳೆ. ಅಂದುರಾತ್ರಿ ಬನದ ದೇವಾಲಯದಲ್ಲಿ 'ಈಶ್ವರಾರ್ಪಿತ ಕುಸುಮ'ದಂತೆ ಮಲಗಿದ್ದಾಗ ಚಿತ್ರಾಂಗ ದೆಗೆ ಒಂದು ಕನಸು ಬೀಳುತ್ತದೆ. ಆ ಕನಸಿನಲ್ಲಿ ಹರಿಣ ಶಿಶುವೊಂದಕ್ಕೆ ಎದೆಯೋತು, ಬಗೆಸೋತು ಅದನ್ನು ಒಂದಿನಿತು ನೋಯಿಸದೆ ಹಿಡಿವೆನೆಂಬಾತುರದಿ ಬೆನ್ನಟ್ಟಿ ಹೋದಾಗ ರುಕ್ಮರಾಗಾತಪಸ್ನಾತ ಮೋಹನಾಕೃತಿಯ ಮಾನವ ಮೂರ್ತಿಯೊಬ್ಬ ನನ್ನು ನೋಡುತ್ತಾಳೆ. ಹಾಗೆ ಅವನನ್ನು ಕಂಡಕೂಡಲೇ ಅವಳ ಗಂಡೆದೆಯ ಹೃದಯ ದಲ್ಲಿ ತಾನು ಹೆಣ್ಣೆಂಬ ಲಜ್ಜೆಯ ಲಹರಿ, ಮೊತ್ತಮೊದಲು ಮೂಡುತ್ತದೆ.

ಆಗ ಕನಸಿನಿಂದೆಚ್ಚೆತ್ತು, ತನ್ನ ಗಂಡುಡಿಗೆಯಲ್ಲಿ, ಕಾಡಿನಲ್ಲಿ ತಿರುಗಾಡುತ್ತಿರು ವಾಗ ಕನಸು ನನಸಾದಂತೆ, ಸರಸ್ತೀರದ ಕಲ್ಲುಬಂಡೆಯೊಂದರ ಮೇಲೆ ಒಬ್ಬ ಸುಂದರ ತಪಸ್ವಿ ಕಾಣಿಸುತ್ತಾನೆ. ಆ ಕನಸು ದೀವಿಯ ಪುರುಷನಿವನೆ. ಹೌದು. ಮುಂಬೆಳಗಿನ ಹೊಂಬಿಸಲು ಚುಂಬಿಸುತಿದ್ದ ಆ ದಿವ್ಯ ಪ್ರಭಾತಕಾಲದಲ್ಲಿ ಅವನನ್ನು ಕಂಡು ಇವಳ ಗಂಡೆದೆಯಲ್ಲಿ ಮೊತ್ತಮೊದಲಿಗೆ ಹೆಣ್ತನದ ಲಜ್ಜೆಯ ಲಹರಿ ಸುಳಿಯುತ್ತದೆ. ಆಗ ಅವಳ ಹೃದಯ ಗಹ್ವರದಲ್ಲಿ ಪ್ರಣಯ ಪ್ರಪಂಚ ಮಥಿಸುತ್ತದೆ—ಆ ಮೊದಲ ನೋಟ, ಬೇಟಗಳಿಂದ. ಏನು ಮಾಡಿದರೆ ತಾನೆ ಸ್ತ್ರೀ ಹೃದಯ ಪುರುಷತ್ವವನ್ನು ಪಡೆದೀತು! ಆಗ ಆ ಸಂನ್ಯಾಸಿ ಸೌಂದರ್ಯವೇ ಧರೆಗಿಳಿದಂತೆ, ಮನ್ಮಥಂಗೆಣೆಯಾದರೂ ಫಾಲಾಕ್ಷ ನಂತೆ ಕಾಣುತ್ತಾನೆ.

ಹೀಗೆ ಕ್ಷಣಗಳೊಂದೊಂದು ಯುಗವಾಗಿ ಕಳೆಯುತ್ತಿರಲು, ಸ್ವಲ್ಪ ಹೊತ್ತಿನ ಅನಂತರ ಆ ತಪಸ್ವಿ ಕಣ್‌ತೆರದು ಎದುರಿಗೆ ನಿಂತಿದ್ದ ಗಂಡುವೇಷದ ಈ ತರುಣಿಯನ್ನು ಮಾತನಾಡಿಸುತ್ತಾನೆ. ಮಾತನಾಡದ ಇವಳನ್ನು ಕಂಡು 'ಅಂಜದಿರು, ನಾವು ಮುನಿವ ಮುನಿವರರಲ್ಲ' ಎನ್ನುತ್ತಾನೆ. ಯಾವಾಗ 'ಅಂಜದಿರು' ಎಂಬ ನುಡಿ ಕಿಡಿ ಸೂಸಿತೋ ಕೂಡಲೇ ಬಿಂಕದುರಿ ಮಸಗಿ, ಅದುವರೆಗೆ ಅವಳ ಹೃದಯ ಹುತ್ತದೊಳಗೆ ಮೋಹನ ಮಂತ್ರದಿಂದ ಮುಗ್ಧವಾಗಿದ್ದ ಪುರುಷತೆ ಒಡನೆಯೇ ಹೆಡೆಯೆತ್ತಿ ಪ್ರತಿಹಿಂಸೆಗಣಿ ಯಾಗಿ ನಿಲ್ಲುತ್ತದೆ. ಸ್ತ್ರೀ ಸಹಜ ಮಾರ್ದವ ಸ್ವಭಾವಕ್ಕೆ ಚಿತ್ರಾಂಗದೆ ಬೆಳಸಿಕೊಂಡ ಗಂಡಿನ ಬುದ್ಧಿ ಕಿಚ್ಚನ್ನಿಡುತ್ತದೆ. ಕೂಡಲೇ, ಅವಳು ಆಟವಿಕ ಸ್ತ್ರೀಯಂತೆ ನಯ ವಿನಯ ವಿಧೇಯತಾ ಭಾವಗಳನ್ನು ಮರೆತು ಪ್ರತಿಸ್ಪರ್ಧಿಯಂತೆ "ಅಂಜುವವರಾವಲ್ಲ; ಅಂಜಿಕೆಯಕಂಡಿಲ್ಲ, ಕೇಳಿಲ್ಲ! ಅಂಜುಕುಳಿಗಳ ರಕ್ಷಣೆಯೆ ನಮ್ಮ ಕುಲಕರ್ಮ; ನಂಜಿನಂತಹ ಲೋಕಕಂಟಕರ ಭಂಜನೆಯೆ ನಾವೊಲಿದ ಕರ್ತವ್ಯ! 'ಅಂಜದಿರು; ಅಂಜದಿರು, ನುಡಿ' ಎನಲ್ 'ನೀನಾರಲೆ ತಪಸ್ವಿ'" ಎನ್ನುತ್ತಾಳೆ. ಅರ್ಜುನನ ನಯವಿನ ಯವಿಲ್ಲದ ಈ ಕಿರಾತವ್ಯಕ್ತಿಯನ್ನು ಕಂಡು, ನಕ್ಕು, 'ಮುಳಿಸುದಿರ್, ಸಾತ್ವಿಕನೆ, ತಾಳ್ಮೆಯೊಳೆ ಬಾಳ್ಮೆಯಿದೆ' ಎಂದು ಉಪದೇಶಿಸಿ:

ವೀರಕ್ಕೆ ವಿನಯಮೆಂಬುದು ಮುಡಿಯ ಮಾಣಿಕಂ ;
ವಿನಯಮಿರದಿರಲದೆ ಕುಸಂಸ್ಕೃತಿ ! ಕಿರಾತರೋಲ್
ಮಾತುಮಾತಿಗೆ ಮಲೆತು ಕೆರಳಿದರಹಮ್ಮಿನಿಂ
ಕ್ಷಾತ್ರಮಲ್ತದು ಧೂರ್ತಲಕ್ಷಣಂ ! ತರುಣವೀರ
'ನೀನಾರೆಲೆ ತಪಸ್ವಿ ?' ಎಂದೆನ್ನ ಮೊದಲಿಸಿ
ಪ್ರಶ್ನಿಸಿದೆಯಲ್ತೆ ? ಪೇಳ್ದಪೆನಾಲಿಸದನಿನ್ನ :
ತಿರಿವ ಬಡಜೋಗಿಗಳ್ ನಾವು ಲೋಗರೆ ದಿಟಂ
ನೆಲೆಯಿಲ್ಲದಲೆದಲೆದು ಬೇರು ಬಿಳ್ಕೆಯನುಂಡು
ತರುತಲ ನಿವಾಸದಲಿ ಬರುನೆಲದಹಾಸಿನಲಿ
ಬಿದ್ದೆದ್ದು ಬಳಲುವರ್ ನಾವು ಲೋಗರೆ ದಿಟಂ !
ನಿಮ್ಮ ಯೋಗ್ಯತೆಯಿಲ್ಲ ; ನಯವಿಲ್ಲ, ಸುಣ್ಪಿಲ್ಲ ;
ಸಿರಿಯಿಲ್ಲ, ಪೆಂಪಿಲ್ಲ, ನಾವು ಲೋಗರೆ ದಿಟಂ !
ನೀವು ಯೋಗರ್ಯೆ ಅಹುದು !................
...............................ನಾನಾರೆ ?
ಕುರುವಂಶ ನಾಮದೊಂದರಸುಮನೆತನಮಿಹುದು
ಬಲ್ಲೆಯೆಂ ?—ಸುಪ್ರಸಿದ್ಧನು ನೀನು. ನಿನಗೆ ಆ
ಅಪ್ರಸಿದ್ಧದ ಅರಿವದೆಂತಹುದು ?........

ಎಂದು ಕೊಂಕು ನುಡಿಯಿಂದ ಟೀಕಿಸಿ 'ನಾನರ್ಜುನಂ' ಎಂದು ನುಡಿಗಣೆಯ ಬಿರು ವಳೆಯನ್ನು ಸುರಿಸಿ ಸಿಂಹಗಾಂಭೀರ್ಯದಿಂದ ಅಲ್ಲಿಂದ ಎದ್ದು ಹೋಗುತ್ತಾನೆ. ಚಿತ್ರಾಂಗದೆಗೆ ಆಗ ಗೊತ್ತಾಗುತ್ತದೆ ತಾನು ಯಾರ ಎದುರಿಗೆ ಒರಟಾಗಿ ವರ್ತಿಸಿ ದೆನೋ ಆ ವ್ಯಕ್ತಿಯೇ 'ತನ್ನೊಲುಮೆಯ ಅರ್ಜುನ' ಎಂದು. ಆಗ ಅವಳು ಬೆಪ್ಪುಬೆರ ಗಾಗಿ, ಕುಸಿದು ಕುಗ್ಗುತ್ತಾಳೆ.

ಇಲ್ಲಿ ನಮಗೆ ಒಂದು ವಿಚಿತ್ರ ಸಂಗತಿ ಹೊರಬೀಳುತ್ತದೆ. ಚಿತ್ರಾಂಗದೆ ಅರ್ಜು ನನ ಕೀರ್ತಿಯನ್ನು ಕೇಳಿ, ಬಗೆಯೋತು, ಎದೆಸೋತು, ಅವನನ್ನೇ ತನ್ನ ಆರಾಧ್ಯ ಮೂರ್ತಿಯನ್ನಾಗಿ ಮಾಡಿಕೊಂಡಿದ್ದಾಳೆ ಎಂಬುದು. ಕಾಣದೆಯೇ ಅವನ ಕೀರ್ತಿ ಯನ್ನು ಮಾತ್ರ ಕೇಳಿ ಅವನಿಗೆ ತನ್ನ ಹೃದಯದಲ್ಲಿ ಸ್ಥಾನಕೊಟ್ಟದ್ದೂ ಚಿತ್ರಾಂಗದೆಯ ಬಯಕೆಯ ಒಂದು ವಿಚಿತ್ರತೆ. ಪುರುಷವೇಷದ ಈ ನಾರಿಯಲ್ಲಿ ಹೆಣ್ಣುತನದ ಮೊಳಕೆ ಮೊದಲಿನಿಂದಲೂ ಬೆಳೆಯುತ್ತಲೇ ಇದೆ. ಅದು ಅವಳಿಗೆ ಕಾಣದು ಅಷ್ಟೆ !

ಹೀಗೆ ಅರ್ಜುನನ ಬಿರುಗಣೆಯ ನುಡಿಗಳಿಗೆ ನೊಂದು ತನ್ನ ಗಂಡಸುತನಕ್ಕೆ ತಾನೇ ಹೇಸಿದಳು ಚಿತ್ರಾಂಗದೆ. ಪರಾಕ್ರಮವನ್ನು ಮುದ್ರಿಸಿದ ತನ್ನಂಗವಟ್ಟವನ್ನು ಜಿಗುಪ್ಸೆಯಿಂದೀಕ್ಷಿಸಿ, ನಿರಾಯುಧ ಲತಾಂಗಿಯರ ಲಾವಣ್ಯದ ವಿಕ್ರಮ ಬಲವನ್ನು ತನ್ನ ಮನಸ್ಸಿನಲ್ಲಿ ತಾನೇ ನೆನೆದಳು. ಲಜ್ಜಾವಿಷಾದದಿಂದ ಕುಂದಿ, ಜೇಟದಿಂದ ಕಂದಿ

ತೇಜಿಯನ್ನೇರಿ ತನ್ನ ಪಾಳಯಕ್ಕೆ ಬಂದಳು. ಅಲ್ಲಿ ತನ್ನ ನೆಚ್ಚಿನ ಪಸಾಯಿತೆಯನ್ನು ಕರೆದು, "ಪೆಣ್ತನಕೆ ತಗುವಂತೆ ಮೇಣ್ ಚೆಲ್ವರಳುವಂತೆನ್ನ ಪಸದನಂಗೈ" ಎಂದು ಆಜ್ಞಾಪಿಸಿದಳು. ತನ್ನ ವೀರತನದ ಗಂಡುಡಿಗೆಯನ್ನು ಕಳಚಿ ಹೆಂಗಳೆಯ ಶೃಂಗಾರಾಭರಣಗಳನ್ನು ಧರಿಸಿ ಮೆರೆದು ತನ್ನ ಚೆಲುವಿಗೆ ತಾನೆ ಸೋಜಿಗಪಟ್ಟಳು. ತನಗೆ ತಾನೆ ಅನ್ಯಳೋ ಎಂಬಂತೆ ರನ್ನಗನ್ನಡಿಯಲ್ಲಿ ನೋಡಿದಳು. ಈಗ ತನ್ನ ಚೆಲುವಿಗೆ ತಾನೇ ಮೆಚ್ಚಿಗೆ ಪಟ್ಟು, ವೀರಯತಿ ಪಾರ್ಥಿವನನ್ನು ಕಯ್ದುವಿಲ್ಲದ ಕದನದಲ್ಲಿ ಗೆಲ್ಲುವೆನೆಂದು ಹೊರಟಳು. ಈ ಮಧುಮಯ ಪ್ರಣಯ ಪ್ರಸಂಗವೂ ಅವಳಿಗೆ ಒಂದು ಕದನದ ರೀತಿಯಾಗಿ ಕಾಣಿಸಿತು. ಆದರೆ, ಕಯ್ದುವಿಲ್ಲದ ಕದನ ಅಷ್ಟೆ.

ಆ ಸಂಜೆ ಆ ಜಟಿಲವಾದ ಕಾನನದಲ್ಲಿ ಚೈತ್ರವಾಹಿನಿಯಾದ ಚಿತ್ರಾಂಗದೆಯು ಅರ್ಜುನನನ್ನು ಅರಸುತ್ತಾ ಹೊರಟಳು. ಆಗ ಕತ್ತಲು ಮುತ್ತಿಬಂದ ಕಾಡಿನಲ್ಲಿ ಧೈರ್ಯದಿಂದ ಮುಂದುವರಿದಳು. ಆಗ ಹುಣ್ಣಿಮೆಯ ಹಾಲು ಬೆಳಕು ಕಾಡನ್ನು ಬೆಳಗಿತು.ಆ ಬೆಳ್ದಿಂಗಳಿಂಗಡಲ ಮೇಲೆ ಅವಳ ಪ್ರೇಮಕಾತರ ಹೃದಯ ನೌಕೆ ಸಾಗಿತು. ಆಗ ಇದ್ದಕ್ಕಿದ್ದ ಹಾಗೆ ದೂರದಲ್ಲಿ ಬೆಂಕಿಯೆದುರಿಗೆ ಕುಳಿತ ಅರ್ಜುನ ಸಂನ್ಯಾಸಿಯ ರೂಪ ಗೋಚರಿಸಿತು. ಚಿತ್ರಾಂಗದೆ ಮುಂದುವರಿದಳು, 'ವರನೆಡೆಗೆ ವೈಯಾರದಿಂದೈದುವಂಗನೆಯ ಪಾಂಗಿನಿಂದಲ್ತು, ವಿದ್ವೇಷಿಯಂ ಸಂಹರಿಸೆ ವಿಜಯದ ದೃಢನಿಶ್ಚಯದಿ ಬಿಂಕದಿಂ ಮುಂಬರಿವ ಕಲಿಯ ವಿಕ್ರಮ ಗಮನ ವಿನ್ಯಾಸಮಂ ಮೆರೆದು'. ಅವಳಿಗೆ ಪುರುಷನ ಒಲುಮೆಯನ್ನು ಗೆಲ್ಲುವುದು, ಒಬ್ಬ ಶೂರ ಇನ್ನೊಬ್ಬ ಶೂರನನ್ನು ರಣರಂಗದಲ್ಲಿ ಗೆದ್ದ ಹಾಗೆ ಎಂಬ ಭಾವನೆ. ಅದರಿಂದ, ಇವಳ ವೀರ ವೈಯ್ಯಾರವನ್ನು ಕಂಡು, ಸಂಕೋಚ, ಲಜ್ಜೆ, ಮಾರ್ದವಗಳಿಲ್ಲದೆ ನಿಂದಿದ್ದ ಅವಳ ಪುರುಷ ಭಂಗಿಯನ್ನು ನೋಡಿ ಅರ್ಜುನ ಬೆರಗಾಗಿ ಹೋದ. ಇವಳೇನು ದಾನವಿಯೋ ಮಾನವಿಯೋ ದೇವತೆಯೋ ಎಂಬ ಶಂಕೆ ಮೂಡಿತು. ಅದರಿಂದ ಅವಳು ಬಂದ ಕಾರಣವನ್ನು ವಿಚಾರಿಸಿದ. ಅದಕ್ಕೆ ಅವಳು

"ವೀರ ಅರ್ಜುನದೇವ, ಅಪರಿಚಿತೆಯಾದೊಡಂ
ನಿನ್ನ ಪ್ರೇಯಸಿ ನಾನು. ಪ್ರಣಯ ಭಿಕ್ಷೆಯಬೇಡಿ
ಬಂದೆನಾಂ ; ಸುಂದರನೆ, ದಯಗೈ, ಕರುಣಿಸೆನೆಗೆ"

ಎಂದು ಸರಸರನೆ ಭಾಷಣವನ್ನೇ ಮಾಡಿದಳು.

ಇವಳ ಈ ವಿಚಿತ್ರವನ್ನು ಕಂಡು ಅರ್ಜುನ 'ಸಾಹಸಿ, ಕಿರಾತಕನ್ಯೆ!' ("ಅಲ್ತಲ್ತು!" ಎನೆ ಲಲನೆ) ಎಂದು ಕರೆದು 'ನಾಗರಿಕರೀರೀತಿ ಪ್ರಣಯ ಪ್ರಸಂಗದಲಿ ವರ್ತಿಸರೆ' ಬನವೆಣ್ಣೆ, ಕಾರಾಣಾಂತರದಿಂದ ನಾನು ಹನ್ನೆರಡುವರ್ಷ ಬ್ರಹ್ಮಚರ್ಯ ವ್ರತವನ್ನು ಕೈಗೊಂಡಿದ್ದೇನೆ. ಅಲ್ಲಿಯವರೆಗೆ ಯಾರನ್ನೂ ಮದುವೆಯಾಗುವ ಹಾಗಿಲ್ಲ, ಎಂದು ಹೇಳಿ ಅವಳ ಬಯಕೆಯನ್ನು ತಿರಸ್ಕರಿಸುತ್ತಾನೆ. ಅಷ್ಟೇ ಹೇಳಿದನೆ? ಇಲ್ಲ. ಅವಳನ್ನು ಕುರಿತು "ನಿನ್ನೊಳೇನಿದೆ ಎನಗೆ ಎಣೆಯಾಗಿ? ಮೇಣ್ನೆರ್ದೆಗೆ ಹೂವುಗಣೆ

ಯಾಗಿ? ನೀನಾವ ಪಾರ್ಥಿವ ಕುಲಾಂಬುಧಿಯ ಕಡೆಹದಲಿ ಮೂಡಿರುವ ಕೌಸ್ತುಭಂ? ವೇಣ್ ನಿನಿಗದೇನಿಹುದೊ ಸೌಂದರ್ಯಸಂಪದಂ? ಚಿತ್ತರದ ಲೋಕದೊಳ್ ಕೇವಲ ಕನಿಷ್ಠರೆನೆ ನಿನಗಿಂತಲುತ್ತಮರ್!" ಎಂದು ಮೂದಲಿಸುತ್ತಾನೆ.

'ಚೆಲುವಿಗೆಲ್ಲಡೆಗೆಲ್ಲ'; ತನ್ನ ಸೊಬಗೇ ಸೊಬಗು ಎಂದು ಹೆಮ್ಮೆಯಿಂದ ಬಂದ ಇವಳಿಗೆ ಅಭಿಮಾನ ಭಂಗವಾಗುತ್ತದೆ. ತನ್ನ ಚೆಲುವು ಅರ್ಜುನನನ್ನು ಸೆರೆಹಿಡಿಯಲು ಅಸಮರ್ಥ ಎಂದು ನಿರಾಸೆಯಾಗುತ್ತದೆ. ಪಾಪ! 'ಪೊಸೆದೆಸೆದ ಸುಗ್ಗಿನೊಗ್ಗಿಯ ತೆರದಿ ಮೊಗಕಂದಿ' ಮೌನದಲಿ ಶಿವನ ಗುಡಿಗೆ ಹಿಂದಿರುಗುತ್ತಾಳೆ.

ಅಲ್ಲಿ ದೇಗುಲದಲ್ಲಿ, ಮದನಹರನಾದ ಮುಕ್ಕಣ್ಣನೆದುರಿನಲ್ಲಿ ಮದನನ ಕೃಪೆಯನ್ನು ಬೇಡುತ್ತಾಳೆ. ತನ್ನಲ್ಲಿರುವ ಪುರುಷ ಬಲ್ಮೆಗೆ ಬದಲು ಲಲನೆಯರ ಲಾವಣ್ಯ ವಿಭ್ರಮಗಳನ್ನು ಬೇಡುತ್ತಾಳೆ. ಆಗ ಅವಳಿಗೆ ತನ್ನಲ್ಲಿದ್ದ ನೆಲದಸಿರಿ, ಬಿಲ್ವಿದ್ಯೆ, ಅರಸುಕುವರಿತನ, ಮೈಬಲ್ಮೆ, ರಣಕೀರ್ತಿ—ಎಲ್ಲವೂ ತೃಣ ಸಮಾನವಾಗಿ ಕಾಣುತ್ತವೆ. ಹೀಗೆ ಈ ಬಯಕೆಯಲ್ಲಿ ಪೂಜಾ ನಿಮಿಗ್ನಳಾಗಿದ್ದಾಗ ಮದನನ ಮಧುರಮೂರ್ತಿ ಅವಳ ಕಣ್ಣೆದುರಿಗೆ ಬಂದು ನಿಲ್ಲುತ್ತದೆ. ತನ್ನ ಪರಾಭವವನ್ನು ಹೇಳಿ, ಗೋಳಾಡಿ ಚಿತ್ರೆ, "ನನ್ನೊಡಲ ಸರಳ ಸಾಧಾರಣತೆ ಮಾದು ಹೋಗಲಿ; ಬರಲಿಯೊರ್ದಿನಕ್ಕಾದೊಡಂ ರತಿಯ ರಮಣೀಯತೆ" ಎಂದು ಬೇಡಿಕೊಳ್ಳುತ್ತಾಳೆ. ಆಗ ಮದನ ಒಂದು ತಿಂಗಳವರೆಗೆ ಅವಳು 'ಅಂಗಜಮೋಹದೀಪಶಿಖಿ'ಯಾಗುವಂತೆ, ಪಾರ್ಥನ ವಿರಾಗದ ಪತಂಗವನ್ನು ಸೆಳೆಯುವ ಸೊಡರ್ಗುಡಿಯಾಗುವಂತೆ ಮಾಡುತ್ತಾನೆ.

ಇನನ್ನು ಕೇಳಿ ಚಿತ್ರೆಗೆ ಅತಿ ಸಂತೋಷವಾಗುತ್ತದೆ. ಮಾರನೆಯ ದಿನ ಮುಂಬೆಳಗಿನಲ್ಲಿ ಸರಸ್ತೀರಕ್ಕೆ ಬಂದು, ಸರಸಿಯ ನಿರ್ಮಲ ಜಲದಲ್ಲಿ ತನ್ನ ಪಡಿನೆಳಲನ್ನು ನೋಡಿಕೊಂಡು, ಅರ್ಜುನನಿದ್ದ ಕಡೆಗೆ ನೋಡಿಯೂ ನೋಡದಂತೆ ಕಣ್ಮಿಂಚನ್ನೆಸೆದು, ಅರ್ಜುನನ ವ್ರತದ ಕೊರಳಿಗೆ ಉರುಳ್ಗಣ್ಣಿಯನ್ನು ಬೀಸುವಂತೆ ತುರುಬು ಸಡಿಲಿಸಿ ತನ್ನ ಕೇಶಪಾಶವನ್ನು ಬೀಸುತ್ತಾಳೆ. ಕನಸಿನಂತೆ ಕಂಡು, ಚಿತ್ರಾಂಗದೆ ಹಾಗೆಯೇ ಕಾಡಿನ ಹಸುರಿನ ಹಿನ್ನಲೆಯಲ್ಲಿ ಮರೆಯಾಗುತ್ತಾಳೆ, 'ಮೈಯೆಲ ಕಣ್ಣಾಗಿ, ಜೀವ ತಾಂ ದೃಷ್ಟಿಯಾಗಿ' ಕುಳಿತ ಅರ್ಜುನ—ಈ ಮೋಹಿನಿಯ ಮೋಹಕ್ಕೆ ಒಳಗಾಗಿ ತನ್ನ ತಾತ್ಕಾಲಿಕ ಯತಿತ್ವವನ್ನು ಹಳಿದು, ಆ ಮೋಹಿನಿಯ ಪತಿತ್ವವನ್ನು ಹಾರೈಸಿ, ಆ ಸೊಬಗಿನರಸಿಯನ್ನು ಅರಸಿಕೊಂಡು ಕಾಡಿನಲ್ಲಿ ಬರುತ್ತಾನೆ. ಶಿವನ ದೇವಾಲಯದಲ್ಲಿ ಚಿತ್ರೆಯನ್ನು ಕಂಡು, "ಕುಸುಮ ಕೋಮಲೆ, ನಾನು ಯತಿಯಲ್ಲ, ಕ್ಷತ್ರಿಯಂ. ಕೋಳು ಹೋಗದಿರೆನ್ನನಂತು ಸಂಭಾವಿಸುತೆ. ಯತಿವೇಷವೆನಗೆ ಅಂತರವಲ್ಲ ವಾಗುಂತುಕಂ" ಎಂದು ಹೇಳಿ ತನ್ನನ್ನು ಕೈಹಿಡಿದು ಕಾಪಾಡಬೇಕೆಂದು ಕೇಳಿಕೊಳ್ಳುತ್ತಾನೆ. ಆಗ ಆ 'ಮನ್ಮಥಶಿಷ್ಯೆ' ಮನದಿ ಸಂತೋಷಿಸುತ ಬಾಹ್ಯದಿ ಹಗೆ ನುಡಿಯನಾಡಿ, ನಶ್ವರದ ಪೂಜೆಗೆ ಚಿರಂತನವ ಬಲಿಗೊಡದಿರೆಂದು ಎಚ್ಚರಿಸುತ್ತಾಳೆ. ಆದರೆ, ಅರ್ಜುನ ತನ್ನ ಸರ್ವಸ್ವಕ್ಕೂ ಅವಳೇ ಪ್ರಾಣೇಶ್ವರಿ ಎಂದು ಪರಿಪರಿಯಾಗಿ ಪ್ರಶಂಸಿಸಿ

ಪ್ರಣಯ ಭಿಕ್ಷೆಯನ್ನು ಬೇಡುತ್ತಾನೆ. ಕಡೆಗೆ ಚಿತ್ರಾಂಗದೆ–' ಸೂರೆಗೊಳ್ಳೆನ್ನ ಸರ್ವಸ್ವಮಂ'–ಎಂದು ತನ್ನನ್ನು ನಿವೇದಿಸುತ್ತಾಳೆ. ಅವರ ಆಲಿಂಗನದಲ್ಲಿ ಕಾಲದೇಶಗಳೆಲ್ಲಾ ಕರಗಿ ಮಧುಮಯ ಪ್ರಣಯ ಪ್ರವಾಹದಲ್ಲಿ ತೇಲುತ್ತವೆ.

ಹೀಗೆ, ದಂಪತಿಗಳು ಪ್ರಥಮ ಸಮಾಗಮದಲ್ಲಿ ' ರಸದ ಹರಿಗಲನೇರಿ ಜೇನುಹೊಳೆಯಲಿ ತೇಲಿ 'ತಮ್ಮ ಕರ್ತವ್ಯಗಳನ್ನು ಮರೆತು, ಮನೆ ಮಠಗಳ ಚಿಂತೆ ಇಲ್ಲದೆ ಆ ಕಾಡಿನ ಮನೋಹರತೆಯಲ್ಲಿ ಶಿವನ ಸಾನಿಧ್ಯದಲ್ಲಿ ಬಾಳುತ್ತಾರೆ. ಹೆಸರು ಕೇಳಿ ಚಿತ್ರಾಂಗದೆ ' ಯಾರಾದರೇನಂತೆ, ನಾಂ ? ಹೆಸರಿನಲಿ ರಸವೆ ? ತನಿವಣ್ಣನುಂಡು ಸವಿ ' ಎಂದು ಕಾಲತಳ್ಳುತ್ತಾಳೆ. ಒಮ್ಮೆ ಗಿರಿಶಿಖರದಲ್ಲಿ ನಿಂತಾಗ, ಬಾಹುವಿಸ್ತೃತ ಜಗತ್ತನ್ನು ಕಂಡಾಗ ಅರ್ಜುನನ ಮನಸ್ಸು ತನ್ನ ಮನೆ ಬಂಧು ಮಿತ್ರರನ್ನು ದರ್ಶಿಸುವ ಬಯಕೆಯಿಂದ ತುಡಿಯುತ್ತದೆ. ಅರ್ಜುನನ ಮನಸ್ಥಿತಿಯನ್ನು ಕಂಡು, ಅಂದು, ಚಿತ್ರಾಂಗದೆ ಹಿಂದೊಮ್ಮೆ ಕಾಡಿನಲ್ಲಿ ಬಂದು ತಿರಸ್ಕೃತಳಾಗಿ ಕಿರಾತಕನ್ಯೆ ಎನಿಸಿಕೊಂಡವಳು ನಾನೇ ಎಂದು ಹೇಳುತ್ತಾಳೆ. ಆಗ ದೂರದ ಪಾಳೆಯದ ದೀಪಗಳನ್ನು ಕಂಡು ಪ್ರಶ್ನಿಸಿದ ಅರ್ಜುನನಿಗೆ ಅವು ಮಣಿಪುರದ ಚಿತ್ರಾಂಗದೆಯ ಬೀಡಿನಲ್ಲಿ ಜ್ವಲಿಸುವ ದೀಪಗಳು ಎಂದು ಹೇಳುತ್ತಾಳೆ. ಇದ್ದಕಿದ್ದಹಾಗೇ ಬಿರುಗಾಳಿ ಆರಂಭವಾಗಿ ಮಳೆಯ ಮಹಾಲೀಲೆ ಆರಂಭವಾಗುತ್ತದೆ. ಶಿವನಗುಡಿಗೆ ಬಂದು ಆ ಕಾಳರಾತ್ರಿಯಲ್ಲಿ, ಮಳೆಗಾಳಿಯ ಅಬ್ಬರದಲ್ಲಿ ಇವಳು ಚಿತ್ರಾಂಗದೆಯ ಕಥೆಯನ್ನು ಅಬಲಾ ಸುಲಭ ಕಲಾಧ್ವನಿಯಿಂದ ಚಿತ್ರಿಸುತ್ತಾಳೆ. ಆದರೆ ' ತಾನು ಮಾತ್ರಯಾರು ' ಎಂದು ಹೇಳದೆ ಗರ್ಭಿತರಹಸ್ಯೆಯಾಗಿಯೇ ಉಳಿಯುತ್ತಾಳೆ.

ಅರ್ಜುನ ಇನ್ನು ಆರು ತಿಂಗಳಿಗೆ ತಾನು ಬರುವುದಾಗಿ ವಚನವಿತ್ತು ಮರುದಿನ ಚಿತ್ರಾಂಗದೆ ತೋಳಿನಿಂದ ನುಸುಳಿಕೊಂಡು ಅವಳ ಬೆರಳಿಗೆ ತನ್ನ ಮುತ್ತಿನುಂಗುರ ವಿಟ್ಟು ಹೊರಟು ಹೋಗುತ್ತಾನೆ. ಇದಿಷ್ಟು ' ಪೂರ್ವ ಚಿತಾಂಗದಾ'.

ಠಾಕೂರರ ' ಚಿತ್ರಾ ' ದಲ್ಲಿ ಚಿತ್ರಾಂಗದೆ ತಾನು ಯಾರು ಎಂಬುದನ್ನು ಹೇಳಿದ ಮೇಲೆ ಅರ್ಜುನ ಅವಳನ್ನು ಮದುವೆಯಾದುದಕ್ಕೆ " ಪ್ರೇಯಸಿ, ನನ್ನ ಬದುಕು ಪೂರ್ಣವಾಯಿತು " [Beloved, My life is full] ಎನ್ನುತ್ತಾನೆ. ಅಲ್ಲಿಗೆ ನಾಟಕ ಮುಗಿಯುತ್ತದೆ. ಮುಂದೇನಾಯಿತೋ ಗೊತ್ತಿಲ್ಲ. ಅದರಿಂದ ಅಲ್ಲಿ ಅರ್ಜುನನ ತಾರುಣ್ಯದ ಸಂಯಮ ರಹಿತ ವ್ರತಭಂಗಕ್ಕೆ ಯಾವ ಪ್ರಾಯಶ್ಚಿತ್ತವೂ ಇಲ್ಲದೆ ನಾಟಕ ಮುಗಿಯುತ್ತದೆ.

ಠಾಕೂರರ ಮತ್ತು ಕುವೆಂಪುರವರ ಪೂರ್ವ ಚಿತ್ರಾಂಗದೆಯಿಂದ ಒಂದು ವಿಷಯ ಸ್ಪಷ್ಟವಾಗುತ್ತದೆ. ಸ್ತ್ರೀಯಾದವಳಿಗೆ ಪುರುಷನ ಒಲುಮೆಯನ್ನು ಪಡೆಯಬೇಕಾದರೆ ಸಹಜವಾದ ಸೌಂದರ್ಯ ಮತ್ತು ಮಾರ್ದವಗಳು ಬೇಕು. ಇಲ್ಲದಿದ್ದಲ್ಲಿ ಅವಳು ಗಂಡನ್ನು ಒಲಿಸಿಕೊಳ್ಳಲಾರಳು. ಆದರಿಂದಲೇ ಅವಳ ಶರೀರದ ಸಾಧಾರಣತೆ ಅರ್ಜುನನ ಮನಸ್ಸನ್ನು ಸೆಳೆಯಲು ಸಮರ್ಥವಾಗದೆ, ಮದನನಿಂದ ವಿಶೇಷ ಸೌಂದರ್ಯವನ್ನು ಪಡೆ

ದಾಗ ಮಾತ್ರ ಅವಳು ಅವನ ಪ್ರೇಯಸಿಯಾದಳು. ಎರಡನೆಯದಾಗಿ, ವಾತಾವರಣದ ಪ್ರಭಾವ ಮತ್ತು ಶಿಕ್ಷಣ ಒಬ್ಬ ವ್ಯಕ್ತಿಯನ್ನು ಹೇಗೆ ರೂಪಿಸುತ್ತದೆ ಎಂಬ ವಿಷಯವೂ ಸ್ಪಷ್ಟವಾಗುತ್ತದೆ.

## ಉತ್ತರ ಚಿತ್ರಾಂಗದ

ಚಿತ್ರಾಂಗದೆಯ ತರುಣಪುಷ್ಪದಲ್ಲಿ ಅರ್ಜುನಭ್ರಮರ ಮಕರಂದವನ್ನು ಹೀರಿ ಹಾರಿಹೋಯಿತು. ಅರ್ಜುನ ಹೋದ ಕೂಡಲೇ ಕನಸೊಡೆದ ಚಿತ್ರಾಂಗದೆ ಅರ್ಜುನನನ್ನು ಕಾಣದೆ ತೋಳಲುತ್ತಾಳೆ. ಕಡೆಗೆ ಕೈಯಲಿದ್ದ ಮುದ್ರೆಯುಂಗರವನ್ನು ಕಂಡು ಸಮಾಧಾನ ಮಾಡಿಕೊಳ್ಳುತ್ತಾಳೆ. ಆರುತಿಂಗಳ ಮೇಲೆ ಮರಳಿ ಬರುವೆನೆಂದ ಅರ್ಜುನನ ಮಾತನ್ನು ನಂಬಿ 'ಗರ್ಭಿತ ರಹಸ್ಯೆ'ಯಾಗಿ ಮನೆಗೆ ಮರುಳುತ್ತಾಳೆ.

ಚಿತ್ರಾಂಗದೆಯ ಮುಂದಿನ ಜೀವನ ಬರಿಯ ದೂರ, ದೀರ್ಘ ನಿರೀಕ್ಷಣೆ. ತಾನೊಲಿದ ನಲ್ಲನ ಆಗಮನವೇ ಬಯಕೆಯಾಯಿತು. ಬಹಿರ್ಮುಖತೆ ಅಂತರ್ಮುಖತೆಯಾಯಿತು. ಮೊದಲು ತಾನು ಪಡೆಯಲಾಗದ ಹೆಣ್ಣುತನದ ಸ್ವಭಾವ ಈಗ ತಾನಾಗಿ ಮೂಡಿತು. ಸದಾ 'ನರಮೂರ್ತಿ ಚಿಂತಾಂತರಂಗೆ' ಯೊದಳು. ಇವಳ ಈ ವಿರಹಾವಸ್ಥೆಯವ್ಯಾಕುಲತೆಯನ್ನು ಕಂಡು ಅವಳ ತಂದೆ ತಾಯಿಯರು ಬಂದು ಮಾತನಾಡಿಸಿ, ಮಗಳ ಮೂಕ ಶೋಕಾವಸ್ಥೆಗೆ ಬೆದರಿ 'ಜವ್ವನದ ಜಾಡ್ಯಕ್ಕೆ ಮದುವೆ ತಾಂ ಮದ್ದು' ಎಂದು ಮದುವೆಯ ಪ್ರಸ್ತಾಪವನ್ನು ಮಾಡಿದರು. ಅದಕ್ಕೆ ಚಿತ್ರಾಂಗದೆ ತನಗೆ ಕಾಡಿನಲ್ಲಿ ಶಿವನ ಸನ್ನಿಧಿಯಲ್ಲಿ ಪಾರ್ಥಂಗೆಣೆಯಾದ ಪುರುಷನೊಡನೆ ಗಾಂಧರ್ವ ವಿವಾಹವಾಯಿತೆಂದು ತಿಳಿಸುತ್ತಾಳೆ. ತಾಯಿ, ಮಗಳುವರಿಸಿದ ಪುರುಷನಾರು ಎಂದು ಪ್ರಶ್ನಿಸಲಾಗಿ, 'ಸಿಂಗಮಂ ಬಿಟ್ಟನ್ಯಮಂ ವರಿಸುವುದೆ ಸಿಂಗಿಣಿ' ಎಂದುತ್ತರ ಕೊಟ್ಟು 'ಗರ್ಭಿತ ರಹಸ್ಯೆ' ಯಾಗಿಯೇ ಉಳಿದು, ಇನ್ನಾರುತಿಂಗಳಿಗೆ ತನ್ನೊಲುಮೆಯೊಡೆಯನನ್ನು ತಂದು ತೋರುವೆನೆಂದು ಭರವಸೆಕೊಡುತ್ತಾಳೆ.

ಆರುತಿಂಗಳ ಅವಧಿಯನ್ನು ನಿರೀಕ್ಷಣೆಯ ನಿಶಿತಶೂಲದ ಮೊನೆಯಮೇಲೆ ಕಳೆಯುತ್ತಾಳೆ. ಕಾಲನದಿ ಹರಿದು ಆರುತಿಂಗಳ ಅವಧಿ ಹತ್ತಿರಕ್ಕೆ ತೇಲಿಬರುತ್ತದೆ. ಇನಿಯನೈತರುವ ಮಹಾಸುದಿನ ಬಳಿಗೆ ಸಾರುತ್ತದೆ. ಕಡಲೊಡಲಿನ ಮೇಘರಾಗಿಣಿ, ಗಿರಿರಾಜ ಸಮೂಹಕ್ಕೆ ಹೊರಡುವಂತೆ ಆಪ್ತಸಖಿಯರೊಡನೆ ಚಿತ್ರಾಂಗದೆ ಹೊರಡುತ್ತಾಳೆ. ಮೊದಲ ಬೇಟಬೆಳೆದ ಶಿವಾಲಯಕ್ಕೆ ಬರುತ್ತಾಳೆ. ಅಲ್ಲಿ ನೂರಾರು ಹಳೆಯ ರಸಾನುಭವಗಳ ನೆನಪು ಮೂಡಿಬರುತ್ತದೆ. ಆ ಸ್ಥಳ ಪೂಜನೀಯವಾದ ಕ್ಷೇತ್ರವಾಗಿ ಕಾಣುತ್ತದೆ. ಮುಂದೆ ಬರುವ ಕಲ್ಪನಾ ಸುಖ ಅವಳನ್ನು ಅಪ್ಸರೆಯಂತೆ ಅಲ್ಲಿ ತಿರುಗಿಸುತ್ತದೆ. ಆ ದಿನವೆಲ್ಲಾ ಅರ್ಜುನನ ನಿರೀಕ್ಷಣೆಯಲ್ಲಿ ಕಳೆಯುತ್ತಾಳೆ. ಆದರೆ, ಆದರೆ,

ಅಂದು ನರನಿರಲಿ ನರರೊರ್ವರೂ ಕಾಣಿಸುವುದಿಲ್ಲ ಕಾಡಿನಲಿ. ಸಂಜೆಯಾಗಿ ಕೆಮ್ಮುಗಿಲಿನ ಕೆಸರಿನಲ್ಲಿ ಹೊತ್ತು ಮುಳುಗಿ ಕತ್ತಲಾಯಿತು. ಹಾಗೆಯೇ, ಚಿತ್ರಾಂಗದೆಯ ಹೃದಯದಲ್ಲಿ ನಿರಾಸೆಯ ತಮಸ್ಸು ತುಂಬಿತು. ಮತ್ತೆ ಮರುದಿನ 'ಇಂದಾದರೂ ಬರಬಹುದು' ಎಂಬ ಆಶಾವಿಲಾಸಿನಿಯ ಕೃಪೆಯಿಂದ ಗರಿವಾಡಿ ಹಾರಿದ ಇವಳ ಹೃತ್ಪಕ್ಷಿ ಮತ್ತೆ ನಿರಾಸೆಯ ಕೂಪಕ್ಕೆ ಉರುಳಿತು. ಹೀಗೆ ಹತ್ತು ದಿನ ಕಾದು, ರೋಶ ದುಃಖದಲ್ಲಿ ಬೆಂದು, ನೊಂದು ತನ್ನ ಊರಿಗೆ ಹಿಂತಿರುಗುತ್ತಾಳೆ.

ಅಂದು ಆ ಕಾಡಿನಲ್ಲಿ ನೀನೇ ಸರ್ವಸ್ವ ಎಂದು ಕೈಹಿಡಿದ ಗಂಡ, ಸೂರೆಗೊಳಿನ್ನ ಸರ್ವಸ್ವಮಂ ಎಂದು ತನ್ನನ್ನೇ ತ್ಯಾಗ ಮಾಡಿದ ತನಗೆ 'ಮರಣವೇ ಶರಣೆಂದು' ಭಾವಿಸುತ್ತಾಳೆ. ಒಲಿದ ಒಲುಮೆಗೆ ಪ್ರತಿಯಾಗಿ ಒಲುಮೆ ಬಾರದಿದ್ದರೆ ಒಲಿದೊಲ್ಮೆಗೆ ಅದು ಕೊಲೆ. ಒಲುಮೆಗಿಂತಲು ಬೇರೆ ಪರಮಾರ್ಥವಿನ್ನಿಲ್ಲ ನರರ ಬದುಕಿನಲಿ. ತನ್ನ ನಲ್ಲನ ಒಲುಮೆ ನಡುನೀರಿನಲ್ಲಿ ಹೀಗೆ ಕೈಬಿಟ್ಟರೆ ಅಬಲೆ ಚಿತ್ರಾಂಗದೆ ಸಾಯದೆ ಏನು ಮಾಡಿಯಾಳು? ತನ್ನ ತಂದೆ ತಾಯಿಯರಿಗೆ, ಊರಿನ ಜನರಿಗೆ, ತನ್ನ ಸಖೀ ಜನರಿಗೆ ಹೇಗೆ ಮುಖ ತೋರಿಸಿಯಾಳು? ಅದರಿಂದ ಮೊರೆದುರುಳುವ ಅಂಬುಧಿಯಲ್ಲಿ ಬಿದ್ದು ಪ್ರಾಣ ಬಿಡಲು ನಿಶ್ಚಯಿಸುತ್ತಾಳೆ. 'ಮರ್ದಲ್ತು ಕೊಲೆ ವಿರಹಕ್ಕೆ.' 'ಸ್ವಾತಿ ಹನಿ ಮುತ್ತಾಗಿ ಬೆಳೆವಂತೆ' ನಿನ್ನ ಗರ್ಭದಲ್ಲಿ ಹಸುಳೆಯೊಂದು ಬೆಳೆಯುತ್ತಿದೆ. ಅದಕ್ಕಾದರೂ ಬದುಕಿ ಸಾಹಸಿಯಾಗಬೇಕೆಂದು—ಸಮುದ್ರರಾಜ ತಿಳಿ ಹೇಳಿ ಆಶೀರ್ವದಿಸುತ್ತಾನೆ.

ಆಗ ಚಿತ್ರಾಂಗದೆ ತನ್ನ ಮನೆಗೆ ಮರಳಿ, ತನ್ನ ಬಸಿರಲ್ಲಿ ತಮ್ಮ ಬೇಟದ ಕಾಣಿಕೆಯಾಗಿ ಬೆಳೆಯುತ್ತಿರುವ ಶಿಶುವನ್ನು ಸುಪವಿತ್ರ ಭಾರವಾಗಿ ಪೊತ್ತು, ಪೂಜ್ಯ ಮನದಿಂದ ಪೂಜೆ ಎಂದರಿದು ಬಾಳುತ್ತಾಳೆ. ಚಿತ್ರಾಂಗದೆಯ ತನೋಗಗನದಲ್ಲಿ ಈ ಶಿಶು ಬೆಳ್ಳಿ ತಿಂಗಳ ಹಾಗೆ ಉದಯಿಸಿ ಬೆಳಕು ಮಾಡುತ್ತದೆ. 'ಮಾಡುವುದೆಲ್ಲ ತನ್ನಾತ್ಮ ಸಾಧನೆಗಾಗಿ' ಎಂಬ ಪೂಜೆಯ ಮರ್ಮವನ್ನರಿತು ಚಿತ್ರಾಂಗದೆ ಹೆಣ್ಣುಸಿಂಹ ಸಿಂಹಶಿಶುವನ್ನು ಬೆಳೆಸುವಂತೆ ಬೆಳಸುತ್ತಾಳೆ.

ಮಗ ಬಭ್ರುವಾಹನ ತಾರುಣ್ಯಕ್ಕೆ ಬಂದಮೇಲೆ ಅವನಿಗೆ ರಾಜ್ಯಸೂತ್ರವನ್ನೊಪ್ಪಿಸಿ ತಾನು ಊರ ಹೊರಗೆ ಎಲೆಮನೆಯಲ್ಲಿ ತಾಪಸಿಯಾಗುತ್ತಾಳೆ. ಸಕಲ ಐಶ್ವರ್ಯ ರಾಜಭೋಗಗಳಿದ್ದರೂ ಅವುಗಳನ್ನು ಕಡೆಗಣಿಸಿ ಆ ಮಹಾಭೋಗದ ನಡುವೆ 'ತ್ಯಾಗ ಮೂರ್ತಿ'ಯಾಗಿ ಬಾಳುತ್ತಾಳೆ. ಅವಳಿಗೆ ಜೀವನದಲ್ಲಿ ಉಳಿದಿರುವುದು ಒಂದೇ ಒಂದು ಹಂಬಲ. ಅದು ತಾನು ಅರ್ಜುನನನ್ನು ಕಾಣಬೇಕು ಎಂಬುದು. ಅದಕ್ಕಾಗಿ ಅವಳು ತಾಪಸಿಯಾದಳು. ತನ್ನ ವಿಷಯದಲ್ಲಿ ವಚನಭ್ರಷ್ಟನಾದ ಪತಿದೇವನಿಗೆ ಒಳ್ಳೆಯದಾಗಲಿ, ಲೋಕಕ್ಕೆ ಒಳ್ಳೆಯದಾಗಲಿ, ಧರ್ಮಕ್ಕೆ ಜಯವಾಗಲಿ ಎಂದು ಈಶ್ವರನನ್ನು ಪ್ರತಿದಿನವೂ ಪ್ರಾರ್ಥಿಸಿ ನಾಡಿಗೆ ಒಂದು ಆಶೀರ್ವಚನವಾಗಿ ಬಾಳುತ್ತಾಳೆ. ತನ್ನ

ಮಗನಿಗೆ ರಾಜನೀತಿಯನ್ನೂ, ಧರ್ಮ ಭೀತಿಯನ್ನೂ ಬೋಧಿಸುವ ಗುರುವಾಗುತ್ತಾಳೆ. ಇದರಿಂದ ಭೂಮಿ ಸ್ವರ್ಗವಾಯಿತು. ಶಾಂತಿ, ತುಷ್ಟಿ ಪುಷ್ಟಿಗಳು ನೆಲೆಗೊಂಡವು.

ಇದ್ದಕ್ಕಿದ್ದ ಹಾಗೆಯೇ ಮಹಾಭಾರತ ಯುದ್ಧದ ಸುದ್ದಿ ಬರುತ್ತದೆ. ಅರ್ಜುನನ ಕಲ್ಯಾಣಕ್ಕಾಗಿ ಪ್ರಾರ್ಥಿಸುತ್ತಾಳೆ. 'ಪತಿಯ ಖಡ್ಗಕ್ಕೆ ಸುವ್ರತದ ಪ್ರಾರ್ಥನೆಯಹುದು ಸಾಣೆ.' ಹಾಗೆ, ಅರ್ಜುನನ ಭುಜ ಪರಾಕ್ರಮಕ್ಕೆ ಚಿತ್ರೆ ತನ್ನ ಪ್ರಾರ್ಥನಾಬಲವನ್ನೂ ನೀಡಿ ನೆರವಾಗುತ್ತಾಳೆ. 'ತನ್ನನ್ನು ಅವನು ಮರೆತ' ಎಂದು ಬಗೆಯದೆ ಅವನಿಗೆ, ಅವನ ಯಶಕ್ಕೆ ಶ್ರೇಯಸ್ಸನ್ನು ಕೋರುವ ಈ ಚಿತ್ರಾಂಗದೆ ನಮಗೆ ನಿಜವಾಗಿಯೂ ಪೂಜ್ಯವ್ಯಕ್ತಿಯಾಗಿ, ಮಹಾವ್ಯಕ್ತಿಯಾಗಿ ಕಾಣುತ್ತಾಳೆ. ಕಾರ್ಮುಗಿಲು ಮುತ್ತಿ ಸಿಡಿಲು ಗುಡುಗುಗಳು ಆರ್ಭಟಿಸುತಿದ್ದರೂ ಅದರಮೇಲೆ ದೀನವಾಗಿ ಆದರೂ ಧೈರ್ಯವಾಗಿ ಕಾಣುವ ಕಿರುತಾರಗೆಯಂತೆ ರಾರಾಜಿಸುತ್ತಾಳೆ. ತಿರಸ್ಕರಿಸಿದರೂ ತಿರಸ್ಕಾರ ಮಾಡದೆ ತಾಪಸಿಯಾಗಿ ಬಾಳುವ ಈ ಚಿತ್ರೆ ನಿಜವಾಗಿಯೂ ಒಂದು ಶಕ್ತಿ.

ಚಿತ್ರಾಂಗದೆ ತಾನು ಯಾರಿಗಾಗಿ ತಪಸ್ಸು ಮಾಡುತ್ತಿರುವೆನೆಂಬುದಾಗಲೀ, ತಾನು ಯಾರಿಗಾಗಿ ಧ್ಯಾನಿಸುತ್ತಿರುವೆನೆಂದಾಗಲೀ ಎಂದೂ ತಿಳಿಸಲಿಲ್ಲ. ಹಾಗೆಯೇ, ತಾನೊಲಿದ ಪುರುಷಸಿಂಹನಾರು ಎಂಬುದನ್ನೂ ತಿಳಿಸಲಿಲ್ಲ. ಹೇಗೆಯೋ ಗರ್ಭಿತ ರಹಸ್ಯೆಯಾಗಿ ಉಳಿದಳು. ಹೀಗಿರುವಾಗ ಬಹುಕಾಲದಮೇಲೆ ಅಶ್ವಮೇಧಯಜ್ಞ ನಿಮಿತ್ತವಾಗಿ ಅರ್ಜುನ ಇತ್ತಬರುವನೆಂದು ತಿಳಿಯಿತು. ಇದರಿಂದ ಚಿತ್ರೆಗೆ ತನ್ನ ಪತಿಯನ್ನು ಕಾಣುವ ಹೆಬ್ಬಯಕೆಯ ಸಂತಸ ಹತ್ತಿರಹತ್ತಿರ ಸಮೀಪಿಸುತ್ತಿದ್ದರೆ, ಬಭ್ರು ವಾಹನನಿಗೆ ಮೂಲೋಕದ ವೀರ ಪಾರ್ಥನೊಡನೆ ಸಮರ ಲಭಿಸುವುದೆಂದು ಸಂತಸವಾಗುತ್ತದೆ. ಹೀಗೆ ವಿಧಿ ತಾಯಿಮಕ್ಕಳಿಬ್ಬರ ಬಾಳಿನಲ್ಲೂ ತನ್ನ ವ್ಯೂಹರಚಿಸುತ್ತದೆ.

ಅರ್ಜುನನ ಜನ್ನಗುದುರೆ ಬಭ್ರುವಾಹನನಿಂದ ಕಟ್ಟಲ್ಪಡುತ್ತದೆ. ಮಗ ರಣ ರಂಗಕ್ಕೆ ಹೋಗುವ ಮುನ್ನ ತಾಯಿಯಾಶೀರ್ವಾದಕ್ಕೆಂದು ಉಪವನಕ್ಕೆ ಬರುತ್ತಾನೆ. ಇದರಿಂದ, ಚಿತ್ರಾಂಗದೆ ಹಾರಿಹಮ್ಮೈಸುತ್ತಾಳೆ. ಆಗಲಾದರೂ ಹೇಳಬಾರದಿತ್ತೆ ? ಅರ್ಜುನ ತನಗೆ ಪತಿ, ಮಗನಿಗೆ ಪಿತನೆಂದು, ಹೇಳಲಿಲ್ಲ. ಅದರ ಬದಲು, ಧರ್ಮ ರಾಯನ ಜನ್ನವನ್ನು ಅಡ್ಡಿಪಡಿಸುವುದು ಅಧರ್ಮ ; 'ಪುಣ್ಯಮಂ ಪ್ರತಿಭಟಿಸಿನಿಲ್ವುದು ಧರ್ಮಮಲ್ತು' ಎಂದು ಧರ್ಮ ಭೀತಿಯನ್ನು ಬೋಧಿಸುತ್ತಾಳೆ. ಅಷ್ಟೇ ಅಲ್ಲ, ಅರ್ಜುನ ತನ್ನ ಗುರುವೆಂದೂ, ಅದಕ್ಕಾಗಿ 'ಗುರುಗೆ ಗುರುವಾದವಗೆ ಗೌರವಮೆ ಗುರುಗಾಣ್ಕೆ' ಪಿತೃಗೆ ಸಮನಾದ ಗುರುವಧೆಯಿಂದ ಪಿತೃವಧಾ ಪಾತಕವು ಬರುವುದು. ಅದಕ್ಕಾಗಿ 'ತನ್ನಖಿಳ ರಾಜ್ಯಸಂಪತ್ತುಮಂ ಗುರುಗೆ, ಧರ್ಮಜಾನುಜಗೆ, ಮಧುಸೂಧನ ಪ್ರಿಯ ಸಖಗೆ, ಮದ್ಗುರುವಿನಡಿದಾವರೆಗಳಿಗೆ ನಿವೇದಿಸೈ'—ಎನ್ನುತ್ತಾಳೆ. ಎಂತಹ ತ್ಯಾಗ ! ತನ್ನನ್ನು ತಾನೇ ಅರ್ಪಿಸಿಕೊಂಡಿದ್ದಲ್ಲದೆ, ತನ್ನ ಮಗ, ಅವನ ಸರ್ವಸಂಪತ್ತನ್ನೂ

ಅರ್ಪಿಸಬೇಕೆನ್ನುತ್ತಾಳೆ. ಎಲ್ಲಿ ಪ್ರೇಮವೊ ಅಲ್ಲಿ ತ್ಯಾಗ ತಾನಾಗಿ ಮೂಡುತ್ತದೆ. ಚಿತ್ರಾಂಗದೆಯ ಪ್ರೇಮಕ್ಕೆ ಅವಳ ತ್ಯಾಗವೇ ನಿದರ್ಶನ.

ಕಡೆಗೆ, ಅರ್ಜುನನ ನುಡಿಯಿಂದ ತಿರಸ್ಕೃತನಾದ ಬಭ್ರುವಾಹನ ಅರ್ಜುನ ನನ್ನು ಕದನದಲ್ಲಿ ಎದುರಿಸುತ್ತಾನೆ. ಭಯಂಕರ ರಣರಂಗದಲ್ಲಿ ಕರ್ಕಶದ ಕದನಕಾಳಿ ಭಯಂಕರಿಯಾಗಿ ನರ್ತಿಸುತ್ತಾಳೆ. ಮೃತ್ಯುವಿನ ಉರಿನಾಲಗೆ ರಣರಂಗದಮೇಲೆ ಜೋಲುತ್ತದೆ. ಯಾರನ್ನಾದರೂ ನುಂಗಬೇಕು, ಆ ಉರಿ ನಾಲಗೆ.

ಚಿತ್ರಾಂಗದೆ ಈಗ ತಾಪಸಿ. ಈಗಿನ ಅವಳ ರೂಪವೋ ಸಾತ್ವಿಕ. ಇಲ್ಲಿ ಕಾಣಿ ಸುವ ಚಿತ್ರಾಂಗದೆ ಶಿಶಿರವನುಳಿದ ಬನಸಿರಿ ಸುಂದರ ವಸಂತಮಂ ತಳೆದು ರಾರಾಜಿಸುವ ವೋಲ್, ಪಾರ್ಥನ ವಿರಾಗದ ಪತಂಗಕ್ಕೆ ಅಂಗಜ ಮೋಹದೀಪ ಶಿಖಿ ಯಾದಾಗ ಇದ್ದಂತಹ ಚಂಚಲ ತರಳೆಯಲ್ಲ. ಎಲ್ಲಾ ತರಳತನ ನೀಗಿ, ಚಾಂಚಲ್ಯತಾ ವಿಮುಕ್ತ ವಾಗಿ "ಧವಳ ದೌತಾಂಬರದ ಜಪಮಣಿಯ ಕರದ, ಧ್ಯಾನ ಸ್ತಿಮಿತ ಶಾಂತಿಮಂಡಿತ ಮುಖಾಂಬುಜದ" ತಾಯಿ ಹಾಗೂ ತಪಸ್ವಿನಿ. ತರಳತೆಯೆ ಮೋಹನ ಚಂಚಲತೆ ಮಾದುಹೋಗಿ ತಾಯ್ತನದ ಗಾಂಭೀರ್ಯ ನೆಲೆಮಾಡಿದೆ. ಈಗ ಅವಳು ಬಭ್ರುವಾಹ ನನ ತಾಯಿ; ಮಣಿಪುರದ ರಾಣಿ; ಕಡೆಯದಾಗಿ ಅರ್ಜುನನ ಹೆಂಡತಿ.

ತನ್ನ ಪತಿಸುತರ ಕ್ರೂರ ಕದನವಾರ್ತೆ ಚಿತ್ರಾಂಗದೆಯ ಕಿವಿಗೆ ಬೀಳುತ್ತದೆ. ಈಗ ಅದನ್ನು ನಿಲ್ಲಿಸದಿದ್ದರೆ 'ಪತಿಗೆ ಹಾನಿ' ಎಂದು ಅಂತರ್ವಾಣಿ ನುಡಿಯುತ್ತದೆ. "ರಣದೇವತೆಗೆ ನಿನ್ನ ಹೃದಯದ ಬಲಿಯನ್ನಿತ್ತು" ಪತಿಸುತರನ್ನು ಕಾಪಾಡು ಎನ್ನು ತ್ತದೆ ಈಶ್ವರವಾಣಿ. ಅದಕ್ಕೆ ಚಿತ್ರಾಂಗದೆ ಹೆದರಲಿಲ್ಲ, ಹಿಂಜರಿಯಲಿಲ್ಲ. ಮೃತ್ಯು ದೇವತೆಗೆ ತನ್ನ ಎದೆಯ ರಕ್ತವನ್ನು ತರ್ಪಣಕೊಡಲು ನಿಶ್ಚಯಿಸುತ್ತಾಳೆ. ತನ್ನ ಪ್ರಾಣಕ್ಕಿಂತ ಹೆಚ್ಚಾಯಿತು ಅರ್ಜುನನ ಪ್ರೇಮ. ಕೂಡಲೇ ಶಾಂತಿ ಕೇತನ ಹಿಡಿದು, ಆ ಕರ್ಕಶ ಕದನ ಕಣಕ್ಕೆ ಕುದುರೆಯನ್ನೇರಿ, ರಕ್ತಾವೃತವಾದ ವಾತಾವರಣಕ್ಕೆ ಶಾಂತಿ ದೂತಳಾಗಿ ನುಗ್ಗಿ ಪತಿಸುತರ ನಡುವೆ ಬೀಳುತ್ತಾಳೆ.

ಬಭ್ರುವಾಹನ-ಪಾರ್ಥರಿಬ್ಬರೂ ರಥದಿಂದ ಭೂಮಿಗಿಳಿದು ಬಿದ್ದ ಸ್ತ್ರೀವ್ಯಕ್ತಿಯ ಬಳಿಗೆ ಬರುತ್ತಾರೆ.

ಬಭ್ರುವಾಹನ ತಾಯಿಯನ್ನು ಗುರುತಿಸುತ್ತಾನೆ. ಚಿತ್ರಾಂಗದೆ ತನ್ನ ಗರ್ಭಿತ ರಹಸ್ಯವನ್ನು ತೆರೆಯುತ್ತಾಳೆ. ಅರ್ಜುನ ತನ್ನಪತಿ-ಬಭ್ರುವಾಹನ ಅರ್ಜುನನ ಸುತ- ಎಂದು ಹೇಳಿ ಇಬ್ಬರಿಗೂ ಸಂಧಿಮಾಡಿ ಶಾಂತಾತ್ಮಳಾಗಿ ಶಿವಧ್ಯಾನ ಮಾಡುತ್ತಾ ಕಣ್ಮುಚ್ಚುತ್ತಾಳೆ. ವಿಚಿತ್ರವಾದ ಚಿತ್ರಾಂಗದೆಯ ಜೀವನ ಕಾವ್ಯದ ಕಡೆಯ ಅಧ್ಯಾಯ ಮುಗಿಯುತ್ತದೆ. ಹಾಲುಗಲ್ಲಿನ ಸ್ಮಾರಕಸ್ತೂಪವೊಂದು ಬುವಿಯ ಒಲವು ಸಗ್ಗನೀಲಿಗೆ ಚುಂಬಿಸುವಂತೆ ನಿಲ್ಲುತ್ತದೆ. ಚಿತ್ರಾಂಗದೆಯ ತ್ಯಾಗದಿಂದ, ಅವಳ ಮರ್ತ್ಯಪ್ರೇಮ ಅಮರ್ತ್ಯವಾಯಿತು. ನೆಲದ ಕುಸುಮ ಗಗನಕೇರಿತು.

ಇಲ್ಲಿ ಅರ್ಜುನ ಮಾಡಿದ ತಪ್ಪಿಗೆ ಚಿತ್ರಾಂಗದೆ ಪ್ರಾಯಶ್ಚಿತ್ತದ ಬೆಲೆಕೊಟ್ಟಳು. ತನ್ನನ್ನು ತಾನು ಅರ್ಪಿಸಿಕೊಂಡಳು. ಚಿತ್ರಾಂಗದೆ ಹಿರಿಯಳಾಗಿರುವುದು ಅವಳ ಈ ಮಹಾತ್ಯಾಗದಿಂದ. ಆದರಿಂದ, ಅವಳ ಸಾವು ದುರಂತವಲ್ಲ; ಸಮರ್ಪಣೆ. ಈ ಚಿತ್ರಾಂಗದಾ ಕಾವ್ಯ ದುರಂತ ಕಾವ್ಯವಲ್ಲ, ಮಹಾತ್ಯಾಗಿಯೊಬ್ಬಳ ಅಮೃತ ಚರಿತೆ. ಅವಳ ಜೀವನ, ಪ್ರೇಮ, ಮತ್ತು ತ್ಯಾಗ—ಇವುಗಳ ಮಹತ್ವವನ್ನು ವಿವರಿಸುವ ಕಲಾಕೃತಿ.



# ಧನ್ಯೆ ಶಬರಿ

## ಅ. ರಾ. ಮಿತ್ರ

ಮಹಾತಪಸ್ವಿ ವಸಿಷ್ಠ ಮಹರ್ಷಿಗಳ ಮೇಲಣ ಛಲದಿಂದ ತಾನೂ ಬ್ರಹ್ಮರ್ಷಿಯಾಗುವ ಪಣವನ್ನು ತೊಟ್ಟು ಅನೇಕಾನೇಕ ಅಡ್ಡಿ ಆತಂಕಗಳಿಗೆ ಎದೆಗೊಟ್ಟು ಸಹಸ್ರಾರು ಸಂವತ್ಸರಗಳ ಕಾಲ ನಿರಂತರವಾದ ಘೋರ ಸಾಧನೆಯಲ್ಲಿ ತೊಡಗಿ ಕಡೆಗೆ ಬ್ರಹ್ಮರ್ಷಿ ಪದವಿಯನ್ನು ಪಡೆಯುವ ಪ್ರಚಂಡ ವ್ಯಕ್ತಿ ವಿಶ್ವಾಮಿತ್ರರನ್ನು ಕಂಡಿದ್ದೇವೆ. ಸಿಂಹಾಸನದ ಆಸೆಗಾಗಿ ಮಲತಾಯಿ ಮೇಲಣ ಮುಯ್ಯಿಗಾಗಿ, "ನಾರಾಯಣನನ್ನು ಕಂಡಿದ್ದೀರಾ" ಎಂದು ಕಂಡ ಕಂಡವರನ್ನೆಲ್ಲ ಕೇಳಿ ಕಡೆಗೆ ಆತನ ದಿವ್ಯಧ್ಯಾನದಲ್ಲಿಯೇ ನಿರತನಾಗಿದ್ದ ಧ್ರುವ ಬಾಲಕನ ತಪಸ್ಸನ್ನೂ ಕಂಡಿದ್ದೇವೆ. ದೇವೇಂದ್ರನ ಪದವಿಯನ್ನು ತಾನು ಪಡೆಯಲೇಬೇಕೆನ್ನುವ ಮಹದಾಸೆಯಿಂದ ನೂರಾರು ಯಜ್ಞಗಳನ್ನು ಮಾಡಿ ತನ್ನ ಕಾರ್ಯದಲ್ಲಿ ಕೃತಕೃತ್ಯನಾಗಿ ಮೆರೆದ ನಹುಷನನ್ನೂ ಕಂಡಿದ್ದೇವೆ. ಆದರೆ ಕೇವಲ ನಿರೀಕ್ಷಣೆಯನ್ನೇ ತನ್ನ ಪರಮ ಗುರಿಯನ್ನಾಗಿಟ್ಟುಕೊಂಡು ಅದನ್ನೇ ತನ್ನ ಮಹಾತಪಸ್ಸೆಂಬುದಾಗಿ ಭಾವಿಸಿಕೊಳ್ಳುವ "ಪುಂಡಿನಾರಿನ ತೆರನ ಬೆಳ್ನರೆ ನವಿರ್ದಲೆಯ, ಬಚ್ಚು ಪಲ್ಲಿಲಿವಾಯ ಕುಡುಬೆನ್ನ ಹಣ್ಮುದುಕಿ" ಯೋರ್ವಳ ಆಕೃತಿ ನಮ್ಮ ಕಣ್ಣೆದುರು ಚಿತ್ರಿತವಾದಾಗ ನಮ್ಮ ಕಣ್ಣು ತೇವವಾಗುವಷ್ಟು, ಹೃದಯ ತುಡಿಯುವಷ್ಟು, ಬೇರೆಯವರ ದೃಷ್ಟಾಂತದಿಂದ ಆಗಲಾರದು. ಆಕೆಯ ಮಹನ್ನಿರೀಕ್ಷಣೆ, ಮೂಕವೇದನೆಗಳು ಸಹೃದಯ ಹೃದಯದಲ್ಲಿ ಚಿರಸ್ಥಾಯಿಯಾದ ಸ್ಥಾನವನ್ನು ಪಡೆಯುತ್ತವೆ.

ವಾಲ್ಮೀಕಿಗಳಂತಹ ಅನುಪಮ ರಸಋಷಿಗಳ ದಿವ್ಯಲೇಖನಿಯಿಂದ ಧ್ವನಿಪೂರ್ಣವಾಗಿ, ಕಲಾತ್ಮಕವಾಗಿ ಹೊಮ್ಮಿರುವ ಆಕೆಯ ವ್ಯಕ್ತಿತ್ವ, ರಾಮಾಯಣದ ಸ್ಫೂರ್ತಿಯಿಂದ ಮೈದುಂಬಿದ ಶ್ರೀ ಕುವೆಂಪು ಅವರ ಕವಿಚೇತನದ ದಿವ್ಯಪ್ರಜ್ಞೆಯಲ್ಲಿ ಮಿಂಚಿ ಕಲ್ಪನಾ ರಮ್ಯತೆಯಿಂದ ಪರಿಸ್ಫುಟವಾಗಿ ಅಮರತ್ವವನ್ನೇ ಪಡೆದಿದೆ. ಶ್ರೀ ಕುವೆಂಪು ರಾಮಾಯಣದಲ್ಲಿ ಉದ್ಭೂತವಾದ ಯಾವ ಒಂದು ವಸ್ತುವಾಗಲೀ ಅದು ಕಥಾನಾಯಕನ ಸತ್ಯನಿಷ್ಠೆ ಆದರ್ಶತೆಗಳನ್ನು ಪರಾಕಾಷ್ಠಗೇರಿಸುವುದರಲ್ಲಿ ಸಹಾಯಕವಾಗಿದೆ. ಮಹಾಸೇತುವನ್ನು ನಿರ್ಮಿಸಿ ವಾನರ ಸೇನೆಯನ್ನು ಒಂದುಗೂಡಿಸಿ ಲಂಕೆಗೆ ನಡೆದು ರಾಕ್ಷಸನನ್ನು ಸಂಹರಿಸಿ ಸೀತೆಯನ್ನು ತರುವ ಕಾರ್ಯದಲ್ಲಿ ಆಂಜನೇಯ ಸುಗ್ರೀವ ಲಕ್ಷ್ಮಣ ಮುಂತಾದವರ ಸಹಾಯ, ತಪಸ್ಸು, ಎಷ್ಟು ಪ್ರಮುಖವೋ ಅಷ್ಟೇ ಪ್ರಮುಖ 'ಸೀರವ ಧ್ಯಾನ ವಧೂ'ಊರ್ಮಿಳಾದೇವಿ ಅಥವಾ ರಾಮನಿಗೆ ಪುನರ್ಜನ್ಮಪಿತ್ತ ಶಬರಿ, ಇವರ ಅಂತರ್ಮುಖದ ತಪಸ್ಸು.

ರಾಮಾಯಣದ ಆದಿಯಲ್ಲೇ ಕವಿವಾಣಿ ಸಾರಿದೆ :
........ಜನಮನದ ಶಕ್ತಿ ಮೇಣವರಭೀಪ್ಸೆಯೆ
ಮಹಾತ್ಮರಂ ನಮ್ಮಿಳೆ ತಪ್ಪದೆಳೆತರ್ಪುದುಕಣಾ !

ಆದರೆ ಆ ಜನ ಮನದ ಸಮಷ್ಟಿಶಕ್ತಿಯ ಪ್ರಚಂಡ ಪ್ರವಾಹ, ಕೇವಲ ಶ್ರೀರಾಮನ ಜನನದ ಆದಿಗೇ ಪರ್ಯವಸಾನಗೊಳ್ಳಲಿಲ್ಲ. ಆಗ ಸುಪ್ತವಾಗಿ ಹರಿದರೂ ಸಹ ಅದು ಬೇರೊಂದೆಡೆ ಬುಗ್ಗೆಯಂತೆ ಏಳಬೇಕಷ್ಟೆ. ಶ್ರೀರಾಮಚಂದ್ರನು ಪತ್ನಿವಿಯೋಗದಿಂದ "ಘುರ್ಚುಮೂರ್ಛೆಗೆ" ಸಂದು ಚಿತ್ತ ಭ್ರಮೆಯಾದವನಂತೆ ಮಾತಾಡುತ್ತಾ ಹೇಡಿಯಂತೆ ಕಬಂಧನನ್ನು ಕಂಡಾಗ 'ಓಡಲಿಳಿಸಿ ಕಾಲ್ ಕೀಳಲಾರದೆ' ಕೆಡೆದು ಉರುಳಿ ಕಡೆಗೆ 'ಪೂದೆ ಪೂದೆಗೆದರ್ದ ತಲೆ, ಕೊಳೆ ಬೆಮರ್ ಪತ್ತಿದುಡೆ'ಗಳಿಂದ ತೇಜೋವಿಹೀನನಾಗಿ ಶಬರಿಯಾಶ್ರಮಕ್ಕೆ ಬರುತ್ತಾನೆ. ಮಹಾವ್ಯಕ್ತಿಯೊಬ್ಬ ಹೀಗಾಗುವುದು ಇಡೀ ಜನಮನದ ಶಕ್ತಿಗೇ ಒಂದು ಸವಾಲಲ್ಲವೇ? ಆ ಸವಾಲನ್ನಂಗೀಕರಿಸುತ್ತದೆ ಸಮಷ್ಟಿ ಶಕ್ತಿ. ಮತ್ತೆ ತನ್ನ ಪ್ರಾರ್ಥನಾಶಕ್ತಿಯಿಂದ, ಜೀವ ಚ್ಯುವವಾಗಿದ್ದ, ನೈರಾಶ್ಯಕಂಚುಕಿತ ಹೃದಯನಾಗಿದ್ದ ಶ್ರೀ ರಾಮನನ್ನು ತನ್ನ ಪ್ರವಾಹದ ಪವಿತ್ರಜಲದಲ್ಲಿ ಮಿಾಯುವಂತೆ ಮಾಡಿ ಅಮರತ್ವವೀಯುತ್ತದೆ. ಸಮಷ್ಟಿ ಜನತೆಯ ಅಭೀಪ್ಸೆಯ ಪೂರೈಕೆಗಾಗಿ ನಿರ್ಮಿತವಾಗಿರುವ ಆ ಪವಿತ್ರಜಲವೇ ಶಬರಿ. ಅವರೆಲ್ಲರ ಏಕೈಕ ಪ್ರತಿನಿಧಿಯಾಗಿ ಶಬರಿ ತನ್ನ ಸೇವೆಯನ್ನು ನಡೆಸುತ್ತಾಳೆ. ತನ್ನ ಅಮೂಲ್ಯ ಜೀವವನ್ನೇ ತೆತ್ತು ಆತನ ಬದುಕಿಗೆ ನೆರವಾಗುತ್ತಾಳೆ. ಮಹಾಹಣತೆಯೊಂದು ಮಂಕಾದಾಗ ಅದು ಆರದಂತೆ ತನ್ನ ಹೃದಯವನ್ನೇ ಹಿಂಡಿ ಎಣ್ಣೆಯನ್ನು ಹಣತೆಗೆ ಸುರಿದು ಅದರ ಪ್ರಭೆಯನ್ನು ಮತ್ತಷ್ಟು ಉಜ್ವಲಗೈದಿದ್ದಾಳೆ. ಮಹಾತಪಸ್ಸಿನ ಸಾಧನೆಗಾಗಿ ಮಹಾತ್ಯಾಗವೊಂದದನ್ನು ಮಾಡಿದ್ದಾಳೆ.

ಒಂದು ಮಹಾಕಾವ್ಯದ ಸಮುದ್ರವನ್ನು ತುಂಬಿಸಲಿಕ್ಕೆ ಕವಿ ಅನೇಕಾನೇಕ ಪಾತ್ರಗಳನ್ನು ನದಿಗಳಂತೆ ಉಪಯೋಗಿಸಿ ಕೊಳ್ಳಬೇಕಾಗುತ್ತದೆ. ಅವುಗಳ ಬಾಳ್ವೆ ಎಷ್ಟೇ ಮಧುರವಿರಲಿ, ಗೈಮೆ ಎಷ್ಟೇ ಮಹತ್ವದ್ದಿರಲಿ, ಸತ್ವ ಎಷ್ಟೇ ಪ್ರಭಾವಶಾಲಿಯಾಗಿರಲಿ ಕಟ್ಟಕಡೆಯಲ್ಲಿ ಅವು ತಮ್ಮತನವನ್ನು ಕಳೆದುಕೊಂಡು ತಮ್ಮ ಕಿರುಗಾಣಿಕೆಯನ್ನು ಸಾಗರಕ್ಕೆ ಸಲ್ಲಿಸಿ ಕೃತಾರ್ಥವಾಗುತ್ತವೆ. ಆದರೂ, ಕ್ಷಣಕ್ಷಣಕ್ಕೂ ಅಪೂರ್ವ ಭಂಗಿಯಿಂದ ನೋಟಕನನ್ನು ಬೆರಗುಗೊಳಿಸಿ ಭಾವಬಂಧಿತನನ್ನಾಗಿ ಮಾಡುವ ಪ್ರೋದ್ಯತ್ತರಂಗಗಳನುಳ್ಳ ಮಹಾಸಾಗಾರದ ಬೃಹದುದರದಲ್ಲಿ ಸೇರಿ ಸುಪ್ತವಾಗಿರುವ ನದಿಗಳು, ಆ ಸಾಗರದ ಅಲೆಗಳ ಅದ್ಭುತಗಾನದ ಹಿನ್ನೆಲೆಯಲ್ಲಿ ಕಂಪಿಸುವ ಸ್ವರದ ಶ್ರುತಿಗೈಯುವುದನ್ನೂ ಸಹೃದಯ ಕಾಣದಿರಲಾರ.

ಆಂಜನೇಯ ಶ್ರೀ ರಾಮನನ್ನಾರಾಧಿಸುವ ಪ್ರಥಮದಲ್ಲಿ ತನ್ನಸ್ವಾಮಿಯಾದ ಸುಗ್ರೀವನ ರಾಜ್ಯಪ್ರಾಪ್ತಿಗೆ ಶ್ರೀ ರಾಮನಿಂದ ಸಹಾಯವನ್ನು ಪಡೆಯುವ ನಿರೀಕ್ಷೆಯಿದೆ. ಪತ್ನಿಯ ಅಗಲಿಕೆಯಿಂದಾದ ದುಃಖದಲ್ಲಿ ರಾಮನ ಸಹಭಾಗಿಯಾಗಿರುವುದ

ರಿಂದ ಸುಗ್ರೀವ ಶ್ರೀ ರಾಮನ 'ಸಖ್ಯ' ಬೆಳಸಿರುವುದರಲ್ಲಿ ಪರಸ್ಪರ ಸಹಾಯಮಾಡ ಬೇಕೆಂಬ ಸಮಾನಾಂಶವನ್ನು ಕಾಣುತ್ತೇವೆ. ಗೌತಮ ಮಹಾಮುನಿಯ ಶಾಪದಿಂದ ಸಹಸ್ರಾರು ವರ್ಷಗಳ ಕಾಲ 'ನಿಷ್ಠುರ ಶಿಲಾತಪಸ್ವಿನಿ' ಯಾಗಿ 'ಜಗದ ನಿರ್ದಾಕ್ಷಿಣ್ಯ ವಿಸ್ಮೃತಿ'ಗೆ ತುತ್ತಾಗಿದ್ದ ಅಹಲ್ಯೆ ರಾಮಾಗಮನವನ್ನು ನಿರೀಕ್ಷಿಸುತ್ತಿರುವುದು ತನ್ನ 'ವಜ್ರ ಮೌನದ ಅಚಿನ್ ನಿದ್ರೆಯಿಂದೆಳ್ಚತ್ತು' ಶಾಪವಿಮುಕ್ತಳಾಗುವ ಸಲುವಾಗಿ. ಲಕ್ಷ್ಮಣನಂತೂ ರಾಮನ ತಮ್ಮ. ಆದುದರಿಂದ ಆತನ ಛಾಯಾನುವರ್ತಿಯಾಗಿ ಬಂದಿರುವುದರಲ್ಲಿ ಆಶ್ಚರ್ಯವೇನಿಲ್ಲ. ಆದರೆ ಮತ್ತಾವ ಕಾರ್ಯಲಾಭವನ್ನೂ ಇಟ್ಟು ಕೊಳ್ಳದೆ ಕೇವಲ ಭಕ್ತಿಯಿಂದ, ಅಭಿಮಾನದಿಂದ, ಹೃತ್ಪೂರ್ವಕವಾದ ಒಲವಿನಿಂದ 'ಈರೈದು ವರ್ಷ'ಗಳ ವರೆಗೂ ನಿರಂತರ ತಾಳ್ಮೆಯಿಂದ, ಅನುದಿನವೂ ಎಷ್ಟೋ ಬಾರಿ ರಾಮ ಬರುವ ಕನಸು ಕಂಡು ಆ ಸ್ವಪ್ನದರ್ಶನದ ಶ್ರೀಮೂರ್ತಿಯನ್ನು ಅಂತಶ್ಚಕ್ಷು ವಿನಲ್ಲಿ ಮರಳಿ ಮರಳಿ ಚಿತ್ರಿಸಿಕೊಂಡು ತುಂಬಿದ ಹೃದಯದಿಂದ ನಲಿದು, ಎಷ್ಟೋ ಬಾರಿ ಆ ಸುಂದರ ಪುರುಷನ ಆಗಮನದ ಭ್ರಾಂತಿಯಿಂದ ಗುಡಿಸಲ ಬಾಗಿಲನ್ನು ತೆರೆದು, 'ಬುವಿಯ ಬೈತಲೆಯಂತೆ ಬಯಲ ನಡು ಸಿಡುಪರಿದ ಕಾಲ್ದಾರಿ ಕೀಳ್ವಟ್ಟೆ' ಯನ್ನು ಕಾತರ ನಯನಗಳಿಂದ ನೋಡಿ, ಈಗ ಬಂದಾನು, ಇಂದು ಬಂದಾನು ಎಂದು ಕೊಂಡು ತಾನೇ ಬಿತ್ತಿ ಬೆಳೆದ ಹಣ್ಣಿಲಗಳಿಂದ ಆತನ ಸತ್ಕಾರಕ್ಕೆ ಸಿದ್ಧಮಾಡಿಕೊಳ್ಳುವ ಅಂತಹ ಪವಿತ್ರ ಸ್ತ್ರೀಯನ್ನು ಕಾಣುವುದು ದುರ್ಲಭ.

ಇದರಿಂದ ನಮಗೆ ಅರ್ಥವಾಗುತ್ತದೆ, ಆಕೆಯ ನಾಡಿನಾಡಿಗಳಲ್ಲೂ ಹರಿಯುವ ರಕ್ತದ ಮಿಡಿತ 'ರಾಮ-ರಾಮ' ಎಂದು. ಆಕೆಯ 'ಈರೈದುವತ್ಸರ'ಗಳ ನಿರಂತರ ನಿರೀಕ್ಷೆಯ ಗುರಿ ರಾಮ ಸಂದರ್ಶನ. "ಬಾಳ್ಪಯಣಮಂ ಮುಗಿಸಿ ಹೋಹ ಮುನ್ನ ಮೇಣ್ ಒರ್ಮೆಯಾದೊಡಂ ದೊರೆಕೊಳ್ಳದಿಹುದೆ ರಾಮನಾ ಸಿರಿಮೊಗದ ಸಂದ ರ್ಶನಂ" ಎಂಬುದೇ ಆಕೆಯ ನಿತ್ಯ ಜಪ.

* * * *

ಸಂಪ್ರದಾಯದ ಜಾಡು ಹಿಡಿದು ಹೊರಡುವ ವ್ಯಕ್ತಿಗೆ ಇಲ್ಲಿ ಒಂದು ಸಣ್ಣ ಸಂದೇಹ ತಲೆದೋರುತ್ತದೆ. ಶಬರಿ ಅಷ್ಟೊಂದು ವರ್ಷಗಳಿಂದ ಶ್ರೀ ರಾಮನಾಗಮನ ವನ್ನು ನಿರೀಕ್ಷಿಸಿದ ತಪಸ್ವಿನಿಯಾದರೂ ಸಹ ಅವರು ಬಂದಾಗ ಆ ಯೋಗಿನಿಗೆ ಅವರನ್ನು ಅರಿಯುವ ಬುದ್ಧಿ ಬರಲಿಲ್ಲವೇ? ಎಂದು ಆತನ ವಿಚಿತ್ರ ತರ್ಕಫಣಿ ಹೆಡೆಯಾಡಿಸು ತ್ತದೆ. ಆದರೆ ಅವರು ಬರುವುದಕ್ಕೆ ಹಿಂದಿನ ದಿನ ಬೆಳ್ದಿಂಗಳಿರುಳಿನಲ್ಲಿ 'ಮುಪ್ಪು ಜೌವನ ಗನಸು ಕಾಣ್ಬೊಂದು ಮಾಳ್ಕೆ'ಯಿಂದ ಆಕೆ ಕಂಡ ಸ್ವಪ್ನ ಸಂದರ್ಶನದ ಶ್ರೀಮೂರ್ತಿಯ ಭವ್ಯ ಚಿತ್ರ ಆಕೆಯ ಹೃದಯದಲ್ಲಿ ಅಚ್ಚೊತ್ತಿದಂತೆ ನಿಂತಿರುವು ದನ್ನೂ ಸಹೃದಯ ಗಮನಿಸಬೇಕಾಗುತ್ತದೆ. ಅದೂ ಅಲ್ಲದೆ ಶಬರಿ ಆಗಿನ ವಿದ್ಯಮಾನ ಘಟನಾವಳಿಗಳ ರಾಜಕೀಯವನ್ನರಿತವಳೂ ಅಲ್ಲ. ದಿವ್ಯಜ್ಞಾನಚಕ್ಷುಗಳಿಂದ ಬಂದವರನ್ನು ಗುರುತಿಸಲು ಯತ್ನಿಸಿದ ಸಿದ್ಧಪುರುಷಳೂ ಅಲ್ಲ. ಎಲ್ಲರಂತೆ ಸಾಮಾನ್ಯ

ಹೆಣ್ಣು. ಹಂಬಲಿಸುವ ಹಣ್ಣುಮುದುಕಿ. ಆಕೆಯ ದೃಷ್ಟಿಗೆ ರಾಮನೆಂದರೆ ಕೇವಲ ಶ್ರೀರಾಮನಲ್ಲ. ಸೀತಾಲಕ್ಷ್ಮಣ ಸಮೇತನಾದ ಹಸನ್ಮುಖದ ವ್ಯಕ್ತಿ. ಆದುದರಿಂದ 'ದೇವಮಾನವ ಸಕಲ ಲೋಕಸಂಸ್ತುತಿಯ ಬೆಂಬಲದ' ಸೀತೆ ರಾಮನೊಡನಿಲ್ಲದಿದ್ದರೆ ಅವಳು ಆ ಸೀತಾನಾಥನನ್ನರಿಯುವ ಬಗೆಯಾದರೂ ಎಂತು? 'ಕೈರಾತ ರೂಕ್ಷಾವತಾರ'ರಂತೆ ಕಾಣುತ್ತಿದ್ದ ರಾಮಲಕ್ಷ್ಮಣರಲ್ಲಿ ತನ್ನ ಊಹೆಯ ಶ್ರೀಮದ್ಗಾಂಭೀರ್ಯದ ವ್ಯಕ್ತಿಗಳನ್ನು ಆಕೆ ಹೇಗೆ ಕಾಣಬಲ್ಲಳು? ಆದುದರಿಂದ ನಿಜವಾದ ರಾಮಲಕ್ಷ್ಮಣರನ್ನು ಆಕೆ ಬೇಡರೆಂದು ತಿಳಿದುಕೊಳ್ಳುತ್ತಾಳೆ. "ಕೋಗಿಲೆಯ ಮರಿಯೆಂದು ತುಡುಕಿದರೆ ಕಾಗೆ ಮರಿ ಕೂಗಿದೊಲಾಯ್ತು" ಎಂದು ಆಕೆಯ ಬಗೆಯುಲ್ಲಸ ಕುಗ್ಗುತ್ತದೆ ನಿಜ. 'ಬರ್ಪ ಬೇಡರಿಗೆಲ್ಲ ಉಣಿಸಿತ್ತು, ಬೀಡಿತ್ತು, ಮೆಲ್ಪಾಸನೀವ ಅಡುಗೂಲಜ್ಜಿ'ಯೂ ಅಲ್ಲ ಆಕೆ. ಸಾಮಾನ್ಯ ಅಜ್ಜಿಯೊಬ್ಬಳಂತೆಯೇ ಅಸಹನೆ, ಕೋಪ, ನಿಷ್ಠುರವರ್ತನೆಗಳಿಗೆ ಆಕೆಯೇನೂ ಹೊರತಾದವಳಲ್ಲ. ಆದರೂ ಆಕೆಯ ಹೃದಯ ತಕ್ಷಣ–ಮುಂಜಾವಿನ ಮಂಜಿನ ಹನಿಯಂತೆ ಕರಗಿ ಹೋಗುತ್ತದೆ. ಕೋಪ ಹೊರಟು ಕನಿಕರ ಮೂಡುತ್ತದೆ. 'ಅಹಂ' ಓಡಿಹೋಗಿ ವಿನಯದ ಆವಿರ್ಭಾವವಾಗುತ್ತದೆ. "ಬಡವಳ್, ಇದ್ದುದನೀವೆ ಬನ್ನಿಂ' ಎಂಬ ಹೃದಯವೈಶಾಲ್ಯತೆ ವ್ಯಕ್ತವಾಗುತ್ತದೆ. ಆದರೂ ಕಾವು ಹೊಯ್ದಾಟ ಬೇಗುದಿಗಳಿಂದ ಜರ್ಝರಿತವಾದ ಮನಸ್ಸಿನ ನಿರಾಶೆಯ ನಿಟ್ಟುಸಿರು ಹೊಗೆಯಾಡುತ್ತದೆ.

"ಆರ ಸಂಪದಮ್ ಆರ್ಗೋ"

* * * *

ತನ್ನ ತಾಯ ಅಪ್ಪುಗೆಯ ತೊಟ್ಟಿಲಿನಲ್ಲಿ ಸುಖವಾಗಿರುವ ಭಾಗ್ಯದಿಂದ ಕೆಲ ವರ್ಷಗಳಿಂದ ವಿಮುಖನಾಗಿದ್ದ ಶ್ರೀರಾಮನಿಗೆ ಇಂದು ಶಬರಿ ಆ ಸ್ಥಾನದಲ್ಲಿ ನಿಂತು ಅದೇ ಸೌಖ್ಯವನ್ನು ಕರುಣಿಸಿದ್ದಾಳೆ. 'ಧೈರ್ಯವನ್ನು ನೈರಾಶ್ಯಕ್ಕೆ ಔತಣ ಕೊಟ್ಟು ಹತಾಶೆಯ ಮಂಕುಬಡಿದಂತೆ' ತನ್ನ ಕೆಚ್ಚು ಕಲಿತನಗಳನ್ನು ಸೂರೆಗೊಟ್ಟು ಗತಿಗೆಟ್ಟು ಧೃತಿಗೆಟ್ಟ ರಾಮನನ್ನು "ಪ್ರೀತಿಯಲ್ಲದೆ ಬೇರೆ ಭೇಷಜಂ ಪೋ ಭ್ರಾಂತಿ" ಎನ್ನುವಷ್ಟರಮಟ್ಟಿಗೆ ಶುಶ್ರೂಷೆ ಗೈದು ರಾಮಸೇವಾ ಸಾಧನೆಗೆ ತೊಡಗಿದ ಪ್ರೇಮಮಯಿಯಾಗಿದ್ದಾಳೆ. ಆದರೂ ಆಕೆಯ ಪ್ರೇಮೋತ್ಕರ್ಷತೆಯನ್ನು ಶ್ರದ್ಧಾನಿಷ್ಠೆಯನ್ನು ಸೇವಾತತ್ಪರತೆಯನ್ನು ಸಂಪೂರ್ಣವಾಗಿ ಒರೆಗೆ ಹಚ್ಚುವ ಗಭೀರ ಸನ್ನಿವೇಶ ಬರುತ್ತದೆ. ರಾಮನ ವಿಚಿತ್ರ ರುಜೆ ಹಿಂಗದೆ ಉಬ್ಬಳಿಸುತ್ತದೆ. ಆತನ 'ಗಗನೋಪಮಾಂಗದ ನೀಲಕಾಂತಿಯ ತರುಣ ವಿಗ್ರಹ' ಇಂದು ತೇಜಮಸುಳಿ, ಛೀಮವಪು ಕೃಶವಾಗಿ ಮನದ ಕೆಚ್ಚುಮುರುಟಿ ಅರೆಬಾಡಿದ ಬಳ್ಳಿಯಂತಾಗಿದೆ. ಆಕೆಯ ಪ್ರೇಮದ ನಿಸ್ಪೃಹತೆಯನ್ನು ಪರೀಕ್ಷಿಸುವ ಮಹಾ ಸಮಯ ಬಂದಿದೆ. ಆದರೆ ಆಕೆಯದು ಅಳ್ಳೆದೆಯಲ್ಲ. ನಿಜವಾದ ಪ್ರೇಮದ ಬಸಿರಿನಲ್ಲಿರುವ ತ್ಯಾಗದ ಅಂಶವನ್ನು ತೋರಿ ರಾಮನ ಮೇಲೆ ತನಗಿದ್ದ ಅವ್ಯಾಜ ಪ್ರೇಮದ ಸಾರ್ಥಕತೆಗಾಗಿ, ಆತನ ಸೇವಾಸಾಧನೆಗಾಗಿ ತನ್ನ

ಆಯುವನ್ನೇ ಎರೆದಿದ್ದಾಳೆ. ತಾನು ತಪೋದ್ವಾರದಿಂದ ಆರ್ಜಿಸಿದ್ದ ಅನಂತ ಶಕ್ತಿ ಪ್ರಭೆಗಳ ನೀರನ್ನೂ ರಾಮಾಭ್ಯುದಯದ ಸಸಿಗೆ ಎರೆದಿದ್ದಾಳೆ. ಈ ಲೋಕವೆಲ್ಲವನ್ನೂ ಪೊರೆಯುವ ಧರ್ಮಕ್ಕಾಗಿ ಸಾವನ್ನಪ್ಪಿದ್ದಾಳೆ. ರಾಮನ ರುಜೆಯ ವಿಷವನ್ನು ಹಿಂತೆಗೆದು ತಾನು ಕುಡಿದಿದ್ದಾಳೆ.

ಅದೂ ಎಂತಹ ಭವ್ಯವಾದ ಸಾವು! ಒಬ್ಬ ಮಹಾಪುರುಷನ ಎದುರಿನಲ್ಲೇ ಸಾಯುವಾಗಲೂ ಎಂತಹ ಮುತ್ತಿನಂತಹ ನುಡಿಗಳು !

" ಧನ್ಯೆಯಾಂ ಶ್ರೀರಾಮಚಂದ್ರ
ನೀಂ ಪ್ರೀತಿ ಪರಿಚರ್ಯೆಗೈಯುತಿರಲಾಂ
ಶಾಂತಿಯಿಂ ಸೇರಿದಪೆನಾಧ್ಯಾತ್ಮಮಂ "

ಬಯಸಿದರೂ ಸಿಗದ, ಆ ಅಪೂರ್ವ ಅಂತ್ಯದ ಕೊನೆಯ ಮಜಲು ಭಾವನಾತೀತವಾದ ರಸನಿಮಿಷ.

" ನುಡಿನುಡಿಯುತತಿ ಹರ್ಷಮುಖಿಯಾಗಿ, ಸೌಮಿತ್ರಿ
ರಾಮರಂ ಸುಖನೇತ್ರದಿಂ ನೋಡುತ್ತೆ ನೋಡುತ್ತೆ
ಕಣ್ಮುಚ್ಚಿದಳ್ ಆ ಅಮರ ಸನ್ಮಾನ್ಯೆ
ದೇವ ಸೀತಾನಾಥ ದಿವ್ಯಾಶ್ರುತೀರ್ಥ ಜಲ ಸಂಸ್ನಾತೆ
ಸಂಪೂತೆ ಮೇಣ್ ಶಿವ ಕಳೇಬರೆ ಧನ್ಯೆ "

ಕವಿಯ ಹೃದಯದ ' ಧನ್ಯೆ ' ಎಂಬ ದನಿಯೊಂದಿಗೇ ಸಹೃದಯರ ದನಿಗಳೂ ಸೇರುತ್ತವೆ.



# ಕೈಕೆಯ ಮೂರು ಚಿತ್ರಗಳು

ದೇ. ಜ. ಗೌ.

ತಾಯಿ, ನಿನಗಲ್ಲದಿನ್ನಾರ್ಗೆ, ಪೇಳ್
ಸಂಮಥಿತ ದಶರಥತನೂಜ ಜೀವಿತ ಕಥಾ
ಸಾಗರೋತ್ಥಿತ ಘೋರ ಗರಳಮಂ ಧರಿಸುವ
ಶಿವಾಶಿವ ಶ್ರೀಕಂಠ ಶಕ್ತಿ ?

ಶ್ರೀಮದ್ರಾಮಾಯಣದಲ್ಲಿ ವಾಚಕರ ನಿರ್ದಾಕ್ಷಿಣ್ಯಕ್ಕೂ ಅವಜ್ಞೆಗೂ ಅವಹೇಳನಕ್ಕೂ ಅಪವಾದಕ್ಕೂ ಪಾತ್ರರಾದ ಒಬ್ಬಿಬ್ಬರು ವ್ಯಕ್ತಿಗಳಲ್ಲಿ ಭರತಜನನಿಯಾದ ಕೈಕೆಯೂ ಒಬ್ಬಳು. ಧರ್ಮಜ್ಞನಾದ ಶ್ರೀರಾಮಚಂದ್ರನನ್ನು ಸೀತೆ ಲಕ್ಷ್ಮಣರೊಡನೆ ಕಾಡಿಗೋಡಿಸಿ ಪತಿಯನ್ನು ಸುರನಗರಿಗಟ್ಟಿ ಅರಮನೆಯ ಸುಖಶಾಂತಿಗಳನ್ನು ಕೆದಡಿ, ಊರು ಕೇರಿ ನಾಡುಗಳನ್ನು ದುಃಖದಲ್ಲಿ ಮುಳುಗಿಸಿ ಲೋಕ ಭಯಾನಕವೂ ಅತ್ಯದ್ಭುತವೂ ರೋಮಾಂಚಕಾರಿಯೂ ಆದ ಘಟನಾಪರಂಪರೆಗಳಿಗೆ ಕಾರಣವಾದ ಕೈಕೆಯ ನೃಶಂಸತ್ವ, ಲೋಕದ ಪ್ರಶಂಸೆಗೂ ಸಹಾನುಭೂತಿಗೂ ಅನುಕಂಪೆಗೂ ಪಾತ್ರವಾಗದೆ, ನಿಂದಾಸ್ಪದವಾಗಿದೆ, ತಿರಸ್ಕಾರ ಭಾಜನವಾಗಿದೆ. ರಾಮ ಸೀತೆಯರನ್ನು ಭರತ ಲಕ್ಷ್ಮಣರನ್ನು ಕೌಸಲ್ಯಾ ಸುಮಿತ್ರೆಯರನ್ನು ತೀರ ಹತ್ತಿರದಿಂದ ಕಂಡಿದ್ದ, ಅವರ ಮಹಿಮೋನ್ನತಿಯಿಂದ ಆದರ್ಶ ವರ್ತನೆಯಿಂದ ಸಂತೃಪ್ತರಾಗಿದ್ದ, ಅವರ ವಚನ ಪೀಯೂಷದಿಂದ ಪ್ರಮತ್ತರಾಗಿದ್ದ ಆಗಿನ ಜನ ಅರಮನೆಯ ಗೋಳಾಟ ಚೀರಾಟಗಳನ್ನು ರಾಮಸೀತೆಯರ ಸಂಕಟ ಪರಂಪರೆಗಳನ್ನು ಕಣ್ಣಾರೆ ಕಂಡು, ಕಿವಿಯಾರೆ ಕೇಳಿ, ಶೋಕ ಸಂತಪ್ತರಾಗಿ ಭಯಗ್ರಸ್ತರಾಗಿ, ಅಷ್ಟಕ್ಕೆಲ್ಲ ನೇರವಾದ ಕಾರಣವೆನಿಸಿದ ಶ್ರೀರಾಮನ ಮಲತಾಯಿ ಕೈಕೆಯನ್ನು ದಾಸಿ ಮಂಥರೆಯ ಒಡತಿಯನ್ನು ನೃಶಂಸೆಯೆಂದು ಕರೆದುದು ಅಸಹಜವೇನಲ್ಲ. ತ್ರೇತೆ ದ್ವಾಪರಗಳು ಸಂದು ಕಲಿಯುಗ ಬಂದು ಬಹುದೂರ ಸಾಗಿದ್ದರೂ, ರಾಮ ರಾಮಾಯಣ ರಾಮನಾಮಗಳಲ್ಲಿ ಶ್ರದ್ಧಾಭಕ್ತಿಗಳು ಕಾಲಕ್ರಮೇಣ ವರ್ಧಿಸುತ್ತಿದ್ದರೂ, ಈಗಿನ ಜನ, ಯಾವುವೋ ವಿಷನಿಮಿಷದಲ್ಲಿ ಪುತ್ರಾಭಿಮಾನದ ಅನನ್ಯ ಪ್ರೇಮದ ಹುಚ್ಚುಹೊನಲಿನಲ್ಲಿ ಮುಳುಗಿ ಕಣ್ಗೆಟ್ಟು ಬಗೆಗೆಟ್ಟು ಬೆಪ್ಪಳಾಗಿ ಕೆಪ್ಪಳಾಗಿ ಹಿಂದು ಮುಂದುಗಳನ್ನು ವಾಸ್ತವ ಪರಿಸ್ಥಿತಿಯನ್ನು ಗಮನಿಸದೆ ದುಡುಕಿ ಮುಗ್ಗರಿಸಿ, ಅನಿರೀಕ್ಷಿತವೂ ಹೃದಯ ವಿದ್ರಾವಕಾರಿಯೂ ನಾರಕೀಯವೂ ಆದ ಘಟನಾಪರಂಪರೆಗಳ ಜಟಿಲ ಜಾಲದಲ್ಲಿ ಸಿಕ್ಕಿ ನೊಂದು ಬೆಂದು, ಕೌಸಲ್ಯಾತ್ಮಜನ ಜನಕನಂದಿನಿಯ ಊರ್ಮಿಳಾಧವನ, ಜೊತೆಗೆ ರಘುಕುಲಖಮಣಿ ದಶರಥನ ಪ್ರಜಾಕೋಟಿಯ ಸಮಸ್ತಲೋಕದ ದುಃಖಹಾಲಾಹಲವನ್ನೆಲ್ಲ ತಾನೊಬ್ಬಳೆ ನೀರವ

ವಾಗಿ ನುಂಗಿಕೊಂಡು ಸದಾವಕುಂಠನವತಿಯಾಗಿ ಮೂಲೆ ಹಿಡಿದು, ರಾಮಸೀತೆಯರ ಕ್ಷೇಮಕ್ಕೋಸ್ಕರವೆ ತಪೋನಿರತೆಯಾಗಿದ್ದ ಭರತಮಾತೆಯನ್ನು–ವಿರಾಧ ಕಬಂಧಾದಿ ರಾಕ್ಷಸರ ಶಾಪವಿಮೋಚನೆಗೆ ಶಬರಿ ತ್ರಿಜಟೆಯರ ಇಷ್ಟಾರ್ಥಸಿದ್ಧಿಗೆ ಮೂಲಕಾರಣಳಾಗಿ, ದಶರಥರಾಮ ಲೋಕಾಭಿರಾಮನಾಗಲು ನೆಪವಾದ ದಶರಥಪ್ರಿಯರಾಣಿಯನ್ನು, ನಿಂದಿಸುವುದಾಗಲಿ, ಅವಳ ಹೆಸರನ್ನು ಬಯ್ಗುಳದ ಗಾದೆನುಡಿಯಾಗಿ ಗ್ರಹಿಸುವುದಾಗಲಿ, ಸಹಜವಾಗಿ ಕಾಣುವುದಿಲ್ಲ. ಇಕ್ಷ್ವಾಕುವಂಶವನ್ನು ಸಂಪೂರ್ಣವಾಗಿ ಬಲ್ಲ, ದಶರಥನ ಜನನಾಭಿವೃದ್ಧಿಗಳನ್ನು ಮಾತ್ರವಲ್ಲದೆ ಸೀತಾರಾಮರ ಜೀವನವನ್ನು ಆದ್ಯಂತವಾಗಿ ಕಣ್ಣಾರೆ ಕಂಡಿದ್ದ, ಜೊತೆಗೆ ಕೈಕೆಯ ಕುಲಗೋತ್ರಗಳನ್ನು ಸ್ವರೂಪ ಸ್ವಭಾವಗಳನ್ನು ಕಂಡೂ ಕೇಳಿಯೂ ಇದ್ದ ಆದಿಕವಿಯೂ ಕವಿಕುಲಗುರುವೂ ಆದ ವಾಲ್ಮೀಕಿಮಹರ್ಷಿಯೇ ಅವಳನ್ನು ಕೊನೆಕೊನೆಗೆ ನಿಂದಿಸುವ ಗೋಜಿಗೆ ಹೋಗುವುದಿಲ್ಲ. ಎಂದೋ ಒಮ್ಮೆ ಅವಳ ಹೆಸರು ಎತ್ತಿ ಅಲ್ಲಿಗೇ ಕೈಬಿಡುತ್ತಾನೆ. ಊರ್ಮಿಳೆಯ ಬಗ್ಗೆ ಆದಿಕವಿ ತಾಳಿದ ಸಹಾನುಭೂತಿಯ ಮೌನ ಅರ್ಥಗರ್ಭಿತವಾಗಿಯೂ ಅನುಚಿತ-ದೂರವಾಗಿಯೂ ಅಪಾರ್ಥಭಾಜನವಾಗದೆಯೂ ಇದ್ದರೆ, ಕೈಕೆಯ ಬಗ್ಗೆ ತಾಳಿದ ನಿಷ್ಠುರಮೌನ ಸಂದೇಹಕ್ಕೂ ಅಪಾರ್ಥಕ್ಕೂ ಎಡೆಕೊಡುವಂತೆ ಕಾಣುತ್ತದೆ. ಆದರೆ ಒಳಹೊಕ್ಕು ನೋಡಿದಾಗ ಈ ನಿಷ್ಠುರ ಶಿಲಾಮೌನದ ಗರ್ಭಾಂತರಾಳದಲ್ಲಿ ಸಹಾನುಭೂತಿ ಗುಪ್ತವಾಗಿ ಪ್ರವಿಸುತ್ತಿದೆಯೆಂಬುದು ಗೋಚರವಾಗುತ್ತದೆ.

ರಾಮಾಯಣದ ಆ ರುದ್ರರಮಣೀಯ ನಾಟಕಕ್ಕೆ ಅಂಕುರಾರ್ಪಣೆ ಮಾಡಿದವರು ಯಾರು? ಅಲ್ಲಿಯ ಘನ ಘೋರ ಘಟನಾವಳಿಗಳಿಗೆ ಕೈಕೆಯೊಬ್ಬಳೆ ಹೊಣೆಗಾರ್ತಿಯೆ? ತನ್ನ ಅಪರಾಧದ ಭಾರವನ್ನು ಅವಳೊಬ್ಬಳೆ ಹೊರಬೇಕೆ? ಮಳೆಗೆ ಪ್ರತ್ಯಕ್ಷ ಮತ್ತು ಅತ್ಯಾಸನ್ನ ಕಾರಣ ಮೋಡ; ಸೂರ್ಯನ ಬಿಸಿಲು, ಆವಿ, ಭೂಮಿಯ ಆಕರ್ಷಣೆ ಮೊದಲಾದುವು ಪರೋಕ್ಷ ಮತ್ತು ದೂರಗತ ಕಾರಣ. ಹೀಗೆ ಪ್ರತಿಯೊಂದು ಕಾರ್ಯದ ಬೆನ್ನಹಿಂದೆ ಪ್ರತ್ಯಕ್ಷವೂ ಇಂದ್ರಿಯಗ್ರಾಹ್ಯವೂ ಆದ ಕಾರಣಗಳ ಜೊತೆಗೆ ಅಗೋಚರವೂ ಇಂದ್ರಿಯಾತೀತವೂ ಆದ ಕಾರಣ ಪರಂಪರೆಗಳಿರುತ್ತವೆ. ಅನೇಕವೇಳೆ ಅಗೋಚರ ಕಾರಣಗಳೇ ಗೋಚರ ಕಾರಣಗಳಿಗಿಂತ ಪ್ರಮುಖವೂ ಸಹಜವೂ ಸತ್ಯವೂ ಆಗಿರಬಹುದು. ಶುಭಕಾರ್ಯಗಳಿಗೆಲ್ಲ ಶುಭಕಾರಣಗಳನ್ನೆ ಅರಸುವುದೂ ಅಶುಭ ಕಾರಣಗಳನ್ನು ತ್ಯಜಿಸುವುದೂ, ಕಷ್ಟ ಸಂಕಷ್ಟಗಳನ್ನೆಲ್ಲ ಅಶುಭವೆಂದು ಹೆಸರಿಡುವುದೂ, ಭಗವತ್ಕೃಪೆ ಎಂದೂ ಕ್ಲೇಶರೂಪಿಯಲ್ಲ, ಸದಾ ಮಧುರರೂಪಿಯೆಂದು ಭಾವಿಸುವುದೂ ಮಾನವನ ಸಹಜ ದೌರ್ಬಲ್ಯ. ಇಂಥ ದೌರ್ಬಲ್ಯ ಪಕ್ಷಪಾತಮನೋಭಾವಕ್ಕೂ, ವಿವೇಕರಾಹಿತ್ಯಕ್ಕೂ, ಅಸಂಯಮಕ್ಕೂ, ಅನೌದಾರ್ಯಕ್ಕೂ ಎಡೆಗೊಡುತ್ತದೆ. ಕಷ್ಟಸುಖಗಳು ಒಂದೇ ನಾಣ್ಯದ ಎರಡು ಮುಖಗಳು, ಏಕಮಾತ್ರ ಘಟನೆಯಿಂದ ಶುಭಾಶುಭಫಲಗಳು ಅನಿವಾರ್ಯ, ಶಾಪವೆ ವರವಾಗಿ ವರವೆ ಶಾಪವಾಗುವ ರೋಮಾಂಚಕಾರಿ ಘಟನೆಗಳು ಅಪರೂಪವಲ್ಲ, ಒಬ್ಬನಿಗೆ ಅನುಕೂಲವಾದುದು

ಮತ್ತೊಬ್ಬನಿಗೆ ಪ್ರತಿಕೂಲವೆಂಬ ವಿಷಯ ಎಲ್ಲರಿಗೂ ಅನುಭವದ ಸಂಗತಿಯಾಗಿದೆ.

ಈ ತತ್ತ್ವದ ಹಿನ್ನೆಲೆಯಲ್ಲಿ ರಾಮಾಯಣದ ಘಟನೆಗಳನ್ನು ಪರಿಶೀಲಿಸಿದಾಗ ಹಲವಾರು ಪ್ರಶ್ನೆಗಳು ಉದ್ಭವಿಸುತ್ತವೆ. ರಾಮಾಯಣದ ಮುಂದಿನ ಮಹದ್ಘಟನೆಗಳಿಗೆ ಕೈಕೆಯ ಕುಲಗೋತ್ರ ಕಾರಣವೆ? ಅವಳ ಸೌಂದರ್ಯವೆ? ದಶರಥನ ಅಸಂಯಮ ವರ್ತನೆಯೆ? ಕೌಸಲ್ಯೆಯ ಮಾತ್ಸರ್ಯವೆ? ಕೈಕೆಯ ಪುತ್ರವಾತ್ಸಲ್ಯವೆ? ದಾಸಿ ಮಂಥರೆಯ ನೀಚತನವೆ? ಶ್ರೀರಾಮನ ಔದಾರ್ಯವೆ? ಸೀತೆಯ ಸೌಂದರ್ಯವೆ? ಲಕ್ಷ್ಮಣನ ಸೌಕುಮಾರ್ಯವೆ? ಶೂರ್ಪನಖಿಯ ಪ್ರಲೋಭನೆಯೆ? ರಾವಣನ ಪತಿತ ಬುದ್ಧಿಯೆ? ಇವಿಷ್ಟೆ ಅಲ್ಲದೆ ಅನ್ಯಕಾರಣಗಳೂ ಉಂಟೆ? ದೇವತೆಗಳ ಅಭೀಪ್ಸೆಯೊ? ಅಂಧಕ ಮುನಿಯ ಶಾಪವೊ? ವಿರಾಧ ಕಬಂಧರ ಮೊರೆಯೊ? ಆಂಜನೇಯನ ಇಚ್ಛೆಯೊ? ವಾಲಿ ರಾವಣರ ಸುಪ್ತ ಚೇತನದ ಬಯಕೆಯೊ? ಹೀಗೆ ಲೌಕಿಕ ಬುದ್ಧಿ ಜೋಡಿಸುವ ಪ್ರಶ್ನೆಗಳ ಜೊತೆಗೆ ಹಲವಾರು ಅನ್ಯ ಪ್ರಶ್ನೆಗಳನ್ನೂ ಪಂಕ್ತಿಗೂಡಿಸಬಹುದು. ಈ ಪ್ರಶ್ನೆಗಳ ಉದ್ದೇಶ ಪಾಪಿಯ ಪಾಪವನ್ನು ಪ್ರೋಷಿಸುವುದಲ್ಲ; ಅಪರಾಧಿಯನ್ನು ಅನ್ಯಾಯವಾಗಿ ಅಪರಾಧದಿಂದ ಮುಕ್ತಗೊಳಿಸುವುದಲ್ಲ; ವಸ್ತುವಿನ ನಿಜಸ್ಥಿತಿಯ ಅನ್ವೇಷಣೆ ಮತ್ತು ಪಾಪಿಯ ಉದ್ಧಾರ.

ಮೊದಲೆ ಇಬ್ಬರು ಪ್ರಮುಖ ಪತ್ನಿಯರಿರುವಾಗ ದಶರಥ ಮೂರನೆಯೊಬ್ಬಳನ್ನು ತರುವುದು–ಅದೂ ಇಳಿವಯಸ್ಸಿನಲ್ಲಿ-ಬಹುಶಃ ಇಂದಿನ ನಾಗರಿಕ ರುಚಿಗೆ ಹಿಡಿಸದಿರಬಹುದು. ಇಬ್ಬರು ಹೆಂಡತಿಯರಲ್ಲೂ ಮಕ್ಕಳಿಲ್ಲದೆ ಇಕ್ಷ್ವಾಕುವಂಶದ ಲತೆ ಮುರುಟಿ ಹೋಗುವ ಪುನ್ನರಕ ಪ್ರಾಪ್ತವಾಗುವ ಭೀತಿಪಿಶಾಚಿ ದಶದಿಕ್ಕುಗಳಿಗೂ ಬಾಯಿ ತೆರೆದು ಅಬ್ಬರಿಸುತ್ತಿರುವಾಗ ಆಶಾವಾದಿಯಾದ ಪ್ರೀತಿಯ ದೊರೆ ಎಳೆಯ ಚಲುವೆಯೊಬ್ಬಳನ್ನು ತಂದುದು ಯಾವ ವಿಧದಿಂದಲಾದರೂ ಆಗಿನ ನಾಗರಿಕರುಚಿಯ ಶೌಚಕ್ಕೆ ಕಳಂಕವಾಗಿ ಕಂಡಿರಲಾರದು; ಇದ್ದರೂ ಕೆಲಸವಿಲ್ಲದ ಲಂಗುಲಗಾಮಿಲ್ಲದ ಹಿಡಿಮಂದಿ ಬಾಯಿ ಹರಿಬಿಟ್ಟಿರಬಹುದು. ಅದರಿಂದ ದಶರಥನನ್ನು ಮಹಾಪರಾಧಿಯೆಂದು ನಿರ್ಣಯಿಸಲಾಗದು.

ಇಳಿವಯಸ್ಸಿನಲ್ಲಿ ಹೊಸಹರೆಯದ ಹೆಣ್ಣು ಮನೆಗೆ ಬಂದಾಗ ಸಂಭವಿಸಬಹುದಾದ ಅನರ್ಥಪರಂಪರೆಯನ್ನು ಮಾನವ ಸ್ವಭಾವವನ್ನು ಸ್ವಲ್ಪವಾದರೂ ಬಲ್ಲ ಬುದ್ಧಿ ಸುಲಭವಾಗಿ ಗ್ರಹಿಸಬಲ್ಲುದು. ಎಲ್ಲೆಡೆಯೂ ಸ್ವಾರ್ಥತಾಮೂಲವಾದ ಈರ್ಷ್ಯಾಫಣಿ ಹೆಡೆಬಿಚ್ಚುತ್ತದೆ. ಪತಿಯ ಪ್ರೇಮ ಕಾಮಕ್ಕೆ ತಿರುಗಿ, ಕಾಮ ಕಡೆಕಡೆಗೆ ಕರಗಿ ಚಪಲ ಮಾತ್ರವಾಗುಳಿಯುತ್ತದೆ. ಹಿರಿಯ ಹೆಂಡತಿಯರಿಂದ ಗಂಡ ದೂರವಾಗುತ್ತಾನೆ. ಅಧಿಕಾರಕ್ಕಾಗಿ ಹೋರಾಟ ಮೊದಲಾಗುತ್ತದೆ. ಕೌಸಲ್ಯಾ ಸುಮಿತ್ರೆಯರು ತುಂಬ ಅತೃಪ್ತಿಯಿಂದ ವ್ಯಸನದಿಂದ ದಿನಗಳನ್ನು ಎಣಿಸುತ್ತ ಬಾಯಿಯಲ್ಲಿ ಅಕ್ಕಿಕಾಳು ಹಾಕಿಕೊಂಡು ಕಾಲ ಕಳೆದಿರಬೇಕು. ವನವಾಸೋದ್ಯುಕ್ತನಾದ ಶ್ರೀ ರಾಮುನನ್ನು ಕುರಿತು

ಶೋಕಗದ್ಗದೆಯಾದ ತಾಯಿ ಹೇಳುವ ಮಾತುಗಳಲ್ಲಿ ಇದು ಎದ್ದು ಕಾಣುತ್ತದೆ.* ಪಟ್ಟದ ರಾಣಿಯನ್ನು ನಿರ್ಲಕ್ಷ್ಯದಿಂದ ನೋಡಿದ್ದಕ್ಕಾಗಿ ದಶರಥನೂ ಆಮೇಲೆ ಪಶ್ಚಾತ್ತಾಪ ಪಡುತ್ತಾನೆ.† ಮನೆಯಲ್ಲಿ 'ಸಂಪು' ನಡೆಯುತ್ತದೆ; ಗುಂಪುಗಳು ಬೆಳೆಯುತ್ತವೆ. ಈ ಅನುಭವ ಎಷ್ಟು ಪುರಾತನವೋ ಅಷ್ಟೇ ನೂತನ. ಯಾವಾಗಲೂ ತನ್ನ ಸನ್ನಿಧಾನದಲ್ಲಿಯೇ ಇದ್ದು 'ದೇವಿ' 'ಪ್ರಾಣಾಧಿಕೆ' ಎಂದು ಮುಂತಾಗಿ ಲಲ್ಲೈಸುವ ಸೇವಿಸುವ, ತನ್ನ ಮನಸ್ಸಿನಲ್ಲಿ ಬಯಕೆ ಅಂಕುರಿಸುವುದೆ ತಡ ಅದನ್ನು ಸಿದ್ಧಿಗೂಡಿಸುವ ರಮಣನಿರುವಾಗ ಕೊಬ್ಬಿ ಬೆಳೆದ ಯಾವ ಹೆಣ್ಣು ತಾನೆ ಬಿಮ್ಮನೆ ಬೀಗದಿರುತ್ತಾಳೆ? ಕೈಕೆ ಇದಕ್ಕೆ ಹೊರತಲ್ಲ. ಅವಳನ್ನು ಜನನಿಗಿಂತ ಮಿಗಿಲಾಗಿ ಕಾಣುತ್ತಿದ್ದವನೂ ನಿರಸೂಯನೂ ಸಂಯಮಿಯೂ ಆದ ಶ್ರೀರಾಮ ಅರಣ್ಯವಾಸದ ಪ್ರಥಮ ದಿನದಂದು ಲಕ್ಷ್ಮಣನನ್ನು ಕುರಿತು ಹೇಳುವ ಮಾತಿನಲ್ಲಿ ಕೈಕೆಯ ನಿಜಸ್ವಭಾವ ಪ್ರತಿಬಿಂಬಿತವಾಗಿದೆ.‡ ಸೌಂದರ್ಯಗರ್ವಿಯೂ ಕ್ಷುದ್ರಕರ್ಮಾಸಕ್ತೆಯೂ ಆದ ಕೈಕೆ ಕೌಸಲ್ಯಾ ಸುಮಿತ್ರೆಯರಿಗೆ ತುಂಬ ಕಷ್ಟ ಕೊಡದಿರಲಾರಳು; ಅವರ ಮೇಲೆ ದ್ವೇಷ ಸಾಧಿಸದಿರಲಾರಳು ಎಂದು ಹೇಳುವ ಶ್ರೀ ರಾಮನ ಮಾತಿನಲ್ಲಿ ಸತ್ಯವಿಲ್ಲದಿಲ್ಲ. ಅವಳ ಹೊರಗೊಳಗುಗಳನ್ನೆಲ್ಲ ಬಲ್ಲ ದಶರಥ ಅವಳನ್ನು 'ಛನ್ನಾಗ್ನಿ ಕಲ್ಪಯಾ' ಎಂದು ದೂಷಿಸುತ್ತಾನೆ. ಅವಳ ಕುಲಗೋತ್ರವೂ ಅಷ್ಟು ಒಳ್ಳೆಯದಲ್ಲವೆಂದು ಕಾಣುತ್ತದೆ. 'ಬೇವಿನ ಮರವನ್ನು ಹಾಲು ಹಾಕಿ ಬೆಳಸಿದರೆ ಕಹಿ ಹೋದೀತೆ; ಹಾಗೆಯೆ ನೀಚ ವರ್ತನೆಯ ತಾಯಿಯ ಹೊಟ್ಟೆಯಲ್ಲಿ ಸದ್ಗುಣಿಯನ್ನು ಹೇಗೆ ನಿರೀಕ್ಷಿಸುವುದು.+ ಎಂದು ವೃದ್ಧಶ್ರೇಷ್ಠ ಸುಮಂತ್ರನ ಬಾಯಿಂದ ಕೇಳುವಾಗ ಅವಳ ಬಗ್ಗೆ ಕ್ರೋಧ ಮೂಡುತ್ತದೆ. ಪುತ್ರ ಶೋಕಾರ್ತಳಾದ ಕೌಸಲ್ಯಾದೇವಿ ಸುಭಗಳೂ ಲಬ್ಧಕಾಮಿಯೂ ಆದ ಅವಳಿಗೆ ದುಷ್ಟಾಹಿ ಕಂಡಂತೆ ಹೆದರುತ್ತಾಳೆ. ಪಿತೃಮರಣದುಃಖದಗ್ಧನೂ ಅಗ್ರಜವಿರಹವಿಹ್ವ

---

*ನದೃಷ್ಟಪೂರ್ವಂ ಕಲ್ಯಾಣಂ ಸುಖಂ ವಾ ಪತಿ ಪೌರುಷೇ
ಅಪಿ ಪುತ್ರೇಪಿ ಪಶ್ಯೇಯಮಿತಿ ರಾಮಾಸ್ಥಿತಂ ಮಯಾ
ಸಾಬಹೂನ್ಯ ಮನೋಜ್ಞಾನಿ ವಾಕ್ಯಾನಿ ಹೃದಯಚ್ಛಿದಾಂ
ಅಹಂ ಶ್ರೋಷ್ಯೆ ಸಪತ್ನೀನಾಮವರಾಣಾಂ ವರಾಸತೀ (ಅಯೋ ೨೦; ೩೮-೩೯)

†ನಮಯಾ ಸತ್ಕೃತಾ ದೇವೀ ಸತ್ಕಾರಾರ್ಹಾಕೃತೇ ತವ (ಅಯೋ ೧೨-೬೦)

‡ಅಪೀದಾನೀಂ ನ ಕೈಕೇಯಿಾ ಸೌಭಾಗ್ಯ ಮದಮೋಹಿತಾ
ಕೌಸಲ್ಯಾಂಚ ಸುಮಿತ್ರಾಂಚ ಸಂಪ್ರಬಾಧೇತ ಮತ್ಕೃತೇ (ಅಯೋ ೫೩-೧೫)
ಕ್ಷುದ್ರಕರ್ಮಾಹಿ ಕೈಕೇಯಿಾ ದ್ವೇಷ್ಯಮನ್ಯಾಯ್ಯಮಾಚರೇತ್
ಪರಿದದ್ಯಾಹಿ ಧರ್ಮಜ್ಞೇ ಭರತೇ ಮಮ ಮಾತರಂ (ಅಯೋ ೫೩-೧೮)

+ಆಮ್ರಂ ಛಿತ್ವಾ ಕುಠಾರೇಣ ನಿಂಬಂ ಪರಿಚರೇತ್ತು ಯಃ
ಯಶ್ಚೈನಂ ಪಯಸಾ ಸಿಂಚೇನ್ನೈವಾಸ್ಯ ಮಧುರೋ ಭವೇತ್
ಅಭಿಜಾತ್ಯಂ ಹಿ ತೇ ಮನ್ಯೇ ಯಥಾ ಮಾತುಸ್ತಥೈವಚ
ನಹಿ ನಿಂಬಾತ್ಸ್ರವೇತ್ ಕ್ಷೌದ್ರಂ ಲೋಕೇ ನಿಗದಿತಂ ವಚಃ (ಅಯೋ ೩೫; ೧೭-೧೫)

ಲನೂ ಆದ ಭರತ 'ಐಶ್ವರ್ಯಕಾಮಿ', 'ನೃಶಂಸೆ', 'ಪಾಪಸಂಕಲ್ಪೆ', 'ಅಕೃತ ಪ್ರಜ್ಞೆ', 'ಕೋಪಿಷ್ಠೆ', 'ಅನಾರ್ಯೆ', 'ದೃಪ್ತಾಂ ಸುಭಗಮಾನಿನೀಂ' ಎಂದು ಹಳಿಯುತ್ತಾನೆ. ಈ ನಿಂದೋಕ್ತಿಗಳು ಕೋಪೋದ್ರೇಕದ ಫಲವಾದರೂ, ಸತ್ಯದೂರವಲ್ಲ. ತಕ್ಕ ಮಟ್ಟಿಗೆ ತಥ್ಯಾಂಶವಿದ್ದೇ ಇದೆ.

ಅವಳ ತಾಯಿ ಎಂಥವಳೇ ಆಗಿರಲಿ, ಕುಲಗೋತ್ರ ಎಂಥವೇ ಆಗಿರಲಿ, ಕೈಹಿಡಿದ ಗಂಡನ ಮತ್ತು ಅವನ ವಂಶದ ಮಹಿಮೆ ಗರಿಮೆಗಳು, ಅವಿಚ್ಛಿನ್ನವಾದ ಸಂಸ್ಕೃತಿ ಪರಂಪರೆಗೆ ನೆಲೆವೀಡಾದ ರಘುಕುಲದ ರಾಜಶ್ರೀಪ್ಮರ ಅರಮನೆಯ ಪವಿತ್ರವಾತಾವರಣ, ಹಳೆಯ ಪಳೆಯ ನೆನಕೆಗಳು ಕೈಕೆಯ ಜೀವನವನ್ನು ತಿದ್ದುತ್ತಿದ್ದುವು, ಅವಳ ವ್ಯಕ್ತಿತ್ವವನ್ನು ರೂಪಿಸುತ್ತಿದ್ದುವು. ಕ್ರಮೇಣ ರಘುಕುಲದ ಸೊಸೆಯಾಗುವ ಯೋಗ್ಯತೆಯನ್ನೂ ಪಡೆದಳು. ಆದರೂ ಸೌಂದರ್ಯಮದ ಮತ್ತು ಸ್ವಾಭಿಮಾನ ಮರೆಯಾಗಿರಲಿಲ್ಲ. ಆಗಾಗ್ಗೆ ಕೌಸಲ್ಯೆ ಸುಮಿತ್ರೆಯರ ಚುಚ್ಚುನುಡಿ ಅಣಕ ನುಡಿಗಳು ಆ ಹೊಸಬಿಯನ್ನು ರೇಗಿಸುತ್ತಿದ್ದಿರಬೇಕು. ಎರಡು ಕಡೆಯ ಕುಜ್ಜಿಯರ ತಂದುಹಾಕುತನ ದಿನೇ ದಿನೇ ಅಮಂಗಳದ ಕಡೆಗೆ ಒಯ್ದಿರಬೇಕು. ಆದರೂ ದಶರಥನ ಸೌಜನ್ಯದಿಂದ ಮತ್ತು ನಿರ್ಲಕ್ಷ್ಯ ಮನೋಭಾವದಿಂದ ಪರಿಸ್ಥಿತಿ ಎಂದೂ ಹದಗೆಟ್ಟಿರಲಿಲ್ಲ. ಪುತ್ರ ಜನನವಾದ ಮೇಲಂತೂ ಎಲ್ಲರ ದ್ವೇಷಾಸೂಯೆಗಳು ಮಕ್ಕಳ ನಲಿದಾಟ ಮುದ್ದಾಟಗಳಲ್ಲಿ ಲಾಲನೆ ಪಾಲನೆಗಳಲ್ಲಿ ಮರೆತು ಹೋಗಿರಬೇಕು. ಪ್ರತಿಯೊಬ್ಬರೂ ಎಲ್ಲ ಮಕ್ಕಳನ್ನೂ ಒಂದೇ ರೀತಿಯಾಗಿ ಕಾಣುತ್ತಿದ್ದಿರಬೇಕು. ದಶರಥನ ಕಾಮ ಚಾಪಲ್ಯ ಪುತ್ರವಾತ್ಸಲ್ಯವಾಗಿ ಪರಿಣಮಿಸಿರಬೇಕು. ಶ್ರೀ ರಾಮನ ಚೆಲುವು ಒಲವುಗಳು ನಡೆನುಡಿಗಳು ಕೈಕೆ ಮೊದಲಾಗಿ ಎಲ್ಲರನ್ನೂ ಮುಗ್ಧಗೊಳಿಸಿರಬೇಕು. ಅದನ್ನು ನೋಡಿ ದಾಸಿಯರಿಗೆ ಸ್ವಲ್ಪ ಖೇದವೂ ಆಗಿರಬೇಕು!

ಕೈಕೆ ಶ್ರೀ ರಾಮನನ್ನು ತನ್ನ ಮಗನಿಗಿಂತ ಮಿಗಿಲಾಗಿ ಕಾಣುತ್ತಿದ್ದಳು. ತಾಟಕೀಮರ್ದನ ಶಿವಧನುರ್ಭಂಗ ಘಟನೆಗಳಿಂದ ಅವನು ಮತ್ತಷ್ಟು ಆಪ್ಯಾಯಮಾನವಾದನು. ಅಂಥವನಿಗೆ ಯೌವರಾಜ್ಯಾಭಿಷೇಕಮಾಡುವಾಗ ಯಾರಿಗೆ ತಾನೆ ಸಂತೋಷವಾಗುವುದಿಲ್ಲ? ಮಂಥರೆಯ ಬಾಯಿಂದ ಸುದ್ದಿ ತಿಳಿದಾಗ ಸಂಹೃಷ್ಟೆಯೂ ವಿಸ್ಮಯಾನ್ವಿತೆಯೂ ಆಗಿ ಅಮೂಲ್ಯ ಆಭರಣವನ್ನು ಬಹುಮಾನ ನೀಡುತ್ತಾಳೆ. "ಶ್ರೀ ರಾಮನಿಗೂ ಭರತನಿಗೂ ನಾನೆಂದೂ ಪಕ್ಷಪಾತಮಾಡಿದವಳಲ್ಲ; ನನಗೆ ಇದಕ್ಕಿಂತಲೂ ಹೆಚ್ಚಿನ ಪ್ರಿಯ ವಾರ್ತೆಯಿಲ್ಲ. ಇದಕ್ಕಾಗಿ ಇನ್ನೇನಾದರು ವರ ಕೇಳು" ಎಂದು ಹರ್ಷೋನ್ಮತ್ತಳಾಗಿ ನುಡಿಯುತ್ತಾಳೆ. *1 ಇದು ಬರಿಯ ಓಷ್ಠ ಚಾಪಲ್ಯದ ಮಾತಲ್ಲ. ಇದಕ್ಕೆ ರಾಮ ದಶರಥರೇ ಸಾಕ್ಷಿ. ಕ್ರೋಧಾಂಧನಾದ ಲಕ್ಷ್ಮಣನನ್ನು ಸಮಾಧಾನಪಡಿಸಲು

---

*1 ರಾಮೇವಾ ಭರತೇವಾಹಂ ವಿಶೇಷಂ ನೋಪಲಕ್ಷಯೇ
ತಸ್ಮಾತ್ತುಷ್ಟಾಸ್ಮಿ ಯದ್ರಾಜಾ ರಾಮಂ ರಾಜ್ಯೇಭಿಷೇಕ್ಷ್ಯಸಿ

ರಾಮ ಹೇಳುವ ಮಾತುಗಳಲ್ಲಿ ಇದರ ಯಥಾರ್ಥತೆಯನ್ನು ಕಾಣಬಹುದು.†

ಇಂಥ ಕೈಕೆ ರಾಮನನ್ನು ಅರಣ್ಯಕ್ಕಟ್ಟುವಳೆಂದರೆ ನಂಬಲು ಕಷ್ಟವಾದ ವಿಷಯ. ರಾಮನೆ ಹೇಳುವಂತೆ ಅದೆಲ್ಲ ವಿಧಿಮಾಯೆ!‡ ಅದಿಲ್ಲದಿದ್ದರೆ ಕೈಕೆಗೆ ಆ ವಿಧವಾದ ಬುದ್ಧಿ ತಲೆದೋರುತ್ತಿತ್ತೆ ಎಂದು ಅವನಿಗೆ ಆಶ್ಚರ್ಯವಾಗುತ್ತದೆ. ಮಂಥರೆ ವಿಧಿಯ ಕೈಯ ವೀಣೆಯಾಗುತ್ತಾಳೆ. ಹೊಟ್ಟೆಕಿಚ್ಚಿನ ತತ್ತ್ರಿಯಾದ ಅವಳಿಗೆ ಕೌಸಲ್ಯೆಯ ದಾಸಿಯರ ಏಳ್ಗೆ ಸಹಿಸಲಿಲ್ಲ. ಎಷ್ಟಾದರೂ ಹೀನ ಕುಲಜೆ! ಅವಳು ರಾಮನಿಗಿಂತ ಮೊದಲು ಕೌಸಲ್ಯೆಗಿಂತ ಮೊದಲು, ದಶರಥನಿಗಿಂತ ಮೊದಲು ಕೈಕೆಯನ್ನು ನೋಡಿದ್ದವಳು; ಹೆತ್ತಿಲ್ಲದಿದ್ದರೂ ಹೊತ್ತು ಅತ್ತು ಸಾಕಿದವಳು; ಅವಳೆ ಗತಿ ಮತಿ ಪತಿ ಆಯು ಎಂದು ಪೊರೆದವಳು; ಕೈಕೆಯ ಅಬಲ ಸಬಲನಾಡಿಗಳನ್ನೆಲ್ಲ ಹಿಡಿದು ನೋಡಿದ್ದವಳು. ಕೈಕೆಯನ್ನು ಬುಟ್ಟಿಗೆ ಹಾಕಿಕೊಳ್ಳುವ ಮೋಡಿ ಅವಳೊಬ್ಬಳಿಗೇ ಗೊತ್ತು. ಯಾವುದೋ ಅನಿಷ್ಟನಕ್ಷತ್ರದಲ್ಲಿ ಪೀಠಿಕೆಹಾಕಿ ತನ್ನ ವಶ ಮಾಡಿಕೊಂಡು, ತನ್ನಿಚ್ಛೆಗೆ ತಕ್ಕಂತೆ ಕುಣಿಸಿಕೊಳ್ಳುತ್ತಾಳೆ. ಕೈಕೆ ಇಳಿಜಾರಿನ ಕೆಸರಿನಲ್ಲಿ ಕಾಲಿಟ್ಟ ಮೇಲೆ ಅವಳಿಗೆ ಗುಂಡಿಯೆ ಗುರಿಯಾಗುತ್ತದೆ. ಕಷ್ಟವನ್ನೆ ಕಾಣದ ಸಂಯಮವನ್ನೆ ಅರಿಯದ ಆ ಚಪಲೆ ಮೊದಲ ಬಾರಿಗೆ ಕಳ್ಳುಕುಡಿದವಳಂತೆ ವರ್ತಿಸುತ್ತಾಳೆ. ವಿಧಿಯ ಗುರಿ ಮುಟ್ಟುವವರೆಗೆ ಅವುಲಿಳಿಯಲೇ ಇಲ್ಲ.

ಕೈಕೆಯ ಕೈತವಕ್ಕೆ ಸಿಕ್ಕಿ ದಶರಥ ನುಗ್ಗಾಗುತ್ತಾನೆ. ಆ ವಿಷಮ ಪರಿಸ್ಥಿತಿಯಿಂದ ಅವರನ್ನು ಯಾರೂ ಉದ್ಧರಿಸುವಂತಿಲ್ಲ. ಒಂದು ಕಡೆ ಸತ್ಯಸಂಧನಾದ ದೊರೆ; ಮತ್ತೊಂದು ಕಡೆ ಹಠಮಾರಿಯಾದ ರಾಣಿ. ಈ ಇಕ್ಕಟ್ಟಿನಲ್ಲಿ ಮಂತ್ರಿಗಳ ಮಂತ್ರತಂತ್ರಗಳೆಲ್ಲ ಅತಂತ್ರವಾಗುತ್ತವೆ. ಅಪರ ವಯಸ್ಸಿನಲ್ಲಿ ಕಾಡಿ ಬೇಡಿ ಮಕ್ಕಳನ್ನು ಪಡೆದ ಮುಪ್ಪುದೊರೆಯ ಎದೆಗುದಿ ಯಾರಿಗೆ ತಾನೆ ಅರಿವಾಗುತ್ತದೆ? ಅದೂರದೃಷ್ಟಿಯ ಪುತ್ರವ್ಯಾಮೋಹಭರಿತಳಾದ ಕೈಕೆಯನ್ನು ಅದು ಕರಗಿಸಲಿಲ್ಲ. ಇಬ್ಬರನ್ನೂ ಹುಚ್ಚು

---

*2ನಮೇಪರಂ ಕಿಂಚಿದಿತ ಸ್ತ್ವಯಾ ಪುನಃ
ಪ್ರಿಯಂ ಪ್ರಿಯಾರ್ಹೇ ಸುವಚಂ ವಚಃ ಪರಂ
ತಥಾಹ್ಯ ವೋಚಸ್ತ್ವಮತಃ ಪ್ರಿಯೋತ್ತರಂ
ಪರಂವರಂತೇ ಪ್ರದದಾಮಿತಂ ವೃಣು. (ಅಯೋ ೭ ; ೩೫-೩೬)

†ಜಾನಾಸಿಹಿ ಯಥಾ ಸೌಮ್ಯ ನಮಾತೃಷು ಮಮಾಂತರಂ
ಭೂತಪೂರ್ವಂ ವಿಶೇಷೋವಾ ತಸ್ಯಾಮಯಿ ಸುತೇಪಿ ವಾ
ಸೋಭಿಷೇಕ ನಿವೃತ್ಯರ್ಥೈಃ ಪ್ರವಾಸಾರ್ಥೈಶ್ಚ ದುರ್ವಚೈಃ
ಉಗ್ರೈರ್ವಾಕ್ಯೈ ರಹಂ ತಸ್ಯಾ ನಾನ್ಯದ್ದೈವಾತ್ಸಮರ್ಥಯೇ
(ಅಯೋ ೨೨ ;೧೭-೧೮)

‡ಕೈಕೇಯ್ಯಾಃ ಪ್ರತಿಪತ್ತಿರ್ಹಿ ಕಥಂ ಸ್ಯಾನ್ಮಮ ಪೀಡನೇ
ಯದಿ ಭಾವೋ ನದೈವೋಯಂ ಕೃತಾಂತನಿಹಿತೋ ಭವೇತ್ (ಅಯೋ ೨೨-೭೬)

ಆವರಿಸುತ್ತದೆ. ಅವನ ಮಾತು ಇವಳೆದೆಗೆ ಇವಳ ಮಾತು ಅವನೆದೆಗೆ ಶಲ್ಯವಾಗುತ್ತದೆ. ಮದುವೆಯಾಗುವಾಗಲೆ ಕಾಮಾಸಕ್ತನಾದ ದೊರೆ ಕೇಕಯರಾಜನಿಗೆ ಮಾತುಕೊಟ್ಟಿದ್ದ "ನಿನ್ನ ಮಗಳ ಮಗನಿಗೇ ಪಟ್ಟಕಟ್ಟುತ್ತೇನೆ" ಎಂದು.* ಜೊತೆಗೆ ದೇವಾಸುರ ಯುದ್ಧದಲ್ಲಿ ಅವಳು ತೋರಿದ ಅಪೂರ್ವ ಸಾಹಸಕ್ಕೂ ಮಾಡಿದ ಅಮೂಲ್ಯ ಸಹಾಯಕ್ಕೂ ಮೆಚ್ಚಿ ವರಗಳನ್ನು ಕರುಣಿಸಿದ್ದ. ಯಾವುದಕ್ಕೂ ಕೊರತೆಯಿಲ್ಲದಿರುವಾಗ ವರಗಳಿಂದ ಏನು ಪ್ರಯೋಜನ? ಸಮಯ ಬಂದಾಗ ಉಪಯೋಗಿಸಿಕೊಳ್ಳುವುದಾಗಿ ಹೇಳಿದ್ದಳು. ವರವೆ ಶಾಪವಾಗಿ ಪರಿಣಮಿಸುತ್ತದೆಂದು ಅವನು ಆಗ ಊಹಿಸಿರಲಿಲ್ಲ. ಈಗ ಕಡಕಲಿನ ಪ್ರಸಂಗದಲ್ಲಿ ಸಿಕ್ಕು ಪೇಚಾಡುತ್ತಿದ್ದಾನೆ. ಸ್ವಾಭಿಮಾನಿಯೂ ದರ್ಪಿಷ್ಠೆಯೂ ಆದ ಕೈಕೆ ದಶರಥನ ನಿಂದೆಯಿಂದ ಮತ್ತಷ್ಟು ಉದ್ವಿಗ್ನಗೊಂಡು ಹಠಮಾರಿಯಾಗುವಳೆ ಹೊರತು ಕುಲನಾರಿಯಾಗುವುದಿಲ್ಲ. ಅವನನ್ನು ವಾಗ್ಭ್ರಷ್ಟನೆಂದೂ ಕರೆಯುವ ಸಾಹಸಗೈಯುತ್ತಾಳೆ. ಆಗ ಸಕಲ ಗುಣಾಭರಣನಾದ ಶ್ರೀ ರಾಮನೆ ಮುಂದಿನ ಗತಿಯನ್ನು ನಿರ್ಣಯಿಸಬೇಕಾಗುತ್ತದೆ. ತಂದೆಯ ವಾಕ್ಯಪರಿಪಾಲನೆಗಾಗಿ ಅರಣ್ಯಯಾತ್ರೆಯನ್ನು ಕೈಗೊಳ್ಳಬೇಕಾಗುತ್ತದೆ. ಕೈಕೆಯ ಪ್ರೇರಣೆ ಘಟನಾವಳಿಗಳನ್ನು ತೀವ್ರಗೊಳಿಸುತ್ತದೆ. ದಶರಥ ಮನಸ್ಸಿಲ್ಲದ ಮನಸ್ಸಿನಿಂದ "ರಾಮನೊಡನೆ ಅರಣ್ಯಕ್ಕೆ ಸಕಲ ಪರಿವಾರವೂ ತೆರಳಲಿ; ಆನೆ ಕುದುರೆಗಳು ಸಾಕಾದಷ್ಟು ಸಂಪತ್ಸಾಮಗ್ರಿಗಳನ್ನು ಹೊತ್ತುಕೊಂಡು ನಡೆಯಲಿ" ಎಂದು ಉಸುರಿದಾಗ ಕೈಕೆ ಸಂಕೋಚವಿಲ್ಲದೆ ಮರ್ಯಾದೆಯ ಹದ್ದುಮೀರಿ "ಪಾಳು ಅಯೋಧ್ಯೆಯನ್ನು ನನ್ನ ಮಗ ಆಳಬೇಕೆ" ಎನ್ನುತ್ತಾಳೆ. ಮತ್ತೆ ನಯವಿದನಾದ ಶ್ರೀರಾಮ ನಡುವೆ ಬಾಯಿಹಾಕಿ "ಗುದ್ದಲಿ, ಮಂಕರಿ, ನಾರುಡೆ ಇಷ್ಟೇ ನಮಗೆ ಸಾಕು" ಎನ್ನಲು ಲಜ್ಜಾಹೀನೆಯಾದ ಕೈಕೆ ತಟಕ್ಕನೆ ಅವುಗಳನ್ನು ತಂದು ಮುಂದಿಡುತ್ತಾಳೆ. ಇಲ್ಲಿಗೆ ಅವಳ ದೌಷ್ಟ್ಯ ಮುಗಿಲು ಮುಟ್ಟುತ್ತದೆ.

ಕೋಪದರ್ಪಗಳ ಪರ್ವತಾಗ್ರವನ್ನೇರಿದ ಕೈಕೆ ಅಪ್ರತಿಹತವಾದ ಪ್ರಚಂಡ ಝಂಝಾವಾತಕ್ಕೆ ಸಿಕ್ಕಿ ತರತರನೆ ನಡುಗುತ್ತ ದುಃಖದ ಪ್ರಪಾತಕ್ಕುರುಳುತ್ತಾಳೆ. ಇಷ್ಟೆಲ್ಲ ಘಟನೆಗಳು ಚಿಟಿಕೆವೇಳೆಯಲ್ಲಿ, ಮಾಯೆಯ ಮಬ್ಬು ಕವಿದ ವಿಷಘಳಿಗೆಯಲ್ಲಿ ಸಾಗಿಹೋಗಿವೆ. ಮಾಯೆಯ ಛಾಯೆ ಸರಿದಾಗ ಕೈಮೀರಿಹೋಗಿದೆ. ಇದರಲ್ಲಿ ಕೈಕೆಯ ಜವಾಬ್ದಾರಿ ಎಷ್ಟಿದೆ? ಪ್ರಪಂಚದಲ್ಲಿ ನಡೆಯುವ ಪ್ರತಿಯೊಂದು ಘಟನೆಯೂ ಸರ್ವತಂತ್ರ ಸ್ವತಂತ್ರವಾದುದಲ್ಲ, ಅದು ಕಾಲದೇಶಗಳಿಂದ ಬದ್ಧವಾಗಿರುವಂತೆ ಕಂಡರೂ, ಕಾಲದೇಶಾತೀತವಾದುದು. ಇಲ್ಲಿ ಕೈಕೆ ವಿಧಿಯ ಕೈಗೂಸು. ಅಂದರೆ ಅವಳಲ್ಲಿ ತಪ್ಪಿಲ್ಲವೆಂದಲ್ಲ. ತಾನು ಈ ಮಟ್ಟಕ್ಕಿಳಿಯುತ್ತೇನೆಂದು ಅವಳು ಹಿಂದಿನ

---

*ಪುರಾ ಭ್ರಾತಃ ಪಿತಾನಸ್ಸಮಾತರಂ ತೇಸ್ಸಮುದ್ವಹನ್
ಮಾತಾಮಹೇ ಸಮಾಶ್ರೌಷೀ ದ್ರಾಜ್ಯಶುಲ್ಕಮನುತ್ತಮಂ (ಅಯೋ ೧೦೭-೩)

ದಿನ ಯೋಚಿಸಿಯೇ ಇರಲಿಲ್ಲ. ಅವಳು ಅಂಥ ದುರಾಚಾರಿಣಿಯೂ ಅಲ್ಲ; ಅದರಲ್ಲಿಯೂ ತನ್ನ ಪ್ರಾಣಕ್ಕಿಂತ ಮಿಗಿಲಾಗಿ ಪ್ರೀತಿಸುತ್ತಿದ್ದ ಪತಿಗೆ ಅಪಚಾರವೆಣಿಸುವ ಮನಸ್ಸೂ ಇರಲಿಲ್ಲ. ವಿನಾಶಕಾಲಕ್ಕೆ ವಿಪರೀತ ಬುದ್ಧಿ ಮೊಳೆಯುತ್ತದೆ.* ಅಂಧಕ ಮುನಿಯ ಶಾಪ, ದಶರಥನ ಸತ್ಯಸಂಧತೆ, ವಿರಾಧ ಕಬಂಧ ಶಬರಿಯರ ಮೊರೆ, ರಾವಣನ ಕಾತರತೆ-ಇವೆಲ್ಲ ಸಂಚುಹೂಡಿ ಕೈಕೆಗೆ ಮಂಕುಬೂದಿ ಎರಚಿರಬೇಕೆಂದು ಕಾಣುತ್ತದೆ. ಯಾವುದು ಮೊದಲು ಅಹಿತವೆಂದು ಕಂಡಿತೊ, ಯಾರು ಮೊದಲು ವಧಾರ್ಹ ಎಂದು ಕಂಡರೊ ಕೊನೆಗೆ ಅದೇ ಹಿತಕರವಾಗಿ ಅವರೇ ಪೂಜಾರ್ಹರಾಗಿ ಕಾಣುತ್ತಾರೆ.

ದಶರಥನ ಪ್ರಾಣಪಕ್ಷಿ ಹಾರಿಹೋದಾಗ ಕೌಸಲ್ಯಾದಿ ರಾಣಿಯರೊಡನೆ ಕೈಕೆಯೂ ಮೂರ್ಛೆಹೊಂದುತ್ತಾಳೆ. ಮೂರ್ಛೆ ತಿಳಿದೆದ್ದಾಗ ಅವಳ ಸ್ವಾಭಿಮಾನ ದರ್ಪಗಳ ಕಿಲ್ಬಿಷ ಕಣ್ಣೀರಿನ ಗಂಗಾಸ್ನಾನದಿಂದ ಪ್ಲಾವಿತವಾಗಿ, ನಾರಾಯಣಾಂಶಸಂಭೂತನಾದ ಭರತನ ಜನನಿಯೆ ಆಗುತ್ತಾಳೆ. ಯಾರ ಶ್ರೇಯಸ್ಸಿಗಾಗಿ ತನ್ನೆಲ್ಲ ಪುಣ್ಯವನ್ನೂ ತೊರೆದು ಪತಿತಳಾಗಲು ಸಿದ್ಧವಾಗಿದ್ದಳೊ ಆ ಭರತನ ಕರ್ಕಶವೂ ಅನುದಾರವೂ ಆದ ನಿಂದೋಕ್ತಿಯ ವಜ್ರಪಾತದಿಂದ ಇದ್ದ ಅಲ್ಪಸ್ವಲ್ಪ ಸ್ವಾಭಿಮಾನವೂ ಜಜ್ಝರಿತವಾಗುತ್ತದೆ. ಅನಂತರ ಅವಳು ದೇಹಧಾರಣೆ ಮಾಡಿಕೊಂಡು ಉಳಿದಷ್ಟೇ ಅವಳ ಮಹತ್ತಿಗೆ ಸಾಕ್ಷಿಧ್ವಜವಾಗಿದೆ. ಪತಿ ತೀರಿಕೊಂಡಾಗ ಸವತಿಯರು ಕಾರಿದ ನಂಜೆಷ್ಟು? ದೊರೆಯನ್ನು ಕಳೆದುಕೊಂಡು ಅನಾಥರಾದ ಊರಿನ ಜನ ಹಾಕಿದ ಶಾಪವೆಷ್ಟು? ಕೋಸಲದ ಯಾವ ಮೂಲೆಗೆ ಹೋದರೂ ನಿಂದೆಯ ಸುರಿಮಳೆಯೇ! ಗೋಳು ಸುರಿಯುತ್ತಿದ್ದ ಅರಮನೆಯ ಪ್ರತಿಯೊಂದು ವಸ್ತುವೂ ಅವಳನ್ನು ನಿಂದಿಸುವಂತಿದೆ! ಸಾಕಿದ ಹಕ್ಕಿ ಆಗಸದ ಹಕ್ಕಿ ಎಲ್ಲವೂ ಅವಳನ್ನು ನಿಂದಿಸುವಂತೆ ಸಾರುತ್ತಿದ್ದುವು. ಎಲ್ಲ ನಿಂದೆಯನ್ನೂ ಕಣ್ಮುಚ್ಚಿ ನುಂಗಿಕೊಂಡಳು. ಭರತ ರಾಮನನ್ನು ಹಿಂದಿರುಗಿಸಲು ಹೊರಟಾಗ ಅವನ ಇಷ್ಟಾರ್ಥ ಫಲಿಸಲೆಂದು ಅವಳು ಎಷ್ಟು ದೇವತೆಗಳಿಗೆ ಕೈಮುಗಿದಳೊ! ಚಿತ್ರಕೂಟದಲ್ಲಿ ರಾಮ ಸೀತೆ ಲಕ್ಷ್ಮಣರನ್ನು ತಲೆಯೆತ್ತಿ ನೋಡುವ ಸಾಹಸ ಮಾಡಿದಳೆ? ಅದೂ ಇರಲಿ-ಮುಂದೇನಾಯಿತು?.....ಕವಿ ಕುಲಗುರು ಸೀತಾರಾಮರ ದುಃಖದಲ್ಲಿ ಕೈಕೆಯನ್ನು ಸಂಪೂರ್ಣವಾಗಿ ಮರೆತುಬಿಟ್ಟಿದ್ದಾನೆ!

---

*ನಹಿ ಕಿಂಚಿದಯುಕ್ತಂ ವಾ ವಿಪ್ರಿಯಂ ವಾ ಪುರಾ ಮಮ
ಅಕರೋಸ್ತ್ವಂ ವಿಶಾಲಾಕ್ಷಿ ತೇನ ನಶ್ರದ್ಧಧಾಮ್ಯಹಂ (ಅಯೋ ೧೨-೨೦)
ಭೂತೋಪಹತ ಚಿತ್ತೇವ ಬ್ರುವಂತೀ ಮಾಂ ನಲಜ್ಜಸೇ
ಶೀಲವ್ಯಸನಮೇ ತತ್ತೇ ನಾಭಿಜಾನಾಮ್ಯಹಂ ಪುರಾ (ಅಯೋ ೧೨-೫೭)

ತಂದೆ ಗಳಿಸಿಟ್ಟ ಆಸ್ತಿಯನ್ನು ಜೋಪಾನವಾಗಿ ಸದುಪಯೋಗಪಡಿಸಿಕೊಳ್ಳುವ, ಅಭಿವೃದ್ಧಿಪಡಿಸುವ ವಿವೇಕಿಪುತ್ರನಂತೆ ಭಾಸ ರಾಮಾಯಣದಲ್ಲಿ ಗೌರವಭಾಜನರಾದರೂ ಉಪೇಕ್ಷಿತರಾದಂತಿರುವ ಕೈಕೆ ಭರತರ ಪಾತ್ರಗಳನ್ನು ಸಮುಜ್ವಲವಾಗಿ ಚಿತ್ರಿಸಿದ್ದಾನೆ. ತಂದೆ ಸಲ್ಲಿಸಬೇಕಾಗಿದ್ದ ಕೈಂಕರ್ಯವನ್ನು ಮಗ ನೆರವೇರಿಸುವಂತೆ ಭಾಸ ಅವರಿಗೆ ಸಲ್ಲಬೇಕಾಗಿದ್ದ ಗೌರವವನ್ನು ಸಲ್ಲಿಸಿದ್ದಾನೆ. ರಾಮಾಯಣದಲ್ಲಿ ಕಾಣುವ ಅಸ್ಪಷ್ಟತೆ ವಿಪರೀತಾರ್ಥಕ್ಕೆಡೆಗೊಡದಂತೆ ಕೈಕೆಯ ನಿಜಸ್ವರೂಪವನ್ನು ಪರಿಚಯಿಸಿಕೊಟ್ಟು, ವಾಲ್ಮೀಕಿಗೆ ಉಚಿತ ಮರ್ಯಾದೆಯನ್ನು ಸಲ್ಲಿಸಿದ್ದಾನೆ. ಕೈಕೆ ಭರತರಿಗಾಗಿಯೆ ಅವನು ರಾಮಾಯಣದ ಕಥೆಯನ್ನು ಆರಿಸಿಕೊಂಡಂತಿದೆ. ಲೋಕದ ದುರುದ್ದೇಶ ಪೂರಿತವಾದ ಅನೌದಾರ್ಯದ ಟೀಕೆಗಳನ್ನು ಪರಿಹರಿಸಲೋಸುಗವೆ ಕೈಕೆಯ ಮೇಲಣ ಸಾನುಕ್ರೋಶದಿಂದ ಯಜ್ಞಫಲ ಪ್ರತಿಮಾನಾಟಕಗಳನ್ನು ಬರೆದಂತಿದೆ. ಭಾಸನ ಕಲ್ಪನೆಯ ದಶರಥನ ಸಂಸಾರ ಸ್ನೇಹಸೌಜನ್ಯಗಳಿಂದ ರಂಜಿತವಾಗಿದ್ದ ಪ್ರೇಮಾಗಾರ. ರಾಮನ ಅಭ್ಯುದಯ ವಿನಾ ಅನ್ಯವನ್ನು ಬಗೆಯದೆ, ವಿವಾಹಕಾಲದ ರಾಜ್ಯಶುಲ್ಕದ ವಾಗ್ದಾನವನ್ನು ನೆನಪಿಗೆ ತಂದುಕೊಂಡು ಪರಿತಪಿಸುತ್ತಿರುವ ಪತಿಯನ್ನು ವಚನಭ್ರಷ್ಟತ್ವದಿಂದ ಪಾರುಮಾಡಿದ ಮಹಾನುಭಾವೆ ಕೈಕೆ.* ಆದರೆ ಮಂಥರೆಯ ದುರ್ಬೋಧನೆಯಿಂದ ಪಾರಾಗಲಾರದೆ, ಅವಳ ಮನಸ್ಸನ್ನೂ ನೋಯಿಸದಂತೆ ಇತರರಿಗೂ ಹೆಚ್ಚು ಅನ್ಯಾಯವಾಗದಂತೆ ಗಂಟುನಂಟು ಎರಡೂ ಉಳಿಯುವಂತೆ ರಾಮನಿಗೆ ಕೇವಲ ಹದಿನಾಲ್ಕು ದಿನಗಳ ವನವಾಸವನ್ನು ಅಪೇಕ್ಷಿಸಿದ ಧರ್ಮಭೀರು. ಆದರೆ ದುರ್ದೈವದಿಂದ ಬಾಯಿತಪ್ಪಿ 'ದಿನ' 'ವರ್ಷ'ವಾಯಿತೆಂದು ಮಗನ ಮುಂದೆ ಗುರುಜನ ಸಾಕ್ಷಿಯಾಗಿ ತಪ್ಪೊಪ್ಪಿಕೊಂಡ ಮಹಾಮಾತೆ. ಶ್ರೀ ರಾಮನಿಗೂ ಕೈಕೆಯ ನಿರ್ವ್ಯಾಜ ಪ್ರೇಮದಲ್ಲಿ ನಿಷ್ಕಪಟ ಸ್ನೇಹದಲ್ಲಿ ಅನುಮಾನ ಲವಲೇಶವಿಲ್ಲ. ತನ್ನ ಮಗನಿಗಾಗಿ ರಾಜ್ಯವನ್ನು ಕೇಳುವ ಚಿಕ್ಕಮ್ಮನಲ್ಲಿ ಅವನಿಗೆ ತಪ್ಪು ಕಾಣಿಸದು.†

---

*ಶ್ರೀ ಎ. ಆರ್. ಕೃ ಅವರ 'ಭಾಸಕವಿ' ಗ್ರಂಥದಲ್ಲಿ ಬರುವ 'ಯಜ್ಞಫಲ' ನಾಟಕದ ವಿಮರ್ಶೆಯನ್ನು ನೋಡಿ.

†ಅವಳ ಪತಿಯಿಂದ್ರಂಗೆಣೆ
ಯಾವಳ ಸುತನೆನಿಸುತಾನೆ ಮೇಣಿರ್ದಪೆನೋ
ಆವಾಸೆಯವಳ್ಗಿರ್ಪುದು
ಭಾವಿಸುವೊಡೆ ತಾನಕಾರ್ಯಮಂ ನೆರೆಗೆಯ್ಯಲ್
ಅರಸಂ ಕನ್ಯಾಶುಲ್ಕಕೆ
ವರಪಣಮೆಂದಿತ್ತ ರಾಜ್ಯಮಂ ತನಯಂಗೆಂ
ದುರೆ ಬೇಳ್ಪುದವಳ ಲೋಭಮೆ
ಕರಮೆನ್ನದದಲ್ತೆ ಕೊಳ್ಳೆ ತಮ್ಮನ ಸೊತ್ತಂ
(ಕನ್ನಡ ಪ್ರತಿಮಾನಾಟಕ—ಡಾ॥ ಕೆ. ಕೃಷ್ಣಮೂರ್ತಿ)

"ಭರ್ನ್ನಾಗ್ನಿ ಕಲ್ಪಯಾ" ಎಂಬ ಗಂಡನ ದೂಷಣೆಗೊಳಗಾದ ಕುಲಘಾತಿನಿಯಲ್ಲ ಇವಳು. ಗಂಡನನ್ನು ಮತ್ತೆ ಮತ್ತೆ ಭರ್ತ್ಸನೆಗೈಯುವ ಕುತ್ಸಿತ ಬುದ್ಧಿಯ ಹಠಮಾರಿ ತನದ ಗಯ್ಯಾಳಿಯಲ್ಲ. ರಾಮನನ್ನು ಬಾಯಿಬಿಟ್ಟು ಅರಣ್ಯಕ್ಕೆ ಹೋಗೆಂದ ಕಠೋರೆಯೂ ಅಲ್ಲ; ರಾಮಸೀತೆಯರಿಗೆ ವಲ್ಕಲವನ್ನೊದಗಿಸಿದ ನೃಶಂಸೆಯೂ ಅಲ್ಲ. ಅಪರಾಧಿನಿಯಲ್ಲದಿದ್ದರೂ ಮಗನ ನಿಂದೆಯ ನಂಜನ್ನು ತುಟಿಪಿಟಕ್ಕೆನ್ನದೆ ನುಂಗಿಕೊಂಡ ವಿಷಾಪಹಾರಿಣಿ. ಸೀತೆಯು ಪಟ್ಟ ಸಂಕಟವನ್ನು ಕೇಳಿ ನೊಂದು ಬೆಂದು ಗೋಳ್ಗರೆದ ಕರುಣಾಮಯಿ. ಕೊನೆಗೆ ಶ್ರೀ ರಾಮನ ಪಟ್ಟೋತ್ಸವದಲ್ಲಿ ಸಡಗರದಿಂದ ಓಡಾಡಿ ನಲಿದಾಡಿದ ಮಹಾಮಾತೆ. ಅವಳು ಸವತಿಯರಿಗೆ ಅಚ್ಚುಮೆಚ್ಚಾದವಳು, ಗುರುಜನರಿಗೆ ಇಷ್ಟವಾದವಳು, ಪ್ರಜೆಗಳಿಗೆ ಬೇಕಾದವಳು. ಭಾಸನ ಇತರ ಸ್ತ್ರೀಯರಂತೆ ಇವಳೂ ಮಿತಭಾಷಿಣಿ.

## ೩

ಪಾಪಿಗುದ್ಧಾರಮಿಹುದೌ
ಸೃಷ್ಟಿಯ ಮಹದ್‌ವ್ಯೂಹ ರಚನೆಯೊಳ್......

ಮೂಲ ರಾಮಾಯಣದ ಕೈಕೆಯ ಪಾತ್ರ ಸಮಗ್ರವಾಗಿ ವಿಕಾಸಗೊಂಡಿಲ್ಲ. ಅವಳ ಪೂರ್ವವಯಸ್ಸಿನ ಅಪರಿಪಕ್ವ ಜೀವನದ ರೂಪಸ್ವರೂಪಗಳು ರೇಖೆಗೊಂಡಿರುವಂತೆ ಅವಳ ಪರಿಣತ ವಯಸ್ಸಿನ ಉದಾತ್ತ ಜೀವನ ಚಿತ್ರಿತವಾಗಿಲ್ಲ. ಕೇವಲ ಊಹೆಯಿಂದಲೆ ಅವಳ ಜೀವನದ ಪರಿವರ್ತನೆಯನ್ನು ಚಿತ್ರಿಸಿಕೊಳ್ಳಬೇಕಾಗಿದೆ. ಭಾಸಕವಿ ಕೈಕೆಯ ಉದಾತ್ತತೆಯನ್ನು ಮನಗಂಡು ಬಗೆತಣಿಯುವಂತೆ ಚಿತ್ರಿಸಿದ್ದರೂ ಅವಳ ಮನಸ್ಸಿನ ವಿಶ್ಲೇಷಣೆಗಾಗಲಿ ಸಾಧನೆಯ ಸೂಕ್ಷ್ಮ ವಿವರಗಳಿಗಾಗಲಿ ಕೈಹಾಕಿಲ್ಲ. ಶ್ರೀ ರಾಮನ ವಿಪಿನವಾಸಕ್ಕೆ ದಶರಥನ ಮರಣಕ್ಕೆ ಕರ್ಮರೂಪಿಯಾದ ವಿಧಿಶಕ್ತಿ ಕಾರಣ, ನಿಜ. ಆದರೆ ಜೀವಿಗೆ ಇಚ್ಛೆಯ ಸ್ವಾತಂತ್ರ್ಯವೂ ಇದೆಯೆಂಬುದನ್ನು ಮರೆಯಲಾಗದು. ಅದರ ಉದ್ಧಾರ ಅದರ ಕೈಲಿದೆ. ಅದು ಸ್ಥಾಣುವಲ್ಲ. ಪ್ರತಿಕ್ಷಣವೂ ಅದು ಮುಂದುವರಿಯುತ್ತದೆ. ಉದ್ಧಾರಾಕಾಂಕ್ಷೆಯೇ ಜೀವನಕ್ಕೆ ಸ್ಫೂರ್ತಿದಾಯಕ. ಈ ತತ್ತ್ವ ಶ್ರೀ ರಾಮಾಯಣ ದರ್ಶನದ ಕೈಕೆಯಲ್ಲಿ ಪ್ರತಿಫಲಿತವಾಗಿದೆ. ಮೂಲರಾಮಾಯಣದ ಮತ್ತು ಭಾಸನ ಕೈಕೆಯರು ಇಲ್ಲಿ ಸಮಾವೇಶಗೊಂಡಿದ್ದರೂ, ಈ ಕೈಕೆ ಅವರಿಂದ ತೀರ ಭಿನ್ನಳು. ಎರಡು ಮೂಲವಸ್ತುಗಳ ಸಂಯೋಗದಿಂದ ಜನಿಸುವ ವಸ್ತು ತದ್ವಿರುದ್ಧವಲ್ಲದಿದ್ದರೂ ತೀರ ಹೊಸದಲ್ಲವೆ?

ದಶರಥನಿಗೆ ಮೂವರು ಪತ್ನಿಯರಿದ್ದರೂ, 'ಚೆಲ್ವಿನ್ನೈಸೆತ್ತಿರ್ದುದೆನೆ ಮೆರೆವ ಕೈಕೆ'ಯಲ್ಲಿ ಅವನಿಗೆ ವಿಶೇಷ ಅನುರಾಗವಿದ್ದರೂ, ಸಂಸಾರದಲ್ಲಿ ಸ್ನೇಹ ತುಂಬಿತುಳುಕುತ್ತಿದ್ದಂತೆ ಕಾಣುತ್ತದೆ. ಕೈಕೆ ಶಿಶು ರಾಮನಲ್ಲಿಟ್ಟಿದ್ದ ಪ್ರೇಮದಿಂದ ಇದು ಸೂಚ್ಯವಾಗು

ತ್ತದೆ. ಒಮ್ಮೆ ಶಿಶು ಗಗನದ ಚಂದ್ರನಕಡೆ ಕೈತೋರಿ ಅದು ಬೇಕೆಂದು ಹಠಹಿಡಿದು ಗೋಳಾಡುತ್ತದೆ. ಎಷ್ಟು ಅಂಗಲಾಚಿ ಬೇಡಿದರೂ, ಏನು ಕೊಟ್ಟರೂ ಬೇಡವಾಗುತ್ತದೆ. ಕೈಕೆಯೂ ತನ್ನ ಸಾಮರ್ಥ್ಯವನೆಲ್ಲ ವ್ಯಯಮಾಡಿ ಗೋಳ್ಗರೆದು ಸುಮ್ಮನಿಸಲು ಮಾಡಿದ ಪ್ರಯತ್ನ ಸಾಗದಾಗುತ್ತದೆ. ದಶರಥ ಬರಲು ಕಂಬನಿಮಿಡಿದು ನಡೆದುದನ್ನು ನಿವೇದಿಸುತ್ತಾಳೆ. ಚಕ್ರವರ್ತಿಗೂ ಸಾಕೊಸಾಕಾಗುತ್ತದೆ; ಎಷ್ಟು ಸಂಪತ್ತಿದ್ದರೂ ಮಗನ ಬಯಕೆಯನ್ನು ಈಡೇರಿಸಲಾಗಲಿಲ್ಲ. ನೆರೆದ ಜನ ಚಕಿತರಾಗಿ ನೋಡುತ್ತಿದ್ದಂತೆ, ವಿರೂಪದ ವೃದ್ಧೆ ಮಂಥರೆ ಮಡಿಲಿಂದ ಮುಕುರವನ್ನು ತೆಗೆದು ಕೈಕೆಯ ಕೈಗೆ ಕೊಟ್ಟು ಕಿವಿಯಲ್ಲಿ ಏನನ್ನೊ ಉಸುರುತ್ತಾಳೆ. ಕೈಕೆ ಕನ್ನಡಿಯನ್ನು ರೋದಿಸುತ್ತಿದ್ದ ರಾಮನ ಮುಂದೆ ಹಿಡಿಯುತ್ತಾಳೆ. ಕನ್ನಡಿಯಲ್ಲಿ ಚಂದ್ರನ ಪ್ರತಿಬಿಂಬವನ್ನು ಕಂಡ ರಾಮ ಚಂದ್ರನೆ ಕೈಗೆ ಸಿಕ್ಕಿದಂತೆ ಕುಣಿಕುಣಿದು ನಲಿನಲಿದು, ಮಂಥರೆ ಕೈಕೆಯರೆ ತನ್ನ ಮುಂದಿನ ಅಭ್ಯುದಯಕ್ಕೆ ಕಾರಣರೆಂಬ ಕಟುಸತ್ಯವನ್ನು ಪ್ರಕಟಿಪಡಿಸುತ್ತಾನೆ.

ಪ್ರಬುದ್ಧೆಯೂ ಅಮರಸುಂದರಿಯೂ ದಶರಥನ ಪ್ರಾಣಪ್ರಿಯೆಯೂ ಆದ ಕೈಕೆ ವಿರೂಪೆ ಕುಬ್ಜೆಯ ಕೈತವಕ್ಕೆ ಪಕ್ಕಾಗಿ ಶ್ರೀರಾಮನನ್ನು ಕಾಡಿಗಟ್ಟಿದ ಅಪ್ರಿಯವಾದ ಸಂಗತಿ ಮೂಲರಾಮಾಯಣದಲ್ಲಿ ಸಕಾರಣವಾಗಿ ಕಾಣುವುದಿಲ್ಲ. ಅರಮನೆಯಲ್ಲಿ ಎಷ್ಟೆ ಛಿದ್ರವಿರಲಿ, ಸವತಿ ಸವತಿಯರ ಸಂಬಂಧ ಎಷ್ಟೆ ಕಲುಷಿತವಾಗಿರಲಿ ಕೈಕೆ ದಾಸಿಯೊಬ್ಬಳ ಕೃತ್ರಿಮಕ್ಕೆ ಮಾರುವೋದುದು ಸೋಜಿಗದ ಸಂಗತಿ. ಆದರೆ ಶ್ರೀ ರಾಮಾಯಣದರ್ಶನದಲ್ಲಿ ನಿರೂಪಣೆಗೊಂಡಿರುವ ಕೈಕೆ ಮಂಥರೆಯರ ಪೂರ್ವ ಸಂಬಂಧದ ಕಥೆಯನ್ನು ನೆನೆದಾಗ ಕೈಕೆಯ ಬುದ್ಧಿಭ್ರಮಣೆ ಸೋಜಿಗವಾಗುವುದಿಲ್ಲ. ಮಂಥರೆಯ ಜೀವನ ಪ್ರವಾಹದ ತಲಕಾವೇರಿಯನ್ನು ನೋಡಿದವರಿಗೆ, ಕಠೋರತೆ ವಿನಾ ಒಲ್ಮೆಯ ಸವಿಯನ್ನೆ ಮಾನವ ಸ್ನೇಹವನ್ನೇ ಕಾಣದೆ 'ಮಿಗದ ತೆರದಿ ಮಿದುಳಿಲ್ಲದೆಯೆ' ಹೇಸಿಕೆಗೆ ಹೆಸರಾಗಿ ಬೆಳೆದ ಆ ದುರದೃಷ್ಟೆಯ ಬಾಳನ್ನು ನೆನೆದವರಿಗೆ ಸಹಾನುಭೂತಿ ಮೂಡದಿರದು. ಅವಳನ್ನು ಸಾವಿನಿಂದ ತಪ್ಪಿಸಿದ ಕೇಕಯರಾಜನೆ ಕಹಿ ಬಾಳಿನ ನೋವಿನಿಂದಲೂ ತಪ್ಪಿಸಬೇಕಾಗುತ್ತದೆ. ಅವಳ 'ಭೀಷಣೈಕಾಂತತೆಗೆ ಬಗೆಗರಗಿ' ಶಿಶು ಕೈಕೆಯನ್ನು ಆಡಿಸುವ ಕೆಲಸಕ್ಕೆ ಅವಳನ್ನೇ ನೇಮಿಸುತ್ತಾನೆ. 'ಮಂಥರೆಯ ....ಶುಷ್ಕತೆಯ ಶೂನ್ಯತೆಯೊಳೊಲ್ಮೆ ಸಂಚರ'ವಾಗುತ್ತದೆ; 'ಶಿಶುಸನ್ನಿಧಿಯ ಪ್ರೇಮ ಸೌಂದರ್ಯ ಮಹಿಮೆಯಲಿ ಬದುಕು ಸಾರ್ಥಕ ಮಧುರ'ವಾಗುತ್ತದೆ. ತನ್ನ ಕುರೂಪತೆಯನ್ನು ಅವಳ ಸುರೂಪತೆಯಲ್ಲಿ ಮರೆಯುತ್ತಾಳೆ; ತನ್ನ ನ್ಯೂನತೆಯನ್ನು ಅವಳ ಪೂರ್ಣತೆಯಲ್ಲಿ ಅದ್ದುತ್ತಾಳೆ; ಅವಳಲ್ಲಿ 'ಸಾಯುಜ್ಯವೊಂದಿ' ಅಭಿನ್ನಳಾಗಿ ತನ್ನ ಬಾಳಿನ ಕಹಿಯನೆಲ್ಲ ಮರೆಯುತ್ತಾಳೆ. ಕೈಕೆ ದಶರಥರ ಮದುವೆಯಾದಾಗ ಅವಳ ಆಶೆಗೆ ರೆಕ್ಕೆ ಮೂಡುತ್ತದೆ: ಆದರೆ ಸಾಕೇತನಗರಿಯನ್ನು ಹೊಕ್ಕ ಮೊದಲಲ್ಲಿಯೆ ಅಲ್ಲಿಯವರ ಕಟುತಿರಸ್ಕಾರದ ಬೆಂಕಿಯಲ್ಲಿ ರೆಕ್ಕೆ ಸೀದು ಮೂಲೆಪಾಲಾಗುತ್ತದೆ. ಭರತನ ಜನನದಿಂದ ಅವಳಿಗೆ 'ಮೂರನೆಯ ಕಣ್ ಮೂಡಿದಂತಾ'ಗುತ್ತದೆ. 'ಹಡೆದ

ತಾಯಿಯೆ ನಾಣ್ಚುವೋಲಂತೆ' ಅವನನ್ನು ಸಾಕುತ್ತಾಳೆ. 'ದಶರಥಂ ಕೈಕೆ ಭರತರಿಗಾಗಿ; ಕೈಕೆ ಭರತರಿಗಾಗಿ ಕೋಸಲಮಯೋಧ್ಯೆಗಳ್' ಎಂದು ಕನಸುಕಾಣುತ್ತ ಬಾಳನ್ನು ನೂಕುತ್ತಾಳೆ.

ಕೈಕೆಮಂಥರೆಯರ ಈ ಜೀವನದ ಹಿನ್ನೆಲೆಯಲ್ಲಿ, ಅವರ ಅಲೌಕಿಕ ಪ್ರೇಮದ ಚಂದ್ರಿಕೆಯಲ್ಲಿ ಮುಂಬರುವ ಘಟನೆಗಳನ್ನು ಪರಾಮರ್ಶಿಸಬೇಕಾಗುತ್ತದೆ. ರಾಮ ಪಟ್ಟಾಭಿಷೇಕದ ಕಹಿನನ್ನಿ ಕಿವಿದೆರೆಯನ್ನು ತಾಕಿದಾಗ ಅವಳಿಗಾದ ದುಃಖ ಹೇಳ ತೀರದು; ಅದು ಬರಿಯ ಸೋಗಲ್ಲ; ಅವಳ ದುಃಖಕ್ಕೆ ಈರ್ಷ್ಯೆಯಲ್ಲ ಮೂಲ, ಮಮತೆ; * ಕ್ರೋಧವಲ್ಲ ಕಾರಣ, ಪ್ರೇಮ; ಸ್ವಾರ್ಥವಲ್ಲ ಸ್ಫೂರ್ತಿದಾಯಿ, ನಿಸ್ವಾರ್ಥ; ವೈರವಲ್ಲ ಕಾರಣ, ಸ್ನೇಹ. ಮಂಥರೆಯ ಬಗೆಗೆ ಏನು ನಿಜವೊ ಕೈಕೆಯ ಬಗೆಗೂ ಅದೇ ನಿಜ. ಹೃದಯದ ನಿಜತ್ವ ಜಾಗ್ರದವಸ್ಥೆಗಿಂತ ಸ್ವಪ್ನಸ್ಥಿತಿಯಲ್ಲಿ ಸುಪ್ರಕಟವಾಗುತ್ತದೆ; ಬುದ್ಧಿ ಸುಪ್ತಸ್ಥಿತಿಯಲ್ಲಿದ್ದಾಗ ಅದು ಸುವ್ಯಕ್ತವಾಗುತ್ತದೆ;' ಅದು ಸ್ವಯಂಪ್ರಚೋದಿತವಾಗಿ ಅಪ್ರಯತ್ನವಾಗಿ ಗೋಚರವಾಗತಕ್ಕದ್ದು. ಮಂಥರೆಯ ಗೋಳು ನಿದ್ದೆಯಿಂದ ಬಡಿದೆಬ್ಬಿಸಿ, ಶ್ರೀ ರಾಮಪಟ್ಟಾಭಿಷೇಕ ಪ್ರಯತ್ನವನ್ನು ವಂಚಕರ ಸಂಚೆಂದು † ಸಾರಿದೊಡನೆಯೆ ಕೈಕೆಯ ಮುಖ ಅರಳುತ್ತದೆ; "ಕೊರಳ ಸರಮಂ ತೆಗೆದು ಮಂಥರೆಗೆ ನೀಡಿ" ನುಡಿಯುತ್ತಾಳೆ:

"ನಿನಗಿದೊ ಕೊಡುಗೆ, ಶುಭದ ವಾರ್ತೆಯಂ ತಂದುದ[ಕ್ಕೆ]
ರಾಮನೇಂ ? ಭರತನೇಂ ? ಮಕ್ಕಳಿರ್ವರುಮೆನ್ನವರ್!"

ಕೈಕೆಯ ನಿಜಸ್ವರೂಪ ವ್ಯಕ್ತವಾಗುವುದು ಮುಂದಲ್ಲ, ಇಲ್ಲಿ. ಯಾರ ಶ್ರೇಯಸ್ಸಿಗಾಗಿ ತನ್ನ ಬಾಳನ್ನೆಲ್ಲ ಬೇಳಿದ್ದಳೊ ಅವರ ಕ್ಷೇಮಕ್ಕೆ ಧಕ್ಕೆಯುಂಟಾದಾಗ ಮಂಥರೆಗಾದ ಎದೆಗುದಿಯನ್ನು ಮರೆಯಲಾದೀತೆ? 'ಜಗವನೊಂದತಿ ವಿರಾಣ್ಮನಂ ನೆಯ್ಯುತಿತ್ತೆ'ನ್ನು ವುದೂ, 'ಆ ವಿಧಿಯ ಹಸ್ತದಲ್ಲಿ ಮಂಥರೆ ಸೀತೆ ರಾಮರಾವಣರರೆಲ್ಲರುಂ ಸೂತ್ರ ಗೊಂಬೆ'ಗಳಾಗಿರುವುದೂ ಸತ್ಯ; ಇಂದ್ರಿಯಾತೀತವಾದ ಪರೋಕ್ಷ ಸತ್ಯ! ಅದಲ್ಲದೆ ಅತ್ಯಂತ ಕಟುವೂ ಪ್ರತ್ಯಕ್ಷವೂ ಆದ ಮತ್ತೊಂದು ಸತ್ಯವೂ ಇದೆ. ಅಥವಾ ಪ್ರತ್ಯಕ್ಷ-ಪರೋಕ್ಷ ಎರಡು ಒಂದೇ ಸತ್ಯದ ಎರಡು ತುದಿ ಎಂದಾದರೂ ಕರೆಯಬಹುದು. ಪ್ರೇಮ ಭೈರವಿ ಮಂಥರೆಯ ಎದೆಗುದಿ ಸತ್ಯಕ್ಕಿಂತಲೂ ಸತ್ಯ. ಆದರೆ ಒಬ್ಬನಿಗೆ ಮಾರಕವಾದುದು ಮತ್ತೊಬ್ಬನಿಗೆ ಸಂಜೀವನವಾಗುತ್ತದೆ; ಒಬ್ಬನಿಗೆ ಸಿಹಿಯಾದುದು ಮತ್ತೊಬ್ಬನಿಗೆ ಕಹಿಯಾಗುತ್ತದೆ; ಒಬ್ಬನ ನೋವು ಮತ್ತೊಬ್ಬನ ನಲಿವು; ಒಬ್ಬನ ಸೋಲು ಮತ್ತೊಬ್ಬನ ಗೆಲುವು. ಈ ದ್ವಂದ್ವಗಳ ಜಟಿಲಜಾಲದಲ್ಲಿ ಸಿಕ್ಕ ಮಾನವನ ಬುದ್ಧಿ ತತ್ತರಿಸುತ್ತದೆ. ರಾಮನ ಪಕ್ಷಕ್ಕೆ ಯಾವುದು ನ್ಯಾಯವೆಂದು ತೋರುತ್ತದೆಯೊ

---

*ಆದ್ದರಿಂದಲೇ ಈ ಸಂಚಿಕೆಯ ಹೆಸರು 'ಮಮತೆಯ ಸುಳಿ ಮಂಥರೆ'

†ಶ್ರೀ ರಾ. ದ. ಸಂಪುಟ ೧. ಸಂಚಿಕೆ ೩ ಪಂಕ್ತಿ ೧೯೫ ರಿಂದ ೨೧೭ರ ವರೆಗೆ ನೋಡಿ.

ಅದು ಭರತನ ಪಕ್ಷಕ್ಕೆ ಅನ್ಯಾಯವೆಂದು ತೋರಿದುದು ಅಸಹಜವೇನಲ್ಲ! ಭರತನ ಮೇಲಣ ಮಮತೆಯಿಂದ ತನ್ನೆಲ್ಲ ಬುದ್ಧಿಶಕ್ತಿಯನ್ನೂ ವಾದಸಾಮರ್ಥ್ಯವನ್ನೂ ಸೂರೆಗೈಯ್ಯುತ್ತಾಳೆ, ಮಂಥರೆ. "ರಾಮವಿದ್ವೇಷದಿಂದಲ್ತು, ರಾಮಂ ಬಾಳ್ಗೆ! ಪೇಳ್ದಿನಿಸಿತೆಲ್ಲಮಂ ನಿನಗೆ" ಎಂಬ ಅವಳ ಮಾತಿನಲ್ಲಿ ಆಂಟೋನಿಯ ವಾದಚತುರತೆಯ ಕಾಪಟ್ಯವನ್ನು ಊಹಿಸುವುದು ಸರಿಯಲ್ಲ. ಅವಳ ಪ್ರತಿಯೊಂದು ಮಾತಿಗೂ ನಿಷ್ಕಪಟ ಪ್ರೇಮವೇ ಸ್ಫೂರ್ತಿದಾಯಿ. *

ಮಂಥರೆ-ಕೈಕೆಯರು ಅಭಿನ್ನರು; ರೂಪ ಭಿನ್ನವಾದರೂ ಸ್ವರೂಪ ಅಭಿನ್ನ; ಆಕಾರ ಪ್ರತ್ಯೇಕವಾದರೂ, ಆತ್ಮ ಅಪ್ರತ್ಯೇಕ. ಆದುದರಿಂದಲೆ ಮಂಥರೆಯ ಎದೆಯಲ್ಲಾದ ಕಂಪನ ಕೈಕೆಯ ಎದೆಯನ್ನೂ ಕಂಪಿಸುತ್ತದೆ; ಒಂದರ ಅನುಭೂತಿ ಮತ್ತೊಂದರ ಅನುಭೂತಿಯಾಗುತ್ತದೆ; ಒಬ್ಬಳ ಬಯಕೆ ಮತ್ತೊಬ್ಬಳ ಬಯಕೆಯಾಗುತ್ತದೆ. ಕೈಕೆ ಮಂಥರೆಯ ಮಾತುಗಳನ್ನು ಅವಳ ಕನಸಿನ ವರ್ಣನೆಯನ್ನೂ ಮೌನವಾಗಿ ಆಲಿಸುತ್ತಾಳೆ.

"ಕೇಳುತ್ತೆ ಕೆಲವೊತ್ತು ಮೌನಮಿರ್ದಳ್ ಕೈಕೆ,
ಕೆನ್ನೆಗೈಯಾಗಿ, ಕಂಬನಿಯ ಕಣ್ಮುಚ್ಚದೆಯೆ,
ಹಾಲ್ಗಲ್ಲ ಗೋಡೆಯನೆ ನೋಡಿ, ಮೂಡಿತು ಮನಕೆ
ಮಾವನ ಮನೆಯ ದೂರದೊಳಿರ್ದ ತನುಜನ ಮೂರ್ತಿ.
ನೆನೆದು ಮೇಲುಕಾಡಿದಳ್, ನೆರಕೆ ಗರಗಸವಾಗೆ,
ಮಂಥರೆಯ ಮಾತೆಲ್ಲಮಂ. ಹೃದಯ ಮುರಿದಂತಾಯ್ತು.
ದುಃಖಮಿರ್ಮಡಿಸಿದುದು, ಕೊರಳು ಗದ್ಗದವಾಗಿ"

ಮಾತುಕಟ್ಟುತ್ತದೆ. ಮತ್ತೆ ಮಂಥರೆ ಮಾತು ಮುಂದುವರಿಸಿ, ಕೈಕೆಯನ್ನು ಅಪ್ಪಿಕೊಳ್ಳುತ್ತಾಳೆ. ಆ ಅಪ್ಪುಗೆಯಲ್ಲಿ ಪ್ರೇಮವೆ ಮುಕ್ಕಳಿಸುತ್ತದೆ. ಗೂನಿಯ ವಕ್ರಗಾತ್ರವನ್ನು ಆ ಚೆಲುವೆಯೂ ತಬ್ಬಿಕೊಳ್ಳುತ್ತಾಳೆ.

"........ಕಂಗೆಟ್ಟೆನಗೆ ದಾರಿ ತೋರ್ದೆಯೌ,
ಓ ನನ್ನ ಭಾಗ್ಯದೇವತೆ; ಮರಳಿ ಹಡೆದೆಯೌ,
ನೀನೆನ್ನ ತಾಯಿ! ನೀಂ ತೊರೆಯಲಿನ್ನಾರೆ ಗತಿ
ಪರದೇಸಿಯೆನಗೆ? ಕಣ್ಣಿರ್ದುಮಾನಿನ್ನೆಗಂ
ಕುರುಡಿಯಾಗಿರ್ದೆನೌ, ನೋಡಿತ್ತ ನೋಡೆನ್ನನಾ

---

*ಮತ್ತೆ ರಾಮನನ್ನು ಅರಣ್ಯದಿಂದ ಹಿಂದಿರುಗಿಸಿದರೆ ಭರತ ಕೈಕೆಯರಿಗೆ ಸಂತೋಷವಾಗುತ್ತದೆಂದು ಅವಳು ಊರು ಬಿಟ್ಟು, ಕಾಡುಸೇರಿ, ದಾವಾಗ್ನಿಗೀಡಾಗುವ ಘೋರ ಸನ್ನಿವೇಶವನ್ನು (ಶ್ರೀ ರಾ. ದ. ಸಂಪುಟ ೧. ಸಂಚಿಕೆ ೬ ; ೨೩೬-೩೪೨) ನೆನೆದರೆ ಈ ಮಾತಿನ ಅರ್ಥ ಅರಿವಾಗುತ್ತದೆ.

ಇಂದೆನಿತು ಚಾರುರೂಪಿಣಿಯಾಗಿ ತೋರುತಿಹೆ
ನೀನೆನಗೆ................................"

ಎನ್ನುತ್ತ ಆ ಕುರೂಪತಾಮುದ್ರೆಯನ್ನು ಸರ್ವಸೌಂದರ್ಯಸಿದ್ಧಿ ದಶರಥೇಂದ್ರನ ರಾಣಿ ಮುದ್ದಾಡುತ್ತಾಳೆ. ಭರತಮಾತೆ ತನ್ನನ್ನು ತಾಯಿಯಂತೆ ಚಿಕ್ಕಂದಿನಿಂದ ಸಾಕಿಸಲಹಿದ ಮಂಥರೆಯ ಪ್ರಚೋದನೆಗೆ ಬಲಿಯಾದುದೇನು ಸೋಜಿಗವಲ್ಲ.

ಭರತನ ಮೇಲಣ ಕೈಕೆಯ ಪ್ರೇಮ ದಶರಥನ ಮೇಲೆ ಹಠವಾಗಿ ಮಾರ್ಪಡುತ್ತದೆ. ವಿವಾಹಕಾಲದ ವಾಗ್ದಾನದ ನೆನಪು ಅದಕ್ಕೆ ಪೋಷಕವಾಗುತ್ತದೆ. ಕೋಪಾಗಾರವನ್ನು ಪ್ರವೇಶಿಸಿ, ಒಡವೆ ಬಿಚ್ಚಿಸೆದು ಮುಡಿಗೆದರಿ "ಕರ್ಮಠ ರಜೋಗುಣದ ಹಠಯೋಗಿಯೋಲಂತೆ" ದಿಂಡಿರುಳುತ್ತಾಳೆ. ದಶರಥನೂ ಕೈಕೆಗೆ ಹಿಂದೆ ಕೊಟ್ಟ ಮಾತನ್ನು ಮರೆತಿಲ್ಲ. ರಾಮನಿಗೆ ಯೌವರಾಜ್ಯಾಭಿಷೇಕ ಮಾಡುವ ಮಾತೆತ್ತಿದಾಗ ಅದರ ಚಿಂತೆ. ಈ ಧರ್ಮಸಂಕಟದಲ್ಲಿಯೇ ಕೊರಗುತ್ತ, ಆದರೂ "ಮೀನಾಕ್ಷಿಯಂ ಶೃಂಗಾರಜಾಲದೊಳ್ ಪಿಡಿವ ಬುದ್ಧಿಯ ರಸದ ಹರಿಗೋಲಿನೊಳ್ ತೇಲಿ" ಬರುತ್ತಾನೆ. ಅವನ ಮನದ ಶಂಕೆಯೆ ಕೈಕೆಯ ಭೀಕರ ರೂಪವಾಗಿ ವಿಕಟಾಟ್ಟಹಾಸದಿಂದ ತನ್ನನ್ನೆ ಮೂದಲಿಸುತ್ತ ನಿಂತಿದೆ. ತನ್ನ ಪ್ರೇಮಪಕ್ಷಿಯನ್ನು ಅಪ್ಪಿ, ಮುಂಡಾಡಿ, ಮುದ್ದಿಸಿ, ದುಃಖಕಾರಣವನ್ನು ಕೇಳುತ್ತಾನೆ.

"ನ್ಯಾಯಮನ್ಯಾಯ ಧರ್ಮಾಧರ್ಮಮೊಂದುಮಂ, ಕೇಳ್,
ಪರಿಗಣಿಸದೆಯೆ ನಡೆವೆ ನಿನ್ನಿಷ್ಟಮಂ, ದೇವಿ,
ಬಗೆಯನುಸಿರೆನಗೆ........................"

ಸೋದ್ವಿಗ್ನನಾಗಿ, ಪ್ರಾಣವನ್ನು ಪಣವೊಡ್ಡಿ, ಕೇಳುತ್ತಾನೆ. ಈ ಮಾತುಗಳನ್ನು ವಿಧಿಯೆ ನುಡಿಸಿದಂತಿದೆ. "ರುಜೆಯಲ್ತು, ಜೀವೇಶ. ಏಕೆನಗೆ, ನೀನೆಯಿರೆ, ಬೇರೆ ಐಸಿರಿ, ನೃಪತಿ?" ಎಂದು ಪೀಠಿಕೆ ಹಾಕಿಕೊಂಡು ಆಣೆಯಿಟ್ಟುದೆಂದು ಕೈಕೆ ಕೇಳುತ್ತಾಳೆ. ಮುಂದರಿಯದ ದೊರೆ ರಾಮನ ಮೇಲೆ ಆಣೆಯಿಟ್ಟು,

".................ಪೇಳ್ ಬಯಕೆಯಂ;
ನಿನ್ನಾಶೆ ಸೇರ್ದುದೆಂದರಿ ಕಲ್ಪತರುಮೂಲಮಂ!"

ಎಂದು ನುಡಿಯುತ್ತಾನೆ. ಈ ಮಾತನ್ನು ಪ್ರೇರಿಸಿದ ವಿಧಿಯೆ ಕೈಕೆಯ ಬಾಯಲ್ಲಿ

"ಧನ್ಯೆ ದಲ್, ಪ್ರಾಣೇಶ, ನಾನಿಂದು! ಕೇಳ್ದು ನಿನ್ನೀ
ಲೋಕ ಕಲ್ಯಾಣಕರ ವಚನಮಂ ನಲಿಯುತಿಹರಾ
ನಿರ್ಜರರ್, ಪೋದ ಸಗ್ಗಂ ಮರಳಿ ಕೈಸಾರ್ದವೋಲ್!"

ಎಂದು ನುಡಿಸುತ್ತದೆ. ಇದು ನಿಜ. ವಿಧಿಯ ವಜ್ರೇಚ್ಛೆ ನಡೆಯಲೇ ಬೇಕಲ್ಲವೇ? ಒಡನೆಯೆ ಕೈಕೆಯ ಸುಂದರವದನಲ್ಲಿ ಮಂಥರೆಯ ವಿಕೃತರೂಪ ಸಂಚಾರವಾದಂತೆ ಕಂಡಿತು ದಶರಥನ ದೃಷ್ಟಿಗೆ. ಕೂಡಲೆ ಮೈಮರೆತು, ಕೈಕೆಯ ಶಿಶಿರೋಪಚಾರದಿಂದ

ತ್ತರಿಸುತ್ತಿದ್ದು, ಕೋಪಾಗಾರದಿಂದ ಹೊರಗೆ ಬಂದು, ನಿಲ್ಲಲಾರದೆ ಕುಸಿದು ಕುಳಿತು, "ರಾಮನನ್ನಲ್ತು, ಕೇಳ್, ಕೈಕೆ ನೀನಡವಿಗಟ್ಟುತಿಹೆ ನಿನ್ನ ಮಾಂಗಲ್ಯಮಂ" ಎಂದು ಬಗೆ ಬಗೆಯಾಗಿ ಸನ್ನಿಹಿಡಿದವನಂತೆ ಕೂಗಾಡುತ್ತಾನೆ. ಪತಿಯ ದುಃಸ್ಥಿತಿಯನ್ನು ನೋಡಿ ಕೈಕೆ ಎದೆಗರಗುತ್ತಾಳೆ; ಏಕೆ ಹಾಗೆ ಕೇಳಿದನೆಂದು ಬೆದರುತ್ತಾಳೆ. "ನಿನ್ನ ವಾಗ್ದಾನ ಬೇಡ; ನಿನಗೆ ನೋವುಂಟುಮಾಡಿ ನಾನೂ ನನ್ನ ಮಗನೂ ಸುಖವಾಗಿರುತ್ತೇವೆಯೆ. ಕೇಳೆಂದುದರಿಂದ ಕೇಳಿದೆ" ಎಂದು ಹೇಳುವಾಗ ಕೈಕೆಯ ಸಾತ್ತ್ವಿಕ ಪ್ರವೃತ್ತಿ ಎಚ್ಚರಗೊಳ್ಳುತ್ತದೆ.

ತನ್ನನ್ನು ವಚನಭ್ರಷ್ಟನನ್ನಾಗಿ ಮಾಡಿ ಪಾಪಕೂಪಕ್ಕೆ ನೂಕಲು ಅವಳು ಪ್ರಯತ್ನಿಸುತ್ತಿರುವುದಾಗಿ ರಾಮಜನಕ ಯೋಚಿಸಿ ಮೂದಲಿಸುತ್ತಾನೆ. ಆ ಮೂದಲಿಕೆ ಕೈಕೆಗೆ ಸಹಿಸದಾಗುತ್ತದೆ. ಸಹನೆ ಮೀರಿ ಒಂದೆರಡು ಬಿರುನುಡಿ ಆಡುತ್ತಾಳೆ. "ತಪ್ಪು ನಿನ್ನದಾಗಿರುವಾಗ ನನ್ನನ್ನೇಕೆ ವನ್ಯನಂತೆ ಬಯ್ಯುತ್ತೀಯೆ, ಭರತನಿಲ್ಲದ ವೇಳೆ ಕಿತವರ ಉಪದೇಶದಿಂದ ಪುಟ್ಟಮಹಿಷಿಯ ಮಗನಿಗೆ ಗುಟ್ಟಾಗಿ ಪಟ್ಟವನ್ನು ಕಟ್ಟುವ ಕುಹಕ ವಿದ್ಯಾಪ್ರವೀಣ ನೀನೆ," ಎಂದು ಮುಂತಾಗಿ ಮೂದಲಿಸುತ್ತಾಳೆ.* ಇಂದೊಂದು ಸಮಯದಲ್ಲಲ್ಲದೆ ಕೈಕೆ ಇಷ್ಟು ಕೀಳಾಗಿ ವರ್ತಿಸುವ ಮತ್ತೊಂದು ಸನ್ನಿವೇಶ ಶ್ರೀ ರಾಮಾಯಣದರ್ಶನದಲ್ಲಿ ಎಲ್ಲೂ ಇಲ್ಲ. ಕ್ಷಣಕಾಲ ಮಾತ್ರ ಮಂಕು ಕವಿದಾಗ, ಕೈಕೆಗೆ ಅರಿವಿಲ್ಲದೆಯೆ ಮುಂದಿನ ಘಟನೆಗಳು ವಿದ್ಯುದ್ವೇಗದಲ್ಲಿ ಜರುಗಿಹೋಗುತ್ತವೆ. ದೊರೆಯ ದುಃಸ್ಥಿತಿಯ ಸುದ್ದಿಯನ್ನು ಮಾತೃಸನ್ನಿಧಿಯ ರಾಮನಿಗೆ ಮುಟ್ಟಿಸಿದವಳೂ ಕುಬ್ಜೆಯೆ; ದುಃಸ್ಥಿತಿಯ ಕಾರಣವನ್ನು ರಾಮನಿಗೆ ವಿವರಿಸಿದವಳೂ ಆ ಕುರೂಪಿಯೆ; ಹೆತ್ತವನು ಮಗನಿಗೆ ಅರಣ್ಯವಾಸವನ್ನೆಂದಾದರೂ ವಿಧಿಸುವುದುಂಟೆ ಎಂದು ರಾಮು ಅರಣ್ಯವಾಸೋದ್ಯುಕ್ತನಾಗುವಂತೆ ಮಾರ್ಮಿಕವಾಗಿ ಪ್ರಚೋಧಿಸಿದವಳೂ ಆ ಪ್ರೇಮ ಭೈರವಿಯೆ! ರಾಮನ ಹಿಂದೆ ಅರಣ್ಯಕ್ಕೆ ಸೈನ್ಯಪರಿವಾರ ಭೋಗಸಾಮಾಗ್ರಿಗಳನ್ನು ಕಳುಹಿಸುವೆನೆಂದು ದಶರಥ ಆಜ್ಞೆಮಾಡಿದಾಗ ಕೈಕೆಯ ಮುಖವನ್ನು ಇಂಗಿತದಿಂದ ನೋಡಿದವಳು ಆ ತಿರಸ್ಕಾರ್ಯೆಯೆ? ರಾಮು ನಾರುಮಡಿಯನ್ನು ಕೇಳಿದೊಡನೆಯೆ ತಂದು ಮುಂದಿಟ್ಟವಳೂ ಆ ಗೂನಿಯೇ! ಕೈಕೆ ಇದನ್ನೆಲ್ಲ ಬೆಪ್ಪಳಂತೆ ನೋಡುತ್ತ ನಿಂತಿರುತ್ತಾಳೆ.

ಕೈಕೆಯ ಲೌಕಿಕಾಪರಾಧಕ್ಕೆ ಅವಳು ಅನುಭವಿಸಿದ ಶಿಕ್ಷೆ ತಾರತಮ್ಯವಿಲ್ಲದ್ದು. ದಶರಥ ಇನ್ನೂ ಜೀವಂತವಾಗಿದ್ದಾಗಲೆ ಅವಳು ಅನುಭವಿಸಿದ ಮಾನಸಿಕಯಾತನೆ ಹೃದಯವಿದ್ರಾವಕಾರಿಯಾದುದು. ಅರಣ್ಯಮುಖಿಯಾದ ಶ್ರೀ ರಾಮನನ್ನೇ ಕಾಣುವ ತನಕ ನೋಡುತ್ತಿದ್ದು ಹಿಂದಿರುಗುವಾಗ ನಡುಬೀದಿಯಲ್ಲಿ ಕೈಕೆ ಕಣ್ಣಿಗೆ ಬೀಳಲು

---

*ಶ್ರೀ ರಾ. ದ. ಸಂಪುಟ ೧. ಸಂಚಿಕೆ ೩. ಪಂಕ್ತಿಗಳು ೫೧೨-೫೭೦

"ಬಳಿ ಸಾರದಿರ್, ಪಾಪಿ!
ಕಣ್ಬೊಲದೊಳಿರದೆ ಸಾಯ್! ತೊಲಗು! ನೀನಿನ್ನೆನಗೆ
ಸತಿಯಲ್ಲ. ನಿನಗಾಂ ಪತಿಯುಮಲ್ಲ. ತರ್ಪಣಂ
ಕೊಟ್ಟೆನಿದೊ ನೀರೆಳ್ಳುಕೊಳ್!"

ಎಂದು ನೆಲದ ದೂಳನ್ನು ಗೋರಿ ಅವಳ ಮೇಲೆಸೆಯುತ್ತಾನೆ. ನಟ್ಟಿರುಳು ಕೈಕೆಯನ್ನು ಹತ್ತಿರಕ್ಕೆ ಕರೆದು ಹರಿವಾಣವನ್ನು ಅವಳ ಮೇಲೆಸೆಯುತ್ತಾನೆ. ತನ್ನ ಕಣ್ಣನ್ನು ತಾನೆ ಕಿತ್ತುಕೊಂಡು, ಕೈಕೆಯನ್ನು ಕರೆದು ತೋರಿಸಿ "ದೇಶಕೋಸಲವಿದೆಕೊ ಕರತಲಾಮಲಕನೆನೆ ಕಣ್ಗೊಳಿಸುತಿದೆ"ಎಂದು ಕೋಪೋನ್ಮತ್ತನಾಗಿ ಬಯ್ಯುವ ಕೈಕೆ ಅದೆಲ್ಲವನ್ನು ಮೂಕಳಂತೆ ಕೇಳುವ ಸನ್ನಿವೇಶ ತುಂಬ ಭಯಂಕರವಾದುದು.

ಇನ್ನು ಮುಂದೆ ಮೂಲ ರಾಮಾಯಣದಲ್ಲಾಗಲಿ ಪ್ರತಿಮಾನಾಟಕದಲ್ಲಿಯಾಗಲಿ ಕಾಣದ ಕೈಕೆಯ ಅದ್ಭುತ ಚಿತ್ರವನ್ನು ಎದುರುಗೊಳ್ಳುತ್ತೇವೆ. ಇಲ್ಲಿಯ ಕೈಕೆಯ ಹಠ ಕೇವಲಕ್ಷಣಿಕವಾದುದು; ಸಾತ್ತ್ವಿಕಪ್ರೇಮವೆ ಅದಕ್ಕೆ ಮೂಲ. ರಾಹು ಮುಕ್ತವಾದ ಚಂದ್ರನಂತೆ ಹೆಜ್ಜೆ ಹೆಜ್ಜೆಗೂ ತೇಜೋನ್ವಿತಳಾಗಿ ಬೆಳಗುವುದನ್ನು ನೋಡುತ್ತೇವೆ. ಅವಳ ಸಂಕಟ ನಮ್ಮದಾಗುತ್ತದೆ; ಅವಳ ಪಶ್ಚಾತ್ತಾಪ ನಮ್ಮದಾಗುತ್ತದೆ; ಅವಳ ಕಣ್ಣೀರು ನಮ್ಮದಾಗುತ್ತದೆ; ಅವಳ ಅವಮಾನ ನಮ್ಮದಾಗುತ್ತದೆ. ಇಷ್ಟು ಅನುಕಂಪೆಗೆ ಕರುಣೆಗೆ ಸಹಾನುಭೂತಿಗೆ ಪಾತ್ರವಾದ ಮತ್ತೊಂದು ವ್ಯಕ್ತಿ ಶ್ರೀ ರಾಮಾಯಣದರ್ಶನದಲ್ಲಿ ಸಿಗುವುದಿಲ್ಲ! ಕೌಸಲ್ಯೆಗೆ ಭರತನ ಪ್ರೇಮರಕ್ಷೆಯಿದೆ; ಅಶೋಕವನದ ಸೀತೆಗೆ ರಾಮನ ತಪೋರಕ್ಷೆಯಿದೆ; ಊರ್ಮಿಳೆಗೆ ಸೀತಾಲಕ್ಷ್ಮಣರ ಆಶೀರ್ವಾದ ರಕ್ಷೆಯಿದೆ! ಕೈಕೆಗೊ

ಮಾವನ ಮನೆಯಿಂದ ಭರತ ಹಿಂದಿರುಗಿದಾಗ ಕೈಕೆ ಎಂತಿದ್ದಳು?—

"........ಪಾಳ್ಮನೆಯ ತೆರೆದಿನೆಸೆದಳ್ ಮಾತೆ,
ನಿರ್ಜನೆ, ನಿರಾಭರಣೆ, ನಿಶ್ಚಲೆ ರವವಿಹೀನೆ."

ಕಾಲ ಮೇಲುರುಳಿದ ಮಗನ ಉಬ್ಬೆಗವನ್ನು ಕಂಡು ಅಳುತ್ತಳುತ್ತ, ಮುದ್ದಾಡಿ ಮುಂಡಾಡುತ್ತ, ಹುಚ್ಚಿಯಂತೆ ಬಿಟ್ಟಾಲಿಯಾಗಿ ನೋಡುತ್ತ ಗದ್ಗದ ಕಂಠೆಯಾಗಿ:

"ಮನ್ನಿಸೆನ್ನನ್ ಮಗನೆ; ಪಾಪಿಯೆನ್!...."

ಎಂದು ತನ್ನನ್ನೆ ತಾನು ನಿಂದಿಸಿಕೊಳ್ಳುತ್ತಾಳೆ. "ಹೆತ್ತವಳೆಂದು ಈ ನೀಚಳನ್ನು ಹೊಗಳಬೇಡ. ಬೇಡಿ ಕೇಡುತಂದೆ. ವರ ಶಾಪವಾಯಿತು.* ಎಂದು ಅಳುತ್ತಳುತ್ತ

"ನಿನ್ನ ಬಾಳಿನ ಪಾಲ್ಗೆ ವಿಷವಾದೆ! ರವಿಕುಲದ
ಚಂದನಶ್ರೀವನಕೆ ದಾವಾಗ್ನಿಯಾದೆ! ಹಾ,

*ಶ್ರೀ ರಾ. ದ. ಸಂಪುಟ ೧. ಸಂಚಿಕೆ ೫. ಪಂಕ್ತಿ ೨೦೯-೨೨೬.

ಲೋಕನಿಂದೆಯು ತೋರುಜೇರಳಿಗೆ, ಕರುಣೆ ವತ್ಸ,
ಹೇಸುಗುರಿಯಾದೆ!"

ಎಂದು ಪರಿತಪಿಸುತ್ತಾಳೆ. ತಂದೆಯ ಮರಣದ, ಅಣ್ಣನ ಅರಣ್ಯವಾಸದ ಸುದ್ದಿಯನ್ನು ಕೇಳಿ ವೈಮರೆತ ಮಗನನ್ನು ಸಮಾಧಾನಮಾಡಿ:

"......................ಮಗನೆ,
ಸಾತ್ವಿಕ ಸರಳಜೀವಿ, ನೀನೆಂತರಿವೆಯೆನ್ನ ಈ
ಹೃದಯಮಂ? ತಾಯಿಯೊಲ್ಮೆಗೆ ಮಗನ ಮೇಲ್ಮೆಗಿಂ
ಬಯಕೆ ಬೇರುಂಟೆ? ನಿಸ್ವಾರ್ಥದಾ ಬಯಕೆಗಿಂ
ಪೆರತು ಕಣ್ಣೇನೊಳದೆ ಧರ್ಮಕ್ಕೆ?........"

ನಡೆದ ವ್ಯಥೆಯ ಕಥೆಯನ್ನು ಕೇಳಿದವರಿಗೆ ಬಗೆಗರಗುವಂತೆ ಸಂಕ್ಷಿಪ್ತವಾಗೊರೆಯುತ್ತಾಳೆ.* ಕೇಳುತ್ತ ಕೇಳುತ್ತ ಭರತನ ಅನುತಾಪ, ಸಂತಾಪಕ್ಕೂ ಪ್ರಕೋಪಕ್ಕೂ ತಿರುಗುತ್ತದೆ. "ಹೆತ್ತಂದೆ ಕೊರಳು ಹಿಸುಕದೆ ಇಲ್ಲಿಯತನಕ ಏಕೆ ಕಾದೆ? ಮಗನನ್ನು ಪಡೆದೂ ನಿನಗೆ ಬಂಜೆತನ ಒದಗಿತೆ? ಅಣ್ಣನನ್ನು ವಿಪಿನದಿಂದ ಮರಳಿಸುತ್ತೇನೆ ಇಲ್ಲವೆ ನಾನೂ ತಪೋನಿರತನಾಗುತ್ತೇನೆ" ಎಂದು ಜಿಗುಪ್ಸೆಯಿಂದ ಹೊರಡುತ್ತಾನೆ. ತಾಯಿ ಓಡಿಬಂದು ಕಾಲುಹಿಡಿದು ಬಾಚಿ ತಬ್ಬಿಕೊಂಡು ಮೊಳಕಾಲೂರಿ ಅಶ್ರುಮಲಿನಳಾಗಿ ಬಿನ್ನಹಕೆ ಬಾಯಿ ಬಂದಂತೆ ಗೋಳಾಡುತ್ತಾಳೆ:

"....ಕೈಬಿಡದಿರೆನ್ನಂ, ಮಗನೆ, ಕೆಟ್ಟೆಳೆನ್!
ಜಗವೆ ಕೈ ಬಿಟ್ಟಳೆನ್! ನೂಂಕು ನರಕಕೆ; ಸಹಿಸಿ
ಬಹೆನೊ ಕೇಡಂ ತವಿಸಿ; ನೂಂಕದಿರೊ ಶೂನ್ಯತೆಗೆ!
ಹೊಲೆಗೆ ಹೊಲೆ ಮಡಿಯಲ್ತು; ಕೊಲೆಗೆ ಕೊಲೆ ಪಡಿಯಲ್ತು;
ನೋವು ನೋವಿಗೆ ಸಾವುಮಲ್ತು........
..........................................
ಬಂದಪೆನ್ ಕರೆದೊಯ್ಯೊ ನಿನ್ನ ಕೂಡೆನ್ನನುಂ
ಮಂಗಳದ ಮನೆಗೆ. ನಡೆದಪೆನೊ ನೀನೆಂದಂತೆವೋಲ್
ನೆಳಲಂತೆ, ಮೂಕಪಿನಯದಲಿ! ಕೇಳ್, ಕೈಕೆಗಿನ್
ಬಾಯಿಲ್ಲೊ! ಕಲ್ಲಾದಹಲ್ಯೆಯುಂ ನುಡಿಸಿದಾ
ರಾಮನಡಿ ಸೋಂಕಿಗುಂ ಕಿಡದೆನ್ನ ಕಲ್ತನಂ!
ಕೈಬಿಡದೆ ಕಾಪಿಡೆನ್ನಂ!"

ಆತ್ಮನಿಂದೆಯ ಕಟುಕಶಾಘಾತದಿಂದ ಶಿಕ್ಷೆಗೊಂಡು, ಪಶ್ಚಾತ್ತಾಪವಹ್ನಿಯಿಂದ ಹೃದಯದ ಕಾಳಿಕೆಯನ್ನು ನೀಗಿಕೊಂಡು, ಅಶ್ರುಧಾರೆಯಿಂದ ಮಾಲಿನ್ಯವನ್ನು ತೊಳೆದು

---

*ಶ್ರೀ ರಾ. ದ. ಸಂಪುಟ ೧. ಸಂಚಿಕೆ ೫. ಪಂಕ್ತಿ ೨೩೪-೨೬೦

ಕೊಂಡು, ರಾಮಾನುಜನ ಕೃಪೆಗೆ ಪಾತ್ರಳಾದ ಮೇಲೆ, ಜಗತ್ತು ಅವಳನ್ನು ಕೈಬಿಡುತ್ತದೆಯೆ? ಕಂಡೊ ಕಾಣದೆಯೊ ಇದ್ದ ಸ್ವಾಭಿಮಾನ ದರ್ಪಗಳಿಗೆ ಅಪಾರವಾದ ದುಃಖವನ್ನನುಭವಿಸಿ ಪರಿಶುದ್ಧಳಾಗುತ್ತಾಳೆ, ಜಗದ್ವಂದ್ಯಳಾಗುತ್ತಾಳೆ.

"ಶ್ರೀ ರಾಮನನ್ನು ಅರಣ್ಯಕ್ಕೆ ಕಳುಹಿ ಲೋಕಕ್ಕೆ ಕೈಕೆ ಮಹದುಪಕಾರಮಾಡಿದ್ದಾಳೆ. ಆದುದರಿಂದ ಅವಳು ದೋಷಾತೀತೆ" (ಭಾರದ್ವಾಜ ಭರತನಿಗೆ ಹೇಳುವ ಮಾತು) ಎಂಬ ಭಾವನೆ ಮೂಲರಾಮಾಯಣದಲ್ಲಿಯೂ ಇದೆ. ಆದರೂ ಅವಳು ಅಲ್ಲಿ ಗರ್ವಿಷ್ಠೆ, ಚಂಡಿ, ಸ್ವಕಾರ್ಯ ಧುರಂಧರೆ (ಭರತನೇ ಹೇಳುವ ಮಾತು) ಎಂದೂ ಗೊತ್ತಾಗುತ್ತದೆ. ಈ ಭಾವನೆ ಇಲ್ಲೆಲ್ಲಿಯೂ ಕಾಣಬರುವುದಿಲ್ಲ. ರಾಮನಂತು ಕೈಕೆಯಲ್ಲಿ ಅಪಾರ ಗೌರವವಿಟ್ಟದ್ದಾನೆ. ಅರಣ್ಯಾಭಿಮುಖಿಯಾದಾಗ "ನಿನ್ನಾಸೆ ಸಾರುತಿದೆ ನನ್ನ ಕಲ್ಯಾಣಮಂ: ನೀಂ ತಾಯ್ ದಿಟಂ" ಎಂದ ಮಾತು ಅವನ ಶೀಲಕ್ಕೆ ತೋರುಬೆರಳಾಗಿರುವಂತೆ, ಕೈಕೆಯ ಹಿರಿಮೆಗೂ ಸಾಕ್ಷಿಯಾಗಿದೆ. ಚಿತ್ರಕೂಟದಲ್ಲಾದ ರಾಮ ಕೈಕೆಯರ ಸಮಾಗಮ ಲೋಕ ಲೋಕಗಳನ್ನೇ ರೋಮಾಂಚನಗೊಳಿಸುವಂಥ ಘಟನೆ. ರಾಮ ದೂರದಲ್ಲಿ ದುಃಖಭಾರದಿಂದ ಕುಸಿದು ನಿಂತಿದ್ದ ಚಿಕ್ಕಮ್ಮನನ್ನು ಹುಡುಕಿ ನೋಡಿ ಬಳಿಗೆಯ್ದುವುದೆ ತಡ ಕೈಕೆ ರಾಮಾಂಘ್ರಿಯಮೇಲೆ ಕೆಡೆಯುತ್ತಾಳೆ. ಭಗವತ್‌ಪ್ರೀತಿ ಭಕ್ತನ ಆತ್ಮವನ್ನೆತ್ತುವಂತೆ ರಾಮ ಆಕೆಯನ್ನು ಮೇಲೆತ್ತುತ್ತಾನೆ. ಮುಂದೆ ಅವಳ ಮೌನಕ್ಕೆ ಭರತ ನಾಲಿಗೆಯಾಗುತ್ತಾನೆ. ಅರಣ್ಯವಾಸ ಕಾಲದಲ್ಲಿ ಘೋರ ಸಂಕಟವೊದಗಿದಾಗ ನಿರಾಶೆ ಕವಿದಾಗ ಒಮ್ಮೊಮ್ಮೆ ಲಕ್ಷ್ಮಣ "ಅಗ್ರಜನೆ, ದೀರ್ಘದರ್ಶಿನಿ ದಿಟಂ ಆ ಕೈಕೆ" ಎಂದು, ರಾಮ "ಸಾಕು ಬಿಡು, ಸೌಮಿತ್ರಿ ಜಗಮನಿತುಮಾ ಕೈಕೆ! ಕೈತವದ ಹೃದಯಂ!" ಎಂದು ಉದ್ಗಾರವೆತ್ತಿದರೂ, ತಮ್ಮೆಲ್ಲರ ಆತ್ಮೋದ್ಧಾರಕ್ಕೆ ಅವಳೆಷ್ಟರ ಮಟ್ಟಿಗೆ ಸಹಾಯಕಳಾದಳೆನ್ನುವುದನ್ನು ಸೀತೆಯಂತೂ ಮರೆತಿಲ್ಲ.

ಸೀತಾಪಹರಣಾನಂತರ ನಡೆದ ಘೋರಘಟನಾವಳಿಗಳ ನಡುವೆ ಕೈಕೆಯನ್ನು ಮರೆತರೂ, ರಾಮ ಹಿಂದಿರುಗಿದಾಗ ಅವಳು ಎಲ್ಲಿದ್ದಳು, ಎಂತಿದ್ದಳು, ಎಂಬ ವಿಷಯವಾಗಿ ಕುತೂಹಲ ಕೆರಳುವುದು ಸಹಜ—ಯಾರಿಗಾದರೂ ಕುತೂಹಲವೆ! ರಾಮ ಲಕ್ಷ್ಮಣ ಸೀತೆಯರಿಗಂತು ಮೊದಲು ಆಕೆಯನ್ನು ನೋಡುವ ಕುತೂಹಲ! ಪತಿಯ ಮರಣಕ್ಕೆ, ರಾಮ ಸೀತಾ ಲಕ್ಷ್ಮಣರ ಅವರ್ಣನೀಯವಾದ ಕಷ್ಟಪರಂಪರೆಗಳಿಗೆ, ಭರತನ ವೈರಾಗ್ಯ ಜೀವನಕ್ಕೆ, ಕೌಸಲ್ಯೆ ಸುಮಿತ್ರೆಯರ ದುಃಖಕ್ಕೆ ತಾನೇ ಕಾರಣಳೆಂದುಕೊಂಡು ಪರಿತಪಿಸುತ್ತಿರುವ ಕೈಕೆ, ತನ್ನ ಕಡೆಗೇ ನಟ್ಟದೃಷ್ಟಿಯುಳ್ಳ ಕೋಸಲರ ವಾನರರ ಮತ್ತು ಲಂಕಿಗರ ಗುಂಪಿನ ನಡುವೆ, ಯಾವ ಮುಖದಲ್ಲಿ ಸೀತಾರಾಮರನ್ನು ಸ್ವಾಗತಿಸಿಯಾಳು! ರಾಮಾಗಮನ ವಾರ್ತೆ ಮುಟ್ಟಿದಾಗ ಸುಖದುಃಖಗಳ ಸಮ್ಮಿಶ್ರ ಭಾವದಿಂದ ಪುಳಕಿತಳಾಗಿರಬೇಕು—ರಾಮಸೀತೆಯರನ್ನು ಮತ್ತೆ ನೋಡುವ ಸುಖ, ಹಿಂದಿನ ನೆನಪು ಅಳಿಸದ ದುಃಖ. ಕೌಸಲ್ಯೆ ಅಕ್ಕನಾಗಿ ಎಷ್ಟೆಯ ಅಕ್ಕರೆಯನ್ನೆಲ್ಲ

ಬಸಿದು ಅವಳನ್ನು ಸಂತೈಸಿ ನಂದಿಗ್ರಾಮಕ್ಕೆ ಕರೆದೊಯ್ಯುವ ಕರ್ತವ್ಯದಲ್ಲಿ ತೊಡಗುತ್ತಾಳೆ. ತನ್ನ ಬಳಿಗೆ ಬಂದ ಸೊಸೆಯನ್ನು ಕುರಿತು ಸುಮಿತ್ರೆ ಹೇಳಿದ ಮಾತು ಅವಳ ಔದಾರ್ಯವನ್ನು ಪ್ರಕಟಗೊಳಿಸುವುದರ ಜೊತೆಗೆ ಕೈಕೆಯ ಅನ್ಯೋಯನಾದ ದುಃಖಕ್ಕೆ ಕನ್ನಡಿ ಹಿಡಿಯುತ್ತವೆ :

ಊರ್ಮಿಳೆ, ನಮ್ಮ ಸಂಕಟಕಿಂದು ಬಂದುದು
ವಿರಾಮಮಾ ಕೈಕೆಯ ಮನೋವ್ಯಥೆಗೆ ಪೇಳೆಂದು
ಬರ್ಪುದೊ ಪರಿಸಮಾಪ್ತಿ ? ಬಾ, ನಡೆವಮಾಕೆಯಂ
ತಣಿಸಿ ಸಂತೈಸಿ ಕರೆದೊಯ್ವಮಾ ರಘುರಾಮ
ಮೇಣ್ ಭರತ ಸಂದರ್ಶನದ ಪುಣ್ಯದರ್ಶನಕೆ ! "

ರಾಮಜನನಿಯ ತೋಳ ತೆಕ್ಕೆಯಲ್ಲಿ

" ಕೃಶ ಮಲಿನ ಮೂಕ ಶೋಕದ ಶಿಲಾಪ್ರತಿಮಳಂ,
ಪಾಳ್‌ವಿಳ್ದ ಪೂಜಾರಹಿತ ದೇವಮಂದಿರದ
ವಿಗ್ರಹಂಬೋಲ್ ಮ್ಲಾನೆಯಂ, ಸಂಸ್ಕಾರ ಹೀನೆಯಂ
ಗುರುದುರಿತ ದುಃಖಭಾರದಿ ಕುಸಿದ ಕಡುದೀನೆಯಂ "

ಅವರಿಬ್ಬರೂ ಸಂದರ್ಶಿಸುತ್ತಾರೆ. ಮಣಿದ ಊರ್ಮಿಳೆಯನ್ನೆತ್ತಿ ಮುತ್ತೊತ್ತಿ ಕೈಕೆ ತುಟಿ ಅಲುಗಿಸದೆ ಶಿಲಾಮೌನದಿಂದ ಕಣ್ಣೀರ್ಗರೆಯುತ್ತಾಳೆ. ಆಕೆಯನ್ನಾರು ಸಂತವಿಸಬಲ್ಲರು ? ಕೌಸಲ್ಯೆ ಸುಮಿತ್ರೆಯರ ಪ್ರತಿನಿಧಿಯಾಗಿ, ರಾಮಲಕ್ಷ್ಮಣ ಸೀತೆಯರ ಪ್ರತಿನಿಧಿಯಾಗಿ, ಭರತ ಶತ್ರುಘ್ನರ ಪ್ರತಿನಿಧಿಯಾಗಿ—ಇಡೀ ಲೋಕದ ಪ್ರತಿನಿಧಿಯಾಗಿ ಅವರು ಹೇಳುವುದನ್ನೆಲ್ಲ ಆ ಚಿರತಪಸ್ವಿನಿ ಊರ್ಮಿಳೆಯೆ ಹೇಳಿ ಸಂತವಿಸುತ್ತಾಳೆ :

" ಅಮ್ಮ,
ನಿಮ್ಮ ದುಃಖದ ಮೇರೆಯಂ ನಾನಳೆಯಲಾರೆ :
ಚಿಕ್ಕವಳ್. ನಮಗಾಗಿ, ನಿಮ್ಮ ಮಕ್ಕಳಿಗಾಗಿ,
ಓಕರಿಸದೀಂಟವೇಳ್ಕು ಕಾಳಕೂಟೋಪಮದ
ಹೃತ್ತಾಪಮಂ. ತಾಯಿ, ನಿನಗಲ್ಲದಿನ್ನಾರ್ಗೆ, ಪೇಳ್,
ಸಂಮಥಿತ ದಶರಥ ತನೂಜ ಜೀವಿತ ಕಥಾ
ಸಾಗರೋತ್ಥಿತ ಘೋರ ಗರಳಮಂ ಧರಿಸುವ
ಶಿವಾಶಿವಶ್ರೀಕಂಠಶಕ್ತಿ ? ಆಶೀರ್ವದಿಸು,"

ಸಿದ್ಧಿಪಡೆದ ಆ ಶಿಲಾಮೌನಿ ಊರ್ಮಿಳೆಗೆ, ಅವಳ ಮೂಲಕ ಲೋಕಕ್ಕೆ ಕೊಡುವ ಉತ್ತರವಾದರೂ ಏನು ? ಬರಿಯ ನಿಟ್ಟುಸಿರು ; ಮುತ್ತಿನ ಸುರಿಮಳೆ ; ಮಿಂಚಿನಂಥ ನಸುನಗೆ. ನಕ್ಕು ಹದಿನಾಲ್ಕು ವರ್ಷವಾಗಿದೆ ; ಆ ನಗೆಗೂ ಈ ನಗೆಗೂ ಬಹು ಅಂತರ! ಒಳ್ಪ ನಕ್ಕಂತೆ ನಕ್ಕಳಂತೆ ! ಹದಿನಾಲ್ಕು ವರ್ಷದ ಹಿಂದೆ ಮಾತಾಡಿದ್ದು ! ಬಹುಶಃ ನಾವನ ಮನೆಯಿಂದ ಹಿಂದಿರುಗಿದ ಮಗನೊಡನೆ ಆಡಿದುದೆ ಕೊನೆಯ ಮಾತು !

ಈಗಲಾದರೂ ಮಾತಾಡುತ್ತಾಳೆಯೆ? ತಪಶ್ಶಾಂತಿಯನ್ನು ಪಡೆದ ಆ ಧನ್ಯೆಗೆ ಮಾತು ತೋರುತ್ತದೆಯೆ? ತಾನೆ ಶ್ರೀರಾಮನೆಡೆಗೆ ನಡೆದು, ತನ್ನಡಿಗೆ ಮಣಿದಾತನನ್ನು ಚಿನ್ಮಯ ಮಹಾಮೌನದಿಂದ ಹರಸುತ್ತಾಳೆ. ಅವಳ ಪ್ರಥಮ ಸಂದರ್ಶನದಿಂದಲೆ ಶ್ರೀರಾಮ ಪುಳಕಗೊಂಡಿರಬೇಕು!

"................ಪಾಪಿಗುದ್ಧಾರ ಮಿಹುದೌ
ಸೃಷ್ಟಿಯ ಮಹದ್‌ವ್ಯೂಹರಚನೆಯೊಳ್, ಕೇಳ್, ತಾಯಿ:
ಬೆರಳಿಚದ ಕೂರ್ಗ್ರೆನೆಯ ಮಿಡಿವ ಹಿಂಸೆಗೆ ತಂತಿ ತಾಂ
ಬೀಣೆಯಿಂಚರವೀಯುವಂತೆ, ನೀನುಗುರಾಗಲಾ
ವೈಣಿಕವಿಧಿಯ ಕೈಗೆ, ಪ್ರೋಣ್ಮೆದತ್ತಿಂಪಾಯ್ತು ಮೇಣ್
ಭಗವದ್ ರಸಧಿಯಾಯ್ತು ರಾಮಾಯಣ ಬೃಹದ್‌ಗೀತೆ!



# ಶ್ರೀ ಕುವೆಂಪು ಅವರೊಡನೆ ಒಂದು ಸಂಜೆ

## ಎಸ್. ಎಂ. ವೃಷಭೇಂದ್ರಸ್ವಾಮಿ

೪-೧೨-೧೯೫೨ ನೇ ಗುರುವಾರ ಪಾಠ ಮುಗಿಯಿತು. ನನ್ನ ಸಹಪಾಠಿಗಳೆಲ್ಲ ಹೊರಗೆ ಹೋದರು. ನಾನೊಬ್ಬ ಹಿಂದೆ ಉಳಿದೆ. ಕಳೆದದಿನ ಮಹರ್ಷಿ ಅರವಿಂದರ 'ಸಾವಿತ್ರಿ'ಯ ಬಗ್ಗೆ ಮಾತನಾಡುವಾಗ, ಅದರ 'ಪರಿಚಯ' ಹಿಂದೂ ಪತ್ರಿಕೆಯಲ್ಲಿ ಬಂದಿದೆ ಎಂದು ತಿಳಿಸಿದ್ದೆ. ಅದನ್ನು ನೋಡಬೇಕೆಂದಿದ್ದರು ಕುವೆಂಪು. ಈ ದಿನ ಆ 'ಕಡಿಕಾಲಂ' ಸುದ್ದಿಯನ್ನು ತೋರಿಸಿದೆ. "ನಿಧಾನವಾಗಿ ನೋಡಿಕೊಡುತ್ತೇನೆ. ನನ್ನಹತ್ತಿರ 'ಸಾವಿತ್ರಿ'ಯ ಕೆಲವು ಭಾಗಗಳು ಮಾತ್ರ ಇವೆ. ಉಳಿದುವನ್ನು ತರಿಸಿ ಬೈಂಡುಮಾಡಿಸಬೇಕು" ಎಂದರು. ಅನಂತರ ಸ್ವಲ್ಪಹೊತ್ತು ಮೌನ. ಆ ಆಧ್ಯಾತ್ಮಿಕ ಮಹಾಕಾವ್ಯವನ್ನು ಕುರಿತು ಆಲೋಚಿಸುತ್ತಿದ್ದರೆಂದು ಕಾಣುತ್ತದೆ.

"ಎಲ್ಲಿ ನನ್ನ ಪುಸ್ತಕ?"

ನನಗೆ ದಿಗಿಲು ಬಿದ್ದಿತು. ಸ್ವಲ್ಪ ತಪ್ಪೆತ್ತುಕೊಂಡು, ಕಳೆದದಿನ ಕೊಟ್ಟಿದ್ದ ಪಾಠದ ಪುಸ್ತಕವಿರಬೇಕೆಂದು ಜ್ಞಾಪಿಸಿಕೊಂಡು,

"ಸಾಯಂಕಾಲ ಮನೆಯ ಹತ್ತಿರ ಬಂದು ಕೊಡುತ್ತೇನೆ" ಎಂದೆ.

"ಆಗಲಿ, ೫ ಗಂಟೆ ಸುಮಾರಿಗೆ ಬನ್ನಿ, ಮನೆಯಲ್ಲೇ ಇರುವೆ" ಎಂದರು.

ಸಾಯಂಕಾಲ. ಪಶ್ಚಿಮದ ಮೋಡಗಳು ಬೇಕುಬೇಕಾದ ಬಣ್ಣವನ್ನು ಬಳಿದುಕೊಂಡು, ಸೌಂದರ್ಯ ಪ್ರದರ್ಶನಕ್ಕೆ ತೊಡಗುತ್ತಿದ್ದುವು. ಮೈಸೂರಿನ ಕಣಿವೆಯ ಭಾಗದಿಂದ ಒಂಟಿಕೊಪ್ಪಲಿನ ಉನ್ನತ ಪ್ರದೇಶಕ್ಕೆ ಸೈಕಲ್ ಹತ್ತಿ ಧಾವಿಸಿದೆ. 'ಉದಯರವಿ' ಸಮೀಪಿಸಿದ ಕೂಡಲೇ, ಇಳಿದು, ಒಳಗೆ ಕಣ್ಣಿಟ್ಟೆ. 'ಉದಯರವಿ'ಯ ತೋಟವಂತೂ, ಎಂದಿಗೂ ಪುಟ್ಟ ಮಲೆನಾಡಿನಂತೆಯೇ ಇರುತ್ತವೆ. ಆದರೆ, ಇಂದು ಕವಿಸಂಸಾರವೆಲ್ಲ ತೋಟದಲ್ಲಿ ಇದ್ದುದರಿಂದ ಅದಕ್ಕೆ ಒಂದು ಅಪೂರ್ವ ಶೋಭೆ ಬಂದಂತಿತ್ತು. ಇಳಿದ ನನ್ನನ್ನು ಕುವೆಂಪು ನೋಡಿ, ಮಕ್ಕಳ ದಬ್ಬುವ ಗಾಡಿಯನ್ನು ಸರಿಮಾಡುವುದನ್ನು ನಿಲ್ಲಿಸಿ, ನನ್ನೆಡೆಗೆ ಬಂದರು. ನಾನು ವಂದನೆ ಸಲ್ಲಿಸಿದೆ.

"ನಿಲ್ಲಿ, ಬರುತ್ತೇನೆ........ಹೊರಗಡೆ ಹೋಗೋಣ" ಎಂದರು ಕುವೆಂಪು. ನನಗದೇಬೇಕಾಗಿತ್ತು. ಬಹುದಿನಗಳಿಂದ ಹಂಬಲಿಸುತ್ತಿದ್ದೆ. ಹಾಗೆ, ಓಡಾಡುತ್ತಾ ಮಾತನಾಡುತ್ತಾ ಇರುವಾಗ, ಮುಖ್ಯವಿಷಯಗಳ ಬಗ್ಗೆ ನಿರ್ಭಯವಾಗಿ ಮಾತನಾಡಬಹುದು. ಹಾಗೂ, ಅವರ ವ್ಯಕ್ತಿತ್ವದ ಪರಿಚಯ ಚೆನ್ನಾಗಿ ಆಗಬಹುದೆಂದು ಬಯಸಿದ್ದೆ.

ಅಷ್ಟರಲ್ಲಿ, ಕಂದುಬಣ್ಣದ, ನೋಟುಗೈಯ ಕೋಟೊಂದನ್ನು ತೊಟ್ಟುಕೊಂಡು

ಹೊರಬಂದರು. ಅವರ ಇಂದಿನ ಸೈಜಿಗೆ ಸಣ್ಣದಾಗಿತ್ತು ಅದು.

"ಬನ್ನಿ, ಈ ದಿನ ಹಾಗೇ ಇಲ್ವಾಲ ರೋಡಿನ ಕಡೆ ಹೋಗೋಣ. ಅಲ್ಲಿಂದ ನೀವು ಹಾಗೇ ಹೋಗಿಬಿಡಬಹುದು" ಎಂದರು. ನಾನು ಸೈಕಲ್ ದಬ್ಬುತ್ತಾ ಅವರೊಡನೆ ಹೊರಟೆ. ಬೀದಿಗಳನ್ನು ದಾಟಿ ಹೊರಟೆವು. ಊರಹೊರಗೆ ಹೋದ ನಂತರ, ದಾರಿಯನ್ನು ಬಿಟ್ಟು, ಹಾಗೆಯೇ ಬಯಲಿನಲ್ಲಿ ಸಾಗಿದೆವು. ಕಲ್ಲು, ಮುಳ್ಳು, ತಗ್ಗುದಿನ್ನೆಗಳನ್ನು ಲೆಕ್ಕಿಸದೆ, ನಿಧಾನವಾಗಿ ಸಾಗುತ್ತಿದ್ದೆವು.

"ನೋಡೀ, ನಮ್ಮ ಮಲೆನಾಡಿನಲ್ಲಿ ನಾನು ಹೀಗೆಯೇ. ಕಾಡಿನಲ್ಲಿ ನುಗ್ಗಬೇಕು, ಅಲ್ಲಲ್ಲಿ ತಿರುಗಾಡಬೇಕು. ದಾರಿಹಿಡಿದು ಹೋದರೆ ಮಲೆನಾಡಿನ ಸೌಂದರ್ಯವನ್ನು ನೀವೇನೂ ಅನುಭವಿಸಲಾರಿರಿ" ಎಂದರು.

"ನಿಮ್ಮ 'ಹೋಗುವೆನು ನಾ ಮಲೆಯನಾಡಿಗೆ' ಇದೆಯಲ್ಲ, ಸಾರ್"

"ಒಂದು ಕೆಲ್ಸ. ನನಗೆ ಮೊದಮೊದಲು ಮಲೆನಾಡಿನ ಬಗ್ಗೆ ಇಲ್ಲದ ಗೀಳು. ಎರಡು ದಿನ ರಜೆ ಇದ್ದರೂ, ಆ ರಾತ್ರಿಯೆ ರೈಲು ಹತ್ತುತ್ತಿದ್ದೆ. ಅಲ್ಲಿ 'ಹಸುರು ಹುಚ್ಚು ಹಿಡಿದ ನೆಲ'.... ನೋಡಬೇಕು ನೀವು" ಎಂದರು.

"ಮಲೆನಾಡಿನ ಸೆರಗು ಈ ಮೈಸೂರಿನಲ್ಲೂ ಆ ಹಸುರಿನ ವೈಭವವನ್ನು ಕಾಣಬಹುದು, ಸಾರ್."

"ನೋಡಿ, ಹಸುರು ಎಂದ ಕೂಡಲೇ ಒಂದು ಮಾತು ನೆನಪಾಯಿತು. ಈಗ ಕಾರಿಟ್ಟಿದ್ದೇನೆ, ಕಾಲೇಜಿಗೆ ಬಂದು ಹೋಗುತ್ತೇನೆ. ಮೊದಲೆಲ್ಲಾ ನಡೆದೇ ಬರುತ್ತಿದ್ದೆ. ಈಗ ಎಂದಾದರೂ ಚನ್ನಾಗಿ ಮಂಜು ಬಿದ್ದಿದ್ದಾಗ, ಮಳೆ ಬಂದು ಬೆಳೆಯೆಲ್ಲಾ ಕಳ ಕಳಿಸುತ್ತಿದ್ದಾಗ, ಕಾರಿನಲ್ಲಿ ಚಾಮುಂಡಿ ಬೆಟ್ಟಕ್ಕೋ, ಶ್ರೀರಂಗಪಟ್ಟಣದ ಗದ್ದೆಯ ಬಯಲಿಗೋ ಹೋಗಿ, ಒಂದೆರಡುಗಂಟೆ ಇದ್ದು, ಹಸುರನ್ನು ನೋಡಿ ಬರುತ್ತೇನೆ. 'ಹಸುರಾದುದು ಕವಿಯಾತ್ಮಂ ರಸಪಾನಾನಂದದಲಿ'" ಎಂಬಂತೆ

ನಾನು ಮಧ್ಯೆ ಬಾಯಿ ಹಾಕಬಾರದೆಂದು, ಸುಮ್ಮನೇ ಹೂಂಗುಟ್ಟುತ್ತ ಸಾಗುತ್ತಿದ್ದೆ.

"ಈ ಪ್ರಕೃತಿ ಅಂಥ ತೃಪ್ತಿಯನ್ನು ಕೊಡುತ್ತದೆ ನನಗೆ.... ನಮ್ಮ ತೋಟದ ಆ ದೊಡ್ಡ ಗುಲಾಬಿಗಿಡ ನೋಡಿದ್ದೀರಲ್ಲ. ಒಂದು ಬಾರಿ ತರಗತಿಯಲ್ಲಿ ಹೇಳಿದ್ದೆನಲ್ಲಾ ಅದೇ. ಮೈತುಂಬ ಹೂ........"

ಸ್ವಲ್ಪ ಹೊತ್ತು ಮೌನವಾಗಿದ್ದರು. ಕುವೆಂಪು ತಮ್ಮ ಹೃದಯಾನುಭವಗಳನ್ನು ಹೇಳುವಾಗ, ಇಂಥ ತಡೆ ಅನಿವಾರ್ಯವಾಗಿ ಬಂದು ಹೋಗುತ್ತದೆ. ಪಾಠ ಮಾಡುವಾಗಲೂ ಇದನ್ನು ಗಶಿ೯ಸಬಹುದು!....

"ನೋಡೀ, ಆ ಗುಲಾಬಿ........ ನನಗೆ ಗಿಡವಲ್ಲ, it is the Divine Mother, ಮಹಾಮಾತೆ, ಮಹಾಮಾತೆ....." ತಡಕಾಡಿದರು, ಮಿಡುಕಾಡಿದರು.

" ಹೇಳಿದರೆ ಹಾಳಾಗುವುದು ಅನುಭವದ ಸಸಿಯು
ಹೇಳದಿರೆ ತಾಳಲಾರನೊ ಕವಿಯು "

ಎಂಬ ಅವರ ಮಾತಿನ ನಿದರ್ಶನ ಅವರಲ್ಲಿ ಕಾಣಿಸಿತು.

" ಆಹಾ ! ಎಂತೆಂಥ ಅನುಭವಗಳು ! ಕವಿಯ ಮನಸ್ಸಿನಲ್ಲಿ, ಯಾವ ರೂಪವನ್ನೂ ತಾಳದೆ, ಕಾವ್ಯವಸ್ತು ಇರಬಹುದು ಎಂದಿಷ್ಟೆನಲ್ಲಿವೆ ? ಹಾಗೆಯೇ ನನ್ನ ಕೆಲವು ಅನುಭವಗಳು....ಈಗ ಮೂರು ಪದ್ಯಗಳ ಭಾವಗಳು ಅರೂಪಸ್ಥಿತಿಯಲ್ಲಿ ಓಡಾಡುತ್ತಿವೆ....ಹೆಸರುಗಳು ಕೂಡಾ ಸಿದ್ಧವಾಗಿವೆ....ಒಂದು....'ಅಧಿದೇವತಾವಿರ್ಭಾವ'....ಇನ್ನೊಂದು....'ಕವಿ....ಮಾನಸ ಪೂಜಾ', ಮತ್ತೊಂದು....ಮತ್ತೊಂದು....ಎಲ್ಲೋ ಹೋಗಿಯೇ ಬಿಟ್ಟಿತು " ಎಂದರು. ನಾನೆಂದೆ,

" ಸಾರ್, ಈಚೆಗೆ ಬರುತ್ತಿರುವ ನಿಮ್ಮ ಕವನಗಳಲ್ಲಿ ಸೌಂದರ್ಯಾಂಶ ಕಡಿಮೆ, ಏನೋ, ಆಧ್ಯಾತ್ಮ...ಅತೀಂದ್ರಿಯ....ಎಂಬ ಟೀಕೆ ಇದೆ."

"ಹಾಗೆಂದರೆ ಏನು ಹೇಳಲಿ ? ನನಗೆ ಈಗ ಒದಗುವ ಅನುಭವಗಳು ಅಂತಹವು. ಅವನ್ನೇ ಬರೆಯುತ್ತೇನೆ."

" ಅವನ್ನು, ಹಾಗಾದರೆ ಭಾವಗೀತೆಗಳೆನ್ನುವುದಕ್ಕಿಂತ 'ಆಧ್ಯಾತ್ಮಗೀತೆ' ಗಳೆನ್ನೋಣವೇ ?"

" ಎಂದುಕೊಳ್ಳಿ, ಆದರೆ, ಹಿಂದಿನಂತೆಯೇ ಮರ, ಗಿಡ, ಪಕ್ಷಿ...ಅದೇ ವಿಷಯ ಬರೆಯಿರೆಂದು ಮಾತ್ರ ಹೇಳಬೇಡಿ "

" ಹಾಗೆ, ಕೇಳಿದರೂ ತಪ್ಪೇನಿದೆ ಸಾರ್, ನಮಗೇ ಬೇಕಾದ್ದನ್ನು...."

" ನೋಡಿ, ಆಗ ಚಿಕ್ಕವನಿದ್ದೆ, ಕೂದಲು ಬರುತ್ತಿರಲಿಲ್ಲ, ಮೀಸೆ ಬಿಡುತ್ತಿರಲಿಲ್ಲ, ಈಗ ಬೆಳೆದಿದ್ದೇನೆ, ಈಗ ಮೀಸೆ ಬಿಟ್ಟಿದ್ದೇನೆ. ಅದನ್ನೇಕೆ ಬೇಡವೆನ್ನುತ್ತೀರಿ, ಬೆಳೆಯುವುದು, ವಿಕಾಸವಾಗುವುದು ಸಹಜ ಗುಣ, ಅಲ್ಲವೆ ?

" ಸಾರ್, 'ಮಲ್ಗಿನಾಡಿನಲಿ ಮದುಮಗಳು' ಎಂಬ ಕಾದಂಬರಿ ಬರೆಯಬೇಕೆಂದಿದ್ದೀರೆಂದು ಎಲ್ಲೋ ಓದಿದ ಜ್ಞಾಪಕ. ಈಗ....?"

" ನೋಡೀ, 'ಹೆಗ್ಗಡಿತಿ' ಬರೆಯಲು ನಾಲ್ಕು ವರುಷ ಹಿಡಿಯಿತು. ಈಗಿನವರಂತೆ, ಹದಿನೈದು ದಿನಕ್ಕೆ, ಮೂರು ತಿಂಗಳಿಗೊಂದು ಕಾದಂಬರಿ ಬರೆಯಲು ನನ್ನಿಂದಂತೂ ಸಾಧ್ಯವಿಲ್ಲ...ಆ ಹೊಸ ಕಾದಂಬರಿಯ ಸ್ವಲ್ಪ ಭಾಗವನ್ನು ಬರೆದಿದ್ದಂತೆ ನೆನಪು, ಎಲ್ಲೋ ಇರಬೇಕು, ಸಾಧ್ಯವಾಗುವುದೋ ಇಲ್ಲವೋ ಕಾಣೆ"

" ಈಗ ಪುನಃ 'ಕಾನೂರು ಹೆಗ್ಗಡಿತಿ'...."

" ಹೌದು, ಬರುತ್ತಿದೆ. ಅಲ್ಲಲ್ಲಿ ಸ್ವಲ್ಪ ಸ್ವಲ್ಪ ಸೇರಿಸಿದ್ದೇನೆ. ನನ್ನ ಉದ್ದಿಷ್ಟ ಅರ್ಥವನ್ನು ತಿಳಿದುಕೊಳ್ಳಲು ಸಾಧ್ಯವಾಗದ ಸನ್ನಿವೇಶಗಳಲ್ಲಿ ಹಾಗೆ ಮಾಡಬೇಕಾಯಿತು."

ಅಷ್ಟರಲ್ಲಿ ಶ್ರೀ ರಾಮಕೃಷ್ಣಾಶ್ರಮದ ಸ್ವಾಮಿಗಳೊಬ್ಬರು ಎದುರಿಗೆ ಬಂದರು.

ನಮಸ್ಕಾರ ಪ್ರತಿ ನಮಸ್ಕಾರಗಳಾದನಂತರ ಸ್ವಾಮಿಗಳು ಮುಂದುವರಿದರು. ನಾವು ಕುಕ್ಕನಹಳ್ಳಿಯ ಕೆರೆಯ ಕಡೆ ಬರುತ್ತಿದ್ದೆವು. ಆ ಸಂನ್ಯಾಸಿಗಳು ಬಂದದ್ದರಿಂದ, ಮಾತು ಅತ್ತ ಹೊರಳಿತು. ಅವರು ಯಾರು, ಏನು, ಎಂದು ವಿಚಾರಿಸಿದೆ. ಅವರ ವಿಷಯ ಸಂಕ್ಷಿಪ್ತವಾಗಿ ತಿಳಿಸಿ,

"ಹೀಗೇ ಎಷ್ಟೋ ಅನುಭಾವಿಗಳ ವಿಷಯ ತೆರೆಯ ಮರೆಯಲ್ಲಿಯೇ ಉಳಿದಿರುತ್ತದೆ. ರಾಜಕೀಯ ನಾಯಕರಿಗೇ ಪತ್ರಿಕೆಗಳು ಮೀಸಲಾಗಿವೆ...."

"ಸಾರ್, ಶ್ರೀ ಸ್ವಾಮಿವಿವೇಕಾನಂದರ ಬಗ್ಗೆ ಬರೆದ ರೀತಿಯಲ್ಲಿ ಶ್ರೀ ಮಹರ್ಷಿ ಅರವಿಂದರ ಬಗ್ಗೆ ಒಂದು ಪುಸ್ತಕ ಬರೆಯುತ್ತಿದ್ದಿರೆಂದು ಕೇಳಿದೆ"

"ಹಾಗೇನೂ ಇಲ್ಲ, ಅವರ ಲೌಕಿಕ ಜೀವನದ ಬಗ್ಗೆ ಕೆಲವು ವಿಷಯ ತಿಳಿಯುತ್ತವೆ, ಅದು ಅವರ ಜೀವನದ ಅತಿ ಅಲ್ಪ ಅಂಶ, ಅವರ ಸಾಧನೆಯ ಭಾಗ ತಿಳಿಯಬೇಕಾದರೆ, we must go within....ಆ ಕೆಲಸ, ಸಾಮಾನ್ಯ ಚೇತನಗಳಿಂದಾಗದು....ತಿಳಿದಷ್ಟೆ ಸಂಗತಿಯನ್ನು ಆ ಒಂದು ಲೇಖನದಲ್ಲಿಯೇ (ಪುಸ್ತಕ ಪ್ರಪಂಚ) ಬರೆದಿದ್ದೇನೆ, ಅಷ್ಟೆ....ಈಗ ರಮಣ ಮಹರ್ಷಿಗಳ ಬಗ್ಗೆ, ಅಭ್ಯಾಸ ಮಾಡುತ್ತಿದ್ದೇನೆ."

"ಅಹುದು ಸಾರ್, ಅವರ ಬಗ್ಗೆ ಜನರಿಗೆ ತಿಳಿದಿರುವುದು ಬಹು ಸ್ವಲ್ಪ....ನೀವು ಬರೆದರೆ ಬಹಳ ಉಪಕಾರವಾಗುತ್ತದೆ." ಎಂದೆ.

"ನಿಜ, ಶ್ರೀ ರಾಮಕೃಷ್ಣ, ವಿವೇಕಾನಂದ, ಅರವಿಂದರು ಆಧ್ಯಾತ್ಮದಲ್ಲಿ ಒಂದು ಹೊಸ ಮಾರ್ಗ ಹಿಡಿದರು. ಆದರೆ, ರಮಣ ಮಹರ್ಷಿಗಳು ನಮ್ಮ ವೇದಕಾಲದ ಮಹರ್ಷಿಗಳ ಪ್ರತೀಕ. He is the true representative of those sages of yore....ಅವರ ಸಾಧನೆ, ಜೀವನ, ಎಲ್ಲ ಹಾಗೆಯೇ....

"ಅವರ ಜೀವನ ದರ್ಶನ ಮಾಡಿಸುವ ಕೃತಿ ಕನ್ನಡದಲ್ಲಿ ಒಂದೂ ಇಲ್ಲ."

"ಬೇರೆ ಭಾಷೆಯಲ್ಲೂ ಅಷ್ಟೆ, ಯಾರೊ ಒಬ್ಬರು, ಇಂಗ್ಲಿಷಿನಲ್ಲಿ 'ರಮಣ ಮಹರ್ಷಿ ಚರಿತ್ರೆ' ಬರೆದಿದ್ದಾರೆ. ಇನ್ನು ಅದರ ಜೊತೆಗೆ ಮೂರು ನಾಲ್ಕು ಪುಸ್ತಕಗಳು ಮಾತ್ರ ಇವೆ. ಅವನ್ನೇ ಓದುತ್ತಿದ್ದೇನೆ, ಒಂದು ಲೇಖನ ಬರೆಯಬೇಕೆಂದಿರುವೆ."

"ಶ್ರೀ ರಾಮಕೃಷ್ಣಪರಮಹಂಸರ ಮಾತುಗಳು "ಎಂ" ಅವರು ಹಿಡಿದಿಟ್ಟಂತೆ, ಯಾರೂ ಮಾಡಿಲ್ಲವೆಂದೇ ಕಾಣುತ್ತದೆ" ಎಂದೆ.

"ಇಲ್ಲ, ಇಲ್ಲ, ಅವರು ಹಳೆಯಕಾಲದ ಋಷಿಗಳೆಂದು ಹೇಳಲಿಲ್ಲವೆ? ಯಾವ ಬಯಕೆಯೂ ಇಲ್ಲದೆ, ತಾನೇತಾನಾಗಿ ಬೆಳೆದ ವಟವೃಕ್ಷ !! "

"ಅಷ್ಟರಲ್ಲಿ, ಇಲ್ವಾಲದ ಕಡೆಯಿಂದ, ಬಸ್ಸುಗಳೂ ಲಾರಿಗಳು ರಭಸವಾಗಿ ಬರಹತ್ತಿದವು. ಕೆರೆಯ ಕಡೆ ತಿರುಗಿದಾಗ, ರೋಡು ಹಿಡಿದು ಬರುತ್ತಿದ್ದೆವು. ಆಗ ನನ್ನ ಕೈಹಿಡಿದು ಪಕ್ಕಕ್ಕೆ ಎಳೆದು,

"ಇತ್ತ ಬನ್ನಿ....ಪೆಟ್ರೋಲ್ ಎಂಬುದೂ ಒಂದು ಮಾದಕ. ಅದನ್ನು ಕುಡಿಯುವ ಬಸ್ಸು ಲಾರಿಗಳಿಗೂ, ನಡೆಸುವವರಿಗೂ ಬುದ್ಧಿ ಸ್ಥಿಮಿತ ಇರುವುದೇ ಇಲ್ಲ.

ರೋಡು ಇರುವುದೆಲ್ಲಾ ನಮಗೇ ಎಂದು ತಿಳಿದ ಈ ನಾಗರಿಕರಿಂದ ನಮ್ಮ ಮೂಳೆ ಮುಖ ಉಳಿಸಿಕೊಳ್ಳಲು 'ದಾರಿಬಿಟ್ಟು' ನಡೆವುದೇ ಮೇಲು " ಎಂದರು.

" ನಿಮ್ಮ ಸಮಯವನ್ನು ಬಹಳ ತೆಗೆದುಕೊಂಡೆನೇನೋ...."

" ಹಾಗೇನೂ ಇಲ್ಲ. ನಾನು ಪ್ರತಿದಿನ ಮೂರು, ನಾಲ್ಕು ಮೈಲು ಸುತ್ತಾಡ ಬೇಕು. ಮೊದಲು ವ್ಯಾಯಾಮ, ಆಸನಗಳನ್ನು ಮಾಡುತ್ತಿದ್ದೆ. ಈಗ ಅವಿಲ್ಲ, ಆ 'ವ್ಯಾಯಾಮ' ವನ್ನು ಈ 'ವಿಹಾರ' ದಲ್ಲಿ ಭರ್ತಿಮಾಡಿಕೊಳ್ಳಬೇಕು. ಇದು ನನಗೆ ವ್ಯಾಯಾಮವಷ್ಟೇ ಅಲ್ಲ, ರಸಯಾತ್ರೆ ಕೂಡಾ!"

" ಅಹುದು ಸಾರ್, ಅರ್ಧಗಂಟೆಯಲ್ಲಾಗುವ ವ್ಯಾಯಾಮಕ್ಕೆ ಎರಡು ಗಂಟೆ ಕಳೆಯಬೇಕೆ ?....ಈ ರಸಯಾತ್ರೆಗಲ್ಲದಿದ್ದರೆ...."

ಆಗಲೇ ಮಬ್ಬು ಕವಿಯಲು ಪ್ರಾರಂಭಿಸಿತ್ತು. ರೈತರು ದನಗಳನ್ನು ಮನೆಯ ಕಡೆಗೆ ಓಡಿಸುತ್ತಿದ್ದರು. ಆ ಪೀಠ ಭೂಮಿಯಿಂದ ನೋಡಿದರೆ, ಚಾಮುಂಡಿಯ ತಪ್ಪಲಿ ನಲ್ಲಿ ವಿದ್ಯುದ್ದೀಪಗಳ ಹಂದರದಂತೆ ಕಾಣುವ ನಗರ, ದೀಪದ ಜರಿಯ ಅಂಚಿನ ವಸನ ವನ್ನು ಹೊದ್ದ ಚಾಮುಂಡಿ, ಸಮೀಪದಲ್ಲಿ ನಾಲ್ಕೂ ದಿಕ್ಕಿನ ದೀಪಗಳನ್ನು ಹೃದಯ ದಲ್ಲಿ ತಳೆದ ಕುಕ್ಕನಹಳ್ಳಿಕೆರೆಯ ದೃಶ್ಯಗಳನ್ನು ಕಾಣುವುದು 'ರಸಯಾತ್ರೆ' ಯಲ್ಲದೆ ಮತ್ತೇನು? ಮುಂದೆ ಬರುತ್ತಿದ್ದಂತೆ ಮುಖ್ಯಮಂತ್ರಿಗಳ ನಿವಾಸವಾದ 'ಜಲದರ್ಶಿನಿ' ಯ ದೀಪಗಳು ಕೆರೆಯಲ್ಲಿ ಪ್ರತಿಫಲಿಸಿದ್ದುದು ಕಾಣಿಸಿತು. ಅದನ್ನು ಕಂಡು, ಕುವೆಂಪು,

" ಬೆಳಕಿನ ಕಂಬಗಳು ನೀರಿಗಿಳಿದಂತಿವೆ ನೋಡಿ, ಆ ಜಲದರ್ಶನಿಯಿಂದ" ಎಂದರು.

" ಇನ್ನು ಮೇಲೆ, ಇಂಗ್ಲಿಷ್ ಶಿಕ್ಷಣ ಮಾಧ್ಯಮವಾಗುವುದೆಂದು ಕನಸಿನಲ್ಲಿಯೂ ಅಂದುಕೊಳ್ಳುವಂತಿಲ್ಲ. ಬರಲಿರುವ ಸುಧಾರಣೆಗಳಲ್ಲಿ ಶಿಕ್ಷಣ ಮಾಧ್ಯಮ ಕನ್ನಡವಾದ ರೇನೇ ಮಕ್ಕಳ ಓದು ಮೈಗೆ ಹತ್ತುತ್ತದೆ."

" ನಿಜ, ಸಾರ್, ಎಲ್ಲರೂ ಬದಲಾಗಬೇಕು ಎನ್ನುವವರೇ, ಧೈರ್ಯವಾಗಿ ಪರಿವರ್ತನೆ ಮಾಡುವವರಿಲ್ಲ" ಎಂದೆ.

" ನಾನಂತೂ ನನ್ನ ಸ್ಪಷ್ಟ ನಿಲುವೆಯನ್ನು ತಿಳಿಸಿಬಿಟ್ಟಿದ್ದೇನೆ. ನೂರು ಮಂದಿ ಮಕ್ಕಳಿಗೆ ನೀರು ನೀರು ಇಂಗ್ಲಿಷ್ ಕಲಿಸುವುದಕ್ಕಿಂತ, ಸಮರ್ಥರಾದ ಹತ್ತು ಮಂದಿಗೆ ಗಟ್ಟಿಹಾಲಿನಂಥ ಇಂಗ್ಲಿಷ್ ಕಲಿಸೋಣ"

" ಹಾಗೆಯೇ ಸಾರ್, ಶ್ರೀ ಡಿ. ವಿ. ಗುಂಡಪ್ಪನವರೂ, ಶಿಕ್ಷಣ ಮಾಧ್ಯಮದ ಬಗ್ಗೆ ದಿಟ್ಟವಾಗಿ ಮಾತನಾಡುತ್ತಿದ್ದಾರೆ."

" ಅಹುದು. ಹಾಗಾದರೇನೇ ಸಾಧ್ಯ. ಇನ್ನು ಯೋಚನೆಯಿಲ್ಲ ಬಿಡಿ, ಜನ ಸಾಮಾನ್ಯರೇ, ಕನ್ನಡ ಮಾಧ್ಯಮಬೇಕೆಂದು ಚಳುವಳಿಹೂಡುತ್ತಾರೆ. ಆಗ ಈ ಜನ ಏನುಮಾಡುತ್ತಾರೋ ನೋಡೋಣ" ಎಂದರು.

" ಜನ ಒಂದು ಮಾತು ಅನ್ನುತ್ತಿದ್ದಾರೆ, ಸಾರ್. ನಿಮ್ಮ ಮುಂದೆ ಆಡಲು

ಸ್ವಲ್ಪ ಸಂಕೋಚ...."

"ಅದೇನು ಹೇಳಿ, ಹೇಳಿ...."

"ಈ Round father (ಗುಂಡಪ್ಪ) ಹಾಗು little father (ಪುಟ್ಟಪ್ಪ) ಯಾರ ಮಾತನ್ನು ಕೇಳುವುದಿಲ್ಲ, ತಮ್ಮ ಕಸಿಮುಷ್ಠಿ ಬಿಡುವುದಿಲ್ಲ ಎನ್ನುತ್ತಾರೆ." ಕುವೆಂಪು ನಕ್ಕು, ನಕ್ಕು ಬಿದ್ದರು.

"ನೋಡೀ, ಇದು ಸರ್ವೋದಯ ಯುಗ, ಜನಮನದ ಶಕ್ತಿಮೇಣ್ ಅವರ ಅಭೀಪ್ಸೆ, ಬೇಕಾದ ಕೆಲಸ ಮಾಡುತ್ತದೆ. ನಾವಾಗಲಿ, ಸರಕಾರದವರಾಗಲೀ, ಮಾಡುವ ಕೆಲಸ ಸಾಮಾನ್ಯ ಜನರಮನಸ್ಸನ್ನು ತಟ್ಟಬೇಕು. ಹಾಗಾದರೇ ಸಾರ್ಥಕ....ಈ ಸಂಸ್ಕೃತಿಪ್ರಸಾರದ ಪರಿಣಾಮ ಏನಾಗಬಹುದೆಂದು ಈಗಲೇ ಊಹಿಸುವಂತಿಲ್ಲ. ಅದ ರದು ಅವ್ಯಕ್ತಪರಿಣಾಮ. ಅದರಲ್ಲಿಯೂ, ರಾಮಾಯಣ, ಮಹಾಭಾರತ ಓದುತ್ತಾ, ಯಾವುದೊಂದು ಕೋಮಿನ ಅರ್ಥ ಕಲ್ಪನೆಮಾಡಿ, ಪ್ರಚಾರ ಮಾಡಿದರೆ, ಮೌಢ್ಯ ಪ್ರಚಾರವಾದೀತು."

"ಸ್ವಲ್ಪ ಮಟ್ಟಿಗೆ ಹಾಗಾಗುತ್ತಿದೆ ಎಂದು ಕೇಳಿದ್ದೇನೆ."

"ಇರಬಹುದು, ಬಿತ್ತಿದ ಬೀಜವೆಲ್ಲಾ ಬೆಳೆದರೆ, ಏಕೆ?...."

"ಈ ಮತದ ಪಿಡುಗು ನಮ್ಮ ದೇಶದ ಬಹು ಹಳೆಯ ರೋಗ" ಎಂದೆ.

"ನಮ್ಮ ದೇಶವಷ್ಟೇ ಅಲ್ಲ, ಎಲ್ಲಾ ಕಡೆಯೂ ಇತ್ತು, ಈಗಲೂ ಇದೆ. ಕವಿ ಗಳಲ್ಲಿ 'ಮತಾಂಧತೆ' ಎಂಬ ಲೇಖನ ಬರೆಯಬೇಕೆಂದಿಷ್ಟೇನೆ. ಭಾರತೀಯರ ದೃಷ್ಟಿ ಯಲ್ಲಿ ಧರ್ಮ ನಿರ್ದಿಗಂತ! ಡಾಂಟೆ ಮುಂತಾದ ಮಹಾ ಮಹಾ ಪಾಶ್ಚಾತ್ಯ ಕವಿಗಳ ಲ್ಲಿಯೂ, ನಮ್ಮ ಕವಿಗಳಲ್ಲಿಯೂ ಈ ಮತ ಭ್ರಾಂತಿ ಹೇಗೆ ಹೇಗೆ ಬಂದು, ಅವರ ದರ್ಶನವನ್ನು ಕುಂಠಿತಗೊಳಿಸಿದೆ ಎಂಬುದನ್ನು ವಿವರಿಸಬೇಕೆಂದಿಷ್ಟೇನೆ. ಆದರೆ ಈಗಿನ ಕವಿ ಈ ಎಲ್ಲ ಬಂಧನಗಳನ್ನು ಕಿತ್ತೊಗೆದು ಸಮನ್ವಯ ದೃಷ್ಟಿ ಬೀರಬೇಕು. I am speaking of myself, too! ಈ ಕಾಲದಲ್ಲಿಯೂ ಮತದೃಷ್ಟಿಯನ್ನು ಬೆಳೆ ಯಿಸಿದರೆ, ಆಯಾ ಮತ ಹೇಳುವ ಮಾರ್ಗವನ್ನೇ ಹಿಡಿದು, ನಡೆದು, ಆಯಾ ಸ್ವರ್ಗಕ್ಕೋ, ವೈಕುಂಠಕ್ಕೋ ಹೋದರೂ ಅದೇ ನರಕ. ಬೇಕಾದರೆ ಅದನ್ನು dignified ನರಕ ಎನ್ನಿ !! ಇಂಥ ಸಮನ್ವಯ ಯುಗದಲ್ಲಿ ಹುಟ್ಟುವುದೇ ಪುಣ್ಯ. ಈಗಲೂ ಆ ಧರ್ಮ ಈ ಧರ್ಮ ಎನ್ನುವವನು ಹುಟ್ಟದಿದ್ದರೇ ಮೇಲು; ಈಗಾಗಲೇ ಹುಟ್ಟಿದ್ದರೆ ಬೇಗ ಸಾಯುವುದೇ ಮೇಲು. 'ಕಲಿಯುಗ' ಎಂದು ಕೆಟ್ಟ ಅರ್ಥದಲ್ಲಿ ಈ ಯುಗವನ್ನು ಕೆಲವರು ಕರೆಯಬಹುದು. ಆದರೆ ನಾನು ಇದನ್ನು 'ಕಲಿಯುವ ಯುಗ' ವೆಂದೇ ಕರೆಯುತ್ತೇನೆ. I would not have liked to be born in such an age, in which, even a great Poet like Dante, with such broad vision, is cramped in out-look! ಲೋಕ ಗುರುಕೃಪೆಯಿರಲಿ, ಲೋಕ ಕವಿ ಕೃಪೆ ಬರಲಿ" ಎಂಬುದು ಇಂದಿನ ಕವಿಯ

ನಾಂದಿ. ಇಂಥ ಕಾಲದಲ್ಲಿ ಹುಟ್ಟಿಯೂ ಸರ್ವೋದಯ ಕಲ್ಪನೆ ತಾಳದವನಿಗೆ ಇದೇ ನರಕ !!

"'ಲೋಕಗುರು' ಎಂದು ರಾಮಾಯಣ ದರ್ಶನದಲ್ಲಿ ಬರುತ್ತಿದೆಯಲ್ಲ, ಹಾಗಂದರೆ ಏಸು, ಬುದ್ಧ, ರಾಮ, ಕೃಷ್ಣ, ಮುಂತಾದ ಎಲ್ಲ ದೇವರುಗಳು...."

"ಉಹೂಹೂ ಅಲ್ಲ, ತಪ್ಪು ತಿಳಿದುಕೊಂಡಿದ್ದೀರಿ. ನನ್ನ ಅರ್ಥದಲ್ಲಿ ಲೋಕಕ್ಕೆ ಒಬ್ಬ ಜಗದ್ಗುರುವಿದ್ದಾನೆಂದಲ್ಲ, ಲೋಕವೇ ಗುರು. ಲೋಕದ ಜನ, ಪ್ರಕೃತಿ, ಹೊಳೆ, ಕಾಡು, ಕನಸು, ಕಾವ್ಯ, ಕಲ್ಪನೆ–ವಿಶ್ವದಲ್ಲಿ ಏನಿದೆಯೋ ಅದೆಲ್ಲಾ ಗುರುವಿನೋಪಾದಿಯಲ್ಲಿ ಕವಿಗೆ ಕೃಪೆ ಮಾಡಬೇಕು. ಬರೀ ಕನಸನ್ನೇ ತೆಗೆದುಕೊಳ್ಳಿ.... 'ಕೋಗಿಲೆ ಮತ್ತು ಸೋವಿಯಟ್ ರಷ್ಯಾ' 'ಕೂಸಿನ ಕನಸು', 'ಕಲ್ಕಿ', ಶ್ರೀರಾವಣನ ಕನಸು–ಮುಂತಾದುವುಗಳಿಗೆಲ್ಲ ಸ್ಫೂರ್ತಿ ನನಗೆ ಬಿದ್ದ ಕನಸುಗಳೇ. ಕಾವ್ಯ ಸೃಷ್ಟಿಯ ಪಾಠ ಕಲಿಸಿ ಕೊಡುವುದೆಲ್ಲಾ ಈ ಸೃಷ್ಟಿಯ ಗುರು ಅಥವಾ ವಿಶ್ವಗುರು.

"ಕೋಗಿಲೆ ಮತ್ತು ಸೋವಿಯಟ್ ರಷ್ಯಾದ ನಿಮ್ಮ ಭಾವನೆ ನನಗೆ...."

"ಸರಿ, ನನಗರ್ಥವಾಯಿತು. ಅದು ನನಗೆ ಕನಸಿನ ರೂಪದಲ್ಲಿ ಹೊಳೆವುದಕ್ಕೆ ಮುಂಚೆ Webb's book on 'Soviet land' ಓದಿದ್ದೆ. It is quite a strange dream. Though I don't have all admiration to all the satirical element in the Poem, I have written. I like and admire the worth of Russia, but my poem took an unusual shape."

ಮತ್ತೆ ಭಾರತೀಯ ಧರ್ಮದ ಕಡೆ ಮಾತು ಹೊರಳಿತು,

"ಈ ಧರ್ಮ ಸಮನ್ವಯ ದೃಷ್ಟಿ ನಮ್ಮವರಿಗೆ ಹೊಸದೇನಲ್ಲವಲ್ಲ"

"ನಿಜ, ನಾನಾಗಲೇ ಹೇಳಲಿಲ್ಲವೇ, ನಮಗೆ ಧರ್ಮ ನಿರ್ದಿಗಂತ (Horizon less) ವಾದುದೆಂದು. ಆದರೆ ಅದನ್ನು ಗುರುತಿಸುವ ಪ್ರತಿಭೆ ಬಹಳ ಜನರಿಗಿರಲಿಲ್ಲ. ಉದಾಹರಣೆಗೆ, ಚಾಮರಸನ 'ಪ್ರಭುಲಿಂಗಲೀಲೆ' ತೆಗೆದುಕೊಳ್ಳಿ, ಮತದೃಷ್ಟಿಯೊಂದಿಲ್ಲದಿದ್ದರೆ, ಪ್ರಭುವಿನ ಜೀವನದಲ್ಲಿ ಒಂದು ವಿಶ್ವವ್ಯಾಪಿಯಾದ ದರ್ಶನವನ್ನು ಕಾಣಬಹುದಾಗಿತ್ತು. ಅರವಿಂದರು ಕರೆಯುವ 'Gnostic Being' ಆ ಪ್ರಭು. ಅವನ ಬದುಕಿನಿಂದ ದಿವ್ಯದರ್ಶನದ ಮಹಾಕಾವ್ಯವೊಂದನ್ನು ತರಬಹುದಿತ್ತು. ಒಂದು ಜೀವ ಭವದಲ್ಲಿ ಹುಟ್ಟಿ, ಭವದ ಎಲ್ಲ ಬಂಧನಗೆಳಿಗೊಳಗಾಗಿ, ರಾಗ ದ್ವೇಷಗಳನ್ನು ಪಡೆದು, ಮಾಯೆಯಿಂದ ಪಾರಾಗಿ, ಜೀವನ್ಮುಕ್ತವಾದನಂತರವೂ, ಲೋಕ ಕಲ್ಯಾಣಾರ್ಥವಾಗಿ, ಲೋಕೋದ್ಧರಣ ಕಾರ್ಯಾರ್ಥವಾಗಿ, ಸಂಚರಿಸಿದ ದಿವ್ಯಾತ್ಮನ ದಿವ್ಯದರ್ಶನ ಆತನ ಬದುಕಿನಲ್ಲಿದೆ. ಬದ್ಧವಾಗಿದ್ದರೂ ಸಿದ್ಧ ಜೀವಿ ಅದು. ಆ ಸಿದ್ಧ ಜೀವಿಯ ಲೋಕೋದ್ಧಾರ ಕಾರ್ಯ ಅಂದಿಗೇ ಮುಗಿದು ಹೋಯಿತೆಂದಲ್ಲ, ಇಂದೂ ನಿರಂತರವಾಗಿ ಸಾಗುತ್ತಿದೆ. ಆ ಸಿದ್ಧಜೀವಿ, ಯಾವ ಆಕಾರ, ಯಾವ ರೂಪ, ಎಲ್ಲಿ ಬೇಕಾ

ದರೂ ತಾಳಿ, ಬಾಳಿ ನಿತ್ಯಗೋಚರವಾಗಬಹುದು. ಹಾಗೆ ಕಾಣಿಸುವುದು ಪವಾಡ ಮಾತ್ರವಲ್ಲ!

"ಇದನ್ನೇ ನೀವು ಇನ್ನೊಂದು ಮಹಾಕಾವ್ಯ ರೂಪದಲ್ಲಿ....?"

"ಇಲ್ಲ, ಇಲ್ಲ, ಹಾಗನಿಸಿದೆ ನನಗೆ. ಅಲ್ಲಮ ಮತ್ತು ಗೋರಕ್ಷರ ಪ್ರಸಂಗವನ್ನು ತೆಗೆದುಕೊಂಡು, ಒಂದು ನಾಟಕ ಬರೆಯಬೇಕೆಂದುಕೊಂಡಿದ್ದೇನೆ, ಇನ್ನೂ ಎಂದು ಬರೆಯುವೆನೋ ತಿಳಿಯದು"

"ನಾಟಕ ಎಂದರೆ, ಬೆರಳ್‍ಗೆ ಕೊರಳ್‍ನಂತೆ...."

"ಊ, ಹಾಗೆಯೇ, ಗೋರಕ್ಷ ಹಠಯೋಗಿ. He had attained the physical immortality of Matter. ಅಂದರೆ ಪಾಂಚಭೌತಿಕ ಅಮೃತತ್ವ, ಕಾಲದೇಶಾತೀತವಾದುದು" ಎನ್ನುತ್ತಾನೆ ಅಲ್ಲಮ. ಈ ದರ್ಶನಕ್ಕೆ ಈ ಕಥೆಯನ್ನು ಪ್ರತಿಮೆಯಾಗಿ ತೆಗೆದುಕೊಂಡು, ಅನ್ನಮಯದಿಂದ ಮೇಲೇರಿ, ಆನಂದಮಯದವರೆಗೆ, ಆತ್ಮ ಹೇಗೆ ವಿಕಾಸವಾಗುತ್ತದೆ ಎಂಬುದನ್ನು ಸೃಷ್ಟಿಸಬಹುದು. ಇದಕ್ಕಿಂತ ಹೆಚ್ಚಿನ ದರ್ಶನ ಧ್ವನಿ ಎಲ್ಲಿ ಸಿಕ್ಕೀತು! ಇದು ಎಂದೋ ನಡೆದುಹೋದುದಲ್ಲ, ಇಂದಿಗೂ ಪ್ರತಿಯೊಂದು ಜೀವಿಯ ಅಂತರಾಳದಲ್ಲಿಯೂ, ಪ್ರತಿ ನಿಮಿಷವೂ ನಡೆಯುವ ಕಾರ್ಯ! ಎಂಥ ಭವ್ಯದರ್ಶನ! ಇದು ಬೇಗ ನಮ್ಮ ಕಣ್ಣಿಗೆ ಗೋಚರವಾಗದು. ಭೌತಿಕ ಆಸೆ ಶೀಘ್ರ ಫಲಕಾರಿಯಾದುದನ್ನು ಮಾತ್ರ ಕಾಣುತ್ತದೆ, ಬಯಸುತ್ತದೆ. ಅದೇ ನನಗೆ ಸ್ಪಷ್ಟ ಎಂದೂ ತಿಳಿಯುತ್ತದೆ. ಆದರೆ ಶಾಶ್ವತವಾದುದನ್ನು ಕಾಣುವುದೇ ಕಷ್ಟ. ಕಂಡರೂ ಪಡೆಯುವುದು ಕಷ್ಟ. ಪಡೆದಮೇಲೆ ಎಲ್ಲ ಸುಲಭ!!

ಈ ಮಾತುಗಳನ್ನು ಆಡುತ್ತಿರುವಾಗ, ಬಯಲಿನ ಒಂದು ದಿಣ್ಣೆಯ ಮೇಲೆ ಇಬ್ಬರೂ ನಿಂತೇ ಬಿಟ್ಟಿದ್ದೆವು. ಅವರ 'ದರ್ಶನ' ವಿಚಾರಗಳನ್ನು ನನ್ನ ಮನಸ್ಸು ಭರಿಸಿಕೊಳ್ಳಲಾರದೆ ತತ್ತರಿಸುತ್ತಿತ್ತು! ಅವರ ಮುಖ, ದೂರದಿಂದ ಬರುವ ಮೋಟಾರಿನ ಬೆಳಕಿನಲ್ಲಿ ಗಂಭೀರವಾಗಿರುವಂತೆ ಕಾಣಿಸಿತು. ಹೋಗೋಣವೇ, ಕೂಡೋಣವೇ ಎಂಬ ಯಾವ ಅಲ್ಪ ವಿಷಯವನ್ನೆತ್ತಲೂ ನನ್ನ ಮನಸ್ಸು ಧೈರ್ಯಮಾಡಲಿಲ್ಲ. ಅಂತೂ, ಅನರ್ಘ್ಯ ಮುತ್ತುಗಳಿವೆ ಈ ಸಾಗರದಲ್ಲಿ ಎಂದುಕೊಂಡೆ.

ಆಗ ನಾನೆಂದೆ ನಿಮ್ಮ 'ಶ್ಮಶಾನ ಕುರುಕ್ಷೇತ್ರ' ಹಾಗೂ 'ಯಮನಸೋಲು' ಗಳಲ್ಲಿಯೇ ಈ ದರ್ಶನ ಮಿಂಚಿದಂತೆ ಭಾಸವಾಗುತ್ತದೆ.

"ಅದೇನೋ ನಿಜ, ಈಗ ನನಗೆ ಹಾಗನಿಸುತ್ತದೆ. ಅವನ್ನು ಬರೆವಾಗ ಈ ಯಾವ ಕಲ್ಪನೆಯೂ ನನಗಿರಲಿಲ್ಲ. ನೋಡಿ ಒಂದು ವಿಷಯ ನೆನಪಾಯ್ತು. ಸೆಂಟ್ರಲ್ ಕಾಲೇಜಿನಲ್ಲಿ ಒಮ್ಮೆ 'ಸ್ಮಶಾನ ಕುರುಕ್ಷೇತ್ರ' ಓದಿದೆ. ಕೇಳುತ್ತಿದ್ದ ಬಿ. ಎಂ. ಶ್ರೀ, ವೀರಕೇಸರಿ, ದೇವುಡು ಮುಂತಾದವರಿಗೆ ಅದ್ಭುತ ಪರಿಣಾಮವಾಗಿತ್ತು. ಮುಂದೆ ಕುಳಿತ ಅವರ ಮುಖ ಭಾವ ನಾಟಕದ ಭಾವಕ್ಕೆ ಅನುಗುಣವಾಗಿ ಬದಲಾಗುತ್ತಿದ್ದುದು ನನಗೆ ಕಾಣುತ್ತಿತ್ತು. ಎಲ್ಲ ಭಾವಗಳ ಆಲೋಡನಮಾಡಿ, ಕೊನೆಗೆ 'ಶಾಂತ

ರಸ'ಕ್ಕೇ ಬಂದು ನಿಂತಿತು. ಅದೂ ಕೂಡಾ ಈಚೀಚಗೆ ನನಗರಿವಾಗುತ್ತಿದೆ."

"ಯಮುನಸೋಲು ನಾಟಕದಲ್ಲಿ ನೀವೇ ಸತ್ಯವಾನನ ಪಾತ್ರ ವಹಿಸುತಿದ್ದಿರಂತೆ!"

"ಊ, ಒಂದೆರಡು ಬಾರಿ ವಹಿಸಿದ್ದೆ."

"ಆಗ ಒಂದು ಘಟನೆ ನೆನಪಿದೆಯೇ ನಿಮಗೆ? ನನ್ನ ಗೆಳೆಯರು ಹೇಳುತ್ತಿದ್ದರು"

"ಏನು, ಏನದು....ಸಂಕೋಚಬೇಡ, ಹೇಳಿ" ಎಂದರು.

"ಆಗಿನ್ನೂ ನೀವು 'ಕಿಶೋರ ಚಂದ್ರವಾಣಿ' ಎಂದು ಕರೆದುಕೊಳ್ಳುತ್ತಿದ್ದಿರಂತೆ. ಹಾಗೆಯೇ, ತೆಳ್ಳಗೆ ಮನೋಹರವಾಗಿದ್ದಿರಂತೆ. ನೀವೇ ಸತ್ಯವಾನನ ಪಾತ್ರ ವಹಿಸಿ, ನಾಟಕ ಮುಗಿದನಂತರ, ರಂಗದಮೇಲೆ ಬಂದುನಿಂತು 'ಪ್ರೇಕ್ಷಕರ ಅಭಿಪ್ರಾಯ ಗಳೇನು' ಎಂದು ಕೇಳಿದ್ದಿರಂತೆ! ಪ್ರೇಕ್ಷಕವೃಂದದಲ್ಲಿದ್ದ ನನ್ನ ಗೆಳೆಯರು 'ಸತ್ಯವಾನನ ಪಾತ್ರ ವಹಿಸಿದವರು ಸಾವಿತ್ರಿ ಪಾತ್ರವಹಿಸಿದ್ದರೆ ಚನ್ನಾಗಿತ್ತು!' ಎಂದರಂತೆ. ಸಭೆ ಯೆಲ್ಲಾ ನಗೆಯಲ್ಲಿ ಮುಳುಗಿತ್ತಂತೆ" ಎಂದೆ. ಸ್ವಲ್ಪ ಜ್ಞಾಪಿಸಿಕೊಂಡವರಾಗಿ, ನಗಲು ಪ್ರಾರಂಭಿಸಿದರು. 'ಎಷ್ಟೋ ಇಂಥ ರಸಮಯ ಸಂಗತಿಗಳು ಮರೆತೇಹೋಗುತ್ತವೆ ನೋಡಿ' ಎಂದರು. ಅನಂತರ 'ಉದಯರವಿ' ಕಡೆಗೆ ತಿರುಗಿದೆವು. 'ನೀವು ಇಲ್ಲಿಂದಲೇ ಹೊರಡಿ, ಮತ್ತೆ' ಎಂದರು. 'ಪರವಾಯಿಲ್ಲ ಸಾರ್, ಮನೆಯವರೆಗೆ ಬರುತ್ತೇನೆ, ಸೈಕ ಲ್‌ಗೆ ದೀಪವಿದೆ' ಎಂದೆ. ಅದೂ, ಇದೂ ಮಾತನಾಡುತ್ತಾ ಬಂದೆವು. ಕಾಲೇಜಿನ ವಿಚಾರ, ಪಾಠದ ವಿಚಾರ, ಕರ್ನಾಟಕ ಏಕೀಕರಣ, ಮುಂತಾದ ಮಾತುಗಳನ್ನಾ ಡುತ್ತಾ ಮನೆಯ ಸಮೀಪಕ್ಕೆ ಬಂದೆವು. ನಾನು ಕೊಡಬೇಕಾಗಿದ್ದ ಪುಸ್ತಕವನ್ನು ದಾರಿಯಲ್ಲೇಕೆ ಕೊಡಬೇಕೆಂದು, ಸೈಕಲ್ ನಿಲ್ಲಿಸಿ, ತೋಟದ ಗೇಟು ತೆಗೆದೆ. ತೋಟ ದಲ್ಲಿ ಹೂಗಳ ಕಂಪು ತೇಲುತ್ತಿತ್ತು. ಕುವೆಂಪು ಒಳ ನಡೆದು, ವರಾಂಡದಲ್ಲಿರಿಸಿದ್ದ ಕುರ್ಚಿಯಮೇಲೆ ಕುಳಿತು ನಾನೂ ಕುಳಿತುಕೊಳ್ಳಲು ತಿಳಿಸಿದರು. ನನ್ನಲಿದ್ದ ಪುಸ್ತಕ 'Idea of great poetry' ಕೊಟ್ಟೆ. ಅದರ ಹಾಳೆಗಳನ್ನು ಹಾಗೇ ತಿರುಗಿ ಹಾಕುತ್ತಿದ್ದರು.

"ಓದಿದಿರಾ?" ಎಂದು ಪ್ರಶ್ನಿಸಿದರು.

"ಓದಿದೆ, ಸಾರ್, ವಿಷಯಗ್ರಹಣಮಾಡಲು ಇನ್ನೂ ಕೃಷಿಮಾಡಬೇಕು" ಎಂದೆ.

"ಇಲ್ಲದಿದ್ದರೆ ಹೇಗೆ?"

"ಒಂದು ಪ್ರಶ್ನೆ, ಸಾರ್, ನಿಮಗೆ ಹೊತ್ತಾಗಿರಬಹುದು"

"ಇಲ್ಲ, ಇಲ್ಲ ಕೇಳಿ" ಎಂದು ಕುರ್ಚಿ ಸಮೀಪಕ್ಕೆ ಎಳೆದುಕೊಂಡು ಕುಳಿತರು. "ನೀವು ಬರೆಯಬೇಕೆಂದಿರುವ 'ಆದಿಕವಿ ಸಂಭೂತಿ'ಯಲ್ಲಿ ಈಗ ನೀವು ತಿಳಿಸಿದ ಸಮ ನ್ವಯ ದರ್ಶನ ವಿರಬಹುದೆಂದು ಕಾಣುತ್ತದೆ"

"ಖಂಡಿತ, ಖಂಡಿತ, ಆದರೆ ಅದರ ವಸ್ತುವಿನ್ನೂ ನನಗೇ ಸ್ಪಷ್ಟವಾಗಿಲ್ಲ."

"ಆದಿಕವಿ" ಎಂಬುದು ಒಂದು ವಟವೃಕ್ಷ. ಅವನಿಂದ ಬೇರೆ ಬೇರೆ ಭಾಷೆಗಳಲ್ಲಿ ಬೇರೆ ಬೇರೆ ಕವಿಗಳೆಂಬ ಕೊಂಬೆಗಳು ಕೊನರಿಕೊಂಡಿವೆ. ವಾಸ್ತವವಾಗಿ ಮೂಲ

ಕವಿಗೂ, ಉಳಿದ ಕವಿಗಳಿಗೂ ಭೇದವಿಲ್ಲ. ಅಥವಾ ಒಬ್ಬನೇ ಕವಿ ಬೇರೆ ಬೇರೆ ಕಾಲ, ದೇಶ, ಭಾಷೆಗಳಲ್ಲಿ ಆವಿರ್ಭವಿಸಿ, ಒಂದೇ ಸತ್ಯವನ್ನು ಬೇರೆಬೇರೆಯ ರೂಪದಲ್ಲಿ ಸೃಷ್ಟಿಸುತ್ತಾನೆ, ಕಾಂಡದಿಂದ ಕೊಂಬೆಗಳು ಕೊನರಿದಂತೆ. Poetic creation is a never-ending process. ಆದಿಕವಿ, ವಾಲ್ಮೀಕಿಯಾಗಿ ಹುಟ್ಟಿ, ರಾಮಾಯಣ ಕಟ್ಟಿದ. ಅವನೇ ಒಮ್ಮೆ ಭವಭೂತಿಯಾಗಿ, ನರಹರಿಯಾಗಿ, ತುಳಸಿದಾಸನಾಗಿ, ಕುವೆಂಪುವಾಗಿ ಪುನರವತರಿಸುತ್ತಾನೆ. ಮೊದಲಿನ ಕೃತಿಗೇ ಪುನಃ ನವ ಚೈತನ್ಯ ತುಂಬಿ ಕಟ್ಟುತ್ತಾನೆ. ಒಂದು ಕಾವ್ಯ ಕಟ್ಟುವಲ್ಲಿ ಕವಿಯ ಕೆಲಸ ಮುಗಿದನಂತರ ಸಹೃದಯರು ಕಟ್ಟುವ ಕೆಲಸ ಆರಂಭವಾಗುತ್ತದೆ. ಸರ್ವಸಹೃದಯ ಹೃದಯ ಹಾಗೂ ಬುದ್ಧಿ ಮೂಲಕೃತಿಯಮೇಲೆ, ಹೊಸ ಕೃತಿಯನ್ನು ಮನೋಮಯದಲ್ಲಿ ಕಟ್ಟಿ ನಿಲ್ಲಿಸಿದಾಗ, ಮತ್ತೊಬ್ಬ ಶ್ರೇಷ್ಠ ಸಹೃದಯ ಕವಿಯಾಗಿ, ಮತ್ತೊಮ್ಮೆ ಮೂಲ ಕೃತಿಯ ಮೇಲೆ ಹೊಸಕೃತಿಯನ್ನು ಕಟ್ಟುತ್ತಾನೆ. ಹೀಗೆ ಕಾವ್ಯ ಬೆಳೆಯುತ್ತದೆ. ವಾಲ್ಮೀಕಿಗಿಲ್ಲದ ದರ್ಶನ, ರಾಮಾಯಣ ದರ್ಶನದಲ್ಲಿ ಮೂಡಿದೆ. ಹಾಗೆಯೇ ಈ ಲೋಕದವರಿಗೆ ಯಕ್ಷನೌಕೆ (Flying Saucers) ಯ ಜನರ ಸಂಪರ್ಕ ಒದಗಿದಾಗ ಇದೇ ರಾಮಾಯಣ ಮತ್ತೇನೇನೋ ಹೊಸರೂಪ, ತಾಳಬಹುದು! ಇಲ್ಲಿ ಮೇಲು ಕೀಳಿನ ಪ್ರಶ್ನೆಯಿಲ್ಲ. ಕಾಲದ ಬೆಳವಣಿಗೆಯ ಅನಿವಾರ್ಯಧರ್ಮ ಇಂತಿದೆ.

ಶ್ರೀ ರಾಮಾಯಣ ದರ್ಶನದ

> " ಅನಾದಿ ಕವಿ ನಾಂಕಣ್ವ, ವಾಲ್ಮೀಕಿ
> ವ್ಯಾಸ ಹೋಮರ್ ದಾಂತೆ ಫಿರ್ದೂಸಿ ಮಿಲ್ಟನ್
> ಮಹಾಕವೀಶ್ವರರೆನಗೆ ಬಾಹು ಮಾತ್ರಗಳತ್ತೆ !
> ಬಹುನಾಮರೂಪಗಳ್, ಬಹುಕಾಲದೇಶಗಳ್
> ನನಗೆ " *

ಎನ್ನುವ ಸಾಲುಗಳಲ್ಲಿ ಈ ದರ್ಶನ ಧ್ವನಿತವಾಗಿದೆಯಲ್ಲವೆ?

" ರೈಟ್, ಚೆನ್ನಾಗಿ ಹಿಡಿದಿರಿ ನೋಡಿ. ಈ ಸತ್ಯ ಅರ್ಥವಾಗಬೇಕಾದರೆ ಜೊತೆಗೆ ಅದು ಪ್ರದರ್ಶಿತವಾಗಬೇಕಾದರೆ ಪುಕ್ಕಟೆಯಾದೀತೆ? ಲೋಕದ ಎಲ್ಲ ಮಹಾಕಾವ್ಯಗಳನ್ನೂ ಓದಬೇಕು, ತಪಸ್ಸು ಮಾಡಬೇಕು, ಹುತ್ತ ಹೊಗಬೇಕು, ಸತ್ತು ಹುಟ್ಟಬೇಕು. ಬರಿಯ Fools cap ಹಾಕಿಕೊಂಡು, ಒಂದು ನಿಮಿಷ ಮಟ್ಟಿಗೆ ಪ್ರಸಿದ್ಧಿಗೆ ಬರಬೇಕೆನ್ನುವ ಅಲ್ಪ ಚೇತನಗಳಿಂದಾಗದು!!

" ಅದನ್ನು ರಚಿಸುತ್ತೀರೆಂದು........"

---

*ಶ್ರೀ ರಾ. ದರ್ಶನ; ಸಂಪುಟ ೨. ಪುಟ ೮೬೯. ಸಾಲು ೩೪-೩೮

" ಏನೋ. ರೂಪ ತಾಳುವುದೋ, ಇಲ್ಲವೊ! who knows I may become a great Poet for an unwritten Epic " ಎಂದರು.

ಡಣ್, ಡಣ್, ಒಂಬತ್ತು ಹೊಡೆಯಿತು. ವಂದನೆ ಹೇಳಿ ಹೊರಗೆ ಬಂದೆ!



# ಕವಿವರ್ಯ ಶ್ರೀ ಕುವೆಂಪುರವರು

## ಹೆಚ್. ಎಂ. ಶಂಕರನಾರಾಯಣರಾವ್

ಶ್ರೀರಾಮನ ವಿರಹದಿಂದ ಬೆಂದು, ರಾವಣನ ಪರುಷವಾಕ್ಯಗಳಿಗೆ ಗುರಿಯಾಗಿ, ಅಶೋಕ ವನದಲ್ಲಿ ಕಾಲವನ್ನು ಕಷ್ಟದಿಂದ ನೂಕುತ್ತಿದ್ದ ಸೀತೆಗೆ ಹನುಮಂತನು ತಂದ ರಾಮವಾರ್ತೆ ಅಮೃತ ಸೇಚನದಂತಾಗಿ ಅವಳ ಬಾಯಿಂದ 'ಜೀವನ್ ಭದ್ರಾಣಿ ಪಶ್ಯತಿ' ಎಂಬ ಉದ್ಗಾರ ಹೊರಟಿತು. ಆ ಆರ್ಯೋಕ್ತಿ ಕಷ್ಟದಲ್ಲಿರುವ ಜೀವಿಗಳಿಗೆ ಇಂದಿಗೂ ಊರೆಗೋಲಾಗಿ ನಿಂತಿದೆ. ಅಷ್ಟೇ ಅಲ್ಲ, ಈ ಮಾತು ಮಾನವನ ಅಭ್ಯುದಯದ ಕಾಲಕ್ಕೂ ಅನ್ವಯಿಸುವುದೆನ್ನುವುದಕ್ಕೆ, ಈ ಶತಮಾನದ ಪೂರ್ವಾರ್ಧದಲ್ಲಿ ನಮ್ಮ ನಾಡಿನಲ್ಲಿ ಬದುಕಿದ್ದವರ ಜೀವನವೇ ಸಾಕ್ಷಿಯಾಗಿದೆ.

ಬ್ರಿಟಿಷರಿಂದಲೇ ಭಾರತಕ್ಕೆ ಮುಕ್ತಿ ಎನ್ನುತ್ತಿದ್ದವರ ಸೊಲ್ಲಡಗಿಸಿ, ಅಹಿಂಸಾ ಮಾರ್ಗದಿಂದ ಭಾರತಕ್ಕೆ ಬಿಡುಗಡೆಯನ್ನು ತಂದು ಪವಾಡವನ್ನು ಮೆರೆದ ಮಹಾತ್ಮಾ ಗಾಂಧಿಯವರ ಕಾಲದಲ್ಲಿದ್ದು ಅವರನ್ನು ನೋಡಿದ್ದು, ದೇಶಪ್ರೇಮಿ, ಸ್ವಾರ್ಥತ್ಯಾಗಿ ರಾಜಕಾರಣಪಟು ಶ್ರೀ ನೆಹರು ಅವರ ಸಮಕಾಲೀನರಾಗಿರುವುದು, ಶ್ರೀಯವರ ಕನ್ನಡ ಚಳುವಳಿಯ ದಿನಗಳನ್ನು ಕಣ್ಣಾರ ಕಂಡದ್ದು, ಹಾಗೆಯೇ ಕವಿವರ್ಯ ಶ್ರೀ ಕುವೆಂಪು ಅವರು ಕೇಂದ್ರಸರ್ಕಾರದಿಂದ ಬಹುಮಾನಿತರಾಗಿದ್ದುದನ್ನು ನೋಡಿದ್ದು– ಇವೇ ಮೊದಲಾದ ವಿಷಯಗಳನ್ನು ನೆನೆದುಕೊಂಡರೆ ಜೀವಂತನಾದವನು ಮಂಗಳಗಳನ್ನು ಕಾಣುವನು ಎಂಬ ಮಾತು ಅಕ್ಷರಶಃ ಸತ್ಯವೆನಿಸುತ್ತದೆ.

ಕನ್ನಡದ ಸ್ಥಿತಿಯನ್ನೇ ನೆನೆದರೆ, ಮೂವತ್ತು ವರ್ಷಗಳ ಹಿಂದೆ ನಮ್ಮ ಕಣ್ಣನ್ನು ಹರಿಯಿಸಿದರೆ ಈಗಿನದು ಕನ್ನಡದ ಭಾಗ್ಯೋದಯದ ಕಾಲವೆನ್ನಬಹುದು. ಆಗ ನಾನಿನ್ನೂ ಹೈಸ್ಕೂಲಿನಲ್ಲಿದ್ದೆ. ಕನ್ನಡದಲ್ಲಿ ನಮಗೆ ಅಕ್ಕರೆಯೇನೂ ಇರಲಿಲ್ಲ. ಇದಕ್ಕೆ ಮುಖ್ಯಕಾರಣ ಎರಡು. 'ಅಭಿವೃದ್ಧಿ ರತ್ನಾಕರ', 'ವಿಕ್ರಮ' ನಂತಹ ಗ್ರಂಥಗಳನ್ನಿಟ್ಟರೆ ಯಾವ ವಿದ್ಯಾರ್ಥಿಗೆ ತಾನೆ ತನ್ನ ನುಡಿಯಲ್ಲಿ ಅಕ್ಕರೆ ಹುಟ್ಟೀತು. ಜೊತೆಗೆ ಪಾಠ ಹೇಳುತ್ತಿದ್ದ ಪಂಡಿತರ ರೀತಿಯೂ ಇದಕ್ಕೆ ಅನುಗುಣವಾಗಿತ್ತು. ಹೀಗಿರುವಲ್ಲಿ ಆಗತಾನೆ ಮೈಸೂರಿನಿಂದ ದಾವಣಗೆರೆ ಹೈಸ್ಕೂಲಿಗೆ ವರ್ಗವಾಗಿ ಬಂದಿದ್ದ ಶ್ರೀ ಎಸ್. ವಿ. ಶ್ರೀನಿವಾಸರಾಯರು 'ಕಿರಿಯ ಕಾಣಿಕೆ'ಯಲ್ಲಿ ಪ್ರಕಟವಾಗಿದ್ದ 'ಬೊಮ್ಮನಹಳ್ಳಿಯ ಕಿಂದರಿ ಜೋಗಿ'ಯನ್ನು ಓದಿ ನಮ್ಮನ್ನು ಮರುಳು ಮಾಡಿದರು. ಈ ಹೊಸ ಕವಿತೆ ನಮ್ಮ ಮನಸ್ಸನ್ನು ಸೆರೆಹಿಡಿದು ಈ ತರುಣ ಕವಿಯಾರು ಎಂಬ ಕುತೂಹಲವನ್ನು ನಮ್ಮಲ್ಲಿ ಕೆರಳಿಸಿತು. ಈ ಕವನದಂತೆಯೇ ನಮ್ಮ ಮನಸ್ಸನ್ನು ಸೆರೆಹಿಡಿದ ಕವಿಯ ಇನ್ನೊಂದು ಕೃತಿ 'ಯಮನ ಸೋಲು'. ಆ ಹೆಸರಿನಲ್ಲಿಯೇ ಚಿತ್ತಾಪಹಾರಕ

ವಾದ ಗಾರುಡಿ ಇರುವಂತೆ, ಅದರ ಛಂದಸ್ಸು, ನಾಟಕೀಯತೆ ಜನರ ಗಮನವನ್ನು ಸೆರೆ ಹಿಡಿದಿದ್ದವು. 'ಪ್ರೇಮ ಧರ್ಮವ ಗೆದ್ದು ಚಾವುಟವ ನಭಕೆತ್ತಿ ಹಿಡಿದುದನು ಕಂಡೆ, ಯಮನ ಸೋಲನು ಕಂಡೆ' ಎಂಬ ಸಾಲುಗಳು ನಮಗೆ ಪ್ರಿಯವಾಗಿದ್ದವು. ಬೆಂಗಳೂರಿನಲ್ಲಿದ್ದ ರಾಮಮೋಹನ ಕಂಪನಿ ಮುದ್ದಾಗಿ ಮುದ್ರಿಸಿದ್ದ ನಾಲ್ಕಾಣೆಯ ಈ ನಾಟಕವನ್ನು ನಾನೆಷ್ಟು ಬಾರಿ ಓದಿದೆನೋ ! ನನಗೆ ಕವಿಯ ಪರಿಚಯವಾದದ್ದು ಹೀಗೆ.

ಶ್ರೀ ಕುವೆಂಪು ಅವರು ಏಕಾಂತ ಪ್ರಿಯರು. ಹಾಗೆಂದರೆ ಅವರು ಮನುಷ್ಯರು ಮುಟ್ಟಿದ ಗುಬ್ಬಿ ಎಂದು ಅರ್ಥಮಾಡಬಾರದು. ಊರು ಊರುಗಳನ್ನು ತಿರುಗಿ ಭಾಷಣಕೊಟ್ಟ ಕನ್ನಡದ ಕಾರ್ಯವನ್ನು ಅವರು ಮಾಡಿಲ್ಲ ; ನಿಜ. ಆದರೆ ಬರವಣಿಗೆಯಿಂದ, ಕಾವ್ಯವಾಚನದಿಂದ, ತಮ್ಮಲ್ಲಿಗೆ ಬಂದವರೊಡನೆ ನಡೆಸುತ್ತಿದ್ದ ಸರಸ ಸಲ್ಲಾಪದಿಂದ ತಮ್ಮ ಕನ್ನಡದ ಅಭಿಮಾನವನ್ನು ಇತರರಿಗೆ ಅಂಟಿಸಿದ್ದಾರೆ. ಹೊಸಗನ್ನಡ ಸಾಹಿತ್ಯದ ನವೋದಯದ ಕಾಲದಲ್ಲಿ, ಅದು ಭದ್ರವಾಗಿ ಪ್ರತಿಷ್ಠಿತವಾಗಬೇಕಾಗಿದ್ದ ಸಮಯದಲ್ಲಿ ಹೊಸ ಕಾವ್ಯವನ್ನು ವಾಚನಮಾಡಿ ತೋರಿಸಬೇಕಾಗಿತ್ತು. ತಮ್ಮ ಕವನಗಳನ್ನು ಶ್ರೀ ಕುವೆಂಪು ಅವರೇ ವಾಚನ ಮಾಡುತ್ತಿದ್ದರು. ಈ ವಾಚನ ನಡೆಯುತ್ತಿದ್ದುದು ಪ್ರಾತಃಕಾಲ, ಮಹಾರಾಜರವರ ಕಾಲೇಜಿನ ಉಪನ್ಯಾಸ ಮಂದಿರಗಳಲ್ಲಿ. ವಾಚನವು ಎರಡು ಮೂರು ಗಂಟೆಗಳ ಕಾಲ ಅವ್ಯಾಹತವಾಗಿ ನಡೆಯುತ್ತಿತ್ತು. ವೇದಿಕೆಯ ಮೇಲೆ ಕವಿ ನಿಂತು ತಮ್ಮ ತೇಜಃಪುಂಜವಾದ ಕಣ್ಣುಗಳನ್ನು ಸಭಿಕರ ಮೇಲೆ ಹರಿಯಿಸಿ ವಾಚನಕ್ಕೆ ಪ್ರಾರಂಭಿಸಿದರೆ ಕೇಳುವವರು ಮಂತ್ರಮುಗ್ಧರಾಗುತ್ತಿದ್ದರು. ಕಿಕ್ಕಿರಿಯುವಂತೆ ತುಂಬಿ ಹೋಗುತ್ತಿದ್ದ ಸಭಾ ಮಂದಿರದಲ್ಲಿ ಎಳ್ಳು ಸಿಡಿಯುವಷ್ಟು ನಿಶ್ಯಬ್ದತೆ. ವಾಚನ ನಿಂತೊಡನೆಯೇ 'ಅಯ್ಯೋ, ಹೋಯಿತೆ ಆ ನಾಕ, ಬಂದಿತೆ ಈ ಲೋಕ' ಎಂಬ ಉದ್ಗಾರ ಜನರ ಬಾಯ್ಗಳಿಂದ. ಶ್ರೀ ಕುವೆಂಪು ಅವರು ಬೆಂಗಳೂರಿಗೆ ಹೋಗಿ ಮತ್ತೆ ಮೈಸೂರಿಗೆ ಬಂದರೂ ಮತ್ತೆ ಅವರ ಬಾಯಿಂದ ಕಿಕ್ಕಿರಿದ ಉಪನ್ಯಾಸಮಂದಿರದಲ್ಲಿ ಅಂಥ ವಾಚನವನ್ನು ನಾವು ಕೇಳಿಲ್ಲ !

ಈ ಸಂದರ್ಭದಲ್ಲಿ ಇಲ್ಲಿ ಒಂದು ಪ್ರಸಂಗವನ್ನು ಉಲ್ಲೇಖಿಸಬೇಕು. ೧೯೩೫ನೆಯ ವರ್ಷದಲ್ಲಿ ಮೈಸೂರಿನಲ್ಲಿ ಪ್ರಾಚ್ಯವಿದ್ವತ್ ಸಮ್ಮೇಳನವು ನೆರೆದಿತ್ತು. ಈ ಸಮ್ಮೇಳನದ ಅಂಗವಾಗಿ ಕವಿಗೋಷ್ಠಿಯೊಂದು ಏರ್ಪಾಟಾಗಿ ಸಮ್ಮೇಳನದ ಮೂರನೆಯ ದಿನದ ಮಧ್ಯಾಹ್ನ ಜಗನ್ಮೋಹನ ಬಂಗಲೆಯಲ್ಲಿ ಪ್ರತಿಯೊಂದು ಭಾಷೆಯ ಸುಪ್ರಸಿದ್ಧ ಕವಿಯೂ ತನ್ನೊಂದು ಕೃತಿಯ ವಾಚನಕ್ಕೆ ಏರ್ಪಾಟಾಗಿತ್ತು. ಆ ಸಭೆಯಲ್ಲಿ ಕನ್ನಡದ ಕೀರ್ತಿ ಗೌರವಗಳು ಶ್ರೀ ಪುಟ್ಟಪ್ಪನವರಿಂದಲೇ ಉಳಿಯಬೇಕಾಗಿದ್ದವು. ಆದರೆ ಕವಿ ಈ ಕಡೆ ಸುಳಿಯಲೇ ಇಲ್ಲ. ಈ ಪರಿಸ್ಥಿತಿಯನ್ನು ಕಂಡು ಶ್ರೀ ತೀ. ನಂ. ಶ್ರೀಯವರು ಕವಿಗಳನ್ನು ಕರೆಯಿಸಿಕೊಂಡರು. ಕವಿಗಳು ಬರುವ ವೇಳೆಗೆ ಅನೇಕ ವಾಚನಗಳು ನಡೆದು ಸಭಿಕರಿಗೆ ಬೇಸರ ಉಂಟಾಗಿತ್ತು. ತರುಣ ಕವಿಗಳು ವೇದಿಕೆಯನ್ನೇರಿ ಇಂಗ್ಲಿಷಿನಲ್ಲಿ ಅಲ್ಪ ಪೀಠಿಕೆಯೊಡನೆ 'ಕಲ್ಕಿ' ಎಂಬ ಕವನವನ್ನು ಓದಿದಾಗ ಸಭೆ ಚಮತ್ಕೃತ

ವಾಯ್ತು. ಕನ್ನಡ ಬಾರದ ಔತ್ತರೇಯರೂ ಶ್ರೀ ಕುವೆಂಪು ಅವರ ವಾಚನವನ್ನು ಕೇಳಿ ಮುಗ್ಧರಾದರು. ದಿವಂಗತ ಶ್ರೀ ಜಯಸ್ವಾಲರಿಗೆ ಈ ವಾಚನ ಮೆಚ್ಚಿಗೆಯಾದುದೇ ನನ್ನ ಹೇಳಿಕೆಗೆ ಸಾಕ್ಷಿ. ಈ ಅನುಭವ ನನ್ನ ಮಿತ್ರರನೇಕರಲ್ಲಿ ಹಚ್ಚ ಹಸುರಾಗಿ ನಿಂತಿರಲೂ ಸಾಕು.

ಶ್ರೀ ಕುವೆಂಪು ಅವರು ಬರೆದ ಕೃತಿಗಳನ್ನು–ಅವು ನಾಟಕವಾಗಿರಲಿ, ಭಾವಗೀತೆಗಳಾಗಿರಲಿ, ಮಹಾಕಾವ್ಯಗಳಾಗಿರಲಿ-ಅಂದಂದಿಗೇ ಅವರಲ್ಲಿಗೆ ಹೋಗಿ ಕೇಳಿ ಸಂತೋಷಪಟ್ಟವರುಂಟು. ಹೀಗೆ ತಮಗುಂಟಾದ ಸಂತೋಷವನ್ನು ವ್ಯಕ್ತಪಡಿಸುತ್ತಿದ್ದವರಲ್ಲಿ ಪ್ರೊ. ವೆಂಕಣ್ಣಯ್ಯನವರೊಬ್ಬರೆಂಬುದನ್ನು ಕವಿಗಳು ತಮ್ಮ ಮೇರು ಕೃತಿಯಾದ 'ರಾಮಾಯಣ ದರ್ಶನ'ದಲ್ಲಿ ವ್ಯಕ್ತಪಡಿಸಿದ್ದಾರೆ. ತಮ್ಮಲ್ಲಿಗೆ ಕಾವ್ಯವನ್ನು ಕೇಳ ಬಂದವರಿಗೆ ಕವಿಗಳು ಎಂದೂ ನಾಸ್ತಿ ಎಂದವರಲ್ಲ. ತಮ್ಮ ದೇಹಶ್ರಮವನ್ನು ಲಕ್ಷಿಸದೆ ಗಂಟೆಗಟ್ಟಲೆ ಕಾವ್ಯವಾಚನಮಾಡಿದ್ದುಂಟು. ಕಾವ್ಯಾಸಕ್ತಿಯುಳ್ಳ ಪರಿಮಿತ ಸಹೃದಯಗೋಷ್ಠಿಗಿಂತ ಕವಿಗೆ ಉತ್ತೇಜನ ವೀಯತಕ್ಕದ್ದು ಮತ್ತೇನುಂಟು? ಒಮ್ಮೆ ಕವಿಗಳು ಬರೆದ 'ಚಿತ್ರಾಂಗದಾ' ಕಥನ ಕಾವ್ಯವನ್ನು ಕೇಳುವ ಮನಸ್ಸಾಯಿತು ನಮಗೆ. ಆಗ ಕವಿಗಳು ರಾಮಕೃಷ್ಣಾಶ್ರಮದಲ್ಲಿಯೇ ಇದ್ದರು. ಉರಿಬಿಸಿಲಿನಲ್ಲಿ ಹೋದ ನಮ್ಮನ್ನು ಆದರದಿಂದ ಬರಮಾಡಿಕೊಂಡು ನಮ್ಮ ಕೋರಿಕೆಗೆ ಅವರು ಸಮಗ್ರ ಕಾವ್ಯವನ್ನು ಅಲ್ಲಲ್ಲೆ ವಿವರಣೆ ಕೊಟ್ಟು ವಾಚನ ಮಾಡಿದರು. ನಾವು ಅವರನ್ನು ಬೀಳ್ಕೊಂಡಾಗ ರಾತ್ರಿ ಒಂಬತ್ತು ಗಂಟೆ ಮಿಕ್ಕಿತ್ತು!

ಕನ್ನಡದ ಮೇಲ್ಮೆಗೆಂಬಂತೆ ಇಂದು ಶ್ರೀ ಪುಟ್ಟಪ್ಪನವರು ವಿಶ್ವವಿದ್ಯಾನಿಲಯದಲ್ಲಿ ಉನ್ನತಾಧಿಕಾರಿಗಳಾಗಿದ್ದಾರೆ. ಈಗ ಅವರಿಗೆ ಕಾಲಕೃಪಣತೆ ನಿಜವಾಗಿಯೂ ಉಂಟು. ಆದರೆ ತಮ್ಮ ನಿತ್ಯದ ಕೆಲಸದ ಬಂಧನದಿಂದ ಬಿಡುಗಡೆಯನ್ನು ಬಯಸಲೆಳಸುವಂತೆ ಅವರು ತಮ್ಮ ಮಿತ್ರರೊಡನೆ, ವಿದ್ಯಾರ್ಥಿಗಳೊಡನೆ ಮಾತಿಗೆ ತೊಡಗುವುದುಂಟು. ಆದರೆ ಆ ಮಾತಿನ ವಿಷಯವಾದರೂ ಏನು? ಐಹಿಕ ಜೀವನದ ಆಗುಹೋಗುಗಳಾಗಲೀ ಲಾಭದಾಸೆಯಾಗಲೀ ಏರಿತಗಳಾಗಲೀ ಅಲ್ಲಿ ಮೂಡವು. ಜಾತಿ ಮತಗಳ ಸೋಂಕೂ ಅಲ್ಲಿ ಸುಳಿಯವು. ಎತ್ತ ತಿರುಗಿದರೂ ನಾವು ಸಿಲುಗಡೆಗೆ ಬರುವ ವಿಷಯ ಸಾಹಿತ್ಯವನ್ನು ಕರಿತದ್ದು. ಇಲ್ಲವಾದರೆ ಕನ್ನಡದ ಭವಿಷ್ಯವನ್ನು ಕುರಿತದ್ದು. ದೇಶಕ್ಕೆ ಸ್ವಾತಂತ್ರ್ಯ ಬಂತು, ಕನ್ನಡ ನುಡಿ ತನ್ನ ನಾಡಿನಲ್ಲಿ ಇನ್ನೂ ತಕ್ಕ ಸ್ಥಾನವನ್ನು ಪಡೆಯಲಿಲ್ಲವಲ್ಲ ಎಂಬ ಚಿಂತೆ, ಕಳಕಳಿ ಕವಿಯ ಮನಸ್ಸನ್ನು ಮುಸುಕಿರುತ್ತದೆ. ಅದು ಅವರ ಮಾತಿನಲ್ಲಿ ವ್ಯಕ್ತವಾಗುತ್ತದೆ. ಕನ್ನಡ ಮಾಧ್ಯಮವಾಗಬೇಕು, ಕನ್ನಡದಲ್ಲಿ ಒಳ್ಳೊಳ್ಳೆಯ ಗ್ರಂಥಗಳು ಪ್ರಕಟವಾಗಬೇಕು, 'ಪ್ರಬುದ್ಧ ಕರ್ಣಾಟಕ' ದಂತಹ ಪತ್ರಿಕೆ ಸಕಾಲಕ್ಕೆ ಬಂದು ಜನರಿಗೆ ಮಾರ್ಗದರ್ಶಕವಾಗಬೇಕೆಂಬುದೇ ಇವರ ಹಂಬಲ. ಇದಕ್ಕಾಗಿ ಯಾವ ಸಹಾಯ ಮಾಡಲು ಇವರೂ ಸರ್ವದಾ ಸಿದ್ಧರಿದ್ದಾರೆ.

'ಕವಿಗೆ ಕವಿಗೆ ಮುನಿವನ್' ಎಂಬ ಸೂಕ್ತಿಯನ್ನು ರಚಿಸಿದವನು ನಮ್ಮ ಕವಿ

ಪರ್ಯರನ್ನು ನೋಡಿದ್ದರೆ ಈ ಮಾತನ್ನು ಬರೆಯಲು ಹಿಂದೆಗೆಯುತ್ತಿದ್ದನೆಂದು ತೋರುತ್ತದೆ. ಕನ್ನಡದ ಏಳ್ಗೆಯ ದೃಷ್ಟಿಯಿಂದ ಶ್ರೀಯುತರು ಮತ್ತೊಬ್ಬರಲ್ಲಿ ಸಾಮರ್ಥ್ಯವಿರುವುದನ್ನು ಕಂಡುಕೊಂಡಾಗ, ಅದನ್ನು ಬಾಯಿತುಂಬ ಹೊಗಳಿ ಆ ಶಕ್ತಿಸಾಮರ್ಥ್ಯಗಳು ಅಭಿವೃದ್ಧಿಯಾಗುವಂತೆ ಪ್ರೋತ್ಸಾಹ ಕೊಡುವರೆನ್ನುವುದಕ್ಕೆ ನನ್ನ ಮಿತ್ರರಾದ ಡಾ|| ಕೆ. ಕೃಷ್ಣಮೂರ್ತಿ, ಶ್ರೀ ಎಸ್. ವಿ. ಪರಮೇಶ್ವರಭಟ್ಟರೇ ಸಾಕ್ಷಿಯಾಗಿದ್ದಾರೆ. ಹೀಗೆ ಇವರ ಪ್ರೋತ್ಸಾಹದಿಂದ ಬೆಳೆದು ಮುಂಬರಿದಿರುವ ಚೈತನ್ಯಗಳೆಷ್ಟೋ! ಆದರೆ ಬರಿಯ ಗುಹಾಧ್ವನಿಗಳನ್ನು ಇವರು ಹತ್ತಿರವೂ ಸುಳಿಯಲೀಯರು.

ಶ್ರೀ ಕುವೆಂಪುರವರ ಹೆಸರು ನಮ್ಮ ಮನಸ್ಸಿನಲ್ಲಿ ಮೂಡಿದಾಗ ಅವರು ಕವಿಗಳು, 'ಶ್ರೀ ರಾಮಾಯಣ ದರ್ಶನ'ದ ಕರ್ತೃಗಳು ಎಂಬ ಭಾವನೆ ನಮ್ಮಲ್ಲಿ ಬರುತ್ತದೆ. ಇದು ಸಹಜವಾದದ್ದೇ. ಈ ಮೇರು ಕೃತಿಯಿಂದಲೇ ಅವರು ಜಗತ್ತಿನ ಮುಂದೆ ಮೆರೆದಿದ್ದಾರೆ. ಆದರೆ ಇದು ಸಂಪೂರ್ಣ ಸತ್ಯವಲ್ಲ. ಅವರು ಸಾಹಿತ್ಯದ ಎಲ್ಲ ಪ್ರಕಾರಗಳಲ್ಲಿಯೂ ಕೆಲಸಮಾಡಿದ್ದಾರೆ. ಮಲೆನಾಡಿನ ಮಹಾಭಾರತದಂತಿರುವ 'ಕಾನೂರು ಹೆಗ್ಗಡಿತಿ' ಅವರ ಏಕೈಕ ಕಾದಂಬರಿ; ಬೃಹತ್ ಕಾದಂಬರಿ. ಸಣ್ಣ ಕಥೆಗಳ ಅವರ ಎರಡು ಕೃತಿಗಳು ಪ್ರಕಟವಾಗಿವೆ. ಉಪನ್ಯಾಸಗಳು, ಪ್ರಬಂಧಗಳು, ಜೀವನ ಚರಿತ್ರೆಗಳೂ ಅವರ ಲೇಖನಿಯಿಂದ ಹೊರಬಿದ್ದಿವೆ. ಅವರ ನಾಟಕಗಳ ಬೆಳಸೂ ಏನೂ ಕಡಿಮೆಯಾಗಿಲ್ಲ. ಅವರು ಬಳಸದ ಪಳಗಿಸದ ಛಂದಸ್ಸಿಲ್ಲ. ಭಾವಾವೇಶಗಳಿಗೆ ತಕ್ಕಂತೆ ಮಿಡಿಯದ ಭಾಷೆಯಿಲ್ಲ. ಎಲ್ಲಕ್ಕೂ ಮಿಗಿಲಾಗಿ ಅವರು ವಿಮರ್ಶೆಯ ಕ್ಷೇತ್ರದಲ್ಲಿ ಮಾಡಿರುವ ಕೆಲಸ ಬಹು ಬೆಲೆಯುಳ್ಳದು. ಸ್ಪಷ್ಟವಾದ ಹೊಸ ವಿಮರ್ಶೆಯ ತತ್ತ್ವಗಳನ್ನು ಅವರು ತಮ್ಮ ಧೀಮಂತ ಶೈಲಿಯಲ್ಲಿ ಉಲ್ಲೇಖಿಸಿರುವುದಲ್ಲದೆ ಕನ್ನಡ ಸಂಸ್ಕೃತ ಕಾವ್ಯಗಳನ್ನು ವಿಮರ್ಶೆಯ ಒರೆಗಲ್ಲಿಗೆ ಉಜ್ಜಿ ನೋಡಿದ್ದಾರೆ. ಶ್ರೀಯುತರು ಕವಿಗಳೇ, ವಿದ್ವಾಂಸರೇ ಎಂಬ ಪ್ರಶ್ನೆ ನಮ್ಮ ಮುಂದೆ ನಿಂತರೆ ಅದರ ಉತ್ತರ ಅವರು ಕವಿಗಳೂ ಹೌದು, ವಿದ್ವಾಂಸರೂ ಹೌದು ಎಂದೇ. ಆದರೆ ಲೋಕದ ಕಣ್ಣಿಗೆ ಮಾತ್ರ ಅವರು ಕವಿಗಳಾಗಿ, ಮಹಾಕವಿಗಳಾಗಿ ಉಳಿಯುತ್ತಾರೆ. ವಿದ್ವಾಂಸರಾಗಿ ತೆರೆಯ ಹಿಂದೆಯೇ ಉಳಿಯುತ್ತಾರೆ.

ಕನ್ನಡದೇವಿ ನಾಡಿನ ಒಳಿತಿಗಾಗಿ, ನುಡಿಯ ಮೇಲ್ಮೆಗಾಗಿ ತನ್ನ ಕೃಪೆಯನ್ನು ಶ್ರೀ ಕುವೆಂಪುರವರ ಮೂಲಕ ಪ್ರಕಟಿಸಿದ್ದಾಳೆಂದು ನನ್ನ ಭಾವನೆ. ಈಗ ಕಾಲುಶತಮಾನದ ಹಿಂದಿನ ಪರಿಸ್ಥಿತಿಯೆಲ್ಲಿ? ಈಗಿನ ಪರಿಸ್ಥಿತಿಯೆಲ್ಲಿ? ಕನ್ನಡಿಗರೊಬ್ಬರು ವಿಶ್ವವಿದ್ಯಾನಿಲಯದಲ್ಲಿ ಅಧಿಕಾರ ಪೀಠದಲ್ಲಿ ರೂಢರಾಗುವುದನ್ನು ಕನಸಿನಲ್ಲಿ ಕಾಣಬಹುದಾಗಿತ್ತೇ? ಕಿವಿಯಲ್ಲಿ ಕೇಳಬಹುದಾಗಿತ್ತೆ? ಈಗ ಆ ಕನಸು ನನಸಾಗಿದೆ. ಕವಿಗಳ ಹತ್ತಾರು ವರ್ಷಗಳ ಫಲವಾಗಿ, ನಾಡಿನ ಪುಣ್ಯದ ಫಲವಾಗಿ ಶ್ರೀಯುತರು ಇಂದು ಗಣ್ಯಸ್ಥಾನದಲ್ಲಿದ್ದಾರೆ. ಈ ಪೀಠ ಯಾರ ಕೃಪಾವಲೋಕನದಿಂದಲೂ ಅವರಿಗೆ ಲಭಿಸಿದುದಲ್ಲ; ಕ್ರಮಕ್ರಮವಾಗಿ ಅವರು ತಮ್ಮ ವಿದ್ವತ್ತಿನ, ದಕ್ಷತೆಯಿಂದ, ಯೋಗ್ಯತೆ

ಯಿಂದ ಏರಿದ ಮೆಟ್ಟಿಲು. ಅವರ ವಿನಯಶೀಲತೆಗೆ ತಕ್ಕ ಪುರಸ್ಕಾರ. ಈಗ ಅವರ ಕೈಯಿ ಬಾಯಿಗಳೆರಡೂ ನಡೆಯುತ್ತಿವೆ. ಮುಂಬರುವ ದಿನಗಳಲ್ಲಿ–ಅವು ಬಹುಬೇಗನೆ ಬರಲಿ–ಅವರು ಮೈಸೂರು ವಿಶ್ವವಿದ್ಯಾನಿಲಯದ ಕುಲಪತಿಗಳ ಸ್ಥಾನವನ್ನು ಬಹು ಕಾಲ ಅಲಂಕರಿಸಿ, ಕನ್ನಡ ನುಡಿಯನ್ನು ಸರಿಯಾದ ಸ್ಥಾನದಲ್ಲಿರಿಸಿ ಆ ಕೀರ್ತಿಯನ್ನು ಪಡೆಯುವ ಭಾಗ್ಯ ನಮ್ಮ ಕವಿವರ್ಯರದಾಗಲಿ, ಈ ಸನ್ನಿವೇಶವನ್ನು ನೋಡುವ ಭಾಗ್ಯ ನಮ್ಮದಾಗಲಿ.

ಸಿರಿಗನ್ನಡಂ ಗೆಲ್ಗೆ ; ಕನ್ನಡತಾಯ್ ಬಾಳ್ಗೆ



# ನಾಲ್ವರು ತಪೋಮೂರ್ತಿಗಳು

## ಬಿ. ಎಸ್. ರುಕ್ಕಮ್ಮ

ಸತ್ಯದರ್ಶಿಗಳಾದ ಋಷಿಗಳು ಬದುಕಿನ ಧ್ಯಾನದಲ್ಲಿ ಬದುಕಿನ ಅರ್ಥಕಂಡು, ಅದರಲ್ಲಿನ ಸತ್ವದಿಂದ ಆದರ್ಶ ಮಹಿಳೆಯರನ್ನು ಚಿತ್ರಿಸಿದ್ದಾರೆ. ನಮ್ಮ ದೇಶದ ಮಹಾ ಕವಿಗಳು "ನಾನೃಷಿಃ ಕುರುತೇಕಾವ್ಯಂ" ನಾಣ್ಣುಡಿಯನ್ನು ನಿಜಗೊಳಿಸುವ ರಸಋಷಿಗಳು. ಅಂದಿನ ಮತ್ತು ಮುಂದಿನ ಸಮಗ್ರ ದೇಶದ ಸಂಪೂರ್ಣ ಶ್ರೇಯಸ್ಸುಪ್ರೇಯಸ್ಸುಗಳನ್ನು ಗಮನದಲ್ಲಿಟ್ಟು ಅವರು ಮಹರ್ಷಿಗಳ ಹಾಗೆಯೇ ಧ್ಯಾನಿಸಿ ಈ ದೇಶಕ್ಕೆ ಮಂಗಳವನ್ನು ನೀಡುವ ಮಹಿಳಾದರ್ಶಗಳನ್ನು ಚಿತ್ರಿಸಿದ್ದಾರೆ. ಕಾವ್ಯಲೋಕದಲ್ಲಿ ಅವರು ಸೃಷ್ಟಿಸಿರುವ ಈ ಮಹಿಳೆಯರು ನಮ್ಮ ಜನಮನಕ್ಕೆ ತೀರ ಹತ್ತಿರದವರಾಗಿದ್ದಾರೆ. ಎಷ್ಟೋಬಾರಿ ಮನೆಯ ಜನಕ್ಕಿಂತ ಹೆಚ್ಚು ಹತ್ತಿರದವರಾಗಿದ್ದಾರೆ. ಅಂತಹ ಪಾತ್ರಗಳಲ್ಲಿ ಮೂವರು ಶಕುಂತಲಾ, ಮಹಾಶ್ವೇತೆ ಮತ್ತು ಜಗನ್ಮಾತೆಯಾದ ಪಾರ್ವತಿ.

ಶಕುಂತಲೆ ಕಣ್ವಪುತ್ರಿ. ಜನ್ಮದಿಂದಲ್ಲ, ಪುಣ್ಯದಿಂದ. ತನ್ನ ತಪಸ್ಸಿನ ಉಜ್ವಲವಾದ ಬೆಲೆಯನ್ನು ತೆತ್ತು ಇವಳನ್ನು ಮಗಳಾಗಿ ಪಡೆದ ವಿಶ್ವಾಮಿತ್ರನಾಗಲೀ, ಆ ಮಹರ್ಷಿಯ ತಪೋಭಂಗದ ಶಾಪಕ್ಕೆ ಗುರಿಯಾದ ಅಪ್ಸರೆ (ಮೇನಕೆ) ತಾಯಿಯಾಗಲಿ ಇವಳನ್ನು ತನ್ನ ಮಗು ಎಂದು ಸಾಕುವ ಗೋಜಿಗೇ ಹೋಗಲಿಲ್ಲ. ಆಗ ಪ್ರಕೃತಿ, ಇವಳನ್ನು ರಕ್ಷಿಸಿ ಮಹರ್ಷಿ ಕಣ್ವರಿಗೆ ಪ್ರೇಮದ ಮಗಳಾಗಿ, ವಾತ್ಸಲ್ಯಪುತ್ರಿಯಾಗಿ ಒಪ್ಪಿಸಿತು. ಅಂದಿನಿಂದಲೇ ಇವಳ ಆತ್ಮಪರಿಪಾಕವೂ ಆರಂಭವಾಯಿತು. ಆಶ್ರಮದ ತರುಲತೆಗಳ ಪುಷ್ಪ ಇವಳಿಗೆ ಆಭರಣವಾಯಿತು. ನಾರುಡೆ ಪೀತಾಂಬರವಾಯಿತು. ಆಶ್ರಮದ ಹೋಮ ಧೂಮ ಇವಳ ಕಣ್ಣಿಗೆ ಕಾಡಿಗೆ ಇಟ್ಟಿತು. ವೇದಘೋಷದ ಮಂತ್ರ ಛಂದ ಅವಳ ನಡೆಗೆ ಲಯವನ್ನು ನೀಡಿತು. ಸುತ್ತಣ ಮುನಿಸತಿಯರು, ಮುನಿಪುತ್ರಿಯರು ಉತ್ತಮವಾದ ಸಂಸ್ಕೃತಿಯನ್ನು ಇವಳಿಗೆ ದಾನಮಾಡಿದರು. ಮಹರ್ಷಿಗಳಾದ ಕಣ್ವರ ವಾತ್ಸಲ್ಯ ಪೂರ್ಣವಾದ ನೋಟವೇ ಅವಳಿಗೆ ಮಂಗಳದ ರಕ್ಷೆಯಾಗಿ ಪರಿಣಮಿಸಿತ್ತು.

ಇಂತಹ ಶಕುಂತಲೆಗೆ ಯೌವನೋದಯದೊಡನೆ, ಬದುಕನ್ನು ಸಂಪೂರ್ಣವಾಗಿ ಪರಿವರ್ತಿಸುವ ಪ್ರಣಯೋದಯವೂ ಆಯಿತು. ಆಶ್ರಮದ ಜಿಂಕೆಗಳಂತೆಯೇ ಮುಗ್ಧೆಯಾಗಿ ಬೆಳೆದ ಶಕುಂತಲೆ ಹೊರಗಿನಿಂದ ಪ್ರವೇಶಿಸಿದ, ದುಷ್ಯಂತರೂಪದಲ್ಲಿದ್ದ ಅಪಾಯವನ್ನು ಗುರುತಿಸಲು ಸಮರ್ಥಳಾಗಲಿಲ್ಲ. ತರುಣಹೃದಯಕ್ಕೆ ಸಹಜವಾದ ಪ್ರಣಯೋದಯವಾದದ್ದು ತಪ್ಪು ಎಂದಲ್ಲ. ಆದು ಪ್ರಕಟಗೊಂಡ ರೀತಿ ಧರ್ಮವಿರುದ್ಧವಾದದ್ದು. ಪ್ರಥಮ ದರ್ಶನದ ಅನುರಾಗ ಕಥೆಕಾದಂಬರಿಗಳಲ್ಲಿ ಯಶಸ್ವಿಯಾಗಿ ಸಮಾಪ್ತಿಗೊಳ್ಳ

ಬಹುದು, ಬದುಕಿನಲ್ಲಲ್ಲ. ಏಕೆಂದರೆ ಬದುಕು ಹೆಚ್ಚು ಗಹನವೂ, ಗಂಭೀರವೂ ಅಮೂಲ್ಯವೂ ಆದದ್ದು. ಶಕುಂತಲೆಯ ಜೀವನ ಇದರ ಸತ್ಯವನ್ನು ಸಾರುತ್ತದೆ. ಅದುವರೆಗೆ ಆಶ್ರಮದ ಜೀವನ ನೀಡಿದ ನಿಯಮನಿಷ್ಠೆಗಳು ಅವಳ ಅನುರಾಗಕ್ಕೆ ಸಂಯಮವನ್ನು ಕೊಡಬೇಕಾಗಿತ್ತು. ಇದುವರೆಗೂ ತಂದೆಯಾಗಿ, ತಾಯಿಯಾಗಿ ಸಕಲ ಬಂಧುವಾಗಿ ತನ್ನನ್ನು ಪೋಷಿಸಿದ ಕಣ್ವರ ಒಪ್ಪಿಗೆ ತಮ್ಮ ಗಾಂಧರ್ವ ವಿವಾಹಕ್ಕೆ ಅತ್ಯಗತ್ಯ ಎಂಬ ಅರಿವಾದರೂ ಆಕೆಗೆ ಮೂಡಬೇಕಾಗಿತ್ತು. ಆದರೆ ಹಾಗಾಗಲಿಲ್ಲ. ಆಗತಾನೆ ಅಂಕುರವಾಗಿದ್ದ ಅನುರಾಗ ಅವಳನ್ನು ಪೂರ್ಣವಾಗಿ ಪರವಶಳನ್ನಾಗಿ ಮಾಡಿತು. ಉಕ್ಕಿಬಂದ ಈ ಭಾವ ಸಮಾಲೋಚನೆ, ಆಪ್ತರ ಬುದ್ಧಿವಾದ ಇದೊಂದನ್ನೂ ಬಯಸದೆ ವಿವಾಹದಲ್ಲಿ ಪರ್ಯಾವಸಾನವಾಯಿತು.

ತಂದೆ ಕಣ್ವರಿಗೆ ಮಗಳು ಮಾಡಿದ ಈ ತಪ್ಪು ತಿಳಿಯಿತು. ಆದರೆ ಮಗಳು ಮಾಡಿದುದರಿಂದಲೋ ಏನೋ ಅದು ಬರಿಯ ತಪ್ಪಾಗಿ ಕಾಣಿಸಲಿಲ್ಲ. ತ್ರಿಕಾಲಜ್ಞರಾದ ಅವರು ತಮ್ಮ ಮಗಳು ಸರಿಯಾದ ವರನನ್ನು ಪಡೆದಳಲ್ಲ ಎಂದು ಸಂತೋಷಪಟ್ಟರು. ಮತ್ತೆ ಅವಳನ್ನು ತಾವು ಕಾಣುವುದಿಲ್ಲವೆಂಬುದು ಅವರ ಅತೀವದುಃಖಕ್ಕೆ ಕಾರಣ ವಿದ್ದಿರಬಹುದು !

ಶಕುಂತಳೆ ಪತಿಯ ಆಲೋಚನೆಯಲ್ಲಿ, ನೆನಪಿನಲ್ಲಿ ಪ್ರಪಂಚವನ್ನೇ, ತನ್ನ ಕರ್ತವ್ಯವನ್ನೇ ಮರೆತಿದ್ದಳು.—ಗೃಹಸ್ಥಧರ್ಮದ ಮಂಗಳ ಸ್ವರೂಪಕ್ಕೆ ಧಕ್ಕೆತರುವ ಲಕ್ಷಣವಿದು. ಅತಿಥಿಅಭ್ಯಾಗತರ ಸೇವೆಯೇ ಒಂದು ಪ್ರಮುಖಲಕ್ಷಣವಾದ ಗೃಹಸ್ಥಾಶ್ರಮವೆಲ್ಲಿ? ತನ್ನ ಪ್ರಿಯನೊಂದಿಗೆ ಎಂದು ಸಮಾಗಮವಾಗುವುದೋ ಎಂಬ ಚಿಂತೆಯಲ್ಲಿ ಮಗ್ನಳಾಗಿರುವ ಶಕುಂತಲೆಯೆಲ್ಲಿ? ತನ್ನ ನ್ನೈಮರೆತು ಕರ್ತವ್ಯಹೀನೆಯಾದ ಅವಳಿಗೆ ದೂರ್ವಾಸರ ಶಾಪ ಶಿಕ್ಷೆಯಾಗಿ ಬಂತು–ಆ ಸಮಾಗಮ ಸಂಕಟವಾಗುವಂತೆ ಮಾಡಿತು.

—ದೂರ್ವಾಸರ ಶಾಪ ಈ ಎರಡೂ ಪಾತ್ರಗಳ ಹೃದಯ ಪರಿಪಾಕಕ್ಕೆ ಅಗತ್ಯವಾದ ಅಗ್ನಿಕುಂಡವನ್ನು ನಿರ್ಮಿಸಿತು. ಅದು ಅವರಿಬ್ಬರ ನಡುವೆ ಏರ್ಪಟ್ಟ ವಿರಹ. ಕ್ಷಣಿಕವಾದ ಕಾಮ ಶಾಶ್ವತವಾದ ಪ್ರೇಮವಾಗಿ ಪರಿಣಮಿಸಬೇಕಾದರೆ ಅದು ತಪಸ್ಸಿನ ಮೂಸೆಯಲ್ಲಿ ಕರಗಬೇಕು. ದೂರ್ವಾಸರ ಶಾಪ ಅಂತಹ ತಪಸ್ಸಿಗೆ ಸುಗಮವಾದ ಅವಕಾಶವನ್ನು ಕಲ್ಪಿಸಿತು.

ರಾಜಸಭೆಯಲ್ಲಿ ಶಕುಂತಲೆ ದುಷ್ಯಂತನಿಂದ ತಿರಸ್ಕೃತಳಾಗುವ ದೃಶ್ಯವನ್ನು ನೋಡುವಾಗ ನಮ್ಮೆಲ್ಲರ ಕಣ್ಣಿನಲ್ಲಿಯೂ ಹನಿಮೂಡುವುದು ಸಹಜವೇ. ವಿವೇಚನೆಯಿಲ್ಲದ ಪ್ರೇಮದಲ್ಲಿ ಅನುರಕ್ತಳಾದ ಹೆಣ್ಣು ಎಲ್ಲ ದೇಶದಲ್ಲಿಯೂ ಎಲ್ಲ ಕಾಲಗಳಲ್ಲಿಯೂ ಹೀಗೆಯೇ ಅಪಮಾನಿತಳಾಗಿ ಹಿಂತಿರುಗುವುದು ಅಷ್ಟೇ ಸಹಜ. ತನ್ನ ಪ್ರಿಯನೆನಿಸಿಕೊಂಡವನಿಂದ ತಿರಸ್ಕೃತಳಾದುದೂ ಅಲ್ಲದೆ, ಶಕುಂತಲೆ ತನ್ನ ತವರುಮನೆಯವರಿಂದಲೂ, ಶಾರ್ಙರವನ ಮಾತಿನ ಮೂಲಕ ತಿರಸ್ಕೃತಳಾಗುತ್ತಾಳೆ.

ಆದರೆ ಉದ್ಧಾರದ ಹಾದಿ ಎಲ್ಲರಿಗೂ ತೆರೆದಿದ್ದೆ. ತಪಸ್ಸು ಎಂತಹವರನ್ನಾದರೂ ಪವಿತ್ರಗೊಳಿಸಬಲ್ಲುದು. ಭೂಮಿಯಿಂದ ದೂರದಲ್ಲಿ ಮಾರೀಚಾಶ್ರಮದಲ್ಲಿ ಅನೇಕ ವರ್ಷಗಳು ಅವಳ ತಪಸ್ಸು ಅವ್ಯಾಹತವಾಗಿ ಸಾಗುತ್ತದೆ. ಚಪಲೆ ಚಂಚಲೆಯಾಗಿದ್ದ ತರುಣಿ ಈಗ ಗಾಂಭೀರ್ಯ ವೈಗೊಂಡ ತಾಯಿ ಯಾಗಿದ್ದಾಳೆ. ಈಗ ಅವಳು ದುಷ್ಯಂತ ಸತಿ ಮಾತ್ರವಲ್ಲ ಭರತಮಾತೆ. ಧೈರ್ಯ ಗಾಂಭೀರ್ಯ ಯುಕ್ತಳಾದ ಅವಳು ನೀರವವಾದ ನಿಶ್ಚಲವಾದ ತಪಸ್ಸಿನಲ್ಲಿ ಪುನೀತಳಾಗುತ್ತಿದ್ದಾಳೆ. ಏಕವೇಣೀದಾರಿಣಿಯಾಗಿ, ಶುಷ್ಕಮುಖಿಯಾಗಿದ್ದರೂ ತ್ಯಾಗಮಯಿ ತಾಯಿಯ ಮಂಗಳ ತೇಜಸ್ಸಿನಿಂದ ಬೆಳಗುತ್ತಿದ್ದಾಳೆ. ಪಶ್ಚಾತ್ತಾಪದಿಂದ ಬೆಂದ ದುಷ್ಯಂತನನ್ನು ಅವಳ ಅಖಂಡ ಸತೀತ್ವ ಕ್ಷಮಿಸುತ್ತದೆ. ಈಗ ಅವಳು ಪರಿಶುದ್ಧ ಪ್ರೇಮಮಯಿಮಾತೆ, ಪ್ರಥಮ ಸಮಾಗಮದ ಅವಿಚಾರದ ಮಾಲಿನ್ಯ ಈಗ ಉಳಿದಿಲ್ಲ. ಅವಳ ನಿರಭಿಮಾನಿ ಚಿತ್ತ ಇಂದು ದುಷ್ಯಂತನ ಪದತಲದ ಪುಷ್ಪಾಂಜಲಿ—ತಾರುಣ್ಯದ ತರಳ ಪ್ರೇಮಕ್ಕೆ ಅಗ್ನಿ ಪರೀಕ್ಷೆಯಾಗಿ ಅದು ಚಿರಪ್ರೇಮ ಎಂಬುದು ಸಿದ್ಧವಾಯಿತು. ಹೀಗೆ ಧರ್ಮದ ನೆರವನ್ನು ಹೊಂದಿದೆ ಶಾಂತ ಸಂಯಮದ ಪ್ರೇಮ.

ಹೀಗೆಯೇ ಮಹಾಶ್ವೇತೆ ಪುಂಡರೀಕರ ಪ್ರೇಮಕ್ಕೂ ಅಗ್ನಿಪರೀಕ್ಷೆ ಅವಶ್ಯವಾಗಿ ನಡೆಯಿತು. ಶ್ವೇತಕೇತು ಮುನಿಗಳ ಕುಮಾರ ಪುಂಡರೀಕ. ಮಹಾಶ್ವೇತೆ ಗಂಧರ್ವ ಕನ್ಯೆ. ಸ್ನಾನಕ್ಕೆಂದು ಅಚ್ಛೋದ ಸರಸ್ಸಿಗೆ ಬಂದಾಗ ಅವರು ಪರಸ್ಪರ ಪ್ರೇಮ ಪರವಶರಾಗುತ್ತಾರೆ. ಆದರೆ ವಿಧಿಗೆ ಮಹಾಶ್ವೇತೆ ಲಲಿತೆ ಕೋಮಲೆ ಗಂಧರ್ವ ಕನ್ಯೆ ಎಂಬ ಪಕ್ಷಪಾತವಿಲ್ಲ. ಪುಂಡರೀಕ ತ್ರಿಕಾಲಜ್ಞಾನಿಗಳಾದ ಶ್ವೇತಕೇತು ಮುನಿಗಳ ಕುಮಾರ ಎಂಬ ದಾಕ್ಷಿಣ್ಯವಿಲ್ಲ. ಪುಂಡರೀಕ ವ್ರತಿ. ಅವನ ವ್ರತಭಂಗ ಲಲಿತವಾದರೂ ಅದರ ಕರ್ಮವನ್ನೂ ಅವನು ಅನುಭವಿಸಿಯೇ ತೀರಬೇಕು. ನೀರವ ನಿಶ್ಚಲ ತಪಸ್ಸಿನಲ್ಲಿ ಮಹಾಶ್ವೇತೆಯೂ, ಎರಡು ಜನ್ಮಗಳನ್ನು ತಾಳಿ ಪುಂಡರೀಕನೂ ತಂತಮ್ಮ ಪ್ರೇಮವನ್ನು ಪರಿಶುದ್ಧವಾಗಿ ಮಾಡಿಕೊಳ್ಳಲೇಬೇಕು. ಇದು ವಿಧಿಯ ವಜ್ರ ನಿಯಮ.

ಅದರಿಂದ ಮಹಾಶ್ವೇತೆ ಅಚ್ಛೋದ ಸರಸ್ತೀರದಲ್ಲೇ ನೆಲೆಸಿ ಶಿವನನ್ನು ಆರಾಧಿಸುತ್ತಾ ಪುಂಡರೀಕನ ಪುನರಾಗಮನವನ್ನು ನಿರೀಕ್ಷಿಸುತ್ತಿದ್ದಾಳೆ. ತನ್ನ ಸ್ವಾಭಾವಿಕವಾದ ಅಲಂಕಾರಗಳನ್ನೆಲ್ಲಾ ಮರೆತು ಮೌನವಾಗಿದ್ದಾಳೆ. ವ್ರತಭಂಗದ ಫಲವಾಗಿ ವೈಶಂಪಾಯನನಾಗಿ ಹುಟ್ಟಿದ ಪುಂಡರೀಕ ಬೇಟೆಯ ನಿಮಿತ್ತದಿಂದ ಚಂದ್ರಾಪೀಡನೊಡನೆ ಆ ಪ್ರದೇಶಕ್ಕೆ ಬರುತ್ತಾನೆ. ಚಂದ್ರಿಕೆಯ ಇರುಳಿನಲ್ಲಿ ಬಂಡೆಯ ಮೇಲೆ ಒರಗಿ ಪುಂಡರೀಕನನ್ನೇ ಕುರಿತು ಚಿಂತಿಸುತ್ತಿರುವ ಮಹಾಶ್ವೇತೆಯನ್ನು ಕಂಡು ಮತ್ತೆ ಮೋಹ ಪರವಶವಾಗಿ, ಅವಳ ಕೋಪಕ್ಕೆ ಪಾತ್ರನಾಗಿ ಗಿಳಿಯ ಜನ್ಮವನ್ನು ಪಡೆಯುತ್ತಾನೆ. ಇಲ್ಲಿ ಮಹಾಶ್ವೇತೆಯ ಸಿದ್ಧಿ ಗೋಚರವಾಗುತ್ತದೆ. ಅವಳದು ದೇಹ ಜನಿತವಾದ ಕಾಮವಲ್ಲ. ಆಗಿದ್ದರೆ ವಿಧಿಯೊಡ್ಡಿದ ಪ್ರಲೋಭನಕ್ಕೆ ಒಲಿಯಾಗುತ್ತಿದ್ದಳು. ಪ್ರಲೋಭನಕ್ಕೆ ಸಿಲುಕದ ಅವಳ ಸತ್ವ, ಹಿರಿಮೆ, ಇಲ್ಲಿ ಗೋಚರವಾಗುತ್ತದೆ.

ಗಿಳಿಯಾದ ಪುಂಡರೀಕ ಚಂಡಾಲರ ಕೈಗೆ ಸಿಕ್ಕಿ ಚರ್ಮದ ಪಂಜರದಲ್ಲಿ ತೊಳಲುತ್ತಾನೆ. ಕೊನೆಗೆ ಜಾಬಾಲಿ ಮುನಿಗಳ ಕಥೆಯಿಂದ ಜಾತಿಸ್ಮರಣೆಯುಂಟಾಗಿ ಮಹಾಶ್ವೇತೆಯಲ್ಲಿನ ಆತನ ಪ್ರೇಮವೂ ಜಾಗೃತವಾಗುತ್ತದೆ. ಪುಂಡರೀಕ ಮುನಿಗಳ ಬಳಿ ಹೀಗೆನ್ನುತ್ತಾನೆ—"ಇಷ್ಟೊಂದು ಭವಗಳನ್ನೆತ್ತಿದ್ದರೂ ಮಹಾಶ್ವೇತೆಯಲ್ಲಿನ ನನ್ನ ಪ್ರೇಮ ಎಂದಿಗಿಂತ ಅಧಿಕವಾಗಿದೆ"—ಅವನ ಪ್ರೇಮ ತನ್ನ ಕಾಳಿಕೆಯನ್ನು ಕಳೆದುಕೊಂಡು ಶುಭ್ರಮಂಗಳ ಪ್ರೇಮವಾಗಿ ಪರಿಣಮಿಸಿದಾಗ ಅವನ ಇಷ್ಟಾರ್ಥ ಸಿದ್ಧಿಯಾಗುತ್ತದೆ.

ಶಕುಂತಲೆಯದು ಕಠೋರ ತಪಸ್ಸೇ ಆದರೂ ಭರತ ಅವಳಿಗೊಂದು ಸಮಾಧಾನವಿತ್ತಿದ್ದ. ಅವನ ತಂಪಾದ ಕಣ್ಬೆಳಕಿನಲ್ಲಿ ಅವಳ ನೋವು ಸ್ವಲ್ಪ ಹಗುರವಾಗುತ್ತಿತ್ತು. ಮಹಾಶ್ವೇತೆಗೆ ಅಂತಹುದೇನೂ ಇಲ್ಲ. ಅವಳ ತಪಸ್ಸು ಉಗ್ರ. ನಿಷ್ಫಲವಾದ ನಿಶ್ಚಲವಾದ ನಿರೀಕ್ಷೆ ಅವಳ ಪಾಲಿನದು. ಅನಂತವಾದ ತಾಳ್ಮೆಯಿಂದ ವಿಧಿಯನ್ನು ಜಯಿಸಿದ ಗೃಹಿಣಿ ಗಂಧರ್ವಕನ್ಯೆ.

ಇನ್ನು ಪಾರ್ವತಿ—

ಮಹಿಮಾವಂತನಾದ ಹಿಮವಂತ ಸದ್ಗೃಹಿಣಿಯಾದ ಮೇನೆಯರಿಗೆ ಮಗಳು ಪಾರ್ವತಿ. ಅಲೌಕಿಕ ರೂಪವತಿಯಾದ ಈಕೆ ಶಿವನಿಗೆ ಮಾತ್ರ ಅರ್ಹಳು ಎಂದು ನಾರದ ಮಹರ್ಷಿಗಳಿಂದ ಅರಿತ ಹಿಮವಂತ ಆಗ ತನ್ನ ತಪ್ಪಲಲ್ಲೇ ತಪೋನಿರತನಾಗಿದ್ದ ಅವನ ಶುಶ್ರೂಷೆಗೆ ಮಗಳನ್ನು ನೇಮಿಸುತ್ತಾನೆ. ಪಾರ್ವತಿ ಇನ್ನೂ ಯುವತಿ. ಶಿವನ ವಿಷಯದಲ್ಲಿ ಬಾಲ್ಯದಿಂದಲೂ ಬೆಳೆದು ಬಂದ ಅನುರಾಗ ಭಕ್ತಿಗಳು ಅಪಾರವಾಗಿದ್ದರೂ ಅವನ ಸ್ವಭಾವದ ಅರಿವು ಅವಳಿಗಿಲ್ಲ. ಇದರಿಂದ ಬಾಹ್ಯ ಸೌಂದರ್ಯದಿಂದಲೇ ಆತನನ್ನು ಜಯಿಸಬಲ್ಲೆ ಎಂದು ಭ್ರಮಿಸುತ್ತಾಳೆ. ಜೊತೆಗೆ ದೇವತೆಗಳಿಂದ ಪ್ರಚೋದಿತನಾದ ಮನ್ಮಥನ ಸಹಾಯ ಬೇರೆ! ಜಗನ್ಮಾತೆಯ ಬೆಂಬಲದ ರಕ್ಷೆ ತನಗಿದೆ ಎಂದುಕೊಂಡ ಮನ್ಮಥ ಶಿವನ ಮೇಲೆ ತನ್ನ ಐದು ಬಾಣಗಳನ್ನು ಪ್ರಯೋಗಿಸಿದ. ಕ್ಷಣಕಾಲ ಚಲಿತನಾದ ಶಿವ ಕಣ್ಣನ್ನೇನೋ ತೆರೆದ. ಆದರೆ, ಅವನು ತೆರೆದದ್ದು ಮೂರನೆಯ ಕಣ್ಣನ್ನು! ಇದರಿಂದಾದದ್ದು ಕೇವಲ ಕಾಮದಹನ, ಉಮಾ ಸ್ವೀಕಾರವಲ್ಲ. ಶಿವ ಅಲ್ಲಿಂದೆದ್ದು ಸಿಂಹದಂತೆ ಗಂಭೀರವಾಗಿ ನಡೆದು ಮತ್ತೊಂದು ಶಿಲಾವೇದಿಕೆಯ ಮೇಲೆ ತಪಸ್ಸಿಗೆ ಕುಳಿತು ನಿರ್ವಿಕಲ್ಪನಾದ. ತನ್ನ ಸಂಪೂರ್ಣಗಮನವನ್ನು ಯೋಚಿಸಿ ನಿಂತಿದ್ದ ಉಮೆಯ ಕಡೆಗೆ ಕಡೆಗಣ್ಣನ್ನೂ ಹೊರಳಿಸಲಿಲ್ಲ.

ಕೇವಲ ಬಾಹ್ಯ ಸೌಂದರ್ಯದಿಂದ ಆ ಸಚ್ಚಿದಾನಂದ ಸ್ವರೂಪಿಯನ್ನು ಜಯಿಸುವುದು ಅಸಾಧ್ಯ ಎಂಬುದು ಪಾರ್ವತಿಯ ಅನುಭವಕ್ಕೆಬಂತು. ತನ್ನ ಕಣ್ಣೆದುರಿಗೇ ಕಾಮದಹನವಾದುದನ್ನು ಕಂಡ ಅವಳಿಗೆ ತನಗುಂಟಾದ ಅಪಮಾನದಿಂದ ಅತೀವವಾದ ದುಃಖವಾಯಿತು. ಶಿವನನ್ನು ಒಲಿಸಿಕೊಳ್ಳಲು ಕಠಿಣವಾದರೂ ಹಿರಿದಾದ ದಾರಿಯೊಂದಿದೆ, ಅದು ತಪಸ್ಸು ಎಂದು ಅರಿತಳು. ದೇಹದ ಸೆಳೆತಕ್ಕಿಂತ ಆತ್ಮದಕರೆ ಹಿರಿಯು

ದೆನ್ನುವುದನ್ನು ಮನಗಂಡಳು.

ತಾನು ಅದುವರೆಗೂ ಅಭಿಮಾನದಿಂದ ಅಲಂಕರಿಸಿದ ತನ್ನದೇಹ ಸೌಂದರ್ಯ ವನ್ನು ತಾನೇ ಹಳಿದುಕೊಂಡಳು. ಆ ಸುಕುಮಾರಿ ತನ್ನ ಅಲಂಕಾರಗಳನ್ನೆಲ್ಲಾ ಒಂದೊಂದಾಗಿ ತ್ಯಜಿಸಿದಳು.

ಚೀನಾಂಬರ ನಾರುಡೆಗೆ ಎಡೆಗೊಟ್ಟಿತು. ಮುಂಗೈಯನ್ನು ರತ್ನಕಂಕಣದ ಬದಲು ಪುಷ್ಪಕಂಕಣ ಅಲಂಕರಿಸಿತು. ಕೈಯಲ್ಲಿ ಜಪಮಾಲೆ ತಿರುಗಿತು. ಮನ್ಮಥನಖವಾದ ವಸಂತವನ್ನು ತ್ಯಜಿಸಿ ಕಠಿಣವಾದ ದುಃಖವನ್ನೇ ತನ್ನ ಪ್ರೇಮಕ್ಕೆ ಸಹಾಯವನ್ನಾಗಿ ಮಾಡಿಕೊಂಡಳು. ಆಕೆಯ ತಪಸ್ಸಿನ ಭೀಕರತೆ ಶೂಲಿಯ ತಪಸ್ಸಿನ ಉಗ್ರತೆಯನ್ನೂ ಕೂಡ ಮೀರಿಸಿತು. ಕ್ರಮಕ್ರಮವಾಗಿ ಉಮಾ ಬಾಹ್ಯರೂಪದಲ್ಲಿ ಕೂಡ ಶಿವನನ್ನೇ ಹೋಲುವಷ್ಟರಮಟ್ಟಿಗೆ ತನ್ಮಯತೆಯನ್ನು ಪಡೆದಳು. ಕವಿಯ ಮಾತಿನಲ್ಲಿ ಹೇಳ ಬೇಕಾದರೆ "ಕಠೋರ ತಪದಿಂ ಘೋರ ಕಪರ್ದಿಯ ಕಳೇಬರಾರ್ಧನ ಪಡೆದ ಶಿವಾಣಿ" ಯಾದಳು.

ವಸಂತ ಪುಷ್ಪಾಭರಣ ಭೂಷಿತೆಯಾಗಿ ಲಾವಣ್ಯಮಯಿಯಾಗಿ ತನ್ನ ಬಳಿಗೆ ಬಂದ ಗೌರಿಯನ್ನು ಕ್ಷಣಮಾತ್ರದಲ್ಲಿ ತಿರಸ್ಕರಿಸಿದ ತ್ರಿಲೋಚನ ಮೂರು ಲೋಕವನ್ನು ನಡುಗಿಸುವ ಅವಳ ತಪಸ್ಸಿನಿಂದ ಚಲಿತನಾಗಿ ಬಹಿರ್ಮುಖನಾಗಬೇಕಾಯಿತು. ಹಗಲಿನ ಚಂದ್ರಬಿಂಬದಂತೆ ಕಳೆಗುಂದಿದವಳಾಗಿ ಮಾಸಿದ ಜಟೆಯುಳ್ಳವಳಾದ ಉಮೆಯ ಆತ್ಮಾರ್ಪಣೆಯನ್ನು ತುಂಬಿದ ಮನದಿಂದ ಪರಿಗ್ರಹಿಸಬೇಕಾಯಿತು.

ಶಿವನಂತಹ ತಪಸ್ವಿ ಪಾರ್ವತಿಯಂತಹ ಕಿಶೋರಿಯೊಂದಿಗೆ ಬಾಹ್ಯ ಸೌಂದ ರ್ಯದ ನಿಯಮಾನುಸಾರವಾಗಿ ಸಂಬಂಧ ಬೆಳೆಸುವುದು ಸಾಧ್ಯವಿಲ್ಲ. ಈ ವಿಷಯವನ್ನು ಈಶ್ವರ ಬ್ರಹ್ಮಚಾರಿಯ ವೇಷದಲ್ಲಿ ಬಂದು ತಪಸ್ಸುಮಾಡುತ್ತಿದ್ದ ಪಾರ್ವತಿಗೆ ಹೀಗೆ ತಿಳಿಸುತ್ತಾನೆ: "ಅವಸ್ತುವಿನಲ್ಲಿ ಅಮರತ್ವಳಾಗಿದ್ದೀಯೆ. ಹಾವು ಸುತ್ತಿಕೊಂಡಿರುವ ಅವನ ಕೈಯನ್ನು ನೀನು ಹಿಡಿಯುವುದಾದರೂ ಹೇಗೆ? ನಿನ್ನ ಬಿಳಿಯ ರೇಶಿಮೆಯ ಸೀರೆ ಅವನ ಗಜಚರ್ಮದಿಂದ ಸೋರುತ್ತಿರುವ ರಕ್ತದಿಂದ ಮಲಿನವಾಗುತ್ತದೆ. ಪಟ್ಟದಾನೆಯನ್ನು ಏರಲರ್ಹಳಾದ ನೀನು ಶವಭಸ್ಮಧಾರಿಯಾದ ಅವನೊಡನೆ ಮುದಿ ಎತ್ತನ್ನೇರಬೇಕಾಗುವುದು. ಆಗ ಜನರೆಲ್ಲಾ ನಿನ್ನನ್ನು ನೋಡಿ ನಗುತ್ತಾರೆ. ಆದ್ದರಿಂದ ನಿನ್ನ ಮನಸ್ಸನ್ನು ಅವನಿಂದ ಹಿಂತಿರುಗಿಸು."

ಆದರೆ ಪಾರ್ವತಿ "ನನ್ನ ಮನಸ್ಸು ಅವನಲ್ಲಿ ಒಂದಾಗಿದೆ. ಅದನ್ನು ನಾನು ಅನುಭವಿಸಿದ್ದೇನೆ. ಬಾಹ್ಯರೂಪ ಹೇಗಿದ್ದರೇನು? ವಿಶ್ವಮೂರ್ತಿಯಾದ ಅವನ ರೂಪ ಹೀಗೇ ಎಂದು ಹೇಳಲು ಯಾರಿಗೆ ಸಾಧ್ಯ. ಈಶ್ವರ ಮುದಿ ಎತ್ತನ್ನೇರಿದ್ದರೂ ಐರಾವತವನ್ನೇರಿದ ಭೋಗಾಧಿಪತಿಯಾದ ಇಂದ್ರ ಇಳಿದುಬಂದು—ಅವನ ಪಾದ ಧೂಳಿಯಿಂದ ತನ್ನ ಶಿರವನ್ನು ಪವಿತ್ರಮಾಡಿಕೊಳ್ಳುತ್ತಾನೆ. ವಿಶ್ವಮೂರ್ತಿಯ ಅಂಗಸಂಗ ನಮಗೆ ದುರ್ಲಭ ಎಂದು ದೇವತೆಗಳು ಕೂಡ ನೃತ್ಯಾಭಿನಯದಲ್ಲಿ ಉದುರಿದ

ಬೂದಿಯನ್ನು ತಲೆಯಲ್ಲಿ ಧರಿಸುತ್ತಾರೆ" ಎಂದಳು.

ಇನ್ನೇನೋ ವಾದಿಸಲು ಹೊರಟ ಆ ವ್ಯರ್ಥ ತಾರ್ಕಿಕನೊಡನೆ ಮಾತೇಕೆ ಎಂದು ಆ ಸ್ಥಾನವನ್ನೇ ಬಿಟ್ಟು ಹೊರಡಲಿರುತ್ತಾಳೆ ಗೌರಿ. ಈಶ್ವರ ತನ್ನ ನಿಜರೂಪವನ್ನು ತೋರಿಸಿ "ಇಂದಿನಿಂದ ನಾನು ನಿನ್ನವನು. ನೀನು ನನ್ನನ್ನು ತಪಸ್ಸಿನಿಂದ ಕೊಂಡುಕೊಂಡೆ" ಎನ್ನುತ್ತಾನೆ.

—ಮುಂದೆ ವಿಧಿಪೂರ್ವಕವಾಗಿ ಈಶ್ವರ ಸಪ್ತರ್ಷಿಗಳ ಮೂಲಕ ಹಿಮವಂತನನ್ನು ಪಾರ್ವತಿಗಾಗಿ ಪ್ರಾರ್ಥಿಸುತ್ತಾನೆ. ಈ ವಿವಾಹದಲ್ಲಿ ಈಶ್ವರ ಧರ್ಮಚೋದಿತನಾಗಿದ್ದಾನೆ. ಲೋಕಕಲ್ಯಾಣಕ್ಕಾಗಿ ಕುಮಾರಸ್ವಾಮಿಯ ಜನನವಾಗಬೇಕು. ಅದಕ್ಕಾಗಿ ಪಾರ್ವತಿಯನ್ನು ಬೇಡುತ್ತಾನೆ. ಲೋಕಕಲ್ಯಾಣ ಮತ್ತು ಆತ್ಮಕಲ್ಯಾಣಗಳೆರಡನ್ನೂ ಸಾಧಿಸಲು ಈ ವಿವಾಹ ಒಂದು ಉಪಕರಣ.

ಕಾವ್ಯಜಗತ್ತು ಸೃಷ್ಟಿಸಿರುವ ಈ ಮೂರು ಜನ ಮಹಿಳೆಯರ ಸೂಕ್ಷ್ಮಪರಿಚಯವನ್ನು ಮಾಡಿಕೊಂಡಿದ್ದೇವೆ. ಆ ಮೂರು ಜೀವನಗಳೂ ಅಶಾಶ್ವತವಾದ ಲೌಕಿಕ ಒಲುಮೆ, ಶಾಶ್ವತವಾದ ಪ್ರೇಮಪೀಠದಮೇಲೆ ಸಂಸ್ಥಾಪಿತವಾಗಬೇಕಾದರೆ ತಪಸ್ಸಿನ ರೀತಿಯನ್ನು ಅವಲಂಬಿಸಲೇಬೇಕು ಎಂಬುದನ್ನು ಸಾರಿಹೇಳುತ್ತವೆ. ತಪಸ್ಸು ಎಂದರೆ ಕಾಡಿಗೆ ಓಡಿಹೋಗಿ ವಿಧವಿಧವಾದ ಕಷ್ಟಗಳಿಗೆ ದೇಹವನ್ನು ಈಡುಮಾಡಿ ಲೋಕವನ್ನು ತಮ್ಮ ಪ್ರೇಮಪೂರ್ವಕವಾದ ಸೇವೆಯಿಂದ ವಂಚಿತವಾಗಿ ಮಾಡುವುದು—ಎಂದಲ್ಲ. ಉತ್ತಮಳಾದ ಮಹಿಳೆಗೆ ಮನೆಯೇ ಪರ್ಣಶಾಲೆ. ಆಕೆಯ ದಿನದಿನದ ಜೀವನವೇ ತಪಸ್ಸು.—ಅದರ ಮೂಲಕವೂ ಅವಳಿಗೆ ಪರಮ ಪುರುಷೋತ್ತಮನ ಸಾಕ್ಷಾತ್ಕಾರ ಸಾಧ್ಯ ಎಂಬುದನ್ನು ಶ್ರೀಮಾತೆ ಶಾರದಾದೇವಿಯವರ ಜೀವನ ಇಂದಿನ ಯುಗದಲ್ಲಿ ಲೋಕಕ್ಕೆ ತೋರಿಸಿಕೊಟ್ಟಿದೆ.—ಶಕುಂತಲೆ, ಮಹಾಶ್ವೇತೆ, ಪಾರ್ವತಿ ಮೊದಲಾದ ಮಹಿಳೆಯರೆಲ್ಲರ ತಪಸ್ಸು ಶ್ರೀಮಾತೆಯ ಜೀವನದಲ್ಲಿ ಅಧಿಕತರ ಪ್ರಮಾಣದಲ್ಲಿ ಮೈದೋರಿರುವುದನ್ನು ನಾವು ಕಾಣುತ್ತೇವೆ. ಆಕೆಯ ಜೀವನದ ಸಂಗೀತಕ್ಕೆ ಎಡೆಬಿಡದ ವೀಣಾಶೃತಿಯಾಗಿದೆ. ತಪಸ್ಸು ಬೆಂಬಲ ನೀಡಿತು. ಲೌಕಿಕ ಸಂಬಂಧದ ಕಾಳಿಕೆಯೇ ಇಲ್ಲದ ಶುದ್ಧ ಅಪರಂಜಿ ಶ್ರೀಮಾತೆಯ ಬದುಕು.

ಇಂತಹ ತಪೋಮೂರ್ತಿಗಳು ನಮ್ಮೆಲ್ಲರನ್ನೂ ಹರಸಲಿ.



# ಅತಿದ್ರವತ್ವ ಮತ್ತು ಅತಿವಾಹಕತ್ವ

## (SUPERFLUIDITY & SUPERCONDUCTIVITY)

**ಡಾ|| ಎಲ್. ಸೀಬಯ್ಯ**

ಭೌತವಿಜ್ಞಾನದಲ್ಲಿ ಪರಮಶೂನ್ಯ ಉಷ್ಣತೆಯ (Absolute zero of temprature) ಭಾವನೆ ಇದೆ. ಇದು ಸೆಂಟಿಗ್ರೇಡು ಶೂನ್ಯದಿಂದ ೨೭೩ ಡಿಗ್ರಿ ಕೆಳಮಟ್ಟದಲ್ಲಿರುತ್ತದೆ. ಈ ಪರಮಶೂನ್ಯತೆಯನ್ನು ತಲಪುವುದು ಅಸಾಧ್ಯವೇ ಆದರೂ, ಅದಕ್ಕೆ ಬಹುಮುಂಚೆಯೇ ಅನೇಕ ಅನಿಲಗಳು ದ್ರವರೂಪ ಘನರೂಪಗಳನ್ನು ತಾಳುತ್ತವೆ. ಸಾಕಷ್ಟು ಒತ್ತಡದಲ್ಲಿ ಅನಿಲಗಳ ಉಷ್ಣತೆಯನ್ನು ಕಡಿಮೆಮಾಡುತ್ತಾ ಹೋದರೆ, ಹೀಗೆ ಅವಸ್ಥಾವ್ಯತ್ಯಾಸ ಸಂಭವಿಸುವುದು. ಈ ತೆರನಾದ ಪ್ರಯೋಗಗಳಿಂದ ಕಾಮರ್‌ಲಿಂಗ್ ಆನ್ಸ್‌ನು ಕ್ರಿ.ಶ. ೧೯೦೮ ರ ಜುಲೈ ೧೦ ರಲ್ಲಿ ಅರ್ಕಾನಿಲ (helium) ವನ್ನು ಬಹು ಪ್ರಯಾಸಪಟ್ಟು ದ್ರವರೂಪಕ್ಕೆ ತಂದನು. ದ್ರವದ ಭೌತಲಕ್ಷಣಗಳನ್ನು ಸಾಮಾನ್ಯವಾಗಿ ಎಲ್ಲರೂ ಬಲ್ಲರು. ಆದರೆ ಅರ್ಕಾನಿಲ ದ್ರವವು ಅತಿರೇಕ ಲಕ್ಷಣಗಳಿಂದ ಕೂಡಿದೆ; ಈ ದ್ರವದ ಸ್ಥಿತಿಯನ್ನು ಅತಿದ್ರವತ್ವವೆಂದು ಕರೆಯುವರು. ಇಷ್ಟು ಕಡಿಮೆ ಉಷ್ಣತೆಯ ವಾತಾವರಣದಲ್ಲಿ ಲೋಹಗಳ ಸಾಮಾನ್ಯಗುಣಗಳೂ ಕೂಡ ಅತ್ಯಂತ ಆಶ್ಚರ್ಯಕರವಾದ ಬದಲಾವಣೆಗಳನ್ನು ಹೊಂದುವುವು. ಲೋಹ ಸಹಜವಾದ ವಿದ್ಯುತ್‌ನಿರೋಧವು (electrical resistance) ಒಮ್ಮೆಲೇ ಮಾಯವಾಗುವುದು ಈ ಬದಲಾವಣೆಗಳಲ್ಲಿ ಅತಿಮುಖ್ಯವಾದುದು; ಇದನ್ನು ಅತಿವಾಹಕತ್ವವೆಂದು ಕರೆಯುವರು. ಅತಿದ್ರವತ್ವ, ಅತಿವಾಹಕತ್ವಗಳು ನಮ್ಮ ಸಾಮಾನ್ಯ ಅನುಭವಗಳಿಗೆ ಮೀರಿದವು; ಅತಿಕನಿಷ್ಠ ಉಷ್ಣತಾಮಟ್ಟದಲ್ಲಿ ಮಾತ್ರ ಕಂಡುಬರುವ ವಿದ್ಯಮಾನಗಳು. ಅಂತು ಅರ್ಕಾನಿಲದ್ರವವು ಶೈತ್ಯತಮ ಪ್ರಪಂಚದ ಏಕೈಕವಸ್ತು. ಭೌತವಿಜ್ಞಾನದ ಸಾಮಾನ್ಯ ನಿಯಮಗಳಿಗೆ ವ್ಯತಿರಿಕ್ತವಾಗಿ ಕಾಣುವ ಹಲವಾರು ಘಟನಾವಳಿಗಳನ್ನು ಇದರಲ್ಲಿ ನೋಡಬಹುದು. ಈ ವಿಶೇಷ ಘಟನೆಗಳ ಅರಿವಾಗಲು ಹೆಚ್ಚು ಗಣಿತದ ನೆರವಾಗಲೀ, ಸೂಕ್ಷ್ಮಯಂತ್ರಗಳ ಸಹಾಯವಾಗಲೀ ಬೇಕಿಲ್ಲ. ಇಲ್ಲಿನ ವಿದ್ಯಮಾನಗಳನ್ನು ಕಣ್ಣಾರೆ ನೋಡಿ ತಿಳಿಯಬಹುದು.

ಪರಮಶೂನ್ಯ ಉಷ್ಣತೆಗೆ ಅತಿ ಸಮೀಪದಲ್ಲಿರುವ ಅರ್ಕಾನಿಲದ್ರವದಲ್ಲಿ ಮುಳುಗಿರುವ ಅನೇಕ ಲೋಹಗಳು ತಮ್ಮ ವಿದ್ಯುತ್‌ನಿರೋಧವನ್ನು ಸಂಪೂರ್ಣವಾಗಿ ಕಳೆದುಕೊಳ್ಳುವುದಾಗಿ ೧೯೧೧ ರಲ್ಲಿ ಕಾಮರ್‌ಲಿಂಗ್ ಆನ್ಸ್ ಕಂಡುಹಿಡಿದನು. ಆ ದ್ರವದಲ್ಲಿರುವ ಸೀಸದ ಬಳೆಯಲ್ಲಿ ಪ್ರಾರಂಭವಾದ ವಿದ್ಯುತ್ ಪ್ರವಾಹವು ಗಂಟೆಗಟ್ಟಲೆ.

ಅಷ್ಟೇಕೆ ದಿನಗಟ್ಟಲೆ, ಏಕಪ್ರಕಾರವಾಗಿ ಕುಂದದೆ ಪ್ರವಹಿಸುತ್ತಲಿರುವುದೆಂದು ಗೊತ್ತಾಯಿತು. ಈ ಅತಿವಾಹಕತ್ವವನ್ನು ನೋಡಲು ಅದೇ ಲೋಹದ ಒಂದು ಚಂಡನ್ನು ಆ ಬಳೆಯ ಮೇಲೆ ಇಡಲು ಎತ್ನಿಸಿದರೆ ಸಾಕು; ಚಂಡಿನಲ್ಲಿ ಪ್ರೇರಿತವಾಗುವ ವಿದ್ಯುತ್ ಪ್ರವಾಹದಿಂದ, ಬಳೆಗೂ ಚಂಡಿಗೂ ವಿಕರ್ಷಣೆಯುಂಟಾಗಿ, ಚಂಡು ಬಳೆಯ ಮೇಲೆ ತೇಲುತ್ತಿರುವ ಸೋಜಿಗದೃಶ್ಯವನ್ನು ಕಾಣಬಹುದು.

ಕೆಲವು ಲೋಹಗಳು ಮಾತ್ರ ಅತಿವಾಹಕತ್ವ ಸ್ಥಿತಿಯನ್ನು ಪಡೆಯುತ್ತವೆ. ಇತರ ಲೋಹಗಳಿಗೆ ಸಾಧ್ಯವಿಲ್ಲ. ಅತಿವಾಹಕತ್ವವಿಲ್ಲದ ಎರಡು ಲೋಹಗಳ ಮಿಶ್ರಣಕ್ಕೆ ಅತಿವಾಹಕತ್ವ ಗುಣವಿರಬಹುದು. ಆದ ಕಾರಣ ಅತಿವಾಹಕತ್ವವು ಪರಮಾಣುವಿಗೆ ಸಂಬಂಧಪಟ್ಟ ಲಕ್ಷಣವಲ್ಲ. ಇದು ಲೋಹಗಳಲ್ಲಿರುವ ಸ್ವತಂತ್ರ ಋಣಾಂಶಗಳಿಗೆ (free electrons) ಸಂಬಂಧಿಸಿರಬೇಕು. ಆದರೆ ಅತಿವಾಹಕತ್ವ ಸ್ಥಿತಿಯಲ್ಲಿ ಈ ಸ್ವತಂತ್ರ ಋಣಾಂಶಗಳ ಪಾತ್ರವನ್ನು ತಿಳಿಯುವ ಮೊದಲು ದ್ರವರೂಪಿ ಅರ್ಕಾನಿಲದ ವಿಶೇಷ ಗುಣಗಳನ್ನು ಸ್ವಲ್ಪ ಪ್ರಸ್ತಾಪಿಸೋಣ.

೧೯೦೮ ರಲ್ಲಿ ಕಾಮರ್ಲಿಂಗ್ ಆನ್ಸ್‌ನು ಅರ್ಕಾನಿಲವನ್ನು ದ್ರವೀಕರಿಸಿದ ದಿನವೇ ಅದರ ಮೇಲಿನ ಆವಿಯನ್ನು ಯಂತ್ರದಿಂದ ಹೊರತಳ್ಳಿ, ಘನ ರೂಪಕ್ಕೆ ತರಲು ಯತ್ನಿಸಿ ವಿಫಲನಾದನು. ಪರಮಶೂನ್ಯ ಉಷ್ಣಾಂಶದ ಮಟ್ಟದಲ್ಲೂ ಅರ್ಕಾನಿಲವು ದ್ರವರೂಪಿಯಾಗಿಯೇ ಇರುವುದೆಂದು ಈಗ ಗೊತ್ತಾಗಿದೆ. ಅರ್ಕಾನಿಲದ್ರವ ಒಂದೇ ಶೈತ್ಯಾಧಿಕ್ಯದಿಂದ ಘನರೂಪವನ್ನು ತಾಳಲಾರದ ವಸ್ತು. ನಮ್ಮ ನಿರೀಕ್ಷಣೆಯಂತೆ ಘನೀಭೂತವಾಗದಿದ್ದರೂ, ಅನಿರೀಕ್ಷಿತವಾದ ಹಲವು ಘಟನೆಗಳು ಕಾಣುವುವು. ದ್ರವದ ಮೇಲಿನ ಆವಿಯನ್ನು ಹೊರತಳ್ಳಿ ದ್ರವದ ಉಷ್ಣಾಂಶವನ್ನು ಕಡಿಮೆಮಾಡಲೆತ್ನಿಸಿದರೆ, ದ್ರವವು ಕುದಿಯಾರಂಭಿಸುತ್ತದೆ; ಈ ದೃಶ್ಯವು ಕುದಿಯುವ ನೀರನ್ನು ಬಹುಮಟ್ಟಿಗೆ ಹೋಲುತ್ತದೆ. ಪರಮಶೂನ್ಯದಿಂದ ಮೇಲೆ ಕೇವಲ ೨ ಡಿಗ್ರಿ ಉಷ್ಣಾಂಶವನ್ನು ತಲ್ಪಿದ ತಕ್ಷಣ ಕುದಿಯುವುದು ನಿಲ್ಲುತ್ತದೆ. ಅರ್ಕಾನಿಲದ್ರವವು ಪ್ರಶಾಂತ ಸ್ಥಿತಿಯನ್ನು ತಾಳುತ್ತದೆ. ಗಾಜಿನ ಪಾತ್ರೆಯ ಅಂಚಿನಲ್ಲಿ ದ್ರವದ ಮೇಲ್ಮೈ ಕತ್ತಿಯ ಮೊನೆಯಂತೆ ನಿಲ್ಲುತ್ತದೆ. ದ್ರವದ ಉಷ್ಣವಾಹಕತ್ವ (heat conduction)ವು ಏಕಾಏಕಿ ಹತ್ತುಲಕ್ಷ ಮಡಿ ಹೆಚ್ಚುವುದೇ ಈ ವಿಚಿತ್ರವರ್ತನೆಗೆ ಕಾರಣ. ಈ ಉಷ್ಣತೆಯಲ್ಲಿ ದ್ರವದ ಪ್ರವಾಹರೀತಿಯೂ ವಿಚಿತ್ರವಾಗುತ್ತದೆ. ಬಹು ಸೂಕ್ಷ್ಮರಂಧ್ರದ ಗಾಜಿನ ನಲಿಗೆಯಲ್ಲಿ ಯಾವ ಅಡ್ಡಿ ಆತಂಕವೂ ಇಲ್ಲದೆ ಪ್ರವಹಿಸುತ್ತದೆ. ಸ್ನಿಗ್ಧತ್ವ (viscosity) ದಿಂದ ಉಂಟಾಗುವ ನಿರೋಧವೂ (resistance) ಮಾಯವಾದಂತೆ ಭಾಸವಾಗುತ್ತದೆ. ಅಲ್ಲದೆ ನಳಿಗೆಯ ರಂಧ್ರ ಸೂಕ್ಷ್ಮವಾದಂತೆಲ್ಲಾ, ಅರ್ಕಾನಿಲದ್ರವವು ಲೀಲಾಜಾಲವಾಗಿ ಪ್ರವಹಿಸುತ್ತಿದೆ! ಆದರೂ ಅರ್ಕಾನಿಲದ್ರವದಲ್ಲಿ ಚಲಿಸುವ ವಸ್ತುಗಳು ಸ್ನಿಗ್ಧತ್ವದಿಂದ ಉಂಟಾಗುವ ನಿರೋಧದಿಂದ ತಡೆಯಲ್ಪಡುತ್ತವೆ. ಅಂದರೆ ಈ ದ್ರವಕ್ಕೆ ಸ್ನಿಗ್ಧತ್ವವಿಲ್ಲ, ಹಾಗೂ ಸ್ನಿಗ್ಧತ್ವ ಇದೆ!! ಅತಿವಾಹಕತ್ವವಕ್ಕೆ ದೃಷ್ಟಾಂತಕೊಟ್ಟಂತೆ,

ಈ ಅತಿಪ್ರವತ್ವವನ್ನೂ ಒಂದು ಪ್ರಯೋಗದಿಂದ ಬಹು ಹೃದಯಂಗಮವಾಗಿ ತೋರಿಸಬಹುದು. ಅರ್ಕಾನಿಲ ದ್ರವವಿರುವ ಗಾಜಿನ ಪಾತ್ರೆಯ ಮೇಲ್ಮೈಯಲ್ಲಿ ಅರ್ಕಾನಿಲದ ತೆಳ್ಳನೆ ಪೊರೆಯು ಕಾಣದಂತೆ ಇರುವುದು. ಇದಕ್ಕೆ ಕಾರಣ ತಿಳಿಯದಿದ್ದರೂ, ಈ ಪೊರೆಯ ಮುಖಾಂತರ ಬಹು ಸುಲಭವಾಗಿ ದ್ರವಪ್ರವಾಹ ಸಂತತವಾಗಿ ನಡೆಯುವುದೆಂದು ಗೊತ್ತು ; ಸೂಕ್ಷ್ಮರಂಧ್ರದ ನಳಿಗೆಯಲ್ಲಿ ಪ್ರವಹಿಸುವುದಕ್ಕಿಂತ ಅನಾಯಾಸವಾಗಿ ಈ ಪೊರೆಯ ಮರೆಯಲ್ಲಿ ಪ್ರವಾಹ ನಡೆಯುವುದು. ಒಂದು ಟೆಸ್ಟ್ ಟ್ಯೂಬನ್ನು ಬಾಯಿ ಮೇಲಾಗಿ ಅರ್ಕಾನಿಲದ್ರವದಲ್ಲಿ ಸ್ವಲ್ಪಭಾಗ ಅದ್ದಿದರೆ, ದ್ರವವು ಪೊರೆಯ ಮುಖಾಂತರ ಮೇಲಕ್ಕೆ ಹತ್ತಿ ಒಳಕ್ಕೆ ಹರಿಯುತ್ತದೆ. ಟೆಸ್ಟ್ ಟ್ಯೂಬಿನ ಒಳಗೂ ಹೊರಗೂ ಒಂದೇ ಮಟ್ಟಕ್ಕೆ ದ್ರವ ಬರುವವರಿಗೂ ಈ ವಿದ್ಯಮಾನ ನಡೆಯುತ್ತದೆ. ಈಗ ಟೆಸ್ಟ್ ಟ್ಯೂಬನ್ನು ಸ್ವಲ್ಪ ಮೇಲಕ್ಕೆ ಎತ್ತಿದರೆ, ಪ್ರವಾಹವು ಹಿಂದುಮುಂದಾಗಿ ಹೊರಕ್ಕೆ ಹರಿಯುತ್ತದೆ. ಟೆಸ್ಟ್ ಟ್ಯೂಬನ್ನು ದ್ರವದ ಮಟ್ಟದಿಂದ ಮೇಲೆತ್ತಿ ಹಿಡಿದರೆ, ಅದರಲ್ಲಿರುವ ದ್ರವವೆಲ್ಲಾ ಪೊರೆಯ ಮುಖೇನ ಒಳಗಿಂದ ಹೊರಕ್ಕೆ ಹರಿದು ಖಾಲಿಯಾಗುವವರೆಗೂ ಏಕಪ್ರಕಾರವಾಗಿ ತೊಟ್ಟಿಕ್ಕುತ್ತಿರುವುದು. ಈ ವಿಚಿತ್ರ ದೃಶ್ಯವನ್ನು ಕಂಡಾಗ ನಾವು ಸ್ವಪ್ನಾವಸ್ಥೆಯಲ್ಲಿದೇವೆಂಬ ಸಂಶಯ ಮೂಡಬಹುದು.

ಈ ಪ್ರಯೋಗದಲ್ಲಿ ಟೆಸ್ಟ್ ಟ್ಯೂಬಿನೊಳಗಿನ ದ್ರವದ ಮಟ್ಟ ಎಷ್ಟೇ ಇರಲಿ ದ್ರವ ತೊಟ್ಟಿಕ್ಕುವ ಪ್ರಮಾಣ ಮಾತ್ರ ವ್ಯತ್ಯಾಸಹೊಂದುವುದಿಲ್ಲ. ಇದರಿಂದ ಪೊರೆಯೊಳಗಿನ ದ್ರವದಪ್ರವಾಹಕ್ಕೆ ಯಾವ ನಿರೋಧವೂ ಇಲ್ಲವೆಂದು ಭಾಸವಾಗುವುದು ; ಹಿಂದೆ ಲೋಹದ ಬಳೆಯಲ್ಲಿ ಋಣಾಂಶ ಪ್ರವಾಹಕ್ಕೆ ಹೇಗೆ ತಡೆಯಿರಲಿಲ್ಲವೋ ಹಾಗೆಯೆ ಈಗ ಅರ್ಕಾನಿಲಯ ಪರಮಾಣುಗಳ ಪ್ರವಾಹಕ್ಕೂ ತಡೆಯಿಲ್ಲವೆಂದು ತಿಳಿಯಬೇಕು.

ಮೇಲೆ ತಿಳಿಸಿರುವ ಕೆಲವು ವಿಚಾರಗಳು ಈಗ್ಗೆ ೪೦ ವರ್ಷಗಳಿಂದ ಗೊತ್ತಿವೆ; ಮಿಕ್ಕವು ಇತ್ತೀಚೆಗೆ ತಿಳಿದುಬಂದಿವೆ. ಇವುಗಳಿಗೆ ಕಾರಣವನ್ನು ಕಂಡುಹಿಡಿಯುವ ಕೆಲಸವನ್ನು ಅನೇಕರು ಪ್ರಯತ್ನಿಸಿದ್ದರೂ, ಅಷ್ಟೇನೂ ಜಯಪ್ರದವಾಗಿಲ್ಲ. ಅತಿವಾಹಕತ್ವವನ್ನು ವಿದ್ಯುತ್‌ವಾಹಕತ್ವದ ಪರಮಾವಧಿ ಕ್ರಿಯೆಯೆಂದೂ, ಅತಿದ್ರವತ್ವವನ್ನು ದ್ರವಾವಸ್ಥೆಯಲ್ಲಿನ ಸಾಮಾನ್ಯಪ್ರವಾಹದ ಅತಿರೇಕಸ್ಥಿತಿಯೆಂದೂ ಪರಿಗಣಿಸುವ ಪ್ರಯತ್ನಗಳು ಫಲಕಾರಿಯಾಗಲಿಲ್ಲ. ಸ್ನಿಗ್ಧತ್ವದ ಅಭಾವವು ಬಹುಮಟ್ಟಿಗೆ ಪರಮಾಣುಗಳೊಳಗೆ ಅನ್ವಯಿಸುವ ಭೌತಮನಿಯಮಗಳನ್ನು ನೆನಪಿಗೆ ತರುತ್ತದೆ. ಟೆಸ್ಟ್‌ಟ್ಯೂಬಿನಿಂದ ತೊಟ್ಟಿಕ್ಕುವ ದ್ರವಬಿಂದುಗಳು ರೇಡಿಯಮ್ಮಿನಿಂದ ಹೊರಸೂಸುವ ಆಲ್ಫಕಣಗನ್ನು ಬಹುಮಟ್ಟಿಗೆ ಹೋಲುವುವು.

ಸ್ನಿಗ್ಧತ್ವರಹಿತವಾದ ದ್ರವಾವಸ್ಥೆಯು ಪರಮಶೂನ್ಯ ಉಷ್ಣತೆಯ ಸಮೀಪದಲ್ಲಿ ಮಾತ್ರ ಸಾಧ್ಯವೆಂದು ನೆನಪಿನಲ್ಲಿಡಬೇಕು. ಆದಕಾರಣ ಈ ಕನಿಷ್ಠತಮ ಉಷ್ಣತೆಯ ಭೌತ ಅರ್ಥವನ್ನು ತಿಳಿಯಬೇಕು. ಈಗ್ಗೆ ೩೦ ವರ್ಷಗಳ ಹಿಂದೆ ಪರಮಶೂನ್ಯ ಉಷ್ಣತೆಯಲ್ಲಿ ಪರಮಾಣುಗಳ ವೇಗಗಳೆಲ್ಲಾ ಮಾಯವಾಗಿ ಪೂರ್ಣ ವಿಶ್ರಾಂತಸ್ಥಿತಿ

ಯುಂಟಾಗುವುದೆಂದು ಭಾವಿಸಲಾಗಿತ್ತು. ಆದರೆ ಪರಮಶೂನ್ಯ ಉಷ್ಣತೆಯಲ್ಲಿ ಪರಮಾಣು ಚಲನೆ ಮತ್ತು ತತ್ಸಂಬಂಧವಾದ ಶಕ್ತಿಯು ಮಾಯವಾಗುವುದಿಲ್ಲವೆಂದೂ, ಎಂಟ್ರೋಪಿ ಎಂಬ ಮತ್ತೊಂದು ಭೌತಗುಣವು ಮಾತ್ರ ಇಲ್ಲವಾಗುವುದೆಂದೂ ನರ್ನ್ಸ್ಟ್ ಎಂಬ ವಿಜ್ಞಾನಿಯು ಈ ಶತಮಾನದ ಆದಿಯಲ್ಲಿ ತೋರಿಸಿಕೊಟ್ಟನು. ಈ ಎಂಟ್ರೋಪಿ ಎಂಬ ಶಬ್ದವು ಕೇವಲ ಅಪರಿಚಿತವಾದದ್ದೇಅಲ್ಲದೆ, ಭೌತವಿಜ್ಞಾನದ ವಿದ್ಯಾರ್ಥಿಗಳಿಗೂ ಸ್ವಲ್ಪ ಹೆದರಿಕೆಯನ್ನುಂಟುಮಾಡುತ್ತದೆ. ಆದರೆ ಈ ಭಾವನೆಯ ಅರ್ಥ ತಿಳಿಯುವುದು ಅಷ್ಟೇನೂ ಕಷ್ಟವಲ್ಲ. ಎಂಟ್ರೊಪಿಯು ಒಂದು ಭೌತತಂಡದಲ್ಲಿರುವ ಅವ್ಯವಸ್ಥೆಯ ಮಟ್ಟವನ್ನು ಅಳೆಯುತ್ತದೆ; ಇದು ಉಪಯುಕ್ತವಾದ ಭಾವನೆ. ಉದಾಹರಣೆಗಾಗಿ ಒಂದು ಪಾತ್ರೆಯಲ್ಲಿ ಅರ್ಧಮಟ್ಟಕ್ಕೆ ಬಿಳಿಮರಳನ್ನೂ ಅದರ ಇನ್ನರ್ಧಕ್ಕೆ ಕೆಂಪುಮರಳನ್ನೂ ತುಂಬಿ, ಒಂದು ಚಮಚದಿಂದ ನೂರುಸಾರಿ ಪ್ರದಕ್ಷಿಣಾಕಾರವಾಗಿ ಕದಡೋಣ; ಇದರ ಫಲವಾಗಿ ಮರಳಿನ ಬಣ್ಣ ಎಳಗೆಂಪಾಗುತ್ತದೆ; ಈಗ ಪುನಃ ನೂರುಸಾರಿ ಅಪ್ರದಕ್ಷಿಣಾಕಾರವಾಗಿ ಕದಡುವುದರಿಂದ ಮೊದಲಿನ ಸ್ಥಿತಿ ಏರ್ಪಡುವುದಿಲ್ಲ; ಇನ್ನೂ ಚೆನ್ನಾಗಿ ಬೆರತುಕೊಳ್ಳುವುದು. ಕಾರಣ ಇಷ್ಟೆ—ಉಷ್ಣಶಾಖ ಚಲನ ಶಾಸ್ತ್ರದ ಎರಡನೆಯ ನಿಯಮಕ್ಕೆ (Second Law of Thermodynamics) ಅನುಗುಣವಾಗಿ ಇಂತಹ ಕ್ರಿಯೆಗಳಲ್ಲಿ ಎಂಟ್ರೊಪಿ ಅಥವಾ ತಂಡದ ಅವ್ಯವಸ್ಥೆ ಹೆಚ್ಚುವುದು.

ಎಂಟ್ರೊಪಿಗೂ ಉಷ್ಣತೆಗೂ ನಿಕಟ ಸಂಬಂಧವಿದೆ. ಪದಾರ್ಥದ ಉಷ್ಣಾಂಶ ಕಡಿಮೆಯಾದಂತೆಲ್ಲಾ, ಪರಮಾಣುಗಳು ಹೆಚ್ಚು ಸುವ್ಯಸ್ಥಿತ ರೀತಿಯಲ್ಲಿ ಹೊಂದಿಕೊಂಡಿರುತ್ತವೆ; ಅಣುಗಳು ನಿಕ್ಕಾಪಟ್ಟೆ ಓಡಾಡುತ್ತಾ ಪಾತ್ರೆಯನ್ನೆಲ್ಲಾ ಆವರಿಸಿಕೊಂಡಿರುವುವು. ಅನಿಲದ ಉಷ್ಣಾಂಶ ಕಡಿಮೆಯಾಗಿ ದ್ರವರೂಪಕ್ಕೆ ಬಂದಾಗ ಅಣುಗಳು ಒಟ್ಟಿಗೆ ಬಂದು ಹೆಚ್ಚು ವ್ಯವಸ್ಥೆಯನ್ನು ತೋರುತ್ತಾ ಪಾತ್ರೆಯ ತಳದಲ್ಲಿರುವುದು. ಇನ್ನೂ ಉಷ್ಣಾಂಶ ಕಡಿಮೆಯಾದರೆ ದ್ರವವು ಘನರೂಪವನ್ನುತಾಳಿ, ಮತ್ತೂ ಅತಿಶಯವಾದ ವ್ಯವಸ್ಥೆಯನ್ನು ತೋರುವುದು. ನಿಜವಾದ ಘನಪದಾರ್ಥಗಳೆಲ್ಲಾ ಹರಳುಗಳ (crystals) ಸಮುದಾಯಗಳಿಂದ ಕೂಡಿರುವುವು. ಈರೀತಿ ವ್ಯವಸ್ಥೆ ಹೆಚ್ಚುವುದೂ ಅಥವಾ ಎಂಟ್ರೊಪಿ ಕಡಿಮೆಯಾಗುವುದೂ, ಉಷ್ಣಾಂಶ ಕಡಿಮೆಯಾದಾಗ ತಲೆದೋರುವುದು.

ಹೀಗೆ ಶಾಖಕ್ಕೂ ಅವ್ಯವಸ್ಥೆಗೂ ಇರುವ ನಿಕಟಸಂಬಂಧದಿಂದ ಎಂಟ್ರೊಪಿಯನ್ನು ಸುಲಭವಾಗಿ ಅಳೆಯಬಹುದು. ಒಂದು ವಸ್ತುವಿನ ಉಷ್ಣಾಂಶವನ್ನು ಕಡಿಮೆ ಮಾಡಲು ಅದರಿಂದ ಎಷ್ಟು ಶಾಖವನ್ನು ತೆಗೆಯಬೇಕೆಂದು ತಿಳಿದರೆ, ಇದರಿಂದ ವಸ್ತುವಿನಲ್ಲಿ ವ್ಯವಸ್ಥೆ ಎಷ್ಟರಮಟ್ಟಿಗೆ ಹೆಚ್ಚಿತೆಂದು ಗೊತ್ತಾಗುವುದು.

ಅತಿವಾಹಕವಸ್ತುಗಳಲ್ಲೂ, ಅಕ್ರ್ನಾನಿಲದ್ರವದಲ್ಲೂ ಹೆಚ್ಚಿನ ವ್ಯವಸ್ಥೆ ಏರ್ಪಟ್ಟಿದೆ ಎಂಬುದೇನೋ ಸರಿ. ಆದರೆ ಈ ವ್ಯವಸ್ಥೆಯ ಸ್ವರೂಪ ತಿಳಿಯುವುದು ಸುಲಭವಲ್ಲ.

ಪರಮಾಣುಗಳ ಸ್ಥಾನವ್ಯವಸ್ಥೆಯೇ ಮೊದಲು ನಮಗೆ ತೋರುವ ದಾರಿ. ಸ್ಫಟಿಕಗಳಿಗೆ ಸಹಜವಾದ ಈತೆರನಾದ ವ್ಯವಸ್ಥೆಯಿಂದ ಅತಿವಾಹಕತ್ವ, ಅತಿದ್ರವತ್ವವನ್ನು ವಿವರಿಸಲಾಗುವುದಿಲ್ಲ. ಕೇವಲ ಸ್ಥಾನನಿರ್ದೇಶವೇ ಸಾಲದು ; ಈ ಸ್ಥಾನಗಳು ಕಾಲಾನುಗುಣವಾಗಿ ಯಾವ ರೀತಿ ವ್ಯತ್ಯಾಸಹೊಂದುತ್ತವೆ ಎಂಬುದೂ ತಿಳಿಯಬೇಕು. ಎರಡು ಮೋಟಾರುಕಾರುಗಳು ಒಂದರೆದುರಿಗೆ ಇನ್ನೊಂದು ನಿಂತಿರುವ ಚಿತ್ರ ನೋಡಿದರೆ, ನಮ್ಮ ಕುತೂಹಲ ಹೆಚ್ಚುತ್ತದೆ. ಆ ಚಿತ್ರಗ್ರಹಣಮಾಡಿದಾಗ, ಕಾರುಗಳು ನಿಂತಿದ್ದುವೇ ಅಥವಾ ಓಡುತ್ತಿದ್ದುವೇ ಎಂಬ ಪ್ರಶ್ನೆ ಉದ್ಭವಿಸುತ್ತದೆ; ಓಡುತ್ತಿದ್ದ ಪಕ್ಷದಲ್ಲಿ ಚಿತ್ರತೆಗೆದ ಉತ್ತರಕ್ಷಣದಲ್ಲಿ ಕಾರುಗಳ ಸಂಘರ್ಷಣೆಯಾಗಿ ಅನಾಹುತವಾಗಿರಬೇಕು. ಇದರಿಂದ ಸ್ಥಾನವ್ಯವಸ್ಥೆಯೇ ಅಲ್ಲದೆ, ವೇಗವ್ಯವಸ್ಥೆಗೂ ಪ್ರಾಮುಖ್ಯತೆಯಿರುವುದು ಮುಂದಟ್ಟಾಗುವುದು. ಪರಮಾಣುಗಳ ಸ್ಥಾನ, ವೇಗಗಳು ಒಂದಕ್ಕೊಂದು ಹೊಂದಿಕೊಂಡು, ಬೀಗ, ಬೀಗದಕೈಗಳಂತೆ ಅನ್ಯೋನ್ಯಾಶ್ರಯದಲ್ಲಿರುತ್ತವೆ. ವಿಲ್ಲಾರ್ಡ್ ಗಿಬ್ಸ್‌ನು ಅಣುಗಳ ಘಟನಾವಳಿಗಳನ್ನು ತಿಳಿಯಲು ತ್ರಿಮಾನದ ಆಕಾಶ ಸಾಲದೆಂದೂ, ಷಟ್ಟಮಾನದ ಆಕಾಶ ಅವಶ್ಯಕವೆಂದೂ ತಿಳಿಸಿದನು. ಸ್ಥಾನವನ್ನು ನಿರ್ದಿಷ್ಟಮಾಡುವ ತ್ರಿಮಾನಗಳ ಜೊತೆಗೆ, ವೇಗವನ್ನು ನಿರ್ದಿಷ್ಟಮಾಡುವ ಬೇರೊಂದು ತ್ರಿಮಾನಬೇಕು. ಸ್ಥಾನನಿರ್ದಿಷ್ಟಮಾಡುವ ತ್ರಿಮಾನ ನಮ್ಮ ಅನುಭವಕ್ಕೆ ಬಂದಿದೆ; ಆದರೆ ವೇಗನಿರ್ದಿಷ್ಟಕ್ಕೆ ಅವಶ್ಯಕವಾದ ತ್ರಿಮಾನ ನಮ್ಮ ಅನುಭವಕ್ಕೆ ಮೀರಿದ್ದು. ಸ್ಥಾನದಲ್ಲಿವ್ಯವಸ್ಥೆಯಿರುವಂತೆಯೇ ವೇಗಗಳಲ್ಲೂ ಒಂದು ಸುವ್ಯವಸ್ಥಿತಕ್ರಮವಿರಬಹುದು. ಸ್ಥಾನವ್ಯವಸ್ಥೆಯಿಂದ ಅತಿದ್ರವತ್ವ, ಅತಿವಾಹಕತ್ವಗಳ ವಿವರಣೆ ತಿಳಿಯಬರದಿದ್ದರೂ, ವೇಗವ್ಯವಸ್ಥೆಯನ್ನು ಪರಿಗಣಿಸುವದರಿಂದ ಸ್ವಲ್ಪ ದಾರಿ ಕಂಡಂತಾಗುವುದು. ಸ್ಫಟಿಕಗಳು ಸ್ಥಾನವ್ಯವಸ್ಥೆಯ ಪ್ರದರ್ಶನಮಾಡುವಂತೆ, ಅತಿದ್ರವತ್ವವು ವೇಗವ್ಯವಸ್ಥೆಯ ಪ್ರತೀಕವೆಂದು ಊಹಿಸಬಹುದು. ವಸ್ತುವಿನ ಅವಸ್ಥಾತ್ರಯಗಳ ಜೊತೆಗೆ ಅತಿದ್ರವತ್ವವೂ ಒಂದು ಹೊಸದಾದ ನಾಲ್ಕನೆಯ ಅವಸ್ಥೆಯೆಂದು ಭಾವಿಸಬೇಕು.

ವೇಗಾಕಾಶ (velocity space) ದಲ್ಲಿನ ಘಟನೆಗಳು ನಮಗೆ ಗೋಚರವಾಗುವುದಿಲ್ಲವೆಂದು ಶಂಕಿಸಬೇಕಾಗಿಲ್ಲ. ವೇಗಘನೀಕರಣ ಸಂಭವಿಸುವ ವಿದ್ಯಮಾನಗಳು ಎದ್ದುಕಾಣುತ್ತವೆ. ಆಕಾಶದಲ್ಲಿ ತೇಲುವ ಲೋಹದ ಚಂಡನ್ನೂ, ಟೆಸ್ಟ್‌ಟ್ಯೂಬಿನಿಂದ ತೊಟ್ಟಿಕ್ಕುವ ಅಕರ್ಷಾನಿಲದ್ರವವನ್ನೂ ನಾವು ನೋಡಬಲ್ಲೆವು. ಒಂದು ವಿಶಾಲವಾದ ರಸ್ತೆಯಲ್ಲಿ ನೂರಾರು ಮೋಟರ್ ಕಾರುಗಳು ಸಿಕ್ಕಾಪಟ್ಟೆ ವೇಗಗಳಲ್ಲಿ ಓಡುತ್ತಿರುವ ದೃಶ್ಯದಲ್ಲಿ ಸ್ಥಾನವ್ಯವಸ್ಥೆಯಾಗಲೀ ವೇಗ ವ್ಯವಸ್ಥೆಯಾಗಲೀ ಇರುವುದಿಲ್ಲ. ಆದರೆ ಎಲ್ಲಾ ಕಾರುಗಳೂ ಒಂದೇ ವೇಗದಲ್ಲಿ ಚಲಿಸುವುದಾದರೆ, ವೇಗವ್ಯವಸ್ಥೆ ಏರ್ಪಡುತ್ತದೆ. ಕಾರುಗಳ ಸ್ಥಾನ ಸಿಕ್ಕಾಪಟ್ಟೆ ಇದ್ದರೂ, ಅಂದರೆ ಸ್ಥಾನವ್ಯವಸ್ಥೆ ಇಲ್ಲದಿದ್ದರೂ, ಅವುಗಳೆಲ್ಲಾ ಘನೀಭೂತವಾದಂತೆ ಒಟ್ಟಿಗೆ ಒಂದು ಚಲನೆಯಲ್ಲಿ ಭಾಗವಹಿಸುವಂತೆ

ಭಾಸವಾಗುತ್ತದೆ. ಈ ಉದಾಹರಣೆಯಿಂದ ವೇಗ ಘನೀಕರಣವು ಕಟ್ಟು ಕಥೆಯಲ್ಲವೆಂದು ತಿಳಿಯಬಹುದು. ಆದರೆ ಆರ್ಕಾನಿಲ ಪರಮಾಣುಗಳಾಗಲಿ, ಋಣಾಂಶಗಳಾಗಲೀ ಮೇಲಿನ ಉಪಮಾನದಲ್ಲಿನ ಕಾರುಗಳಂತೆ ಚಲಿಸುವುವೆಂದು ಭಾವಿಸಬೇಕಿಲ್ಲ. ಅತಿದ್ರವತ್ವಾವಸ್ಥೆಯಲ್ಲಿ ವೇಗಗಳ ಚಿತ್ರ ನಮಗೆ ಇನ್ನೂ ಸ್ಪಷ್ಟವಾಗಿ ತಿಳಿದಿಲ್ಲ. ಆದರೂ ಸಂಶೋಧನೆಗಳ ಫಲವಾಗಿ ಈ ವಿದ್ಯಮಾನದ ಭೌತ ಕಾರಣ ಮಸಕುಮಸಕಾಗಿ ಕಾಣಲು ಪ್ರಾರಂಭವಾಗಿದೆ. ಸ್ನಿಗ್ಧತ್ವರಹಿತವಾದ ಚಲನೆ ಮಾತ್ರ ಪರಮಾಣುಗಳ ವೇಗ ಒಂದು ಎಲ್ಲೆಯನ್ನು ಮೀರಿತೆಂದರೆ ಮಾಯವಾಗುತ್ತದೆ. ಈ ಎಲ್ಲೆಯನ್ನು ಸಮೀಪಿಸುವ ಉಷ್ಣಾಂಶ ತಲೆದೋರಿದ ತಕ್ಷಣ ವೇಗಗಳ ವ್ಯವಸ್ಥೆ ಒಮ್ಮೆಲೇ ಕರಗಿ ಹೋಗುವುದೆಂದು ಭಾವಿಸಬಹುದು.

ಸ್ಥಾನ ವ್ಯವಸ್ಥೆಯಿಂದ ಹರಳುಗಳ ಸ್ವರೂಪವನ್ನೂ, ವೇಗ ವ್ಯವಸ್ಥೆಯಿಂದ ಅತಿದ್ರವತ್ವವನ್ನೂ ಸ್ವಲ್ಪಮಟ್ಟಿಗೆ ತಿಳಿದಂತಾಯಿತು. ಸ್ಥಾನ ವೇಗಗಳೆರಡರ ವ್ಯವಸ್ಥೆಯಿರುವ ಬೇರೊಂದು ವಸ್ತುಸ್ಥಿತಿ ಇರಬಹುದು. ಇದಕ್ಕೂ ಜೀವಾಣುಗೂ ಏನಾದರೂ ಸಂಬಂಧ ಉಂಟೆ? ಈ ಊಹಾಪೋಹಗಳು ಖಚಿತಜ್ಞಾನಕ್ಕೆ ಬಾಹಿರವಾದವು. ಆದರೂ ಕೂಡ ವಿಜ್ಞಾನದ ಮುನ್ನಡೆಯಲ್ಲಿ ಹೊಂಗನಸುಗಳಿಗೂ ಕಲ್ಪನಾಶಕ್ತಿಗೂ ಒಂದು ಸ್ಥಾನವಿದೆ. ವಿಜ್ಞಾನಿಗೆ ಶೋಧನಾಪ್ರಪಂಚನಲ್ಲಿ ಈಜಲು ಇರುವ ಆಸಕ್ತಿ ದಡ ಸೇರುವುದರಲ್ಲಿ ಇರುವುದಿಲ್ಲ.



# ಕುಂಭಕರ್ಣನ ಕರುಳು

**ಕವೆಂರಾ**

(ವಾಲ್ಮೀಕಿ ರಾಮಾಯಣದಲ್ಲಿಯ ಒಂದು ಸಂನಿವೇಶ)

ಸ ಚಾಪಮಾದಾಯ ಭುಜಂಗಕಲ್ಪಂ
ದೃಢಜ್ಯಮುಗ್ರಂ ತಪನೀಯಚಿತ್ರಂ
ಹರೀನ್ ಸಮಾಶ್ವಾಸ್ಯ ಸಮುತ್ಪಪಾತ
ರಾಮೋ ನಿಬದ್ಧೋತ್ತಮತೂಣಬಾಣಃ ||

ಸ ವಾನರಗಣೈಸ್ತೈಸ್ತು ವೃತಃ ಪರಮದುರ್ಜಯಃ
ಲಕ್ಷ್ಮಣಾನುಚರೋ ರಾಮಃ ಸಂಪ್ರತಸ್ಥೇ ಮಹಾಬಲಃ ||

ಸ ದದರ್ಶ ಮಹಾತ್ಮಾನಂ ಕಿರೀಟಿನಮರಿಂದಮಂ
ಶೋಣಿತಾಪ್ಲುತಸರ್ವಾಂಗಂ ಕುಂಭಕರ್ಣಂ ಮಹಾಬಲಂ ||

ಸರ್ವಾನ್ ಸಮಭಿಧಾವಂತಂ ಯಥಾ ರುಷ್ಟಂ ದಿಶಾಗಜಂ
ಮಾರ್ಗಮಾಣಂ ಹರೀನ್ ಕ್ರುದ್ಧಂ ರಾಕ್ಷಸೈಃ ಪರಿವಾರಿತಂ ||

ವಿಂಧ್ಯಮಂದರಸಂಕಾಶಂ ಕಾಂಚನಾಂಗದ ಭೂಷಣಂ
ಸ್ರವಂತಂ ರುಧಿರಂ ವಕ್ತ್ರಾದ್ ವರ್ಷಮೇಘಮಿವೋತ್ಥಿತಂ ||

ಜಿಹ್ವಯಾ ಪರಿಲಿಹ್ಯಂತಂ ಶೋಣಿತಂ ಶೋಣಿತೇಕ್ಷಣಂ
ಮೃದ್ನಂತಂ ವಾನರಾನೀಕಂ ಕಾಲಾಂತಕಯಮೋಪಮಂ ||

ತಂ ದೃಷ್ಟ್ವಾ ರಾಕ್ಷಸಶ್ರೇಷ್ಠಂ ಪ್ರದೀಪ್ತಾನಲವರ್ಚಸಂ
ವಿಸ್ಫಾರಯಾಮಾಸ ತದಾ ಕಾರ್ಮುಕಂ ಪುರುಷರ್ಷಭಃ ||

ಸ ತಸ್ಯ ಚಾಪನಿರ್ಘೋಷಾತ್ ಕುಪಿತೋ ರಾಕ್ಷಸರ್ಷಭಃ
ಅಮೃಷ್ಯಮಾಣಸ್ತಂ ಘೋಷಮಭಿದುದ್ರಾವ ರಾಘವಂ ||

ಪುರಸ್ತಾದ್ ರಾಘವಸ್ಯಾರ್ಥೇ ಗದಾಯುಕ್ತೋ ವಿಭೀಷಣಃ
ಅಭಿದುದ್ರಾವ ವೇಗೇನ ಭ್ರಾತಾ ಭ್ರಾತರಮಾಹವೇ ||

ವಿಭೀಷಣಂ ಪುರೋ ದೃಷ್ಟ್ವಾ ಕುಂಭಕರ್ಣೋऽಬ್ರವೀದಿದಂ
ಪ್ರಹರಸ್ವ ರಣೇ ಶೀಘ್ರಂ ಕ್ಷತ್ರಧರ್ಮೇ ಸ್ಥಿರೋ ಭವ ||

(ಇದಕ್ಕೆ ವ್ಯಾಖ್ಯಾನ ಅನಾವಶ್ಯಕವಷ್ಟೇ ಅಲ್ಲ; ವ್ಯಾಖ್ಯಾನ ಬರೆಯುಹೋಗು ವುದು ತಿಳಿನೀರನ್ನು ಕಲಕಿದಂತೆ)

ರಾಮನು ಉತ್ತಮ ಬಾಣ ಬತ್ತಳಿಕೆ ಬಿಗಿದು, ಹೆದೆಯೇರಿಸಿದ ಹೊನ್ನ ಹೊಳ ಸಿನ ಹಾವಿನಂಥ ಉಗ್ರಚಾಪ ತೆಗೆದುಕೊಂಡು ಕಪಿಗಳನ್ನು ಆಶ್ವಾಸಿಸುತ್ತ ಎದ್ದು ಮುನ್ನುಗ್ಗಿದನು.

ಪರಮ ದುರ್ಜಯನೂ ಮಹಾಬಲನೂ ಲಕ್ಷ್ಮಣಬೆಂಬಳಿಗನೂ ಆದ ರಾಮನು ವಾನರಗಣ ಪರಿವೃತನಾಗಿ ಹೊರಟನು.

ರಾಮನು ಮಹಾತ್ಮನೂ ಕಿರೀಟಧಾರಿಯೂ ಶತ್ರುದಮನನೂ ಮಹಾಬಲನೂ ಆದ ನೆತ್ತರುತೊಯ್ದು ಮೈಯ ಕುಂಭಕರ್ಣನನ್ನು ನೋಡಿದನು.

ರಾಕ್ಷಸರಿಂದ ಪರಿವೃತನಾದ ಆ ಕುಂಭಕರ್ಣನು ಕೆರಳಿದ ದಿಗ್ಗಜದಂತೆ ಕ್ರುದ್ಧ ನಾಗಿ ಓಡಿಹೋಗುತ್ತಿದ್ದ ಕಪಿಗಳನ್ನೆಲ್ಲಾ ಅರಸಿ ಬೆನ್ನಟ್ಟುತ್ತಿದ್ದನು.

ವಿಂಧ್ಯ ಮಂದರ ಪರ್ವತಾಕಾರನಾಗಿ ಹೊನ್ನತೋಳಬಂದಿ ತೊಟ್ಟು ಮಳೆಗಾಲ ದಲ್ಲಿ ಎದ್ದ ಮೋಡದಂತೆ ಬಾಯಿಂದ ರಕ್ತ ಕಾರುತ್ತ, ನಾಲಗೆಯಿಂದ ನೆತ್ತ ರನ್ನು ನೆಕ್ಕುತ್ತ ಕೆಂಗಣ್ಣನಾಗಿ ಕಪಿಸೈನ್ಯವನ್ನು ಮರ್ದಿಸುತ್ತ ಪ್ರಳಯಕಾಲದ ಯಮನಂತಿದ್ದ ಆ ರಾಕ್ಷಸಶ್ರೇಷ್ಠನನ್ನು ಪುರುಷಪುಂಗವನಾದ ರಾಮನು ನೋಡಿ ಕನಲು ಬೆಂಕಿಯ ಕಾಂತಿಯ ಬಿಲ್ಲನ್ನು ಜೇವೊಡೆದನು.

ಆ ರಾಕ್ಷಸ ಪುಂಗವನು ಚಾಪನಿರ್ಘೋಷದಿಂದ ಕುಪಿತನಾಗಿ ಆ ಘೋಷವನ್ನು ಸಹಿಸಲಾರದೆ ರಾಮನಮೇಲೆ ಹಾಯ್ದನು.

ಆಗ ರಾಘವನಿಗಾಗಿ ಗದಾಯುಕ್ತನಾದ ವಿಭೀಷಣನನು ಮುನ್ನುಗ್ಗಿ, ಯುದ್ಧ ದಲ್ಲಿ ಸೋದರನು ಸೋದರನ ಮೇಲೆ ಹಾಯ್ದನು.

ಕುಂಭಕರ್ಣನು ಮುಂದೆ ಬಂದ ವಿಭೀಷಣನನ್ನು ನೋಡಿ ಹೇಳಿದನು :
ಯುದ್ಧದಲ್ಲಿ ಬೇಗ ಬಡಿದುಹಾಕು, ಕ್ಷತ್ರಿಯ ಧರ್ಮದಲ್ಲಿ ಸ್ಥಿರನಾಗಿರು,

ಭ್ರಾತೃಸ್ನೇಹಂ ಪರಿತ್ಯಜ್ಯ ರಾಘವಸ್ಯ ಪ್ರಿಯಂ ಕುರು
ಅಸ್ಮತ್ ಕಾರ್ಯಂ ಕೃತ ವತ್ಸ ಯಸ್ತ್ವಂ ರಾಮಮುಪಾಗತಃ ||

ತ್ವಮೇಕೋ ರಕ್ಷಸಾಂ ಲೋಕೇ ಸತ್ಯಧರ್ಮಾಭಿರಕ್ಷಿತಃ
ನಾಸ್ತಿ ಧರ್ಮಾಭಿರಕ್ತಾನಾಂ ವ್ಯಸನಂತು ಕದಾಚನ ||

ಸಂತಾನಾರ್ಥಂ ತ್ವಮೇವೈಕಃ ಕುಲಸ್ಯಾಸ್ಯ ಭವಿಷ್ಯಸಿ
ರಾಘವಸ್ಯ ಪ್ರಸಾದಾತ್ ತ್ವಂ ರಕ್ಷಸಾಂ ರಾಜ್ಯಮಾಪ್ಸ್ಯಸಿ ||

ಪ್ರಕೃತ್ಯಾ ಮಮ ದುರ್ಧರ್ಷ ಶೀಘ್ರಂ ಮಾರ್ಗಾದಪಕ್ರಮ
ನ ಸ್ಥಾತವ್ಯಂ ಪುರಸ್ತಾನ್ ಮೇ ಸಂಭ್ರಮಾನ್ ನಷ್ಟಚೇತಸಃ ||

ನ ವೇದ್ಮಿ ಸಂಯುಗೇ ಶಕ್ತಃ ಸ್ವಾನ್ ಪರಾನ್ ವಾ ನಿಶಾಚರ
ರಕ್ಷಣೀಯೋಽಸಿ ಮೇ ವತ್ಸ ಸತ್ಯಮೇತದ್‌ಬ್ರವೀಮಿ ತೇ ||

ಏವಮುಕ್ತೋ ವಚಸ್ತೇನ ಕುಂಭಕರ್ಣೇನ ಧೀಮತಾ
ವಿಭೀಷಣೋ ಮಹಾಬಾಹುಃ ಕುಂಭಕರ್ಣಮುವಾಚ ಹ ||

ಗದಿತಂ ಮೇ ಕುಲಸ್ಯಾಸ್ಯ ರಕ್ಷಣಾರ್ಥಮರಿಂದಮ
ನ ಶ್ರುತಂ ಸರ್ವ ರಕ್ಷೋಭಿಸ್ತತೋಽಹಂ ರಾಮಮಾಗತಃ ||

ಏವಮುಕ್ತ್ವಾಶ್ರುಪೂರ್ಣಾಕ್ಷೋ ಗದಾಪಾಣಿರ್ವಿಭೀಷಣಃ
ಏಕಾಂತಮಾಶ್ರಿತೋ ಭೂತ್ವಾ ಚಿಂತಯಾಮಾಸ ಸಂಸ್ಥಿತಃ ||

ತತಸ್ತು ವಾತೋದ್ಧತಮೇಘಕಲ್ಪಂ
ಭುಜಂಗರಾಜೋತ್ತಮಭೋಗಬಾಹುಂ
ತಮಾಪತಂತಂ ಧರಣೀಧರಾಭ
ಮುವಾಚ ರಾಮೋ ಯುಧಿ ಕುಂಭಕರ್ಣಂ ||

ಆಗಚ್ಛ ರಕ್ಷೋಧಿಪ ಮಾವಿಷಾದಮವಸ್ಥಿತೋಽಹಂ ಪ್ರಗೃಹೀತಚಾಪಃ
ಅವೇಹಿ ಮಾಂ ಶಕ್ರಸಪತ್ನ ರಾಮಂ ಮಯಾ ಮುಹೂರ್ತಾದ್ ಭವಿತಾ
ವಿಚೇತಾಃ ||



ಸೋದರ ಸ್ನೇಹವನ್ನು ಬಿಟ್ಟು ರಾಘವನಿಗೆ ಪ್ರಿಯವಾದ್ದನ್ನು ಮಾಡು. ವತ್ಸ ವಿಭೀಷಣ! ನೀನು ರಾಮನೆಡೆಗೆ ಬಂದು ನಮ್ಮ ಕೆಲಸವನ್ನು ನೆರವೇರಿಸಿದ್ದೀಯೆ.

ರಾಕ್ಷಸಲೋಕದಲ್ಲಿ ನೀನೊಬ್ಬನೇ ಸತ್ಯ ಧರ್ಮಗಳ ರಕ್ಷಕ ; ಧರ್ಮಾಭಿರಕ್ತರಿಗೆ ಎಂದೂ ವ್ಯಸನವಿಲ್ಲ.

ಈ ರಾಕ್ಷಸ ಕುಲದ ಸಂತಾನ ಸಂರಕ್ಷಣೆಗಾಗಿ ನೀನೊಬ್ಬನೇ ಇರುವೆ; ರಾಘವನ ಪ್ರಸಾದದಿಂದ ರಾಕ್ಷಸ ರಾಜ್ಯವನ್ನು ಪಡೆಯುವೆ.

ಸ್ವಾಭಾವಿಕವಾಗಿಯೇ ನನ್ನಿಂದ ಮಾರಲಾಗದ ನೀನು ದಾರಿಯಲ್ಲಿ ನಿಲ್ಲದೆ ಹೊರಟುಹೋಗು ; ಭ್ರಾಂತಿಯಿಂದ ಬುದ್ಧಿಹೀನನಾದ ನನ್ನ ಮುಂದೆ ನೀನು ನಿಲ್ಲತಕ್ಕದ್ದಲ್ಲ.

ಎಲೆ ನಿಶಾಚರ! ಶಕ್ತನಾದ ನನಗೆ ಯುದ್ಧದಲ್ಲಿ ನನ್ನವರು ಹೆರವರು ಎಂಬ ಅರಿವೂ ಇರುವುದಿಲ್ಲ. ವತ್ಸ ವಿಭೀಷಣ! ನಿನ್ನನ್ನು ನಾನು ರಕ್ಷಿಸಬೇಕಾಗಿದೆ; ಸತ್ಯವನ್ನು ನಿನಗೆ ನುಡಿಯುತ್ತಿದ್ದೇನೆ.

ಧೀಮಂತನಾದ ಕುಂಭಕರ್ಣನ ಈ ಮಾತು ಕೇಳಿ ಮಹಾಬಾಹುವಾದ ವಿಭೀಷಣನು ಕುಂಭಕರ್ಣನಿಗೆ ಹೇಳಿದನು:

ಶತ್ರುಮರ್ದನನಾದ ಕುಂಭಕರ್ಣ! ರಾಕ್ಷಸಕುಲಸಂರಕ್ಷಣೆಗಾಗಿ ನಾನು ಹೇಳಿದ ಮಾತನ್ನು ಯಾರೂ ಕೇಳಲಿಲ್ಲ. ಅದಕ್ಕಾಗಿ ನಾನು ರಾಮನಲ್ಲಿಗೆ ಬಂದೆನು.

ಹೀಗೆ ಹೇಳಿ ಕಣ್ಣುನೀರು ತುಂಬಿ ಗದಾಪಾಣಿಯಾದ ವಿಭೀಷಣನು ಏಕಾಂತ ಸ್ಥಳಕ್ಕೆ ಹೋಗಿ ಚಿಂತಿಸುತ್ತ ನಿಂತುಬಿಟ್ಟನು.

ಆಗ, ಗಾಳಿಯಿಂದೆದ್ದ ಮೋಡದಂತೆ ಉರುಬಿ, ಬೆಟ್ಟದಂತೆ ಮೇಲೆ ಬೀಳುತ್ತ, ಫಣಿರಾಜನ ಹೆಡೆಯಂತಿದ್ದ ತೋಳನ್ನು ತೂಗುತ್ತ ಬರುತ್ತಿದ್ದ ಕುಂಭಕರ್ಣನನ್ನು ಯುದ್ಧದಲ್ಲಿ ರಾಮನು ನೋಡಿ ಹೇಳಿದನು:

ಬಾ ರಾಕ್ಷಸಶ್ರೇಷ್ಠ! ವಿಷಾದ ಬೇಡ. ಬಿಲ್ಲುಹಿಡಿದು ನಿಂತಿದ್ದೇನೆ. ನನ್ನನ್ನು ಇಂದ್ರಸಮಾನನಾದ ರಾಮನೆಂದು ತಿಳಿ. ಮುಹೂರ್ತ ಮಾತ್ರದಲ್ಲಿ ನೀನು ನನ್ನಿಂದ ಸ್ತಬ್ಧನಾಗುತ್ತೀಯೆ.

# ಪ್ರಸಾರ ನಾಟಕದ ತಂತ್ರ

ಎಸ್. ಅನಂತನಾರಾಯಣ

ರಂಗಭೂಮಿಯ ಮೇಲೆ ಬಣ್ಣ ಕಟ್ಟಿಕೊಂಡು, ಮುಖದಲ್ಲಿ ಭಾವಪ್ರದರ್ಶನ ನಡೆಸಿ, ಕಣ್ಣೀರು ಕರೆದು, ಕಣ್ಣೀರು ತರಿಸುವುದು ; ಹಾವಭಾವ ವಿಲಾಸಗಳಿಂದ, ಬಣ್ಣಬಣ್ಣದ ಬಟ್ಟೆಗಳಿಂದ, ರಂಗುರಂಗಿನ ಅಲಂಕಾರದಿಂದ, ವಿವಿಧ ಪ್ರದೇಶಗಳ ತೆರೆಯಸಜ್ಜಿಕೆಯಿಂದ ನೋಡುವವರ ಮನಸ್ಸನ್ನು ಸೆರೆ ಹಿಡಿಯುವುದು ; ಮಂಗನಾಟದಿಂದ ಪ್ರೇಕ್ಷಕರ ನಗೆಯನ್ನು ಬೆದಕುವುದು—ಇವೆಲ್ಲವೂ ನಾಟಕಕಾರರಿಗೆ, ನಟರಿಗೆ ಸಾಮಾನ್ಯ ಸಂಗತಿ. ಇದೆಲ್ಲ ರಂಗಭೂಮಿಯ ಮೇಲೆ ನಾಟಕವನ್ನು ನಟರು ಪ್ರದರ್ಶಿಸಿದಾಗ ಸುತ್ತಲಿನ ರಂಗಸಜ್ಜಿನಿಂದ ಉಂಟಾಗುವ ಪ್ರತಿಕ್ರಿಯೆಗಳು. ಇಲ್ಲಿ ಪ್ರೇಕ್ಷಕ ಕಣ್ಣೆದುರಿಗೆ ನಡೆಯುವ ದೃಶ್ಯವನ್ನು ಕಾಣುತ್ತಾನೆ. ರಂಗಭೂಮಿಯ ಮೇಲಿರುವ ನಟನ ಉಡಿಗೆ ತೊಡಿಗೆಯಿಂದ ಅವನಿಂತಹವನೆಂದು ಗುರುತಿಸುತ್ತಾನೆ. ಗುರುತಿಸಿ ಅವನ ಪಾತ್ರವನ್ನು ಮನಸ್ಸಿನಲ್ಲಿ ಚಿತ್ರಿಸಿಕೊಳ್ಳುತ್ತಾನೆ. ನಟನನ್ನು ಮರೆತು ಪಾತ್ರವನ್ನೇ ಸತ್ಯವಾಗಿ ತಾನು ಕಾಣುತ್ತಿದ್ದೇನೆಂಬ ಕ್ಷಣಕಾಲದ ಭ್ರಮೆಯಲ್ಲಿರುತ್ತಾನೆ. ಇಲ್ಲಿನ ನಾಟಕ ಕಣ್ಣೆದುರಿಗೆ ನಡೆಯುವುದು. ನಟನಿಗೂ ಪ್ರೇಕ್ಷಕನಿಗೂ ನಡುವೆ ನೋಟದ ಸಂಪರ್ಕವಿರುತ್ತದೆ ಇಲ್ಲಿ. ಆದ್ದರಿಂದ ಇದನ್ನು ನಾವು ದೃಶ್ಯನಾಟಕವೆಂದು ಕರೆಯಬಹುದು.

ಆದರೆ ಬೇರೊಂದು ಬಗೆಯ ನಾಟಕವೂ ಇದೆ. ಇಲ್ಲಿ ಪ್ರೇಕ್ಷಕ ನಟನನ್ನು ಕಾಣುವುದಿಲ್ಲ. ರಂಗಸಜ್ಜಿಕೆಯ ನೆರವಿಲ್ಲ. ಹಾವಭಾವ, ಬಣ್ಣದಬಟ್ಟೆ, ರಂಗಿನ ತೆರೆಗಳು—ಯಾವುದೊಂದರ ಸಂಪರ್ಕವೂ ಇಲ್ಲ. ನೋಟದ ಸಂಪರ್ಕವೇ ಇಲ್ಲ. ನಿಜವಾಗಿ ಈ ನಾಟಕ ನೋಡುವ ನಾಟಕವಲ್ಲ ; ಕೇಳುವ ನಾಟಕ. ಇದನ್ನು ನಾವು ಶ್ರವ್ಯನಾಟಕವೆಂದು ಕರೆಯಬಹುದು. ಇಲ್ಲಿ ನುಡಿಯಿಂದ, ಮಾತಿನಿಂದ ನಟನಿಗೂ ಕೇಳುಗನಿಗೂ ಸಂಪರ್ಕ. ಅದಷ್ಟೇ ಸಂಪರ್ಕ. ಬೇರೆ ಬಗೆಯ ಯಾವ ನೆರವೂ ಇಲ್ಲದ ಈ ಬಗೆಯ ನಾಟಕದ ತಂತ್ರ ಕೊಂಚ ಕಷ್ಟವೇ ಹೌದು. ದೃಶ್ಯನಾಟಕದಲ್ಲಿ ಕಣ್ಣು, ಕಿವಿಗಳೆರಡಕ್ಕೂ ಪ್ರತಿಕ್ರಿಯೆಯ ಅವಕಾಶವಿದೆ. ಆದರೆ ಶ್ರವ್ಯನಾಟಕದಲ್ಲಿ ಶಬ್ದ–ಕಿವಿಯ ಮೂಲಕವೇ ಎಲ್ಲ ಪ್ರಭಾವವೂ ಆಗಬೇಕು. ಎಲ್ಲಿಯೋ ಒಂದು ಕಡೆ ರೇಡಿಯೋವಿನ ತಿದಿಯೊತ್ತಿ, ಯಾವುದೋ ಕೇಂದ್ರದಿಂದ ಪ್ರಸಾರವಾಗುವ ನಾಟಕ ಕೇಳುತ್ತಾನೆ ಶ್ರಾವಕ. ಆ ಪ್ರಸಾರ ನಾಟಕ, ದೃಶ್ಯನಾಟಕದಷ್ಟೇ ಅವನ ಮೇಲೆ ಪರಿಣಾಮವನ್ನುಂಟುಮಾಡಬೇಕು. ಅದಕ್ಕೆ ದೃಶ್ಯನಾಟಕದಿಂದ ಬೇರೆಯೇ ಆದ ತಂತ್ರ ಬಳಸಬೇಕು.

ಪ್ರಸಾರನಾಟಕದಲ್ಲಿ ಪ್ರತಿಯೊಂದನ್ನೂ ಬರಿಯ ಶಬ್ದದಿಂದಲೇ ಹೇಳಬೇಕಾಗುತ್ತದೆ. ಯಾವ ಭಾವ ಪ್ರದರ್ಶನ ನಡೆಸಬೇಕಾದರೂ ನಟನೆಗಿಂತಲೂ ಮಾತಿನ ಧ್ವನಿಯ ರೀತಿಯಿಂದಲೇ ಆಗಬೇಕು. ಆದ್ದರಿಂದ ಪ್ರಸಾರನಾಟಕಕ್ಕೆ ಬಹಳ ಮುಖ್ಯವಾದುದು ಧ್ವನಿಯ ಏರುಬೀಳುಗಳು. ಅತೀವ ದುಃಖವನ್ನು ಪ್ರದರ್ಶಿಸುವಾಗ ಕಣ್ಣೀರು ಕೆನ್ನೆಯ ಮೇಲಿಳಿಯುವುದು ದೃಶ್ಯನಾಟಕದಲ್ಲಿ. ಆದರೆ ಅದೇ ಕಣ್ಣೀರು ಧ್ವನಿಗಿಳಿಯಬೇಕು ಶ್ರವ್ಯನಾಟಕದಲ್ಲಿ. ಗಂಟಲಿಗಿಳಿದ ದುಃಖ ಧ್ವನಿಯ ಶೃತಿಯನ್ನೇ ಬದಲಾಯಿಸಬೇಕು. ಆಗ ಧ್ವನಿಯಿಂದಲೇ ಎಲ್ಲವನ್ನೂ ಪ್ರದರ್ಶಿಸಬೇಕಾಗುತ್ತದೆ. ಆದ್ದರಿಂದ ಪಾತ್ರವಹಿಸುವ ನಟನಿಗೆ ಭಾವನೆಗಳ ಎಲ್ಲ ಬಗೆಯೂ ಕಂಠಕ್ಕಿಳಿಸುವ ಚೈತನ್ಯವಿರಬೇಕು. ದೃಶ್ಯನಾಟಕದಲ್ಲಿ ಕೂಡ ಇದು ಅಗತ್ಯವಾದರೂ ಅಲ್ಲಿ ಕಣ್ಣು ಕಟ್ಟಿರುವುದರಿಂದ. ಇದು ಸುಲಭ ; ಆದರೆ ಪ್ರಸಾರನಾಟಕದಲ್ಲಿ ಇದೇ ಮುಖ್ಯ. ಸ್ವರ ಶುದ್ಧಿಯಿದ್ದರೆ, ಆವಾಗ ಧ್ವನಿಯಲ್ಲಿ ಸರಿಯಾದ ಸಂಚಾರ ಬರುತ್ತದೆ. ಆಗ ದನಿಯ ಏರುಬೀಳುಗಳಲ್ಲಿ ಭಾವನೆಯ ಎಲ್ಲ ಮಜಲುಗಳನ್ನೂ ತೋರಿಸಬಹುದು.

ಧ್ವನಿಯೇ ಮುಖ್ಯಸಾಧನವಾದ್ದರಿಂದ ಭಾವಪ್ರಕಾಶನಕ್ಕೆ ಹಿನ್ನೆಲೆಯ ಸಂಗೀತ ಬಹಳ ಮುಖ್ಯವಾಗುತ್ತದೆ. ಹಿನ್ನಲೆಯ ಸಂಗೀತ ಇಲ್ಲಿಯ ಭಾವಕ್ಕೆ ಹೊಂದಿಕೊಂಡಂತೆ, ಭಾವದ ಛಾಯೆಯಾಗಿ ಬರುತ್ತದೆ. ಅಲ್ಲಲ್ಲಿ ಬರುವ ಮೌನಗಳನ್ನು ಬಿಡುವನ್ನು ಈ ಹಿನ್ನಲೆಯ ಸಂಗೀತ ತುಂಬಿಸುತ್ತದೆ. ಉದಾಹರಣೆಗೆ ಒಂದು ಸನ್ನಿವೇಶವನ್ನು ತೆಗೆದುಕೊಳ್ಳೋಣ. ಸೀತೆಯನ್ನು ಶ್ರೀ ರಾಮಚಂದ್ರ ಪರಿತ್ಯಾಗ ಮಾಡಿದ ಕಾಲದಲ್ಲಿ ಲಕ್ಷ್ಮಣ ಅಣ್ಣನ ಮುಂದೆ ನಿಂತು, ಅಣ್ಣನ ಕಠೋರವಾದ ಆಜ್ಞೆಯನ್ನು ಕೇಳಿದಾನೆ. ಶ್ರೀ ರಾಮ ಆಗ ಆಡುವ ಮಾತಿನ ಹಿನ್ನೆಲೆಯಲ್ಲಿ ವೀಣೆಯಲ್ಲಿ ದುಃಖಸೂಚಕವಾಗಿ ಮಾಲಕೋಸ್ ರಾಗದ ನೆರಳನ್ನು ಸೂಚಿಸಿದರೆ ಆಗ ಪ್ರಭಾವ ಕೇಳುಗನಮೇಲೆ ಹೆಚ್ಚಾಗುತ್ತದೆ. ಸೀತಾದೇವಿ ಬಂದು ಲಕ್ಷ್ಮಣನನ್ನು ಮಾತನಾಡಿಸುತ್ತಾಳೆ.

ಸೀತೆ : ಲಕ್ಷ್ಮಣ, ಇದೇಕೆ ಈ ಮೌನ?

ಲಕ್ಷ್ಮಣ ಆಗಲೂ ಮೌನವಾಗಿಯೇ ಇದ್ದಾನೆ. ಹಿನ್ನೆಲೆಯಲ್ಲಿ ಭೀಷಣಮೌನ ಸೂಚಿಸುವಂತೆ ಮಂದರದಲ್ಲಿ ವೀಣೆ ಮಿಡಿಯುತ್ತದೆ.

ಸೀತೆ : ಯಾಕೆ ಲಕ್ಷ್ಮಣ? ನಾನು ಮಾತನಾಡಿಸಿದರೂ ಮಾತನಾಡಲೊಲ್ಲೆ? ಏನು, ಊರ್ಮಿಳೆಯೊಂದಿಗೇನಾದರೂ ವಿರಸವೇ? ನಾನು ಅವಳಿಗೆ ಹೇಳುತ್ತೇನೆ.

ಇಲ್ಲಿ ಸೀತಾದೇವಿಯ ನಗುವಿಗೂ ಹಿನ್ನಲೆಯಲ್ಲಿ ಬರುವ ದುಃಖಪೂರ್ಣ ತಾನಕ್ಕೂ ದೊಡ್ಡವೈಷಮ್ಯ ಕಾಣುತ್ತದೆ. ಕೇಳುಗನ ಮನಸ್ಸಿನಲ್ಲಿ ಕರುಣೆ ಕೆದಕುತ್ತದೆ. ಲಕ್ಷ್ಮಣನ ಹೃದಯದ ಬಿಸುಸುಯ್ಲು, ಅವನ ನಿಡಿದಾದ ಉಸಿರಿನಿಂದಲೇ ನಮಗೆ ತಿಳಿಯಬೇಕು. ಅದಕ್ಕೆ ವ್ಯತಿರಿಕ್ತವಾಗಿ ಸನ್ನಿವೇಶದ ಅರಿವಿಲ್ಲದ ಸೀತೆಯ ದನಿಯಲ್ಲಿ ನಗೆಯಿರಬೇಕು. ಹಿನ್ನಲೆಯಲ್ಲಿ ಮಾತ್ರ ದುಃಖದ ತಾನವೇ ಮಿಡಿಯುತ್ತಿರಬೇಕು.

ಇಲ್ಲಿ ಸೀತಾದೇವಿಯ ಮಾತು ಕೂಡ ನಮಗೆ ಲಕ್ಷ್ಮಣನ ಸ್ಥಿತಿಯನ್ನು ಸೂಚಿ

ಸುವಂತಿರುತ್ತದೆ. ಆಕೆಯ ಮಾತಿನಿಂದಲೇ ನಾವು ಲಕ್ಷ್ಮಿ ಮೌನವಾಗಿದ್ದಾಳೆಂದು ತಿಳಿಯಬಹುದು. ಆದರೆ ಆ ಮೌನದ ಪದರದ ಹಿಂದೆ ಅಡಗಿರುವ ದುಃಖದ ಬೇಗೆ ಮಾಲಕೋಸ್‌ರಾಗದ ತಾನಗಳಲ್ಲಿ ಮಿಡಿಯುತ್ತದೆ. ಕೇಳುಗನ ಹೃದಯವೂ ಮಿಡಿಯುತ್ತದೆ.

ಹೀಗೆಯೇ ಹಿನ್ನೆಲೆಯನ್ನು ಎಷ್ಟೋ ಬಗೆಯಲ್ಲಿ ಉಪಯೋಗಿಸಿಕೊಳ್ಳಬಹುದು. ಹತ್ತಾರು ಜನರ ಮಾತಿನ ಸಂಭ್ರಮ, ಸಡಗರಗಳನ್ನು ತೋರಿಸಬೇಕು. ಮದುವೆಯ ಮನೆಯಲ್ಲಿ ಹೊರಗಿನ ಓಲಗದ ದನಿ, ಒಳಗಿನ ಪುರೋಹಿತರ ಮಂತ್ರ, ಅಲ್ಲಲ್ಲಿ ಮಾತ ನಾಡುವ ಜನರ ಗಲಭೆ ಜತೆಗೆ ಮುಖ್ಯ ಪಾತ್ರಗಳ ಮಾತು. ಇವುಗಳೆಲ್ಲ ಬರಬೇಕು. ಆಗ ನಮ್ಮ ಕಣ್ಣಮುಂದೆಯೇ ಎಲ್ಲವೂ ಕಟ್ಟುವಂತಿರಬೇಕು ಹಿನ್ನೆಲೆ. ಓಲಗದ ದನಿ ಹತ್ತಿರದಲ್ಲಿಯೇ ಆರಂಭವಾಗಿ ಐದಾರು ಸೆಕಂಡುಗಳು ಜೋರಾಗಿ ಕೇಳಿ ಮೆಲ್ಲನೆ ಸಣ್ಣ ಗಾಗುತ್ತದೆ. ಇದು ಸುಲಭವಾಗಿ ಧ್ವನಿಮುದ್ರಿಕೆ (Record) ಯನ್ನು ಹಾಕಿ ಪೂರ್ಣವಾಹಿ (Full Volume) ಯನ್ನು ಆರಂಭಿಸಿ ಅರ್ಧವಾಹಿಯನ್ನಾಗಿಸಿದರೆ ಆಗುತ್ತದೆ. ಆಗ ನಾಟಕ ಪ್ರಸಾರವಾಗುವ ಕೋಣೆಯಲ್ಲಿ ಧ್ವನಿಗ್ರಾಹಿ (Mike) ಯಿಂದ ಕೊಂಚ ದೂರದಲ್ಲಿ ನಿಂತು ಮೂರು ನಾಲ್ಕು ಜನ ಸುಮ್ಮನೆ 'ಗುಸಗುಸ' ಎನ್ನುತ್ತಿದ್ದಾರೆ, ಆಗಾಗ ಒಬ್ಬರೋ ಇಬ್ಬರೋ ದನಿಯೆತ್ತಿ ಧ್ವನಿಗ್ರಾಹಿಯಿಂದ ಕೊಂಚ ದೂರದಲ್ಲಿ ಮಾತನಾಡಬೇಕು. ಅನಂತರ ಗುಸಗುಸ ಸದ್ದು ಬರುವ ಜಾಗಕ್ಕೆ ಕೊಂಚ ದೂರದಲ್ಲೇ ಜೋರಾಗಿ ಮಂತ್ರಹೇಳುವ ಧ್ವನಿ ಬರಬೇಕು. ಈ ಧ್ವನಿ ಕೂಡ ನಿಧಾನವಾಗಿ ಸಣ್ಣಗಾಗಿ ಹಿನ್ನೆಲೆಯಲ್ಲಿ ಒಂದೇ ಸಮನಾಗಿರಬೇಕು. ಆಗ ಮುಖ್ಯ ಪಾತ್ರಗಳ ಮಾತು ಧ್ವನಿಗ್ರಾಹಿಯ ಬಹು ಹತ್ತಿರದಲ್ಲಿಯೇ ಬರಲಾರಂಭವಾಗಬೇಕು. ಹಿನ್ನಲೆಯಲ್ಲಿ ಮೃದುವಾಗಿ ಓಲಗದ ಧ್ವನಿಮುದ್ರಿಕೆ, ಮಾತು, ಮಂತ್ರ ಸತತವಾಗಿ ಇದ್ದೇ ತೀರುತ್ತದೆ.

ಮನಸ್ಸಿನ ಆಗುಹೋಗುಗಳನ್ನು ಮುಖದಲ್ಲಿ ಪ್ರದರ್ಶಿಸುವಂತೆಯೇ ಧ್ವನಿ ಯಲ್ಲಿಯೂ ತೋರಿಸಬಹುದು. ಇದಕ್ಕೆ ಎಷ್ಟೋ ಬಾರಿ ಸ್ವಗತದ ಮಾತೂ ಅವಶ್ಯಕವಾಗುತ್ತದೆ. ಆಗ ಮಾತು ಪಿಸುಮಾತಾಗಿ, ಧ್ವನಿಗ್ರಾಹಿಯ ಬಹು ಹತ್ತಿರ ದಲ್ಲಿ ಬರುತ್ತದೆ. ಆಗ ಕೇಳುಗನಿಗೆ ರೇಡಿಯೋದಿಂದ ತನ್ನ ಕಿವಿಗೆ ನೇರವಾಗಿ ಹತ್ತಿರ ವಾಗಿ ಬರುತ್ತಿದೆ ಮಾತು ಎನ್ನಿಸುವುದಷ್ಟೇ ಅಲ್ಲ, ಮಾತನಾಡುವವನ ಬಿಸಿಯುಸಿರು ಕೂಡ ಮುಖಕ್ಕೆ ಬಂದು ತಾಕುತ್ತಿದೆಯೋ ಎನಿಸುತ್ತದೆ. ಎಷ್ಟೋ ಬಾರಿ ಹುಚ್ಚುತನ, ಮನಸ್ಸಿನ ಒಳಕುದಿಗಳನ್ನು ತೋರಿಸುವಾಗ ಬೇರೆ ಬೇರೆ ಸಂಕೇತಗಳನ್ನು ಬಳಸ ಬೇಕಾಗಬಹುದು. ಮನಸ್ಸಿನ ತಳಮಳಕ್ಕಾಗಿ ಸಾಗರದಲೆಗಳು ಒಂದರಮೇಲೊಂದು ಬಿರುಸಾಗಿ ಬಂಡೆಗಳ ಮೇಲೆ ಬಡಿಯುವ ಧ್ವನಿಮುದ್ರಿಕೆಯ ಜತೆಗೆ ಸೆಲ್ಲೋವಾದ್ಯ ದಲ್ಲಿ "ಗುಂಯ್ ಗುಂಯ್" ಸದ್ದನ್ನು ಸೇರಿಸಿದರೆ ಬಹು ಪ್ರಭಾವಶಾಲಿಯಾಗಿರು ತ್ತದೆ. ಸ್ಮಶಾನದ ದೃಶ್ಯಕ್ಕೆ ಬಿರುಗಾಳಿಯ ಧ್ವನಿ ಮುದ್ರಿಕೆಯ ಜತೆಗೆ 'ಕಿಂಯ್,

ಕಿಚ್' ಎಂದು ಸೆಲ್ಲೋ, "ಗುಳ ಗುಳ ಗುಳ್" ಎಂದು ಕ್ಲಾರಿಯೋನೆಟ್, ಈ ವಾದ್ಯಗಳ ಧ್ವನಿಯನ್ನು ಬೆರಸಬಹುದು. ನದೀತೀರದ ದೃಶ್ಯಕ್ಕೆ ಧ್ವನಿಗ್ರಾಹಿಯ ಪಕ್ಕದಲ್ಲಿ ನೀರಿನವೊಂದು ಪಾತ್ರೆಯಿಟ್ಟು ಕೈ ಬೆರಳುಗಳಲ್ಲಿ ನೀರನ್ನು ಕದಡಿದರೆ ಆಗ ಅಲೆಗಳ ಸಪ್ಪಳದಂತೆ ಕೇಳುತ್ತದೆ. ರಾತ್ರಿಯ ಜೀರುಂಡೆಯ "ಕಿಚಕ್, ಕಿಚಕ್" ಸದ್ದಿಗೆ ಒಂದು ಪೆನ್ನಿನ ಮುಚ್ಚಳದಿಂದ, ಅದರ ನಾಲಿಗೆಯ ಅಂಚನ್ನು ನಾಲ್ಕಾರು ಬಾರಿ ತಿಕ್ಕಿದರೆ ಸಾಕು. ಹೀಗೆ ಹಿನ್ನೆಲೆಯ ಸಿದ್ಧತೆ ಅತ್ಯಂತ ಅವಶ್ಯಕ. ಹಿನ್ನೆಲೆ ಭಾವ ಪ್ರದರ್ಶನಕ್ಕೆ ಅತ್ಯಂತ ಅಗತ್ಯ. ಅದೇನಾದರೂ ಕೆಟ್ಟುಹೋದಲ್ಲಿ ಕೇಳುಗನ ಮನಸ್ಸಿನ ಮೇಲಿನ ಪ್ರಭಾವವೂ ಕೆಡುತ್ತದೆ.

ಇನ್ನು ಮಾತುಕತೆ. ಇದು ಪ್ರಸಾರ ನಾಟಕ ಬರೆಯುವವನ ಜಾಣತನದ ಉಪಯೋಗ. ಇಲ್ಲಿಯೇ ನಾಟಕಕಾರ ಎಲ್ಲವನ್ನೂ ಸರಿಯಾಗಿ ಅಳವಡಿಸಬೇಕು. ಪಾತ್ರಗಳಿಗೆ ತಕ್ಕಂತಹ ಮಾತನ್ನು ಎಲ್ಲ ನಾಟಕಗಳಲ್ಲಿ ಬಳಸಲೇಬೇಕು. ಆದರೆ ಇಲ್ಲಿ ಸನ್ನಿವೇಶವನ್ನು ಮಾತಿನಲ್ಲಿ ಸೂಚಿಸಬೇಕು. ಒಂದು ಉದಾಹರಣೆಯನ್ನು ತೆಗೆದುಕೊಳ್ಳಬಹುದು. ಬುದ್ಧದೇವ ಅಂಗುಲಿಮಾಲನನ್ನು ಕಾಣಲು ಬಂದಾಗ, ಅಂಗುಲಿಮಾಲ ಹೇಳುತ್ತಾನೆ.

ಅಂಗುಲಿ ಮಾಲ: ನಿನ್ನ ಮುಖದಲ್ಲಿ ಇದೇನು ಪ್ರಭೆ. ಈತನಕ ನಾನು ಯಾರಲ್ಲಿಯೂ ಕಾಣದ ಅಪೂರ್ವ ತೇಜಸ್ಸು. ನನ್ನ ಕಣ್ಣು ಕುರುಡಾಗುತ್ತದೆ. ಯಾರು ನೀನು?

ಬುದ್ಧ (ಪ್ರಶಾಂತ ದನಿಯಲ್ಲಿ) ನನ್ನನ್ನು ಬುದ್ಧನೆನ್ನುತ್ತಾರೆ. ಮಗು; ಅಂಗುಲಿ ಮಾಲ.

ಇಲ್ಲಿ ಮಾತಿನ ಆರಂಭದಲ್ಲಿಯೇ ಮಾತನಾಡುತ್ತಿರುವ ಈ ಧ್ವನಿಗಳು ಒಂದು ಅಂಗುಲಿ ಮಾಲನದು, ಒಂದು ಬುದ್ಧನದೆಂದು ನಾವು ಸಿದ್ಧಪಡಿಸಿದಂತಾಯಿತು. ಈಗ ಇವರ ನಡುವೆ ಹೊಸಪಾತ್ರ ಮಾತನಾಡಿದರೆ, ತಕ್ಷಣವೇ ಆತ ಹೊಸಬನೆಂದು ನಮಗೆ ಸ್ಥಿರವಾಗಿ ಗೊತ್ತಾಗುತ್ತದೆ. ಅವರನ್ನು ತಕ್ಷಣವೇ ಇಂತಹುದೇ ವ್ಯಕ್ತಿಯೆಂದು ನಾಟಕಕಾರ ಸ್ಥಿರಪಡಿಸಬೇಕು. ಆನಂದ ಮಾತನಾಡುತ್ತಾನೆಂದುಕೊಳ್ಳೋಣ.

ಆನಂದ: ಗುರುದೇವ

ಬುದ್ಧ: ಏನು ಆನಂದ. ಸಂದೇಹವೇನೋ ಇರುವಂತಿದೆ.

ಆನಂದ: ಏನೂ ಇಲ್ಲ ಗುರುದೇವ.

ಬುದ್ಧ: ಆದರೂ ನಿನ್ನ ದನಿಯಲ್ಲಿ ಕಾತರವಿದೆ."

ಈ ಮಾತುಕತೆಯಲ್ಲಿ ನಡುವೆ ಆನಂದ ಮಾತನಾಡಿದನೆಂಬುದು ಬುದ್ಧನ ಮಾತಿನಿಂದ ತಿಳಿಯುತ್ತದೆ. ಅಲ್ಲದೆ ಆನಂದನ ದನಿಯಲ್ಲಿ ಕಾತರತೆಯಿದೆಯೆನ್ನುವುದನ್ನು ನಾಟಕಕಾರ ಗುರುತಿಸಿದಾನೆ. ಅಂತೆಯೇ ಆನಂದನ ಪಾತ್ರ ವಹಿಸುವಾತ ತನ್ನ ಹಿಂದಿನ ಮಾತಿಗೆ ಕಾತರ ಕೂಡಿಸಿ ಆಡಬೇಕೆಂಬುದು ಸ್ಪಷ್ಟವಾಗಿ ತಿಳಿಯುತ್ತದೆ.

ಹೊಸದಾಗಿಯೇ ಒಂದು ಸನ್ನಿವೇಶ ಚಿತ್ರಣ ಮಾಡುವಲ್ಲಿ ಕೂಡ ವರ್ಣನೆ

ಯಾರಬಾಯಿಂದಲಾದರೂ ಬರಬಹುದು.

"ಈ ರಾತ್ರಿ ಎಷ್ಟು ರಮ್ಯವಾಗಿದೆ. ಚಂದ್ರಿಕೆಯಿಂದ ನೆಲದವರೆಗೆ ತಿಳುಬೆಳು ದಿಂಗಳಿನ ಹಾಲುತೆರೆ ಇಳಿದಂತಿದೆ" ಎಂದು ಒಂದು ಪಾತ್ರದವರು ಹೇಳಿದರೆ ಆಗ ರಾತ್ರಿ, ಬೆಳುದಿಂಗಳಿದೆ ಎನ್ನುವುದು ನಮಗೆ ಗೋಚರವಾಗುತ್ತದೆ. ವಾತಾವರಣ ಕಲ್ಪಿತವಾಗುತ್ತದೆ. ಆಗ ಈ ಮಾತಿನ ನಡುವೆ ಯಾರೋ ಪಕ್ಕದಲ್ಲಿ ಬರುತ್ತಾರೆ. ಆಗ ಕೊಂಚ ಸದ್ದಾದಂತೆ ಹಿನ್ನೆಲಿಯಲ್ಲಿಸದ್ದಾಗುತ್ತದೆ.

ಅಶೋಕ: ಇದೇನಿದು ಸದ್ದು? ಯಾರಲ್ಲಿ?

ಹೊಸಬ: ನಾನು, ಬುದ್ಧದೇವನ ಶಿಷ್ಯ. ಆನಂದನೆನ್ನುವರು ನನ್ನನ್ನು. ನಿನ್ನನ್ನೇ ಕಾಣಲು ಬಂದೆ, ಅಶೋಕಚಕ್ರವರ್ತಿ."

ಇಲ್ಲಿ ಇಬ್ಬರೂ ಇಂತಹವರೆಂದು ಹೇಳಿದಂತೆಯೂ ಆಯಿತು. ಆನಂದ ಆ ಪಕ್ಕದಿಂದ ಬಂದನೆಂದೂ ಹೇಳಿಯಾಯಿತು. ಮೊದಲು ಅಶೋಕನೊಬ್ಬನೇ ಅಲ್ಲಿದ್ದ, ತನಗೆ ತಾನೇ ಮಾತನಾಡಿಕೊಂಡನೆಂದೂ ಆಯಿತು. ಹೀಗೆ ವರ್ಣನೆಯಿಂದ ಮಾತಿನಿಂದಲೇ ಎಲ್ಲಚಿತ್ರಗಳನ್ನು ನಮ್ಮ ಕಣ್ಣ ಮುಂದೆ ಕಟ್ಟಬೇಕು ಪ್ರಸಾರ ನಾಟಕ. ಪ್ರಸಾರ ನಾಟಕ ನಿಜವಾಗಿ ಕಾವ್ಯದಂತೆಯೇ ಶಬ್ದಚಿತ್ರ. ಇದರ ತಂತ್ರಕ್ಕೆ ಕಲ್ಪನಾಶಕ್ತಿ, ಚಾತುರ್ಯದಿಂದ ಪದಗಳನ್ನುಪಯೋಗಿಸುವ ಚೈತನ್ಯ ಎರಡೂ ಮುಖ್ಯವಾಗಿಬೇಕು. ನಾನು ಇಲ್ಲಿ ಹೇಳಿರುವುದು ಆ ತಂತ್ರದ ಬಹುಮುಖ್ಯವಾದ ಎರಡು ಮಾತು. ಇನ್ನೂ ಅದರ ಬಗ್ಗೆ ಹೇಳಬಹುದಾದುದು, ಧ್ವನಿಗ್ರಾಹಿಯ ವಿವಿಧ ರೀತಿಯ ಉಪಯೋಗ, ಸ್ವರಶುದ್ಧಿಯ ಬಗೆ, ನಿರ್ದೇಶನ–ಇವುಗಳಲ್ಲಿ ಇದೆ. ಆದರೆ ಬಹುಮುಖ್ಯವಾಗಿ ಗಮನಿಸಬೇಕಾದುದು. ತಂತ್ರದಲ್ಲಿ–ಎಲ್ಲವೂ ಕೇಳುಗನ ಮುಂದೆ ಚಿತ್ರವಾಗಿ ನಿಲ್ಲಬೇಕು. ಅದಕ್ಕೆ ಅವಶ್ಯವಾದುದು–ಎಲ್ಲವೂ ಧ್ವನಿಯ ಮೂಲಕವೇ ಆಗಬೇಕು. ಅಂತೆಯೇ ಪ್ರಸಾರ ನಾಟಕ–ಶಬ್ದಚಿತ್ರ, ಶ್ರವ್ಯನಾಟಕ.



# ಶ್ರೀ ಕುವೆಂಪು ಅವರ ಕೃತಿಗಳು

| ಕವಿತೆ: | | ಮೊದಲ ಪ್ರಕಟಣೆಯ ವರುಷ |
|---|---|---|
| ೧. | ಅಮಲನ ಕಥೆ | |
| ೨. | ಚಿತ್ರಾಂಗದಾ | ೧೯೩೬ |
| ೩. | ಕಥನ ಕವನಗಳು | ,, |
| ೪. | ಬೆಳ್ಳಿಹಬ್ಬದ ಕಬ್ಬದ ಬಳ್ಳಿ | ೧೯೨೭ |
| ೫. | ಕೊಳಲು | ೧೯೩೦ |
| ೬. | ಪಾಂಚಜನ್ಯ | ೧೯೩೩ |
| ೭. | ಕೋಗಿಲೆ ಮತ್ತು ಸೋವಿಯೆಟ್ ರಷ್ಯಾ | ೧೯೪೪ |
| ೮. | ಅಗ್ನಿಹಂಸ | ೧೯೪೬ |
| ೯. | ಪ್ರೇಮ ಕಾಶ್ಮೀರ | ,, |
| ೧೦. | ಷೋಡಶಿ | ೧೯೩೦ |
| ೧೧. | ಕೃತ್ತಿಕೆ | ೧೯೪೬ |
| ೧೨. | ಪಕ್ಷಿಕಾಶಿ | ,, |
| ೧೩. | ನವಿಲು | ೧೯೩೩ |
| ೧೪. | ಕಲಾಸುಂದರಿ | ೧೯೩೩ |
| ೧೫. | ಶ್ರೀ ಸ್ವಾತಂತ್ರ್ಯೋದಯ ಮಹಾಪ್ರಗಾಥಾ | ೧೯೪೭ |
| ೧೬. | ಜೇನಾಗುವಾ | ೧೯೫೧ |
| ೧೭. | ಕಿಂಕಿಣಿ | ೧೯೪೬ |
| ೧೮. | ಬೊಮ್ಮನಹಳ್ಳಿಯ ಕಿಂದರಿಜೋಗಿ | ೧೯೨೮ |
| ೧೯. | ಹಾಳೂರು | ೧೯೨೫ |
| ೨೦. | ನನ್ನ ಮನೆ | ೧೯೪೬ |
| ೨೧. | ಮರಿವಿಜ್ಞಾನಿ | ೧೯೪೭ |
| ೨೨. | ಮೇಘಪುರ | ,, |
| ೨೩. | ಚಂದ್ರಮಂಚಕೆ ಬಾ ಚಕೋರಿ | ೧೯೫೪ |
| ೨೪. | ಶ್ರೀ ರಾಮಾಯಣ ದರ್ಶನಂ (ಎರಡು ಭಾಗ) | ೧೯೪೯ |

**ಕಥೆ, ಚಿತ್ರ, ಕಾದಂಬರಿ :**

೧. ಸಂನ್ಯಾಸಿ ಮತ್ತು ಇತರ ಕಥೆಗಳು ೧೯೩೬
೨. ನನ್ನ ದೇವರು ಮತ್ತು ಇತರ ಕಥೆಗಳು ೧೯೪೦
೩. ಮಲೆನಾಡಿನ ಚಿತ್ರಗಳು ೧೯೩೩
೪. ಕಾನೂರು ಹೆಗ್ಗಡಿತಿ ೧೯೩೬

**ನಾಟಕಗಳು :**

೧. ಮೋಡಣ್ಣನ ತಮ್ಮ ೧೯೨೬
೨. ಯಮನಸೋಲು ಮತ್ತು ವಾಲ್ಮೀಕಿಯ ಭಾಗ್ಯ ೧೯೨೮
೩. ಬಿರುಗಾಳಿ ೧೯೩೦
೪. ರಕ್ತಾಕ್ಷಿ
೫. ಮಹಾರಾತ್ರಿ ೧೯೩೧
೬. ಮೂರು ನಾಟಕಗಳು ೧೯೨೭
೭. ಶೂದ್ರತಪಸ್ವಿ ಮತ್ತು ಬಲಿದಾನ ೧೯೪೪
೮. ಬೆರಳ್ ಗೆ ಕೊರಳ್
೯. ನನ್ನ ಗೋಪಾಲ ೧೯೩೦

**ಭಾಷಣಗಳು :**

೧. ಸಾಹಿತ್ಯ ಪ್ರಚಾರ ೧೯೩೦
೨. ನಿರಂಕುಶ ಮತಿಗಳಾಗಿ ೧೯೪೪

**ವಿಮರ್ಶೆ :**

೧. ಕಾವ್ಯವಿಹಾರ ೧೯೪೬
೨. ತಪೋನಂದನ

**ಜೀವನ ಚರಿತ್ರೆ :**

೧. ಶ್ರೀ ರಾಮಕೃಷ್ಣ ಪರಮಹಂಸ ೧೯೩೪
೨. ಸ್ವಾಮಿ ವಿವೇಕಾನಂದ ೧೯೩೧

**ಇತರ :**



**ಬರಲಿರುವ ಕೃತಿಗಳು :**







